# ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು : ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

## ಮಹಾಪ್ರಬಂಧ

ಸಂಶೋಧಕರು

**ಸಿ.ಬಿ. ಅನ್ನಪೂರ್ಣಮ್ಮ**

ಮಾರ್ಗದರ್ಶಕರು

**ಡಾ. ಹಿ.ಚಿ. ಬೋರಲಿಂಗಯ್ಯ**

ಪ್ರಾಧ್ಯಾಪಕರು, ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ





ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

# ವ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು: ಒಂದು ಅಧ್ಯಯನ

*ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ*

**ಮಹಾಪ್ರಬಂಧ**


ಸಂಶೋಧಕರು

**ಸಿ.ಬಿ. ಅನ್ನಪೂರ್ಣಮ್ಮ**

ಮಾರ್ಗದರ್ಶಕರು

**ಡಾ. ಹಿ.ಚಿ.ಬೋರಲಿಂಗಯ್ಯ**

ಪ್ರಾಧ್ಯಾಪಕರು, ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ





ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ

# ದೃಢೀಕರಣ ಪತ್ರ

ಶ್ರೀಮತಿ ಸಿ.ಬಿ.ಅನ್ನಪೂರ್ಣಮ್ಮ ಇವರು '**ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು:ಒಂದು ಅಧ್ಯಯನ**' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಡಾ.ಹಿ.ಚಿ.ಬೋರಲಿಂಗಯ್ಯ**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 4.4.07
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

**'ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು:ಒಂದು ಅಧ್ಯಯನ'** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಡಾ.ಹಿ.ಚಿ.ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಬುಡಕಟ್ಟು ಅಧ್ಯಯನ ವಿಭಾಗದ ಮೂಲಕ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನದೇ ಪರಿಶ್ರಮದ ಫಲವಾಗಿದ್ದು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೇ ಉದ್ದೇಶಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಶ್ರೀಮತಿ ಪಿ.ಬಿ.ಅನ್ನಪೂರ್ಣಮ್ಮ
ಸಂಶೋಧನಾ ವಿದ್ಯಾರ್ಥಿನಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 4-4-07
ಸ್ಥಳ : ವಿದ್ಯಾರಣ್ಯ

# ನಾನು ನೆನೆಯಬೇಕಾದವರು

ನನ್ನ ನೆಲೆ ವ್ಯಾಸಗಂಪಳ. ಈ ಭೂಮಿಕೆಯೊಳಗಿನ ಸ್ತ್ರೀ ಸಂಕಥನಗಳ ಬಗ್ಗೆ ಅಷ್ಟಿಷ್ಟು ತಿಳಿದಿದ್ದ ನನಗೆ ಆದಷ್ಟು ಸಮಗ್ರವಾಗಿ ಅವರನ್ನು ಅರಿತು ಸಂಬಂಧಿಸಿದ ಸಂಗತಿಯನ್ನು ಒಂದೆಡೆ ಸೇರಿಸಬೇಕು ಎಂಬ ಕನಸು ಮೂಡಿ ಅದು ನನಸಾಗುತ್ತಿರುವ ಈ ಸಂದರ್ಭದಲ್ಲಿ ಇದಕ್ಕೆ ಪೂರಕವಾದ ಸಾಮಗ್ರಿಯನ್ನು ಆತ್ಮೀಯವಾಗಿಯೇ ಒದಗಿಸಿಕೊಟ್ಟ ನನ್ನ ಬಂಧುಗಳಿಗೆ ನಾನು ಋಣಿ.

ಇದಕ್ಕೊಂದು ಅಧಿಕೃತತೆ ಸಾಧ್ಯವಾಗಲು, ತನ್ಮೂಲಕ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲು ಅನುವು ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಉಪಕುಲಪತಿಗಳಿಗೂ, ಆಡಳಿತ ವರ್ಗಕ್ಕೂ ನನ್ನ ಕೃತಜ್ಞತೆಗಳು.

ಸಂಶೋಧಿತ ಸಂಗತಿಯ ಬಗ್ಗೆ ನನಗಿದ್ದ ಎಲ್ಲಾ ಗೊಂದಲಗಳನ್ನು ಪರಿಹರಿಸಿ ಸಾರ್ಥಕ ರೀತಿಯಲ್ಲಿ ದಾರಿ ತೋರಿ ಸಕಾಲದಲ್ಲಿ ಸಹಾಯ ಸಹಕಾರ ನೀಡಿ ನೆರವಾದ ನನ್ನ ಮಾರ್ಗದರ್ಶಕರಾದ ಡಾ: ಹಿ.ಚಿ.ಬೋರಲಿಂಗಯ್ಯನವರಿಗೆ ನನ್ನ ಗೌರವ ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ಹಾಗೆಯೇ ಬುಡಕಟ್ಟು ಅಧ್ಯಯನ ವಿಭಾಗದ ಎಲ್ಲಾ ಅಧ್ಯಾಪಕರಿಗೂ ನನ್ನ ಕೃತಜ್ಞತೆಗಳು.

ನಮ್ಮ ಕಾಲೇಜಿನ ಪದವಿ ವಿಭಾಗದ ಪ್ರಾಂಶುಪಾಲರಾದ ಡಾ. ಎಂ.ಲೀಲಾವತಿಯವರು ಮತ್ತು ಜಯನಗರ ನ್ಯಾಷನಲ್ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಡಾ.ಎಚ್.ಎಸ್.ಆರ್.ರವರು ಆತ್ಮೀಯತೆಯಿಂದ ಸದಾ ನನಗೆ ನೆರವನ್ನು ನೀಡುತ್ತಲಿರುವವರು. ಈ ಸಂದರ್ಭದಲ್ಲಿಯೂ ವಿಶ್ವಾಸದಿಂದ ನನಗೆ ನೆರವಾದದ್ದನ್ನು ನಾನು ಸ್ಮರಿಸುತ್ತಿದ್ದೇನೆ.

ಪದವಿ ಪೂರ್ವಕಾಲೇಜಿನ ಪ್ರಾಂಶುಪಾಲರು, ನನ್ನ ಎಲ್ಲಾ ಸಹೋದ್ಯೋಗಿ ಮಿತ್ರರಿಗೆ ಮತ್ತು ಕನ್ನಡ ವಿಶ್ವವಿದ್ಯಾಲಯದ ಕಡೆ ಅಡಿಯಿರಿಸುವಂತೆ ಮಾಡಿದ ಗೆಳತಿ ಡಾ: ವೈ.ಸಿ.ಕಮಲನಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಅಕ್ಷರ ಲೋಕಕ್ಕೆ ನಾನು ಅಡಿಯಿರಿಸುವಂತೆ ಮಾಡಿ ಈ ಸಂಶೋಧನೆಗೆ ಸಂಬಂಧಿಸಿದಂತೆ ವಿಷಯ ಸಂಗ್ರಹಣೆಯಿಂದ ವಿಶ್ಲೇಷಣೆಯವರೆಗೆ ಪ್ರತಿ ಹೆಜ್ಜೆಯಲ್ಲಿಯೂ ನನಗೆ ಬೆಳಕು ತೋರಿದವರು ನನ್ನ ಪ್ರೀತಿಯ ಅಪ್ಪಾಜಿ ಬಿ.ಬೋರಪ್ಪ ಮತ್ತು ಅಮ್ಮನಾದ ಡಿ.ಶಾರದಮ್ಮ. ತಮ್ಮ ನೆನಪಿನ ಸಂಪುಟದಲ್ಲಿನ ಸಾಂಸ್ಕೃತಿಕ ಚಿತ್ರಣಗಳನ್ನು ಬಿಡಿಸಿ ತಿಳಿಸಿ ಸಹಕರಿಸಿದವರು ನನ್ನ ಪ್ರೀತಿಯ ಅಜ್ಜಿ ಪಾಲಮ್ಮ. ಇವರನ್ನೆಲ್ಲಾ ನಾನು ಪ್ರೀತಿಯಿಂದಲೇ ನೆನೆಯುತ್ತಿದ್ದೇನೆ.

ಪೂಜ್ಯರಾದ ಅತ್ತೆ, ಮಾವ ಮತ್ತು ನನ್ನ ಸಹೋದರರು ಮತ್ತವರ ಶ್ರೀಮತಿಯವರು ನೀಡಿದ ಸಹಕಾರವನ್ನು ನಾನಿಲ್ಲಿ ನೆನಪು ಮಾಡಿಕೊಳ್ಳಲೇಬೇಕು. ಕ್ಷೇತ್ರಕಾರ್ಯದಲ್ಲಿ ಸುಡುಬಿಸಿಲನ್ನು ಲೆಕ್ಕಿಸದೆ ಉತ್ಸಾಹದಿಂದ ನನ್ನ ಜೊತೆಗಿರುತ್ತಿದ್ದ ನಮ್ಮ ಮನೆಯ ಮುದ್ದು ಮಕ್ಕಳಾದ ಶ್ರೀನಿಧಿ ಮತ್ತು ಪಾರ್ಥಪ್ರಿಯರಿಗೆ ನನ್ನ ನೆನಕೆಗಳು.

ನನಗೆ ಸೋದರಿಯಾಗಿ ಸಿಕ್ಕಿದ ಪದ್ಮ.ಟಿ. ನಾನು ಬರವಣಿಗೆಯಲ್ಲಿ ತೊಡಗುವಂತೆ ಮತ್ತೆ ಮತ್ತೆ ಎಚ್ಚರಿಸುತ್ತಾ, ಅಕ್ಷರ ಜೋಡಣೆ ಮಾಡಿಕೊಟ್ಟು ಪುಸ್ತಕ ರೂಪಕ್ಕೆ ಬರುವವರೆಗೆ ಸದಾ ಜೊತೆಗೆ ನಿಂತು ಮಾಡಿದ ಸಹಾಯವನ್ನು ನಾನು ಮರೆಯಲಾರೆ.

ಇನ್ನು ನನ್ನ ಬಾಳ ಜೊತೆಗಾರರಾದ ಜೋಗೇಶ್ ನನ್ನಲ್ಲಿ ಆತ್ಮ ವಿಶ್ವಾಸ ತುಂಬಿ ಅಧ್ಯಯನ ಮುಖಿಯಾಗುವಂತೆ ಮಾಡಿದ ಸಹೃದಯಿ. ಅಂತರ್ಜಾಲದಲ್ಲಿ ತಡಕಾಡಿ ನನ್ನ ಹಲವು ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಿಕೊಟ್ಟು ಸಹಕಾರ ನೀಡಿದವರು. ನನ್ನ ಯಶಸ್ಸಿನ ಹಿಂದಿರುವ ಶಕ್ತಿಯೇ ಇವರು.

ಮುಖಪುಟ ವಿನ್ಯಾಸ ಮಾಡಿಕೊಟ್ಟ ನನ್ನ ವಿದ್ಯಾರ್ಥಿ ಬಾಲುನಾಗೇಂದ್ರ ಮತ್ತು ಪುಸ್ತಕ ರೂಪಕ್ಕೆ ತಂದ ಲಕ್ಷ್ಮೀ ಮುದ್ರಣಾಲಯದ ಪ್ರೀತಿಯ ಕಟ್ಟೆಯನ್ನು ನಾನು ಇಲ್ಲಿ ನೆನೆಯುತ್ತಿದ್ದೇನೆ.

ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯ ಮಾಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

ಸಿ. ಬಿ. ಅನ್ನಪೂರ್ಣಮ್ಮ.
ಹಿರಿಯ ಶ್ರೇಣಿ ಉಪನ್ಯಾಸಕರು.
ಕನ್ನಡ ವಿಭಾಗ, ನ್ಯಾಷನಲ್ ಕಾಲೇಜ್
ಬಸವನಗುಡಿ, ಬೆಂಗಳೂರು.

# ಪರಿವಿಡಿ

ಅಧ್ಯಾಯ–೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧ ವ್ಯಾಸಬೇಡರನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳು.

೧.೨ ಪ್ರಸ್ತುತ ಅಧ್ಯಯನದ ವಿಷಯ, ವ್ಯಾಪ್ತಿ ಮತ್ತು ಉದ್ದೇಶ.

೧.೩ ಅಧ್ಯಯನದ ಮಾದರಿ ಮತ್ತು ವಿಧಾನ

೧.೪ ಅಧ್ಯಯನದ ಉದ್ದೇಶ

ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧ ಮ್ಯಾಸಬೇಡರನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳು :

ಯಾವುದೇ ಒಂದು ನಿರ್ದಿಷ್ಟ ಸಂಗತಿಯ ಬಗ್ಗೆ ಅಧ್ಯಯನವನ್ನು ಕೈಗೊಳ್ಳುವ ಮೊದಲು, ಆ ವಿಷಯಕ್ಕೆ ಸಂಬಂಧಿಸಿದಂತೆ, ಸಾಂಸ್ಕೃತಿಕ ಪರಿಸರದಲ್ಲಿ ಇದುವರೆಗೂ ಯಾವ ಬಗೆಯ ಅಧ್ಯಯನಗಳು ನಡೆದಿವೆ? ಅವುಗಳ ಒಟ್ಟು ಫಲಶ್ರುತಿಯೇನು? ಎಂಬುದನ್ನು ತಿಳಿದೇ ಮುಂದುವರಿಯುವುದು ಅತ್ಯಗತ್ಯ. ನಾಡಿನಾದ್ಯಂತ ಹರಡಿ ನೆಲೆ ನಿಂತಿರುವ ಬೇಡರಲ್ಲಿ ಪಶುಪಾಲಕತನದ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವ ಒಂದು ಸಮುದಾಯವು, ಮಧ್ಯಕರ್ನಾಟಕದಲ್ಲಿ ವ್ಯಾಪಕವಾಗಿ ನೆಲೆಸಿದ್ದು, ಅವರನ್ನು ಮ್ಯಾಸಬೇಡರು ಎಂದು ಕರೆಯಲಾಗುತ್ತದೆ. ವಿಶಿಷ್ಟವಾದ ಸಾಂಸ್ಕೃತಿಕ ಲಕ್ಷಣಗಳನ್ನು ಹೊಂದಿರುವ ಇವರನ್ನು ಕುರಿತು ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿವೆ. ಭಾರತದಲ್ಲಿರುವ ಬುಡಕಟ್ಟುಗಳನ್ನು ಕುರಿತು ಮೊದಲ ಅಧ್ಯಯನವನ್ನು ಪ್ರಾರಂಭಿಸಿದವರು, ನಮಗೆಲ್ಲಾ ತಿಳಿದಿರುವಂತೆ ಪಾಶ್ಚಿಮಾತ್ಯರು. ಅವರು ತಮ್ಮ ಆಡಳಿತದ ಅನುಕೂಲಕ್ಕಾಗಿ ಪ್ರಾರಂಭಿಸಿದ ಈ ಅಧ್ಯಯನವು ಕ್ರಮೇಣ ಅವರ ಶೈಕ್ಷಣಿಕ ಕುತೂಹಲವನ್ನು ಕೆರಳಿಸಿ, ಅದು ಒಂದು ಅಧ್ಯಯನ ಶಿಸ್ತಾಗಿ ರೂಪಿತವಾಯಿತು. ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಾಚಾರಿ ಅವರು ಒಟ್ಟಾಗಿ, ದಕ್ಷಿಣ ಭಾರತವನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಮಾಡಿ 'Caste and Tribes'ಎಂಬ ಕೃತಿಯನ್ನು ಪ್ರಕಟಿಸಿದರು. ಅದರಲ್ಲಿ, ಕರ್ನಾಟಕದಲ್ಲಿ ನೆಲೆಗೊಂಡಿರುವ ಪಶುಪಾಲಕರಾದ ಮ್ಯಾಸಬೇಡರ ಬಗ್ಗೆ ಉಲ್ಲೇಖ ಮಾಡುತ್ತಾರೆ. ಕನ್ನಡ ಮಾತನಾಡುವವರು ಊರು ಬೇಡರು, ತೆಲುಗು ಮಾತನಾಡುವವರು ಮ್ಯಾಸಬೇಡರು ಎಂದು ವಿವರಿಸುತ್ತಾ ಮ್ಯಾಸರನ್ನು ಹುಲ್ಲುಗಾವಲಿನಲ್ಲಿ ಬದುಕುವವರು ಎಂದು ಹೇಳುತ್ತಾರೆ. ಮತ್ತೆ ಈ ಎರಡೂ ಬಗೆಯ ನಾಯಕರು ಅನೇಕ ಒಳಗುಂಪುಗಳಾಗಿ ವಿಭಾಗಿಸಲ್ಪಟ್ಟಿದ್ದಾರೆ. ೧೯೦೧ರ ಜನಗಣತಿಯ ಆಧಾರದ ಮೇಲೆ ಇವರ ಮೂಲದೈವ ತಿರುಪತಿಯ ವೆಂಕಟರಮಣ, ಇವರು ಮಾರಮ್ಮನ ಭಕ್ತರು ಮತ್ತು ಇವರ ಗುರು ತಿರುಮಲ ತಾತಾಚಾರ್ಯ ಎಂದು ಅವರು ಹೇಳಿದ್ದಾರೆ. 'ಮೈಸೂರು ಕಡೆಯ ಬೇಡರು ಇತ್ತೀಚೆಗೆ ಶೈವಾರಾಧಕರಾಗಿ ಬದಲಾಯಿಸಲ್ಪಟ್ಟಿದ್ದಾರೆ. ಜಂಗಮರಿಂದ ಅದರಲ್ಲೂ ಬಳ್ಳಾರಿ ಜಿಲ್ಲೆಯ ಉಜ್ಜನಿಮಠದ ಗುರುಗಳಿಂದ ಇವರು ಶೈವಾರಾಧಕರಾಗುತ್ತಿದ್ದಾರೆ ಎಂದು ಇವರ ಅಭಿಪ್ರಾಯ. ಇವರಿಗೆ ಇಡಿಯಾದ ಸಂಸ್ಕೃತಿಯ ಅಧ್ಯಯನ ಸಾಧ್ಯವಾಗದ ಕಾರಣ, ಮೇಲ್ಪದರದ ಗ್ರಹಿಕೆಯ ಪರಿಣಾಮವಾಗಿ, ಮೂಲತಃ ಶೈವಾರಾಧಕರಾದ ಬೇಡರನ್ನು ವೈಷ್ಣವ ಪಂಥದವರು ಎಂದು ತಪ್ಪಾಗಿ ಅರ್ಥೈಸಲಾಗಿದೆ. ಇವರ ನಂತರ ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು ೧೯೨೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಮೂಲಕ ಪ್ರಕಟಿಸಿದ, "Mysore: Castes and Tribes" ಎಂಬ ಕೃತಿಯಲ್ಲಿ ಇವರು ಆರ್ಯೇತರರು, ದಕ್ಷಿಣ ದ್ರಾವಿಡ ಜನಾಂಗದ ಪೂರ್ವಜರು ಎಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೆ

ಸಂಸ್ಕೃತದ ವ್ಯಾಸ ಪದದಿಂದ ಬೇಡ ಎಂಬ ಪದ ನಿಷ್ಪನ್ನವಾಗಿದೆ ಎಂದು ಹೇಳುತ್ತಾರೆ. ಈ ಸಮುದಾಯದ ಸಾಂಸ್ಕೃತಿಕ ವಿವರಗಳೂ ಇಲ್ಲಿ ತಕ್ಕಮಟ್ಟಿಗೆ ದಾಖಲಾಗಿವೆ.

ಶ್ರೀ. ಎಂ. ರಂಗಪ್ಪನವರು 'ನುಂಕೆಮಲೆ ಪರಮಾರ್ಥ ಎಂಬ ತಮ್ಮ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಬಳಿ ಇರುವ ನುಂಕೆಮಲೆಯ ವಿಶೇಷಗಳನ್ನು ವಿವರಿಸುತ್ತಾ, ಪ್ರಾಸಂಗಿಕವಾಗಿ ಅಲ್ಲಿಯ ಸುತ್ತಮುತ್ತಲ ಹಳ್ಳಿಗಳಲ್ಲಿ ನೆಲೆಸಿರುವ ವ್ಯಾಸನಾಯಕ ವರ್ಗದವರ ಬಡತನ, ಉಡುಗೆ, ತೊಡುಗೆ, ಆಹಾರ ಕ್ರಮದ ಬಗ್ಗೆ ಪ್ರಸ್ತಾಪಿಸಿ ಸರ್ಕಾರ ಇವರ ಅಭಿವೃದ್ಧಿಯ ಬಗ್ಗೆ ನಿರ್ಲಕ್ಷ್ಯ ತಳೆದಿರುವುದನ್ನು ಹೇಳುತ್ತಾರೆ. ೧೯೮೨ರಲ್ಲಿ ಎಂ.ಜಿ. ಈಶ್ವರಪ್ಪನವರು 'ವ್ಯಾಸಬೇಡರು ಎಂಬ ಕಿರುಪುಸ್ತಕವನ್ನು ಪ್ರಕಟಿಸಿದ್ದಾರೆ. ಸಂಕ್ಷಿಪ್ತವಾಗಿಯಾದರೂ ವ್ಯಾಸಬೇಡರ - ವ್ಯಾಸ ಪದದ ನಿಷ್ಪತ್ತಿ, ಅವರ ದೈವಾರಾಧನೆ, ವೇಷಭೂಷಣ, ವಾಸದ ನೆಲೆ, ಕುಟುಂಬ ಪದ್ಧತಿ, ಸಾಂಪ್ರದಾಯಿಕ ನಂಬಿಕೆಗಳು, ಹುಟ್ಟು, ಸಾವು, ವಿವಾಹ, ಹಬ್ಬ-ಹರಿದಿನ, ನ್ಯಾಯ ತೀರ್ಮಾನ ಇವುಗಳ ಬಗ್ಗೆ ತುಂಬಾ ಮೌಲಿಕವಾದ ವಿವರಗಳನ್ನು ಕೊಟ್ಟಿದ್ದಾರೆ.

ಅದೇ ವರ್ಷ ಪ್ರಕಟವಾದ ಚಳ್ಳಕೆರೆ ಆರ್. ರಾಜಣ್ಣನವರ 'ನಾಯಕ ಜನಾಂಗದ ಇತಿಹಾಸ ಎಂಬ ಕೃತಿಯು ಬೇಡರ ಚಹರೆ ಮತ್ತು ಸಾಂಸ್ಕೃತಿಕ ಲಕ್ಷಣಗಳನ್ನು ವಿವರಿಸುತ್ತ ಈ ಜನರು ತಮ್ಮನ್ನು ವಾಲ್ಮೀಕಿ, ಕಿರಾತ, ಪರಿವಾರ, ಪಾಳೇಗಾರ, ನಾಯಕ, ಬೇಡ, ತಳವಾರ ಇತ್ಯಾದಿಯಾಗಿಯೂ ಕರೆದುಕೊಳ್ಳುತ್ತಾರೆ ಎಂದು ಹೇಳುತ್ತಾ, ವೃತ್ತಿಯನ್ನು ಸಂಕೇತಿಸುವ ಹೆಸರುಗಳ ಪ್ರಸ್ತಾಪ ಮಾಡುತ್ತಾರೆ. ಬೇಡರ ಸಮುದಾಯಕ್ಕೆ ಸೇರಿದ ಐತಿಹಾಸಿಕ, ಪೌರಾಣಿಕ ವ್ಯಕ್ತಿಗಳ ಬಗ್ಗೆಯೂ ವಿವರಣೆ ಕೊಟ್ಟು ಅರಸರ ಪಡೆಗಳಲ್ಲಿ ಯೋಧರಾಗಿ ಕಾರ್ಯ ನಿರ್ವಹಿಸುತ್ತಿದ್ದ ಇವರು ಮುಸ್ಲಿಮರ ಧಾಳಿಯಿಂದ ಮಡಿದಾಗ ಅವರ ಕುಟುಂಬಗಳು ಅತಂತ್ರಗೊಂಡಿದ್ದು ಅನಿಷ್ಟ ಪದ್ಧತಿಗಳಿಗೆ ಬಲಿಯಾಗಿದ್ದನ್ನು ತಿಳಿಸುತ್ತಾರೆ. ಒಂದು ಬುಡಕಟ್ಟಿನ ನಾಶಕ್ಕೆ ಕಾರಣವಾಗುವ ಸಂಗತಿಗಳನ್ನು ತಿಳಿಸುತ್ತಲೇ, ಅದನ್ನು ಅಭಿವೃದ್ಧಿ ಮಾಡಬೇಕಾಗಿರುವ ಅವಶ್ಯಕತೆ, ಅದಕ್ಕಾಗಿ ಅಧಿಕಾರಿ, ರಾಜಕಾರಣಿಗಳಿಗೆ ಬೇಕಾಗಿರುವ ಬದ್ಧತೆಗಳ ಬಗ್ಗೆಯೂ ತಿಳಿಸುತ್ತಾರೆ. ಕೇವಲ ಸಾಂಸ್ಕೃತಿಕ ವಿವರಗಳನ್ನು ಕೊಡುವ ಹಂತಕ್ಕೆ ನಿಲ್ಲದೆ, ಅವರ ಅಭಿವೃದ್ಧಿಯ ಬಗ್ಗೆಯೂ ಚಿಂತಿಸುವ ಇವರ ಕೃತಿ ಅಂದಿನ ಮಟ್ಟಿಗೆ ಆಧುನಿಕ ಚಿಂತನೆಯೆನಿಸುತ್ತದೆ.

ಎಂ.ಎನ್. ಪ್ರಭಾಕರ್‌ರವರು ೧೯೭೬ರಲ್ಲಿ 'ಚಂದ್ರವಳ್ಳಿ ಕೃತಿಯಲ್ಲಿ ನಾಯಕನಹಟ್ಟಿ ಬಖೈರನ್ನು ವಿವರಿಸಿ, ವ್ಯಾಸಗಂಪಳವು, ಶ್ರೀಶೈಲ ಮೂಲದಿಂದ ಕಾಟಮಲ್ಲಪ್ಪನಾಯಕನ ನೇತೃತ್ವದಲ್ಲಿ ಹೊರಟು, ಪಶುಸಂಪತ್ತಿನೊಂದಿಗೆ ಕರ್ನಾಟಕವನ್ನು ಪ್ರವೇಶಿಸಿತು ಎಂಬ ವಿವರ ಕೊಡುತ್ತಾರೆ. ಡಾ. ಕೃಷ್ಣಮೂರ್ತಿ ಹನೂರರು 'ಬೇಡ ನಾಯಕರು ಎಂಬ ತಮ್ಮ ಸಂಶೋಧನಾ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಬೇಡರನ್ನು ಕುರಿತು ಬಹಳ ಮಹತ್ವದ ಅಧ್ಯಯನ ಮಾಡಿದ್ದಾರೆ. ಬೇಡರ ಸಂಸ್ಕೃತಿಯ ಬಗ್ಗೆ ಸಾಕಷ್ಟು ಉಪಯುಕ್ತವಾದ ವಿವರಗಳನ್ನು ಕೊಟ್ಟು ಬೇಡರ ಸೃಷ್ಟಿ ಪುರಾಣ ಮತ್ತು ಬೇಡ ಶರಣರನ್ನು ಕುರಿತ ಮಾಹಿತಿಗಳನ್ನು ಕೊಟ್ಟಿದ್ದಾರೆ.

ಕರಿಶೆಟ್ಟಿ ರುದ್ರಪ್ಪನವರು ಈ ಸಮುದಾಯದ ಸಾಂಸ್ಕೃತಿಕ ವಿವರಗಳಿಗೆ ಸಂಬಂಧಿಸಿದಂತೆ ಸಂಶೋಧನೆ ಮಾಡಿ ಮೇಲ್ಪದರದ ವಿವರಗಳನ್ನು ತಮ್ಮ (ಮ್ಯಾಸನಾಯಕರು: ಒಂದು ಜನಾಂಗಿಕ ಅಧ್ಯಯನ. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು) ಕೃತಿಯಲ್ಲಿ ದಾಖಲು ಮಾಡಿದ್ದಾರೆ. ಡಾ. ವಿರೂಪಾಕ್ಷ ಪುಜಾರಿಹಳ್ಳಿಯವರು 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು ಎಂಬ ತಮ್ಮ ಕೃತಿಯಲ್ಲಿ ಇಡೀ ಜಿಲ್ಲೆಯಲ್ಲಿರುವ ಆರಾಧನಾ ನೆಲೆಗಳು, ಆರಾಧನೆಯಲ್ಲಿರುವ ವೀರರು ಸಮುದಾಯದ ಮೂಲ ಮತ್ತು ಸಮುದಾಯದ ಸಾಮಾಜಿಕ ಸ್ಥಿತಿಗತಿಗಳ ವಿವರ ಕೊಟ್ಟಿದ್ದಾರೆ. ಅಲ್ಲದೆ ಇವರು ಈ ಸಮುದಾಯವನ್ನು ಕುರಿತು ಸಾಕಷ್ಟು ಲೇಖನಗಳನ್ನೂ ಬರೆದಿರುತ್ತಾರೆ. ಹಾಗೆಯೇ ಸಾಣೀಕೆರೆ ಸಣ್ಣೋಬಯ್ಯವರು, ವಿ. ಚಿತ್ರಲಿಂಗಯ್ಯ, ವೀರನಾಯಕರು ಹರತಿಕೋಟೆ, ತಿಪ್ಪೇಸ್ವಾಮಿ ಬಿ.ಜಿ.ಕೆರೆ ಮತ್ತು ಲಕ್ಷ್ಮಣ ತೆಲಗಾವಿಯವರು ಈ ಸಮುದಾಯದ ಬಗ್ಗೆ ಅನೇಕ ವಿವರಗಳನ್ನು ಕೊಡುವ ಲೇಖನಗಳನ್ನು ಪ್ರಕಟಿಸಿರುತ್ತಾರೆ.

'ಕರ್ನಾಟಕದ ಬುಡಕಟ್ಟುಗಳು ಎಂಬ ಸಂಪುಟದಲ್ಲಿ(ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಣೆ) ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ಉಪಸಂಸ್ಕೃತಿ ಮಾಲೆಯಲ್ಲಿ ಬರುವ 'ಮ್ಯಾಸಬೇಡರು ಕೃತಿಯಲ್ಲಿ ಡಾ. ಕೃಷ್ಣಮೂರ್ತಿ ಹನೂರರು ಈ ಸಮುದಾಯದ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರ ಗಾದ್ರಿ ಪಾಲನಾಯಕ ಮತ್ತು ಎ.ಎಸ್. ಪ್ರಭಾಕರ್‌ರವರು ಕನ್ನಡ ವಿಶ್ವವಿದ್ಯಾಲಯ, ಹಂಪಿ ವತಿಯಿಂದ ಸಂಪಾದಿಸಿದ 'ಮ್ಯಾಸಬೇಡರ ಕಥನಗಳು ಕೃತಿಯಲ್ಲಿ ಸಮುದಾಯವನ್ನು ಕುರಿತು ಸಾಕಷ್ಟು ವಿವರಗಳನ್ನು ನೀಡಿದ್ದಾರೆ. ಡಾ. ಹಿ.ಚಿ. ಬೋರಲಿಂಗಯ್ಯನವರು 'ಬುಡಕಟ್ಟು ದೈವಾರಾಧನೆ' ಎಂಬ ಕೃತಿಯಲ್ಲಿ, ಮ್ಯಾಸಬೇಡ ಬುಡಕಟ್ಟಿನ ದೈವಾರಾಧನೆ ಯನ್ನು ಕುರಿತಂತೆ ವಿವರಿಸಿದ್ದಾರೆ. ಹಾಗೂ ಮೀರಸಾಬಿಹಳ್ಳಿ ಶಿವಣ್ಣನವರು ತಮ್ಮ 'ಮ್ಯಾಸಮಂಡಲ' ಎಂಬ ಕೃತಿಯಲ್ಲಿ ಈ ಸಮುದಾಯದ ಬಗ್ಗೆ ಮಹತ್ವಪೂರ್ಣವಾದ ಮಾಹಿತಿ ಮತ್ತು ವಿಶ್ಲೇಷಣೆಗಳನ್ನು ನೀಡಿದ್ದಾರೆ.

ಇಷ್ಟೆಲ್ಲಾ ಅಧ್ಯಯನಗಳು ನಡೆದಿದ್ದರೂ, ಸಮಗ್ರ ಸಮುದಾಯದ ಎಲ್ಲಾ ಒಳಪದರುಗಳ ಅಧ್ಯಯನ ನಡೆದಿದೆಯೇ? ಎಂಬ ಪ್ರಶ್ನೆಯು ಕಾಡುತ್ತದೆ. ಸಮಗ್ರವಾದ ಅಧ್ಯಯನವು, ಬಹುಶಃ ಒಬ್ಬರ ಪ್ರಯತ್ನಗಳ ಪರಿಮಿತಿಗೆ ದಕ್ಕುವುದು ಕಷ್ಟ. ಹಾಗೆಯೇ ಕಾಲದ ದೃಷ್ಟಿಯಿಂದ ಯೋಚಿಸಿದಾಗಲೂ ಪ್ರತಿಕಾಲ ಘಟ್ಟದಲ್ಲೂ ಇಂತಹ ಬುಡಕಟ್ಟುಗಳು ಬದಲಾಗುತ್ತಿರುವುದರಿಂದ, ಅವು ವರ್ತಮಾನದಲ್ಲಿ ಹೇಗೆ ಬದುಕುತ್ತಿವೆ? ಎಂಬ ಅಧ್ಯಯನಗಳು ಸತತವಾಗಿ ನಡೆಯಬೇಕಾದಾಗ ಈ ಕೆಲಸವು ಎಂದಿಗೂ ಸಂಪೂರ್ಣವಾಗಿ ಆಯಿತು ಎಂದು ಹೇಳುವುದು ಸಾಧ್ಯವಿಲ್ಲದ ಮಾತು. ಆದರೂ ವ್ಯಾಪಕವಾದ ಅಧ್ಯಯನವು ನಡೆದಿಲ್ಲದಿರುವುದಂತೂ ವಾಸ್ತವ. ಡಾ. ವಿರೂಪಾಕ್ಷಿ ಪೂಜಾರಿಹಳ್ಳಿಯವರ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಕೃತಿಯಲ್ಲಿ ದಾನಸಾಲಮ್ಮನನ್ನು, ಅಕ್ಕರಾಯಮ್ಮನನ್ನು, ಮುಂಗಲು ದೇವಮ್ಮ, ಗೌರಸಮುದ್ರದ ಮಾರಮ್ಮ, ಮಲೆಯಮ್ಮ ಇವರನ್ನು ಸ್ತ್ರೀದೇವತೆಯರನ್ನಾಗಿ ಆರಾಧಿಸುವ ಪದ್ಧತಿ ಇದೆ ಎಂದು ಹೇಳುತ್ತಾ ಆರಾಧನಾ ನೆಲೆಗಳ ಬಗ್ಗೆ ಉಲ್ಲೇಖ ಮಾಡಿದ್ದಾರೆ. ಈ ಎಲ್ಲಾ

ಅಧ್ಯಯನಗಳನ್ನು ಸಮೀಕ್ಷಿಸಿದಾಗ ಈ ಬುಡಕಟ್ಟಿನಲ್ಲಿ ಪ್ರಧಾನವಾಗಿ ಕಂಡುಬರುವ ಮಾತೃ ರೂಪೀ ನೆಲೆಗಳು ಮತ್ತು ಈ ಸಂಸ್ಕೃತಿಯನ್ನು ಉಳಿಸಿ ನಡೆಸಿಕೊಂಡು ಬರುವಲ್ಲಿ ಮಹಿಳೆಯರ ಪಾತ್ರ – ಈ ಸಂಗತಿಗಳ ಬಗ್ಗೆ ವ್ಯಾಪಕವಾದ ಅಧ್ಯಯನ ನಡೆದಿಲ್ಲದಿರುವುದು ಕಂಡುಬರುತ್ತದೆ.

## ೧.೨ ಅಧ್ಯಯನದ ವಿಷಯ ಮತ್ತು ವ್ಯಾಪ್ತಿ :

ಮ್ಯಾಸಬೇಡರ ಬುಡಕಟ್ಟು ಮೂಲತಃ ಮಾತೃಮೂಲೀಯವಾಗಿದ್ದ ಮಹಿಳಾ ಪ್ರಧಾನವಾಗಿದ್ದ ಬುಡಕಟ್ಟು. ಈ ಕಾರಣದಿಂದಾಗಿ ಈ ಸಂಸ್ಕೃತಿಯನ್ನು ಕಟ್ಟಿ ಬೆಳೆಸುವಲ್ಲಿ ಮಹಿಳೆಯರ ಪಾತ್ರ ಬಹಳ ಮುಖ್ಯವಾದುದಾಗಿದೆ. ಈ ವಿಶಿಷ್ಟ ಮಹಿಳೆಯರನ್ನು ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು ಎಂದು ಕರೆಯಬಹುದಾಗಿದೆ. ಇವರನ್ನು ಕುರಿತು ಆದಷ್ಟೂ ವಿಸ್ತೃತವಾದ ವಿವರಗಳನ್ನು ಕೊಟ್ಟು, ವಿಶ್ಲೇಷಣೆ ನಡೆಸುವುದು ನನ್ನ ಅಧ್ಯಯನದ ವಿಷಯವಾಗಿದೆ. ಈ ನಾಯಕಿಯರು ಆರಾಧನಾ ನೆಲೆಯಲ್ಲಿ ಪೂಜಿಸಲ್ಪಡುತ್ತಿರುವುದರಿಂದ, ಮೊದಲು ಈ ಆರಾಧನೆಗೆ ಸಂಬಂಧಿಸಿದ ವಿವರಗಳನ್ನು ವಿಶ್ಲೇಷಿಸಿ, ನಂತರ ಈ ನಾಯಕಿಯರೇ ಕ್ರಮೇಣ ಹೇಗೆ ಅವಸ್ಥಾಂತರಗೊಂಡಿದ್ದಾರೆಂಬುದನ್ನು ನಿರೂಪಿಸಲಾಗುತ್ತದೆ. ಆಮೇಲೆ ಹೀಗಾಗಲು ಕಾರಣಗಳನ್ನು ಶೋಧಿಸಲಾಗುತ್ತದೆ. ಅಂತೆಯೇ ಹೀಗೆ ಆರಾಧಿತವಾಗದೆ ಅಲಕ್ಷಿಸಲ್ಪಟ್ಟಿರುವ ನಾಯಕಿಯರು ಮತ್ತು ಅವರ ಅವಗಣನೆಗೆ ಕಾರಣವಾದ ಸಂದರ್ಭಗಳನ್ನು ವಿಶ್ಲೇಷಿಸುವುದು ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ವಿಷಯಗಳಾಗಿವೆ. ಇದಕ್ಕೆ ಹಿನ್ನೆಲೆಯಾಗಿ ಈ ಬುಡಕಟ್ಟಿನ ಸಾಂಸ್ಕೃತಿಕ ವಿಶೇಷಗಳು, ಇವರ ಮೂಲನೆಲೆ, ಇಂದಿನ ನೆಲೆಗಳು, ಇಂದಿನ ಸಾಮಾಜಿಕ ಸ್ಥಿತಿಗಳು ಮತ್ತು ಬಹಳ ಮುಖ್ಯವಾಗಿ ಈ ಸಮುದಾಯದ ಇಂದಿನ ಮಹಿಳೆಯರ ಸ್ಥಿತಿಗತಿಗಳನ್ನು ಕುರಿತು ವಿಚಾರ ಮಾಡುವುದು ಕೂಡ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ.

ಹಿಂದೆ ಸಾಮಾನ್ಯವಾಗಿ ಕಾಡು, ಕಾಡಿನ ಅಂಚುಗಳಲ್ಲಿ ಬುಡಕಟ್ಟು ಸಮುದಾಯಗಳು ವಾಸಮಾಡುತ್ತಿದ್ದು, ಇವರಿಗೆ ಸಂಬಂಧಿಸಿದ ಅಧ್ಯಯನ ಆ ಪ್ರದೇಶದ ಸೀಮಿತವಾದ ವ್ಯಾಪ್ತಿಯ ಒಳಗಡೆ ನಡೆಯುತ್ತಿತ್ತು. ಆದರೆ ವರ್ತಮಾನದಲ್ಲಿ ಬುಡಕಟ್ಟಿನ ಜನರು ಕಾಡಿನ ಆಸರೆ ಕಳೆದುಕೊಂಡು, ಮೂಲವೃತ್ತಿಗಳನ್ನು ಕಳೆದುಕೊಂಡು, ಬದುಕು ನಡೆಸುವ ಅನಿವಾರ್ಯ ಕಾರಣದಿಂದ ಊರು ಸೇರಿ ವಿವಿಧ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ. ಮ್ಯಾಸನಾಯಕ ಸಮುದಾಯವೂ ಇದರಿಂದ ಹೊರತಾಗಿಲ್ಲ. ಕುರಿ ಸಾಕಾಣಿಕೆ, ಕೃಷಿ ಮತ್ತು ಕೃಷಿಕಾರ್ಮಿಕತನದ ಮೂಲಕ ಜೀವನ ನಡೆಸುತ್ತಿರುವ ಇವರು ಇಂದು ಚಿತ್ರದುರ್ಗ ಜಿಲ್ಲೆಯಲ್ಲಿ ವ್ಯಾಪಕವಾಗಿಯೂ ಬಳ್ಳಾರಿ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ವಿರಳವಾಗಿಯೂ ನೆಲೆಸಿದ್ದಾರೆ. ಸಾಂಸ್ಕೃತಿಕ ನಾಯಕಿಯರ ಬಗೆಗೆ ಅಧ್ಯಯನ ಮಾಡುವಾಗ ಈ ಪ್ರದೇಶಗಳ ವ್ಯಾಪ್ತಿಯಲ್ಲಿರುವ ಈ ನಾಯಕಿಯರ ಆರಾಧನಾ ನೆಲೆಗಳನ್ನು ಗುರುತಿಸಿ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಇವುಗಳನ್ನು ಬಳಸಿಕೊಂಡಿರುತ್ತೇನೆ.

## ೧.೩ ಅಧ್ಯಯನದ ಮಾದರಿಗಳು ಮತ್ತು ವಿಧಾನ :

ಯಾವುದೇ ಸಂಸ್ಕೃತಿಯ ಬಹುಮುಖ್ಯವಾದ ಅಂಶ ಆ ಸಂಸ್ಕೃತಿಯ ಸಾಹಿತ್ಯ. ಆ ಸಂಸ್ಕೃತಿಯನ್ನು ಉಳಿಸಿ ಬೆಳಸಿಕೊಂಡು ಬರುವುದರಲ್ಲಿ ಸಾಹಿತ್ಯದ ಪಾತ್ರವು ಬಹಳ ಮುಖ್ಯ. ಹೋಮರ್‌ನ ಇಲಿಯಡ್ ಮತ್ತು ಒಡೆಸ್ಸಿ ಮಹಾಕಾವ್ಯಗಳ ಮೂಲಕ ಗ್ರೀಕ್‌ನ ಸಂಸ್ಕೃತಿಯ ದರ್ಶನವಾಗುತ್ತದೆ. ಹಾಗೆಯೇ ರಾಮಾಯಣ, ಮಹಾಭಾರತಗಳಿಂದ ಭಾರತದ ಶಿಷ್ಟ ಸಂಸ್ಕೃತಿಯ ದರ್ಶನ ಸಾಧ್ಯವಾಗುತ್ತದೆ. ಹಿಂದೊಮ್ಮೆ ಭಾರತದ ಪ್ರಧಾನ ನೆಲೆಗಳಾಗಿದ್ದು ಇಂದು ಮುಖ್ಯವಾಹಿನಿಯಿಂದ ದೂರದಲ್ಲಿಯೇ ಉಳಿದಿರುವ ಬುಡಕಟ್ಟುಗಳನ್ನು ಕುರಿತ ಯಾವುದೇ ಸಂಗತಿಯನ್ನು ಅಧ್ಯಯನ ಮಾಡುವಾಗಲೂ ಆ ಬುಡಕಟ್ಟಿಗೆ ಸಂಬಂಧಿಸಿದ ಸಾಹಿತ್ಯವು ಅದು ಗದ್ಯವಾಗಿರಲಿ ಅಥವಾ ಪದ್ಯವಾಗಿರಲಿ, ಬಹಳ ಮುಖ್ಯವಾದ ಆಕರವಾಗಿರುತ್ತದೆ. ಈ ಹಿನ್ನೆಲೆಯಿಂದ ವ್ಯಾಸಬೇಡರ ಸಮುದಾಯದ ಮಹಿಳಾ ನೆಲೆಗಳ ಬಗ್ಗೆ ಅರಿಯಲು ಹೊರಟಾಗ ಸಂಬಂಧಿಸಿದ ಸಾಹಿತ್ಯದ ಸಂಗ್ರಹ ಮತ್ತು ವಿಶ್ಲೇಷಣೆಗಳು ಅಗತ್ಯವಾಗುತ್ತವೆ.

ಅಕ್ಷರ ಜ್ಞಾನವಿಲ್ಲದ ಈ ಸಮುದಾಯಗಳು, ಕೇವಲ ತಮ್ಮ ಸ್ಮೃತಿಯ ಜ್ಞಾನವನ್ನೇ ಬಳಸಿಕೊಂಡು –ಪದ್ಯದಲ್ಲೋ ಅಥವಾ ಗದ್ಯದಲ್ಲಿಯೋ– ಸಮುದಾಯದ ಸಾಂಸ್ಕೃತಿಕ ವಿಶೇಷಗಳು ಮತ್ತು ವಿಶಿಷ್ಟ ಮಹಿಳೆಯರು ಅಥವಾ ಪುರುಷರಿಗೆ ಸಂಬಂಧಿಸಿದ ಇತಿಹಾಸವನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಬುಡಕಟ್ಟಿನ ಜನರಲ್ಲಿರುವ ಈ ವಿವರಗಳನ್ನು ದಾಖಲು ಮಾಡಿಕೊಳ್ಳುತ್ತಾ, ನಾಯಕಿಗೆ ಸಂಬಂಧಿಸಿದ ಆರಾಧನೆ, ಆಚರಣೆಗಳನ್ನು ಗಮನಿಸಿ ಈ ಮೂಲಕ ಪಡೆದ ತಿಳುವಳಿಕೆಯ ಆಧಾರದ ಮೇಲೆ ನನ್ನ ಅಧ್ಯಯನವನ್ನು ಮಾಡುತ್ತಿದ್ದೇನೆ. ಇದಕ್ಕೆ ಪೂರಕ ಸಾಮಗ್ರಿಯಾಗಿ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಓದಿ ಮತ್ತು ಇತರ ಬುಡಕಟ್ಟುಗಳ ಬಗೆಯೂ ಸ್ವಲ್ಪ ಮಟ್ಟಿಗೆ ಓದಿಕೊಂಡು, ಮುಖ್ಯವಾಗಿ ಅಲ್ಲಿರುವ ಮಹಿಳಾ ನೆಲೆಗಳನ್ನು ಗಮನಿಸಿ, ಸ್ತ್ರೀವಾದಕ್ಕೆ ಸಂಬಂಧಿಸಿದ ಕೃತಿಗಳನ್ನು ಓದಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದ ಅರಿವನ್ನು ಪಡೆದುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಬಾಲ್ಯದಿಂದಲೂ ಸಮುದಾಯದ ಸಾಂಸ್ಕೃತಿಕ ಆಚರಣೆಗಳನ್ನು ಕುತೂಹಲದಿಂದ ಗಮನಿಸುತ್ತಾ ಬಂದ ನಾನು ಈಗ ಇನ್ನಷ್ಟು ಕೂಲಂಕಷವಾಗಿ ಅವುಗಳನ್ನು ಗಮನಿಸಿ, ಸಂಬಂಧಿಸಿದಂತೆ ಛಾಯಚಿತ್ರಗಳನ್ನು ತೆಗೆದುಕೊಂಡು ಆ ಮೂಲಕ ನನ್ನ ಅಧ್ಯಯನ ಮಾಡಿರುತ್ತೇನೆ.

## ೧.೪ ಅಧ್ಯಯನದ ಉದ್ದೇಶ :

ಬುಡಕಟ್ಟುಗಳ ಅಧ್ಯಯನ ಇಂದು ವ್ಯಾಪಕವಾಗಿ ನಡೆದಿದ್ದರೂ ಸ್ತ್ರೀಕೇಂದ್ರಿತ ಅಧ್ಯಯನಗಳು ಕಡಿಮೆ ಎಂದೇ ಹೇಳಬಹುದಾಗಿದೆ. ಬುಡಕಟ್ಟಿನ ಅಧ್ಯಯನಗಳು ಆರಂಭಗೊಂಡ ಪ್ರಾಥಮಿಕ ಹಂತದಲ್ಲಿ ಅಲ್ಲಿರುವ ಸಾಂಸ್ಕೃತಿಕ ವಿಶೇಷಗಳನ್ನು ಅಧ್ಯಯನ ಮಾಡಿ ದಾಖಲು ಮಾಡುವುದೇ ಪ್ರಮುಖ ಅಗತ್ಯವಾಗಿತ್ತು. ನಂತರ ಬುಡಕಟ್ಟುಗಳ ಒಳಪದರುಗಳ ಅಧ್ಯಯನ – ಇತರ ಬುಡಕಟ್ಟುಗಳೊಂದಿಗಿನ

ತೌಲನಿಕ ಅಧ್ಯಯನ, ಅಲ್ಲಿಯ ಕೆಲವು ಸಾಂಸ್ಕೃತಿಕ ಸಂದರ್ಭಗಳು, ಬಿಕ್ಕಟ್ಟುಗಳಿಂದ ರೂಪುಗೊಂಡ ಸಾಂಸ್ಕೃತಿಕ ನಾಯಕರನ್ನು ಕುರಿತ ಅಧ್ಯಯನಗಳು ಸಾಕಷ್ಟು ನಡೆದಿವೆ, ನಡೆಯುತ್ತಲಿವೆ. ಇಷ್ಟಲ್ಲದೆ ಬುಡಕಟ್ಟಿನ ಅಭಿವೃದ್ಧಿ ಕುರಿತು ಸರ್ಕಾರ ಹಾಕಿಕೊಂಡಿರುವ ಕಾರ್ಯಯೋಜನೆಗಳು, ಅದರ ಫಲಿತಗಳು ಇವು ಬುಡಕಟ್ಟಿನ ನೆಮ್ಮದಿಯನ್ನು ಉಳಿಸಿವೆಯೋ, ಕಲಕಿವೆಯೋ? ಮುಂತಾದ ಸಂಗತಿಗಳನ್ನು ಕುರಿತು ಇತ್ತೀಚಿಗೆ ಈ ಬಗ್ಗೆ ವಿಶ್ವವಿದ್ಯಾಲಯಗಳು ವಿವರವಾದ ಅಧ್ಯಯನಗಳನ್ನು ಮಾಡುತ್ತಲಿವೆ. ಒಟ್ಟು ಈ ಎಲ್ಲಾ ಅಧ್ಯಯನಗಳನ್ನು ಸಮೀಕ್ಷಿಸಿದಾಗ ಇವುಗಳಲ್ಲಿ ಮಹಿಳೆಯರನ್ನು ಕುರಿತ ಪ್ರಾಸಂಗಿಕವಾದ ವಿವರಗಳು ಬಂದಿವೆಯೇ ಹೊರತು, ಮಹಿಳೆಯರನ್ನೇ ಕೇಂದ್ರವನ್ನಾಗಿರಿಸಿಕೊಂಡು ನಡೆದಿರುವ ಅಧ್ಯಯನಗಳು ಕಡಿಮೆಯೆಂದೇ ಹೇಳಬಹುದು. ದೇಸೀಯ ನೆಲೆಗಳಲ್ಲಿ ನಡೆದಿರುವ ಅಧ್ಯಯನಗಳಲ್ಲಿ ಡಾ. ಗಾಯತ್ರೀ ನಾವಡರ 'ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು' ಎಂಬ ಕೃತಿಯು ವಿಶೇಷವಾದುದಾಗಿವೆ. ಡಾ. ಮೀರಾಸಾಬಿಹಳ್ಳಿ ಶಿವಣ್ಣನವರು 'ಕಾಡುಗೊಲ್ಲರ ಬುಡಕಟ್ಟು ವೀರರು ಎಂಬ ಸಂಶೋಧನಾ ಕೃತಿಯಲ್ಲಿ ಈರಗಾತಿಯರನ್ನು ಹೆಸರಿಸಿ ಅವರಿಗೆ ಸಂಬಂಧಿಸಿದ ವಿವರಗಳನ್ನು ಕೊಟ್ಟಿದ್ದಾರೆ. ಇವರನ್ನು ಈರಗಾತಿಯರು ಎಂದು ಆ ಸಮುದಾಯವೇ ಕರೆದಿದೆ. ಆದರೂ ಇವರು ಅನಿವಾರ್ಯ ಕಾರಣಗಳಿಂದಾಗಿ ಸತಿಯಾದವರು. ಸಮುದಾಯವನ್ನು, ಸಂಸ್ಕೃತಿಯನ್ನು ಸಂರಕ್ಷಿಸುವಲ್ಲಿ ಇವರ ಪಾತ್ರ ಕಡಿಮೆಯೇ. ಈ ಹಿನ್ನೆಲೆಯಲ್ಲಿ ನೋಡಿದಾಗ ಸಮುದಾಯವು ಆಕ್ರಮಣಕಾರೀ ಶಕ್ತಿಗಳ ಧಾಳಿಯಿಂದ ತತ್ತರಿಸಿ ಭೀತಿಯಿಂದ ತಲ್ಲಣಗೊಂಡಾಗ ಪುರುಷರಿಗೆ ಹೆಗಲೆಣೆಯಾಗಿ, ಕೆಲವೊಮ್ಮೆ ಪುರುಷರಿಗಿಂತಲೂ ಮಿಗಿಲಾಗಿ ಧೈರ್ಯ, ಸಾಹಸ, ತಂತ್ರಗಾರಿಕೆಗಳನ್ನು ತೋರಿಸಿ ಬುಡಕಟ್ಟನ್ನು ಸಂರಕ್ಷಿಸುವ ಮಹಿಳೆಯರು ಈ ಮ್ಯಾಸನಾಯಕ ಬುಡಕಟ್ಟಿನಲ್ಲಿ ಕಂಡುಬರುತ್ತಾರೆ. ಇಂತಹ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಿ ಹೊರ ಜಗತ್ತಿಗೆ ಇವರನ್ನು ಪರಿಚಯಿಸುವುದು ನನ್ನ ಉದ್ದೇಶವಾಗಿದೆ. 'ಯಾರಾದರೂ ಭಾರತೀಯ ಮಹಿಳೆಯ ಸೌಂದರ್ಯವನ್ನು ನೋಡಬೇಕೆಂದಿದ್ದರೆ ಗಿರಿಜನರ ಹಾಡಿಗಳಲ್ಲಿ ಆ ಸೌಂದರ್ಯವನ್ನು ಕಾಣಲು ಸಾಧ್ಯ' ಎನ್ನುತ್ತಾನೆ ಗೌತಮಬುದ್ಧ.[೧] ಇಲ್ಲಿ ಸೌಂದರ್ಯ ಎನ್ನುವುದು ಕೇವಲ ಬಾಹ್ಯಚಹರೆಯಾಗಿದ್ದರೂ ಅದು ಸಾಹಸ, ಜಾಣ್ಮೆ, ಶ್ರಮಜೀವನದಿಂದ ಪುಷ್ಟಿಗೊಂಡು ಶೋಭೆಯನ್ನು ಪಡೆದಿರುವುದೇ ಆಗಿರುತ್ತದೆ. ಇಂತಹ ಮಹಿಳೆಯರನ್ನು ಕುರಿತ ಅಧ್ಯಯನ ಅತ್ಯಂತ ಅಗತ್ಯವಾದುದಾಗಿದೆ. ಭಾರತೀಯ ಸಂಸ್ಕೃತಿ ಎಂದರೆ ವೈದಿಕ ಸಂಸ್ಕೃತಿ ಎಂದೇ ಬಿಂಬಿಸಲ್ಪಟ್ಟು ಅಲ್ಲಿರುವ ವಿವರಗಳ ಮೂಲಕವೇ ಭಾರತೀಯ ದರ್ಶನವನ್ನು ಕಂಡುಕೊಳ್ಳುವ ವಿಧಾನವೇ ಸಾಮಾನ್ಯವಾಗಿದ್ದ ಸಂದರ್ಭದಿಂದ ಬಿಡುಗಡೆಗೊಂಡು ದೇಸೀಯ ಸಂಸ್ಕೃತಿಗಳ ಅಧ್ಯಯನಕ್ಕೂ ಇತ್ತೀಚೆಗೆ ಮಹತ್ವ ಸಿಗುತ್ತಿದೆ. ಹಾಗೆಯೇ ಭಾರತದ ನಿಜ ಸಂಸ್ಕೃತಿಗಳ ಒಳಪದರುಗಳಲ್ಲಿ ನೆಲೆಗೊಂಡಿರುವ ಸ್ತ್ರೀ ನೆಲೆಗಳ ಬಗ್ಗೆಯೂ ವಿಚಾರ ಮಾಡಿದಾಗ, ಇಂತಹ ನಾಯಕಿಯರ ಒಟ್ಟು ವ್ಯಕ್ತಿತ್ವವನ್ನು ಈ ಮೂಲಕ ಪರಿಚಯಿಸಿಕೊಂಡಾಗ ಅವರ ಆಲೋಚನೆ, ನಡವಳಿಕೆಗಳೇ ಭಾರತೀಯ ಸ್ತ್ರೀಯ ಸಂವೇದನೆ ಎಂದು ಗುರುತಿಸಲು ಸಾಧ್ಯವಾಗಬಹುದು. ಭಾರತೀಯ ಸ್ತ್ರೀವಾದ ಎಂದು ವಿಚಾರ ಮಾಡಿದಾಗ ಈ ಸ್ತ್ರೀಯರ ಸಂಕಥನಗಳನ್ನೇ ಮಾದರಿಯಾಗಿಟ್ಟುಕೊಂಡು ನಮ್ಮದೇ ಆದ ಸ್ತ್ರೀವಾದವನ್ನು

---

[೧] ಪಿ.ಲಂಕೇಶ್. ಮೋಕ್ಷ ಹುಡುಕುತ್ತಾ ಪ್ರೀತಿಯ ಬಂಧನದಲ್ಲಿ.

ಕಟ್ಟಿಕೊಳ್ಳಲು ಸಾಧ್ಯವಾಗಬಹುದು. ವೈದಿಕ ಸಂಸ್ಕೃತಿ ಕೇಂದ್ರಿತವಾದ ಸ್ತ್ರೀವಾದಕ್ಕಿಂತ, ಭಿನ್ನವಾದ ಬುಡಕಟ್ಟಿನ ಸ್ತ್ರೀವಾದವನ್ನು ಬಹುಶಃ ಈ ಬಗೆಯ ಅಧ್ಯಯನದಿಂದ ಗುರುತಿಸಲು ಸಾಧ್ಯವಾಗಬಹುದೇನೋ ಎಂಬ ಆಶಯ ನನ್ನದಾಗಿದೆ. ಈ ಸಂಸ್ಕೃತಿಯಲ್ಲಿದ್ದಂತಹ ಲಿಂಗಾಧಾರಿತ ವ್ಯವಸ್ಥೆಯ ಬಗೆಗಿನ ನಿಲುವುಗಳೇನು? ಇಂದಿನ ಸ್ಥಿತಿ ಏನು ಎಂಬ ವಿವರಗಳನ್ನು ವಿಶ್ಲೇಷಿಸಿ ಆದಷ್ಟೂ ಸತ್ಯಕ್ಕೆ ಹತ್ತಿರವಾದ ಸಂಗತಿಯನ್ನು ಕಂಡುಕೊಳ್ಳುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಾಯ-೨

# ವ್ಯಾಸ ಬೇಡರ ಸಾಂಸ್ಕೃತಿಕ ಹಿನ್ನೆಲೆ

೨.೧ ವ್ಯಾಸಬೇಡ ಪದದ ನಿಷ್ಪತ್ತಿ

೨.೨ ವ್ಯಾಸಬೇಡರ ಸಾಂಸ್ಕೃತಿಕ ವಿಶೇಷಗಳು

೨.೩ ಮೂಲನೆಲೆಗಳು

೨.೪ ಇಂದಿನ ನೆಲೆಗಳು

೨.೫ ವ್ಯಾಸಬೇಡರ ಸಾಮಾಜಿಕ ಸ್ಥಿತಿಗತಿ

ಅಧ್ಯಾಯ-೨

# ವ್ಯಾಸ ಬೇಡರ ಸಾಂಸ್ಕೃತಿಕ ಹಿನ್ನೆಲೆ

## ೨.೧ 'ವ್ಯಾಸ ಎಂಬ ಪದದ ನಿಷ್ಪತ್ತಿ

ಆಹಾರಸಂಗ್ರಹಣೆಯ ಒಂದು ವಿಧಾನವಾಗಿ ಮನುಷ್ಯನು ಬೇಟೆಯಾಡುವುದನ್ನು ಕಲಿತನು. ಇದು ಆತನ ಬದುಕಿಗೆ ಅನಿವಾರ್ಯವೇ ಆಗಿತ್ತು. ಈ ಬಗೆಯ ಜೀವನವಿಧಾನದಲ್ಲಿ, ಜಗತ್ತಿನ ಎಲ್ಲಾ ಜನಾಂಗಗಳ ನಡುವೆಯೂ ಸಾಮ್ಯವಿದೆ. ಹೀಗೆ ಬೇಟೆಯಾಡಿ, ಆಹಾರ ಸಂಗ್ರಹ ಮಾಡಿ, ಬದುಕುವ ಸಮುದಾಯವನ್ನು ನಿಷಾಧರು, ವ್ಯಾಧರು, ಪುಳಿಂದರು, ಬೇಡರು, ಭಿಲ್ಲರು ಹೀಗೆಲ್ಲಾ ಕರೆಯುವ ವಾಡಿಕೆ ಇದೆ. ಭಾರತದಲ್ಲಿ ಇರುವ ಜನರೆಲ್ಲಾ ಇದೇ ಮೂಲದಿಂದ ಬಂದಿರುವಾಗ, ಅವರನ್ನೆಲ್ಲಾ ಏಕೆ ಹೀಗೆ ಕರೆಯಲಾಗುತ್ತಿಲ್ಲ ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸುತ್ತದೆ. ಬಹುಶಃ ಕಾಲಕ್ರಮೇಣ ಮೂಲವೃತ್ತಿಯನ್ನು ತೊರೆದು, ಕೃಷಿ, ಪಶುಪಾಲನೆ, ಅಥವಾ ಇತರೆ ಬದುಕುವ ವಿಧಾನಗಳಿಗೆ ಬಹಳ ಬೇಗ ಸ್ಥಿತ್ಯಂತರಗೊಂಡವರು ತಮ್ಮ ವೃತ್ತಿಗಳಿಗನುಗುಣವಾಗಿ ಬೇರೆಯದೇ ಹೆಸರುಗಳಿಂದ ತಮ್ಮನ್ನು ಗುರುತಿಸಿಕೊಂಡಿರಬಹುದು ಎಂಬುದು ಸರಳ ಉತ್ತರ. ಆದರೆ, ನಾಗರಿಕತೆಯ ವಿಕಾಸದ ವಿವಿಧ ಹಂತಗಳಿಂದ ದೂರ ಉಳಿದು, ಬೇಟೆಯನ್ನೇ ಮೂಲ ಪ್ರವೃತ್ತಿಯನ್ನಾಗಿಸಿಕೊಂಡು ಬಂದಿದ್ದು, ಇತ್ತೀಚೆಗೆ ಕಾಡಿನ ನೆಲೆ ಕಳೆದುಕೊಂಡ ನಂತರ ಬೇಟೆಯಾಡುವುದನ್ನು ಒಂದು ಆಚರಣೆಯನ್ನಾಗಿ ಮಾತ್ರ ಉಳಿಸಿಕೊಂಡು ಬಂದಿರುವ ಜನಸಮುದಾಯವನ್ನು ಶಬರ, ಕಿರಾತ, ನಿಷಾಧ, ವ್ಯಾಧ, ಬೇಟೆಗಾರ, ಕುಳಿಂದ, ಬಿಲ್ಲವ, ನಾಯಕ, ನಾಯಕ ಮಕ್ಕಳು ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ ಎಂದು ಊಹಿಸಬಹುದು. ಈ ಸಮುದಾಯದ ಉಲ್ಲೇಖ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳಲ್ಲಿಯೂ ಬರುತ್ತದೆ. ರಾಮಾಯಣದಲ್ಲಿ ಶ್ರೀರಾಮನು ವನವಾಸವನ್ನು ಆರಂಭಿಸಿದಾಗ ಕಾಡಿನ ಬೇಡರ ಪಡೆಯ ದೊರೆಯಾದ ಗುಹನನ್ನು, ನಂತರ ಶಬರಿಯನ್ನು ಭೇಟಿ ಮಾಡುತ್ತಾನೆ. ಹಾಗೆಯೇ ಮಹಾಭಾರತದಲ್ಲಿ ಬೇಡ ಪಡೆಯ ನಾಯಕನಾದ ಏಕಲವ್ಯನ ಪಾತ್ರ ಬರುತ್ತದೆ. ಶಬರಶಂಕರ ವಿಳಾಸದಲ್ಲಿ ಶಂಕರನೇ ಶಬರನಾಗಿ ಅರ್ಜುನನೊಂದಿಗೆ ಸಂಘರ್ಷಕ್ಕಿಳಿದ ವಿವರ ಬರುತ್ತದೆ. ಇವೆಲ್ಲವನ್ನು ಹಿನ್ನೆಲೆಯಾಗಿ ಕೊಡುತ್ತಿರುವ ಉದ್ದೇಶವಿಷ್ಟೆ: ಬೇಡ- ಅಥವಾ ಬೇಟೆಗಾರ, ನಿಷಾಧ ಈ ಸಮೂಹಗಳು ಕಾಡನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದವು. ಇವು ಸಾಹಸ-ಶೌರ್ಯವನ್ನು ಮೈಗೂಡಿಸಿಕೊಂಡಿದ್ದ ಸಮುದಾಯಗಳು. ಇವರು ಅಗತ್ಯವಿದ್ದಾಗ, ಅರಸರ ಸೇನೆಯಲ್ಲಿ ದುಡಿಯುತ್ತಿದ್ದರು ಎಂಬುದನ್ನು ವಿವರಿಸುವುದು. ತಮ್ಮ ಈ ಪರಾಕ್ರಮ ಮತ್ತು ಮುಂದಾಳತ್ವದ ಗುಣಗಳ ಕಾರಣವಾಗಿಯೇ ಇವರಿಗೆ 'ನಾಯಕ' ಎಂಬ ಅಭಿದಾನವು ದೊರೆತಿರಲು ಸಾಧ್ಯ. ಈಗ ಕರ್ನಾಟಕದಲ್ಲಿ ನೆಲೆಗೊಂಡಿರುವ ಈ ಬೇಡ ಅಥವಾ ನಾಯಕ ಸಮುದಾಯದ ಬಗ್ಗೆ ವಿಚಾರ ಮಾಡಿದರೆ ಸಂಖ್ಯೆಯ ದೃಷ್ಟಿಯಿಂದ ಕರ್ನಾಟಕದಲ್ಲಿರುವ ಬಹುದೊಡ್ಡ

ಜನಸಮುದಾಯಗಳಲ್ಲೊಂದಿದು. ಈ ಸಮುದಾಯದಲ್ಲಿರುವ ಒಂದು ಪ್ರಕಾರವೇ 'ಮ್ಯಾಸಬೇಡರು' ಎಂಬ ಸಮುದಾಯ. ಇವರು ಹೆಚ್ಚಾಗಿ ಮಧ್ಯ ಕರ್ನಾಟಕದಲ್ಲಿ ನೆಲೆಸಿದ್ದಾರೆ. ಮೂಲತಃ ಉತ್ತರದಿಂದ ಬಂದು, ಆಂಧ್ರದ ಗುಡ್ಡಗಾಡುಗಳಲ್ಲಿ, ನದಿಬಯಲುಗಳಲ್ಲಿ ಹಲವಾರು ವರ್ಷಗಳನ್ನು ಕಳೆದು ನಂತರ ಮಧ್ಯ ಕರ್ನಾಟಕದ ಕಡೆ ಬಂದ ಜನಸಮುದಾಯವಿದು. ಇತರ ಬೇಡರಿಗೂ ಮತ್ತು ಇವರಿಗೂ ಸ್ವಲ್ಪ ಮಟ್ಟಿನ ಸಾಂಸ್ಕೃತಿಕ ಭಿನ್ನತೆಗಳಿವೆ. ಎರಡೂ ಸಮುದಾಯ ಬೇಟೆಯ ಮೂಲದಿಂದಲೇ ಬಂದ ಸಮುದಾಯವಾದರೂ ಮ್ಯಾಸಬೇಡರು ಬೇಟೆಯೊಂದಿಗೆ ಕ್ರಮೇಣ ಪಶುಪಾಲನೆಯನ್ನು ಮುಖ್ಯ ವೃತ್ತಿಯನ್ನಾಗಿ ಸ್ವೀಕರಿಸಿದವರು. ಕಾಡಿನ ನೆಲೆ ಕಳೆದುಕೊಂಡಾಗ ಈ ಪಶುಪಾಲಕತನವನ್ನು ಕೈಬಿಡಬೇಕಾಯಿತು. ಇವರು ಅಳಿದುಳಿದ ಪಶುಸಂಪತ್ತನ್ನು ಇಂದು ಅರಣ್ಯದಲ್ಲಿ ಗೂಡುಗಳಲ್ಲಿ ಸಂರಕ್ಷಿಸುತ್ತಾ ತಮ್ಮ ಮೂಲ ಮಾದರಿಯನ್ನು ಜತನದಿಂದ ಅರಾಧನೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿದ್ದು ಈ ಮೂಲಕ ಕರ್ನಾಟಕದ ಇತರ ಬೇಡರಿಗಿಂತ ಸಾಂಸ್ಕೃತಿಕವಾದ ಭಿನ್ನತೆಗಳನ್ನು ಹೊಂದಿದ್ದಾರೆ. ಉತ್ತರದಿಂದ ಬಂದ ಈ ಶಬರರಂತೆಯೇ ದಕ್ಷಿಣ ಭಾರತದ ದ್ರಾವಿಡ ಗಿರಿಜನ ಸಮುದಾಯಗಳಲ್ಲಿಯೂ ಇವರ ನೆಲೆಯಿದೆಯೇ ಎನ್ನುವುದು ಕುತೂಹಲಕಾರಿಯಾದ ಸಂಗತಿ. ಎಂದರೆ ಇವರ ಆಚಾರ ವಿಚಾರಗಳಲ್ಲಿ ಇರುವ ಆರ್ಯ ಹಾಗೂ ದ್ರಾವಿಡ ಮೂಲಗಳ ತೌಲನಿಕ ಅಧ್ಯಯನವೂ ಆಸಕ್ತಿಯನ್ನು ಹುಟ್ಟಿಸುತ್ತದೆ. ಇವರನ್ನು ನಿರ್ದೇಶಿಸುವ 'ಬೇಡ' ಎಂಬ ಪದಕ್ಕೆ ಮ್ಯಾಸ ಎಂಬ ವಿಶೇಷಣ ಹೇಗೆ ಸೇರಿತು ಎಂಬುದರ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ.

೧೯೮೨ರಲ್ಲಿ ಎಂ.ಜಿ. ಈಶ್ವರಪ್ಪನವರು 'ಮ್ಯಾಸಬೇಡರು' ಎಂಬ ಕಿರು ಕೃತಿಯನ್ನು ಪ್ರಕಟಿಸಿದ್ದಾರೆ. 'ಮ್ಯಾಸ' ಪದ 'ಮೇಯಿಸುವವರು' ಶಬ್ದದಿಂದ ನಿಷ್ಪನ್ನವಾಗಿದೆ ಎಂದು ಅವರು ಹೇಳಿದ್ದಾರೆ. ಅಲ್ಲದೆ ವಿಜಯನಗರದ ರಾಜ ಮಹಾರಾಜರುಗಳ ಆಳ್ವಿಕೆಯಡಿ ಇದ್ದುದ್ದರಿಂದ 'ಮೀಸಲು ನಾಯಕರು' ಅಥವಾ ಮ್ಯಾಸ ನಾಯಕರು ಎಂದು ಕರೆಯಲ್ಪಟ್ಟರು ಎಂಬ ಸಾಧ್ಯತೆಯನ್ನು ಕುರಿತು ವಿವರಿಸುತ್ತಾರೆ. ಮೊದಲಬಾರಿಗೆ ಈ ಸಮುದಾಯದ ಬಗ್ಗೆ ಸಂಶೋಧನಾ ಕೃತಿಯನ್ನು ರಚಿಸಿದವರು ಡಾ. ಕೃಷ್ಣಮೂರ್ತಿ ಹನೂರರು. ಇವರು ಸಂದರ್ಶಿಸಿದ ಸಮುದಾಯದ ವಕ್ತೃಗಳು ತಾವು ವ್ಯಾಸಮಹರ್ಷಿಯ ಕುಲದವರಾದ್ದರಿಂದ 'ವ್ಯಾಸ' 'ಮ್ಯಾಸ' ಎಂದಾಗಿ ಗೋತ್ರವಾಗಿ ಬಳಕೆಯಾಗುತ್ತಿದೆ ಎಂದು ತಿಳಿಸಿದ್ದಾರೆ. ಅವರು ಅದನ್ನು ಹೇಳುತ್ತಾ ಇದೊಂದು ಸಮುದಾಯದಲ್ಲಿರುವ ದಂತಕಥೆ, ಪ್ರತಿಷ್ಠೆಗಾಗಿ ರೂಪಿಸಿಕೊಂಡ ಕತೆ ಎಂದು ವ್ಯಾಖ್ಯಾನಿಸುತ್ತಾರೆ. ವಕ್ತೃಗಳು ಕೊಡುವ ಮತ್ತು ಎಂಜಿ. ಈಶ್ವರಪ್ಪನವರು ಹೇಳುವ ಅಭಿಪ್ರಾಯಗಳನ್ನು ನಿರಾಕರಿಸುತ್ತಾ, ಕೃಷ್ಣಮೂರ್ತಿಯವರು, 'ಇದು ಜನಾಂಗ ವಾಚಕ ಪದವಲ್ಲ. ಮೇಯಿಸುವವರು ಜೊತೆಗೆ ಬೇಡ ಪದ ಹೊಂದುವುದಿಲ್ಲ. ಬೇಟೆಗಾರ ಮತ್ತು ಮೇಯಿಸುವವ ಎರಡೂ ಕ್ರಿಯಾಮೂಲವಾದ ಪದಗಳು ಸೇರಿ ಜನಾಂಗ ಪದವಾಗಿರುವುದು ಆಸಂಭವ ಎಂದು ಹೇಳುತ್ತಾರೆ. ಇದಕ್ಕೆ ಬದಲಾಗಿ, ಸಂಸ್ಕೃತದ 'ಮೀವರ' ಎಂಬ ಪದಕ್ಕೆ ಅರ್ಥಕೋಶದ ಪ್ರಕಾರ hurtful, causing hurt, leader of army ಅಲ್ಲದೆ ಗೌರವಾರ್ಥ, ಪೂಜ್ಯ ಎಂಬ ಅರ್ಥಗಳಿವೆ. ಹಾಗೆಯೇ ತಮಿಳು ಅರ್ಥಕೋಶದಲ್ಲಿ 'ಮೀಚರನ್' ಎಂಬ ಪದವಿದ್ದು ಅದಕ್ಕೆ that which is superior or great person

ಎಂಬ ಅರ್ಥವಿದೆ. ಅಲ್ಲದೆ 'ಮೀಸರ' ಎಂಬ ಪದ ಕುಮಾರರಾಮನ ಸಾಂಗತ್ಯದಲ್ಲಿ ಪ್ರಯೋಗವಾಗಿದೆ. ಎಂದರೆ, ಈ ಮ್ಯಾಸರ ಎಂಬ ಪದಕ್ಕೆ ಪರಾಕ್ರಮಿ ಎಂಬ ಅರ್ಥವಿರಬಹುದು. ಮಾಸಬೇಡರು ಎಂದರೆ ಪರಾಕ್ರಮಿ ಬೇಡರು ಎಂದು ಕರೆದಂತೆ ಆಗುತ್ತದೆ. ಕೀಸರು–ಕ್ಯಾಸರ ಆಗಿ ಬೇಸರ–ಬ್ಯಾಸರ ಆಗಿರುವಂತೆ ಮೀಸರ–ಮ್ಯಾಸರು ಆಗಿದ್ದಿರಬಹುದು ಎಂದು ಊಹೆ ಮಾಡುತ್ತಾರೆ. ಹೀಗೆ ಹನೂರರು ಈ ಪದದ ನಿಷ್ಪತ್ತಿಯ ಬಗೆಗೆ ತುಂಬಾ ವ್ಯಾಪಕವಾಗಿ ಚರ್ಚೆಯನ್ನು ಮಾಡಿರುತ್ತಾರೆ.[೨] ಡಿ.ಬಿ. ಥಂಗ ಅವರು 'ಮ್ಯಾಸಾಬೇಡರು' ಎಂದರೆ ಮುಸಲ್ಮಾನರ ಗುಣಗಳನ್ನು ಹೊಂದಿರುವವರು ಎಂದು ಹೇಳುತ್ತಾ ಇವರು ಮದ್ರಾಸಿನ ಕಡೆ, ಮೈಸೂರಿನ ಕಡೆಯೂ ನೆಲೆಸಿದ್ದಾರೆ ಎಂದು ಹೇಳುತ್ತಾರೆ. ಆದರೆ ಮುಸ್ಲಿಂ ಮೂಲದಿಂದ ಇದನ್ನು ನಿಷ್ಪನ್ನ ಮಾಡಲು ಯಾವ ಆಧಾರಗಳೂ ದೊರೆಯುವುದಿಲ್ಲ.[೩]

ಡಾ. ಮೀರಸಾಬಿಹಳ್ಳಿ ಶಿವಣ್ಣನವರು 'ಮ್ಯಾಸ ಮಂಡಲ' ಎಂಬ ತಮ್ಮ ಕೃತಿಯಲ್ಲಿರುವ ಪಶುಪಾಲಕ 'ಮ್ಯಾಸಬೇಡರು' ಎಂಬ ಲೇಖನದಲ್ಲಿ 'ಮ್ಯಾಸ'ಎಂಬ ವಿಶೇಷಣ ಪಶುಗಳನ್ನು 'ಮೇಯಿಸುವ' ವೃತ್ತಿಯಿಂದಲೇ ಬಂದಿರಬೇಕೆಂದು ಅಭಿಪ್ರಾಯಿಸುತ್ತಾರೆ. ಮೇಯ್ಸು ಶಬ್ದವು ಕ್ರಮೇಣ ಮೇಸು–ಮ್ಯೆಸು–ಮ್ಯಾಸು–ಮ್ಯಾಸ ಎಂದು ರೂಪಾಂತರಗೊಂಡಂತೆ ಕಾಣುತ್ತದೆ ಎಂದು ಊಹಿಸುತ್ತಾರೆ.

ಡಾ. ಕೆ.ಎಂ. ಮೈತ್ರಿಯವರು 'ಕೃಷ್ಣಗೊಲ್ಲರ ಕಥನಕಾವ್ಯಗಳು'.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ. ಕೃತಿಯಲ್ಲಿ ಮ್ಯಾಸಬೇಡರು ಕುರಿ ಸಾಕಾಣಿಕೆಯನ್ನು ಸಹ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಕುರಿಗಳಿಗೆ ಸಂಸ್ಕೃತದಲ್ಲಿ 'ಮೇಷ' ಎಂದು ಅರ್ಥ. ಈ 'ಮೇಷ' ಪದವೇ ಮೇಸ ಆಗಿ, ಮ್ಯಾಸ ಆಗಿದೆ. ಅಂದರೆ ಕುರಿಸಾಕಾಣಿಕೆ ಮಾಡುವವರೇ 'ಮ್ಯಾಸ ಬೇಡರು'[೪] ಎಂದು ಅಭಿಪ್ರಾಯಪಡುತ್ತಾರೆ. ದ್ರಾವಿಡ ಮೂಲದಿಂದ ಬಂದ ಈ ಸಮುದಾಯಕ್ಕೆ ಸಂಸ್ಕೃತ ಮೂಲದಿಂದ ನಿಷ್ಪನ್ನವಾಗುವ 'ಮೇಷ' ಪದ ಅಷ್ಟಾಗಿ ಹೊಂದುವುದಿಲ್ಲ ಎನ್ನಿಸುತ್ತದೆ. ಈ ಎಲ್ಲಾ ಅಧ್ಯಯನಗಳನ್ನು ಗಮನಿಸಿ ಈ ಪದದ ಬಗ್ಗೆ ಹೆಚ್ಚು ವಿಚಾರ ಮಾಡಿದಾಗ ಸಮುದಾಯದಿಂದಲೇ ಸಿಗುವ ಮೂಲ ಪದ 'ಸಂಚು ಮ್ಯಾಸವಾಳ್ಳು' ಎಂದು, 'ಸಂಚು' ಎಂದರೆ ಶ್ರೀಶೈಲ ಪ್ರಾಂತ್ಯದ ನಲಮಲ್ಲೈ, ಯರ್ರಮಲ್ಲೈ ಪ್ರಾಂತ್ಯದಲ್ಲಿರುವ ಅಡವಿ ಚೆಂಚರು. ಇದೇ ಪರಿಸರಕ್ಕೆ ಉತ್ತರದಿಂದ ಬಂದು ನೆಲೆಸಿದವರು, ಈ ಪಶುಪಾಲಕರಾದ ಬೇಡರು, (ಪಶುಪಾಲಕತನ ಕಾರಣವಾಗಿ ಇವರನ್ನು ಒಟ್ಟಾರೆ ಯಾದವರು ಎಂದು ಗುರುತಿಸಿದ್ದು ಉಂಟು.) ಪಶುಪಾಲಕ ಬೇಡರಿಗೂ ಮತ್ತು ಚೆಂಚರಿಗೂ ಉಂಟಾದ ಮೈತ್ರಿಯೇ ಕಾರಣವಾಗಿ ಉಂಟಾದ ಪರಂಪರೆಗೆ 'ಸಂಚು ಮ್ಯಾಸುವಾಳ್ಳು' ಎಂದು ಕರೆದರು. ಇವರಲ್ಲಿ ಸಂಚು ಎಂಬ ಪದ ಬಿಟ್ಟು ಹೋಗಿ ಮ್ಯಾಸುವಾಳ್ಳು ಉಳಿದು ಮ್ಯಾಸುಲು, ಅಂದರೆ ಮ್ಯಾಸ ಬೇಡಲು, ಮ್ಯಾಸನಾಯಿಕಲು ಎಂಬ ಪದ ಉಳಿದುಬಂದಿದೆ. ಈಗಲೂ ಕೆಲವೊಮ್ಮೆ ಈ ಮ್ಯಾಸ ಬೇಡರು ತಮ್ಮನ್ನು 'ಮ್ಯಾಸಲು'

---

೨ ಬೇಡನಾಯಕರು: ಒಂದು ಜಾನಪದ ಅಧ್ಯಯನ, ಡಾ. ಕೃಷ್ಣಮೂರ್ತಿ ಹನೂರು.

೩ ಬೇಡರ ಸಮಾಜ ಒಂದು ಟಿಪ್ಪಣಿ –ಜನಪದ ಜಗತ್ತು. ಲೇ–ಡಿ.ಬಿ.ಥಂಗ

೪ ಕೃಷ್ಣಗೊಲ್ಲರ ಕಥನ ಕಾವ್ಯಗಳು (ಸಂ) – ಡಾ. ಕೆ.ಎಂ. ಮೈತ್ರಿ, ಪ್ರಸಾರಾಂಗ, ಕ.ವಿ.ವಿ. ಹಂಪಿ.

ಎಂದಷ್ಟೇ ಕರೆದುಕೊಳ್ಳುವುದೂ ಉಂಟು. ಮ್ಯಾಸರು – ಮ್ಯಾಸಲು ಎಂಬ ತೆಲುಗು ಪದದಿಂದ ಬಂದಿರುವ ಕನ್ನಡ ಪದ. ಮ್ಯಾಸಬೇಡರ ಭಾಷೆ ತೆಲುಗು ಎಂಬುದನ್ನು ನಾವಿಲ್ಲಿ ಮರೆಯುವಂತಿಲ್ಲ. ಹಾಗಾಗಿಯೇ ನಾವು ತೆಲುಗು ಮೂಲದಿಂದಲೇ ಈ ಪದವನ್ನು ನಿಷ್ಪನ್ನ ಮಾಡಬೇಕಾಗುತ್ತದೆ. ತೆಲುಗಿನ ಪದ ಕೋಶದಲ್ಲಿ(ಅಂತರ್ಜಾಲದಲ್ಲಿ) Mesalu ಪದಕ್ಕೆ-To move about, go about, shift ಎಂಬ ಅರ್ಥವಿದೆ. ಅಂದರೆ ಒಂದೆಡೆಯಿಂದ ಮತ್ತೊಂದೆಡೆಗೆ ಅಲೆದಾಡುವ, ಸ್ಥಳಾಂತರಗೊಳ್ಳುವ ಎಂಬ ಅರ್ಥವು ಇಲ್ಲಿ ಸ್ಪಷ್ಟವಾಗುತ್ತದೆ. ತಮ್ಮ ಪಶುಪಾಲಕತನವೇ ಕಾರಣವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಅಲೆದಾಡುವ, ಬೇಟೆಯನ್ನು ಪ್ರವೃತ್ತಿಯನ್ನಾಗಿ ಹೊಂದಿರುವ ಜನಸಮುದಾಯವಿದು. ಮ್ಯಾಸಲು –ಮ್ಯಾಸಲು ಆಗಿದ್ದು ಕನ್ನಡಕ್ಕೆ ಬರುವಾಗ ಮ್ಯಾಸರು ಆಗಿದೆ ಎಂದು ಹೇಳಬಹುದಾಗಿದೆ. ಮ್ಯಾಸ ಬೇಡರ ಬೆಡಗುಗಳನ್ನು ನಿಷ್ಪನ್ನ ಮಾಡುವಾಗಲೂ ನಾವು ತೆಲುಗು ಮೂಲದಿಂದಲೇ ಹುಡುಕಬೇಕಾದ ಅಗತ್ಯವಿದೆ. ನಾಯಕ ಎಂದರೆ– ಮುಖ್ಯಸ್ಥ–ಮುಂದಾಳು ಎಂದಾಗುತ್ತದೆ. ಈ ಮ್ಯಾಸಬೇಡರು ಸೇನಾಪಡೆಗಳಲ್ಲಿ ಸೇನೆಯ ಮುಂದಾಳುಗಳಾಗಿ ಕೆಲಸ ನಿರ್ವಹಿಸುವುದರ ಮೂಲಕ ನಾಯಕ ಎಂಬ ಅಭಿದಾನವನ್ನು ಪಡೆದಿದ್ದು, ಮ್ಯಾಸನಾಯಕ ಎಂದೂ ಕರೆಯಲ್ಪಟ್ಟರು. ಹೀಗೆ ಮ್ಯಾಸಬೇಡರು, ಮ್ಯಾಸನಾಯಕ ಎಂಬ ಪದದ ಮೂಲವನ್ನು ಇದುವರೆಗೆ ಮಂಡಿಸಲಾಗಿರುವ ವಾದಗಳಿಗಿಂತ ವಿಭಿನ್ನವಾಗಿ ಗುರುತಿಸುವ ಸಾಧ್ಯತೆಯಿದೆ,

## ೨.೨ ಮ್ಯಾಸ ಬೇಡರ ಸಾಂಸ್ಕೃತಿಕ ವೈಶಿಷ್ಟ್ಯಗಳು :

ನಿರ್ದಿಷ್ಟವಾದ ಸಮುದಾಯವೊಂದು ತನ್ನ ಸ್ಮರಣೆ ಮತ್ತು ನಡವಳಿಕೆಗಳ ಮೂಲಕ ಜೀವಂತವಾಗಿರಿಸಿಕೊಂಡು ಬಂದ ಬದುಕಿನ ವಿಧಾನಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನೂ ಮತ್ತು ಅದರಿಂದ ಬಳಕೆಗೊಳ್ಳುವ ವಸ್ತು ವಿಶೇಷಗಳನ್ನು ಒಳಗೊಂಡಂತೆ ಸಮಗ್ರವನ್ನೂ ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಇದು ಪ್ರಜ್ಞಾಪೂರ್ವಕವಾಗಿ ಉಳಿಸಿಕೊಂಡು ಬಂದುದಾಗಿರುತ್ತದೆ. ನಾಡಿನ ಪ್ರಸಿದ್ಧ ಸಂಸ್ಕೃತಿ ಚಿಂತಕರಾದ ಶಂ.ಭಾ. ಜೋಷಿ[೫]ಯವರು ಸಂಸ್ಕೃತಿಯು ಅಂತರಂಗದ ಭಾವಬುದ್ಧಿಗೆ ಸಂಬಂಧಿಸಿದೆ; ಇದೇ ಮೇರೆಗೆ ಈ ಸುಸಂಸ್ಕೃತ ಭಾವಬುದ್ಧಿಯಿಂದ ನಿರ್ಮಿತ ವಸ್ತುವಿಷಯಗಳಿಗೂ ಸಂಬಂಧಿಸಿದೆ ಎಂದು ಹೇಳುತ್ತಾರೆ. ಅಂದರೆ ಸಂಸ್ಕೃತಿ ಎಂಬುದು ಅಂತರಂಗದ ಆಲೋಚನೆ ಮತ್ತು ಬಹಿರಂಗದ ನಡವಳಿಕೆ ಈ ಎರಡನ್ನೂ ಒಳಗೊಳ್ಳುತ್ತದೆ ಎಂಬುದು ಇಲ್ಲಿ ವಿದಿತವಾಗುತ್ತದೆ. ಇಲ್ಲಿ ಸುಸಂಸ್ಕೃತ ಎಂಬ ಪದವೇ ಮತ್ತೆ ಹಲವು ಚರ್ಚೆಗಳಿಗೆ ಆಸ್ಪದಮಾಡಿಕೊಡುತ್ತದೆ. ಕಾರಣ ಒಬ್ಬರಿಗೆ ಸುಸಂಸ್ಕೃತ ಎನಿಸಿದ್ದು ಮತ್ತೊಂದು ನೆಲೆಯಲ್ಲಿರುವವರಿಗೆ ಬರ್ಬರ, ಕಿರಾತಕ, ಎನಿಸಬಹುದಲ್ಲವೇ? ಒಟ್ಟು ಸಮುದಾಯವೊಂದರ ಅಂತರಂಗಿಕ ಆಲೋಚನೆಗಳ

---

[೫] ಶಂಭಾ ಜೋಷಿ, ಸಂಸ್ಕೃತಿಯು ಆರಂಭವಾದ ಬಗೆ, ಶಂಬಾಕೃತಿ ಸಂಪುಟ, ಕರ್ನಾಟ ಸಂಸ್ಕೃತಿ–೨. ಪು.೨೧೬

ಫಲಶೃತಿಯೇ ಕಾರಣವಾಗಿ ರೂಪುಗೊಂಡ ಒಟ್ಟು ವಿಧಿ, ವಿಧಾನಗಳನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಬಹುದೆನಿಸುತ್ತದೆ. ಹಲವು ವಿವರಗಳಿಂದ ಕೂಡಿದ ಬದುಕನ್ನು ವ್ಯಾವಹಾರಿಕವಾಗಿ ನೋಡಹೊರಟಾಗ, ಈ ವ್ಯಾವಹಾರಿಕತೆ ಎಂಬುದು, ಇಲ್ಲಿ ಆ ಸಮುದಾಯದ 'ಅನ್ನ'ದ ಅವಶ್ಯಕತೆಯೂ ಆಗಿರುತ್ತದೆ. 'ಬೇಟೆ' ಮೂಲ ವಿಧಾನವಾಗಿದ್ದು ಅಲ್ಲಿಂದ ನಂತರದಲ್ಲಿ ಬೇರೆ ಬೇರೆ ವಿಧಾನಗಳನ್ನು ರೂಢಿಸಿಕೊಂಡು ಬಂದಿರುವಾಗ ಈ ವಿಧಾನವೂ ಸಂಸ್ಕೃತಿಯ ಒಂದು ಭಾಗವಾಗಿರುತ್ತದೆ. ಇದೇ ಸಂಸ್ಕೃತಿಯು ಬೇಟೆಯ ಸಂಸ್ಕೃತಿ, ಪಶುಪಾಲಕ ಸಂಸ್ಕೃತಿ, ಕೃಷಿ ಸಂಸ್ಕೃತಿ, ಎಂದು ಮುಂತಾಗಿ ಕರೆಯಲ್ಪಡುತ್ತದೆ. ಪ್ರಧಾನವಾಗಿ ಅಂದರೆ ವೃತ್ತಿಯ ಮೂಲಕ ಸಂಬಂಧಿಸಿದ ಸಮುದಾಯದ ಸಂಸ್ಕೃತಿಯನ್ನು ಗುರುತಿಸುವ ಒಂದು ವಿಧಾನವಿದು. A study of Archeology ಎಂಬ ಕೃತಿಯಲ್ಲಿ "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯ ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ' ಎಂದು ಟೈಲರ್ ಸಂಸ್ಕೃತಿಯ ಅರ್ಥವನ್ನು ವ್ಯಾಖ್ಯಾನಿಸುತ್ತಾನೆ. ಈ ಮೂಲಕವಾಗಿಯೂ ಇದು ಒಂದು ಸಾಮೂಹಿಕ ಪ್ರಕ್ರಿಯೆಯಾಗಿರುತ್ತದೆ ಮತ್ತು ಅಂತರಂಗದ ಆಲೋಚನೆ ಮತ್ತು ಬಹಿರ್ಮುಖದ ನಡವಳಿಕೆ ಎರಡಕ್ಕೂ ಸಂಬಂಧಿಸಿದ್ದಾಗಿರುತ್ತದೆ. ಮ್ಯಾಸಬೇಡರು ಪ್ರಧಾನವಾಗಿ ಒಂದು ಬುಡಕಟ್ಟಿಗೆ ಸೇರಿದ ಜನ ಸಮುದಾಯ. ತಮ್ಮದೇ ಆದ ಸಂಸ್ಕೃತಿಯನ್ನು ರೂಪಿಸಿಕೊಂಡು ಅದಕ್ಕನುಗುಣವಾಗಿ ಬದುಕುತ್ತಿರುವವರು. ತಮ್ಮ ಸಾಂಸ್ಕೃತಿಕ ವಿಶಿಷ್ಟತೆಯೇ ಕಾರಣವಾಗಿ ಬೇರೆಯ ಸಮುದಾಯದಿಂದ ಭಿನ್ನತೆಯನ್ನು ಹೊಂದಿರುವವರು. ಕಾಡುಗೊಲ್ಲರು, ಕುಂಚಿಟಗರೊಂದಿಗೆ ಇವರನ್ನು ಹೋಲಿಸಬಹುದಾದರೂ ಇವರು ತಮ್ಮದೇ ಆದ ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವವರು. ಇದೊಂದು ವಿಶಿಷ್ಟವಾದ ಬುಡಕಟ್ಟು. ಏಕೆಂದರೆ 'ಪಶುಪಾಲಕತನ' ಆರ್ಯರಿಂದ ಭಾರತಕ್ಕೆ ಕಾಲಿಟ್ಟಿತು ಎಂಬ ಒಂದು ಅಭಿಪ್ರಾಯ ನಮ್ಮಲ್ಲಿದೆ. ಆದರೆ ಕೆಲವು ಸಂಸ್ಕೃತಿ ಮತ್ತು ಇತಿಹಾಸ ಚಿಂತಕರು ಆರ್ಯರು ತಮ್ಮ ಪಶುಸಂಪತ್ತಿನೊಂದಿಗೆ ಭಾರತಕ್ಕೆ ಬಂದರು ನಿಜ. ಆದರೆ ಇವರು ಬರುವ ವೇಳೆಗಾಗಲೇ ಇಲ್ಲಿಯ ಮೂಲನಿವಾಸಿಗಳಲ್ಲೂ ಪಶುಪಾಲಕ ಸಮುದಾಯಗಳಿದ್ದವು ಎಂದು ಅಭಿಪ್ರಾಯ ಪಡುತ್ತಾರೆ.[1] ಈ ಭಾರತೀಯ ಮೂಲದ ಪಶುಪಾಲಕತನವನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಒಂದು ಸಮುದಾಯ ಮ್ಯಾಸಬೇಡರದು ಎಂದು ಖಚಿತವಾಗಿ ಹೇಳಬಹುದು. ಹೀಗಾಗಿಯೇ ಇದೊಂದು ಅನನ್ಯವಾದ ಸಂಸ್ಕೃತಿ ಎಂದು ಹೇಳಲು ಸಾಧ್ಯವಾಗುತ್ತದೆ. ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಒಂದೇ ಮೂಲದಿಂದ ಬಂದವರು ಎಂಬ ಅಭಿಪ್ರಾಯವಿದೆಯಾದರೂ ಈ ಮ್ಯಾಸಬೇಡರಲ್ಲಿರುವಷ್ಟು ವ್ಯಾಪಕವಾಗಿ ಪಶುಪಾಲಕತನ ಮತ್ತು ಸಂಬಂಧಿಸಿದ ಆಚರಣೆಗಳು ಅವರಲ್ಲಿ ಇಲ್ಲ ಎಂದೇ ಹೇಳಬಹುದು. ಇಡೀ ಭಾರತದಲ್ಲಿಯೇ ಪಶುಪಾಲಕ ಮೂಲದ ತಮ್ಮ ಸಂಸ್ಕೃತಿಯನ್ನು ತುಂಬಾ ಜತನದಿಂದ ಆಚರಣೆಯ ರೂಪದಲ್ಲಿಯಾದರೂ

---

[1] ಶಂಭಾ ಜೋಷಿಯವರು, ಶಂಭಾ ಕೃತಿ ಸಂಪುಟ, ಕರ್ಣಾಟಕ ಸಂಸ್ಕೃತಿ-೨,
ಡಿ.ಡಿ. ಕೋಸಾಂಬಿ, ಪ್ರಾಚೀನ ಭಾರತದ ಚರಿತ್ರೆ, ಮೂಲ ಅನುವಾದ: ಬಾಲಗೋಪಾಲ್ ಕನ್ನಡಕ್ಕೆ ಅನುವಾದ ಎಚ್.ಎಸ್. ಶ್ರೀಮತಿ.

ಉಳಿಸಿಕೊಂಡು ಬರುತ್ತಿರುವ ಮತ್ತು ಇದಕ್ಕೂ ಪೂರ್ವದ ತಮ್ಮ ಬೇಟೆಗಾರಿಕೆಯನ್ನು ಒಂದು ವಾರ್ಷಿಕ ಕ್ರಿಯಾಚರಣೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿರುವುದರಲ್ಲಿಯೇ ನಮಗೆ ಈ ಸಮುದಾಯದ ಅನನ್ಯತೆಯ ದರ್ಶನವಾಗುತ್ತದೆ. ಬೇಟೆ ಮತ್ತು ಪಶುಪಾಲನೆಗಳು ಅವರ ಒಟ್ಟು ಬದುಕನ್ನು ಹೇಗೆ ರೂಪಿಸಿವೆ, ಆಚರಣೆ, ನಂಬಿಕೆಗಳ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ಸಂಬಂಧಿಸಿದ ವಿವರಗಳ ಮೂಲಕ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

**ವಸತಿ ವ್ಯವಸ್ಥೆ :**

ಪಶುಪಾಲಕರಾದ ಇವರು ನಾಡಿಗೆ ಹತ್ತಿರವಾಗಿರುವ ವಿರಳ ಕಾಡುಗಳಲ್ಲಿ, ನದೀಬಯಲುಗಳಲ್ಲಿ ತಮ್ಮ ಪಶುಸಂಪತ್ತಿನೊಂದಿಗೆ ವಾಸಮಾಡುತ್ತಿದ್ದರು. ತಮ್ಮ ಪಶುಪಾಲಕತನ ಕಾರಣವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಹುಲ್ಲು ನೀರನ್ನು ಅರಸುತ್ತ ಅಲೆದಾಡುತ್ತಿದ್ದರು. ಒಂದೆಡೆ ಸ್ಥಿರವಾಗಿ ನೆಲೆನಿಂತವರಲ್ಲ ಇವರು. ಹಾಗಾಗಿ ನಿರ್ದಿಷ್ಟ ಪ್ರದೇಶದಲ್ಲಿ ಶಾಶ್ವತವಾದಂತಹ ಮನೆಗಳನ್ನು ಇವರು ಕಟ್ಟಿಕೊಳ್ಳುತ್ತಿರಲಿಲ್ಲ. ಹುಲ್ಲು, ಸೊಪ್ಪು, ಕಟ್ಟಿಗೆ ಬಳಸಿ ಮಾಡಿದ ಹಗುರವಾದ ಗುಡಿಸಿಲುಗಳಲ್ಲಿ ವಾಸಿಸುತ್ತಿದ್ದರು. ಇಂತಹ ಗುಡಿಸಲ ಸುತ್ತಮುತ್ತ ಅದೇ ಸೊಪ್ಪು ಕಟ್ಟಿಗೆ ಬಳಸಿ ಮಾಡಿದ ಆವರಣ ಇರುತ್ತಿತ್ತು. ಇಂತಹ ಅನೇಕ ಗುಡಿಸಿಲುಗಳಿಗೆಲ್ಲಾ ಸೇರಿಸಿ ಒಂದು ದೊಡ್ಡ ಆವರಣ ಕಟ್ಟಿಕೊಳ್ಳುತ್ತಿದ್ದರು. ಇಂತಹ ೭೭ ಹಟ್ಟಿಗಳಿದ್ದವು ಎಂದು ಹೇಳಲಾಗುತ್ತದೆ. ೭೭ ಎನ್ನುವುದು ಇವರು ಸಾಮಾನ್ಯವಾಗಿ ಬಳಸುವ ಸಾಂಕೇತಿಕ ಪವಿತ್ರ ಸಂಖ್ಯೆ ಆಗಿದ್ದಿರಬಹುದು. ಆದರೆ ಅನೇಕ ಹಟ್ಟಿಗಳಿದ್ದುದು ನಿಜ. ಈಗಲೂ ಕರಿನಾರರು ಎಂಬ ಬೆಡಗಿನವರೇ ಪ್ರಧಾನವಾಗಿ ವಾಸಿಸುವ ಕರಿನಾರರಹಟ್ಟಿ, ಪೆತ್ತಂಬರಹಟ್ಟಿ, ಬೋಸೇದೇವರ ಹಟ್ಟಿ, ಬೋರೇ ದೇವರಹಟ್ಟಿ, ಕಂಪಳ ದೇವರಹಟ್ಟಿ, ಮ್ಯಾಸರಹಟ್ಟಿ, ಕರಿಸೂರಯ್ಯನಹಟ್ಟಿ, ಮಾದಯ್ಯನ ಹಟ್ಟಿ, ನಾಯಕನಹಟ್ಟಿ, ಹೀಗೆ ಈ ಪಟ್ಟಿಯನ್ನು ಬೆಳೆಸಬಹುದು. ಮೂಲದಲ್ಲಿ ಹಟ್ಟಿಗಳಿಗೆ ಹತ್ತಿರದಲ್ಲಿಯೇ ಎತ್ತು ಹಸುಗಳಿಂದ ಕೂಡಿದ್ದ ಗೂಡುಗಳಿದ್ದವು. 'ಗೂಡು ಎಂದರೆ ಸುತ್ತಲೂ ಮುಳ್ಳುಬೇಲಿಯನ್ನು ಹಾಕಿರುವ ಒಂದು ಆವರಣ. ದನಗಳ್ಳರ ಮತ್ತು ಕ್ರೂರಪ್ರಾಣಿಗಳ ಹಾವಳಿಯನ್ನು ತಡೆಯಲು ಹೀಗೆ ಬಲವಾದ ಬೇಲಿಯನ್ನು ಹಾಕಿಕೊಂಡು, ಇವರು ತಮ್ಮ ಪಶುಸಂಪತ್ತನ್ನು ರಕ್ಷಣೆ ಮಾಡುತ್ತಿದ್ದಿರಬಹುದು. ಈ ಗೂಡುಗಳ ಬಳಿ ಮತ್ತು ತಮ್ಮ ನೆಲೆಗಳ ಬಳಿ ಕೋಳಿ ತಿನ್ನುವವರಾಗಲೀ, ಕೊನೆಗೆ ಕೋಳಿಯೂ ಕೂಡ ಬರುವಂತಿರಲಿಲ್ಲ. ಮದ್ಯಪಾನ ಮಾಡುವವರು ಪ್ರವೇಶಿಸುವಂತಿರಲಿಲ್ಲ. ಈಚಲು ಮರದಿಂದ ತಯಾರಿಸಿದ ಯಾವ ವಸ್ತುವಿಗೂ ತಮ್ಮ ಹಟ್ಟಿ, ಗುಡಿಸಲ, ಎತ್ತಿನಗೂಡಿನ ಒಳಗೆ ಪ್ರವೇಶವಿರುವುದಿಲ್ಲ. ಈಗಲೂ ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತದೆ. ಮದ್ಯಪಾನಿಗಳು ಮಾತ್ರ ಪ್ರವೇಶ ಪಡೆಯುತ್ತಿದ್ದಾರೆ! ತಮ್ಮ ಗುಡಿಸಿಲ ಬಳಿ ಋತುಸ್ನಾನಮಾಡಿ ಸೂತಕದಲ್ಲಿರುವವರು, ಸಾವಿನ ಸೂತಕದಲ್ಲಿರುವವರು ಪ್ರವೇಶಿಸುವಂತಿಲ್ಲ. ಚಪ್ಪಲಿಗಳನ್ನು ಗುಡಿಸಿಲಿನಿಂದ ದೂರದಲ್ಲಿಯೇ ಬಿಡುತ್ತಿದ್ದರು. ಇಂತಹ ಹಟ್ಟಿಗಳನ್ನು ಗುಡಿಸಲುಗಳನ್ನು ಒಂದು ನೆಲೆಯಿಂದ ಮತ್ತೊಂದು ನೆಲೆಗೆ ಸ್ಥಳಾಂತರಿಸುವಾಗ ತಲೆಯ ಮೇಲೆ ಹೊತ್ತುಕೊಂಡು ಹೋಗಿ ಬೇರೆ ಕಡೆ ಹಾಕಿಕೊಳ್ಳುತ್ತಿದ್ದರು. ಹಟ್ಟಿಯಿಂದ ತಮ್ಮ ದೇವರ ಪೆಟ್ಟಿಯನ್ನೂ ಹೊತ್ತೊಯ್ಯುವಾಗ ಸಾಂಕೇತಿಕವಾಗಿ 'ಧಗಮು' ಎಂದು ಕರೆಯಲ್ಪಡುವ ವಾದ್ಯವನ್ನು ಬಾರಿಸುತ್ತಾರೆ,

ದಡ್ಡನೇ ದಗಮುಡಿಸಿ ದೆಡ್ಡಿ ಲೇಪಿನಸ್ವಾಮಿ' ಎಂದು ಪದೋಬಳೇಶನ ಸ್ತುತಿಯಲ್ಲಿ ಬರುತ್ತದೆ. ಕನ್ನಡದಲ್ಲಿ ಈ ವಾದ್ಯಕ್ಕೆ 'ಭೇರಿ' ಎಂದು ಕರೆಯಲಾಗುತ್ತದೆ. ಈ ವಾದ್ಯವನ್ನು ದಡ್ ಎಂದು ಬಡಿದಾಕ್ಷಣ ಇಡೀ ಹಟ್ಟಿಗೆ ಹಟ್ಟಿಯೇ ಅಲ್ಲಿಂದ ಹೊರಹೋಗಲು ಹೊರಡಬೇಕೆಂಬ ಸೂಚನೆ ಪಡೆದು ಹೊರಡುತ್ತಿತ್ತು. ಎತ್ತಿನ ಗೂಡುಗಳ ಬಳಿ ಪ್ರತಿರಾತ್ರಿ ಕಡ್ಡಾಯವಾಗಿ 'ವಡಪು' ಎಂದರೆ ಬೆಂಕಿಯನ್ನು ಉರಿಸುವ ಸಂಪ್ರದಾಯವಿದೆ. ಬಹುಶಃ ಕಾಡು ಪ್ರಾಣಿಗಳಿಂದ ತಮ್ಮನ್ನೂ, ತಮ್ಮ ಪಶುಸಂಪತ್ತನ್ನು ಕಾಪಾಡಿಕೊಳ್ಳುವ ಉದ್ದೇಶವಿದು. ಇವರ ವಾಸದ ನೆಲೆಗಳಿರುವಂತೆಯೇ ಇವರು ಆರಾಧಿಸುವ ದೇವರ ನೆಲೆಗಳೂ ಕೂಡ ಅದೇ ಸ್ವರೂಪದವು. ಕಾಂಸಿ, ಭಾವೆ ಹುಲ್ಲನ್ನು ಬಳಸಿ ಕಟ್ಟಿರುವ ಗುಡಿಸಿಲುಗಳು ಬಾಗಿ ಹೊಗುವಂತಹ ಚಿಕ್ಕಬಾಗಿಲು, ೪-೫ ಅಡಿ ಎತ್ತರದ ಗೋಡೆಯ ಮೇಲೆ ಹುಲ್ಲಿನ ಹೊದಿಕೆಯನ್ನು ಹಾಕುವ ಗುಡಿಸಲುಗಳು ಇವೆ. ಇದರ ಒಳಗೆ ಇವರು ಆರಾಧಿಸುವ ಪೆಟ್ಟಿಗೆ ದೇವರಿರುತ್ತದೆ. ವಸತಿ ವ್ಯವಸ್ಥೆ ಹಿಂದೆ ಹೀಗಿದ್ದದ್ದು ಈಗಲೂ ಹೀಗೆಯೇ ಇವೆಯೇ ಎಂದು ವಿಚಾರ ಮಾಡಿದರೆ ಬದಲಾವಣೆಯ ಕಡೆ ಸರಿಯುತ್ತಿದೆ ಎಂಬುದೇ ಸಿದ್ಧ ಉತ್ತರ. ಭಾರತದ ಸರಿ ಸುಮಾರು ಎಲ್ಲಾ ಬುಡಕಟ್ಟುಗಳೂ ತಮ್ಮ ಆದಿಮ ಸ್ಥಿತಿಯಿಂದ ಬದಲಾಗಿ ಗ್ರಾಮೀಕರಣವಾಗುತ್ತಿವೆ. ಭಿನ್ನ ಸಮುದಾಯಗಳೊಂದಿಗೆ ಬದುಕು ಸಾಗಿಸಬೇಕಾಗಿರುವ ಅನಿವಾರ್ಯ ಕಾರಣವಾಗಿ ಇವರ ವಸತಿ ವ್ಯವಸ್ಥೆಯೂ ಬದಲಾಗುತ್ತಿವೆ. ಮುಖ್ಯವಾಗಿ ಕಾಡಿನ ನೆಲೆಯನ್ನು ಕಳೆದುಕೊಂಡಾಗಲೇ ಪಶುಪಾಲಕತನ ಅತಂತ್ರಸ್ಥಿತಿಗೆ ಸಿಲುಕಿತು. ಅಳಿದುಳಿದ ಈ ಪರಂಪರೆಯ ದನಕರುಗಳನ್ನು ಆಯಾ ಸಾಂಸ್ಕೃತಿಕ ವೀರನ ನೆನಪಿನಲ್ಲಿ ರಕ್ಷಿತ ಅರಣ್ಯಗಳಲ್ಲೇ 'ಗೂಡು'ಗಳನ್ನಿಟುಕೊಂಡು ಸಮುದಾಯದ 'ಕಿಲಾರಿ'ಗಳು ಕಾಪಾಡುತ್ತಾರೆ. ಕಾಡಿನ ನೆಲೆಯಿಂದ ಹೊರಬಂದ ಜನ ಕೃಷಿ, ಕೃಷಿಕಾರ್ಮಿಕರಾಗಿ ದುಡಿಯುತ್ತಿದ್ದು ಗ್ರಾಮೀಕರಣಗೊಂಡಿದ್ದಾರೆ. ಹಾಗಾಗಿ ಅಲೆದಾಟದ ಬದುಕು ತಪ್ಪಿ ಸ್ಥಿರವಾಗಿ ಚಿಕ್ಕ ಪುಟ್ಟ ಮನೆಗಳಲ್ಲಿ ವಾಸ ಮಾಡುತ್ತಿದ್ದಾರೆ. ಬಹುಶಃ ಕಾಡಿನಲ್ಲಿ ಪಶುಸಂಪತ್ತಿನೊಂದಿಗೆ ವಾಸಿಸುತ್ತಿರುವಾಗ ಇದ್ದ ಸಾಮುದಾಯಿಕ ಜೀವನ ವ್ಯವಸ್ಥೆ ತಪ್ಪಿ ಹೋಗಿ ಗ್ರಾಮೀಕರಣದೊಂದಿಗೇ ವ್ಯಕ್ತಿ ವಿಶಿಷ್ಟತೆಯ ಬದುಕು ಪ್ರಾರಂಭವಾಯಿತು ಎಂದು ಹೇಳಬಹುದು. ಸಾಮುದಾಯಿಕ ಬದುಕು ಕೊಟ್ಟಿದ್ದ ಸ್ವಾಸ್ಥ್ಯ ಕಳೆದುಹೋಗಿ ಒಂದು ಬಗೆಯ ಪರತಂತ್ರ ಸ್ಥಿತಿ ಆವರಿಸಿಕೊಂಡಿತು ಎಂದರೂ ತಪ್ಪಲ್ಲ ಎನಿಸುತ್ತದೆ. ಇದೊಂದು ಬಗೆಯ ಸ್ವಾತಂತ್ರ್ಯದಲ್ಲಿರುವ ಪಾರತಂತ್ರ್ಯವಲ್ಲದೆ ಬೇರೆ ಏನಲ್ಲ. ಒಂದು ರೀತಿಯ ಅನಿಶ್ಚಿತತೆಯ, ಅಭದ್ರತೆಯ ನೆರಳಿನಲ್ಲಿ ಗ್ರಾಮ ರಾಜಕಾರಣದ ಮಧ್ಯೆ ಇದು ಪರಿತಪಿಸುವಂತಾಯಿತು. ಅಂತಿಮವಾಗಿ ಸರ್ಕಾರ ಕೊಟ್ಟ ಸೌಲಭ್ಯಗಳ ಕಾರಣವಾಗಿ ಮತ್ತೆ ಕಣ್ಣುತೆರೆಯುವಂತಹ ಅವಕಾಶ ಪಡೆಯುವ ದಾರಿಯಲ್ಲಿದೆ ಈ ಸಮುದಾಯ.

**ನಾಮಕರಣ :**

ಜನಿಸಿದ ಮಗುವನ್ನು ಮೊದಲು ಕೆಲವು ದಿನ ಮೊರದಲ್ಲಿ ಮಲಗಿಸುತ್ತಾರೆ. ನಾಮಕರಣದ ದಿನ ತೊಟ್ಟಿಲನ್ನು ಪೂಜಿಸುವವಳು ಮಗುವಿನ ಸೋದರತ್ತೆ. ಬೇಯಿಸಿದ ಹುರುಳಿಯ ಕಾಳನ್ನು ಒಂದೊಂದು ಹಿಡಿಯಷ್ಟು ಬಟ್ಟೆಯಲ್ಲಿ ಗಂಟು ಕಟ್ಟಿ ಅದನ್ನು ತೊಟ್ಟಿಲಿನಲ್ಲಿಟ್ಟು ಗಂಡು ಮಗುವಾದರೆ ಐದು ಗಂಟು, ಹೆಣ್ಣು ಮಗುವಾದರೆ ಮೂರು ಗಂಟು ಇಟ್ಟು ಪೂಜೆ ಮಾಡುತ್ತಾಳೆ. ನಂತರ ಮಗುವನ್ನು ತೊಟ್ಟಿಲಿನಲ್ಲಿ

ಮಲಗಿಸಿ ಗಂಟನ್ನು ಬಾಯಲ್ಲಿ ತಾನು ಕಚ್ಚಿ ತೆಗೆದುಕೊಂಡು ಮಗುವಿನ ಹೆಸರು ಕರೆಯುತ್ತಾ ತೊಟ್ಟಿಲನ್ನು ಇಟ್ಟಿರುವ ಜಾಗದಿಂದ ಹೊರಬಾಗಿಲವರೆಗೆ ಮೂರು ಬಾರಿ ದಾಟಬೇಕು. ಆಗ ಸೇರಿದ ಮಹಿಳೆಯರು ತಮಾಷೆಗಾಗಿ ಈಕೆಗೆ ಹೊಡೆಯುತ್ತಾರೆ. ಒಂದೆರಡು ಏಟುಗಳೂ ಬೀಳುತ್ತವೆ. ಇಲ್ಲಿಯೂ ಸೋಬಾನೆ ಹಾಡುವುದು ಕಡ್ಡಾಯ. ಮತ್ತೊಂದು ವಿಶೇಷವೆಂದರೆ ತಾಯಿಯ ಅಣ್ಣ ಇಲ್ಲವೇ ತಮ್ಮನ ಪಾತ್ರವು ಇಲ್ಲಿ ಬಹಳ ಮುಖ್ಯವಾದುದು. ಮಗುವಿಗೆ 'ಉಡುದಾರ' ಕಟ್ಟುವುದು ಇಲ್ಲಿ ಈತನೇ. ಅಂದರೆ ಸೋದರಮಾವ. ಇದು ಮಗುವನ್ನು ತಮ್ಮ ಕುಟುಂಬಕ್ಕೆ ಸೇರಿಸಿಕೊಳ್ಳುವ ಕ್ರಿಯೆ. ಈಗ ಇದು ಕೇವಲ ಒಂದು ಆಚರಣೆಯಾಗಿ ಉಳಿದಿದೆ. ಅಂದರೆ ಮಗು ಇಲ್ಲಿ ತಾಯಿಯ ಮೂಲಕ್ಕೇ ಸೇರುತ್ತದೆಯೇ ಹೊರತು ತಂದೆಯ ಪರಂಪರೆಗೆ ಅಲ್ಲ. ಹಿಂದೆ ಇದ್ದ ಮಾತೃಮೂಲೀಯ ವ್ಯವಸ್ಥೆಯನ್ನು ಇದು ಸಂಕೇತಿಸುತ್ತದೆ.

**ಕುಟುಂಬದ ವ್ಯವಸ್ಥೆ :**

ಮೂಲತಃ ಮಾತೃಮೂಲೀಯ ಸ್ಥಿತಿಯಲ್ಲಿದ್ದ ಬುಡಕಟ್ಟಿದು. ಯಾವುದೇ ಆದಿಮ ಸ್ಥಿತಿಯನ್ನು ಗಮನಿಸಿದರೂ ಅಲ್ಲಿ ಮಾತೆಯ ಸ್ಥಾನವೇ ಮುಖ್ಯವಾಗಿದ್ದುದನ್ನು ನೋಡಬಹುದು. ಈ ಸಮುದಾಯವೂ ಇದರಿಂದ ಹೊರತಾಗಿರಲಿಲ್ಲ. ಅದರಲ್ಲೂ ಅಲೆಮಾರಿತನವನ್ನೂ ಹೊಂದಿದ್ದ ಸಮುದಾಯದಲ್ಲಿ ಮಾತೆಯ ಸ್ಥಾನ ಪ್ರಧಾನವಾಗಿದ್ದದ್ದು ಸ್ವಾಭಾವಿಕವೇ. ಸಮುದಾಯದಲ್ಲಿ ಪ್ರಧಾನವಾಗಿರುವ ಮಾತೃದೇವತಾ ಆರಾಧನೆಗಳು ಇದನ್ನು ಸ್ಪಷ್ಟಪಡಿಸುತ್ತವೆ. ಕೌಟುಂಬಿಕ ಆಚರಣೆಗಳಲ್ಲಿ ಮಹಿಳೆಗೆ ವಿಶೇಷವಾದ ಸ್ಥಾನವಿದೆ. ಪಶುಪಾಲಕತನದೊಂದಿಗೆ ಕ್ರಮೇಣ ಇಲ್ಲಿ ಪಿತೃಪ್ರಧಾನ ವ್ಯವಸ್ಥೆ ಅಡಿಯಿಡಲಾರಂಭಿಸಿದ ಸೂಚನೆಗಳು ಸಿಗುತ್ತವೆ.

**ವಿವಾಹ :**

ಈಗ ಈ ಸಮುದಾಯದಲ್ಲಿ ಪಿತೃಪ್ರಾಧಾನ್ಯ ಇದ್ದಾಗ್ಯೂ ವಿವಾಹದ ಸಂದರ್ಭದಲ್ಲಿ ವರನ ಕಡೆಯವರು ಹೆಣ್ಣು ನೋಡಲು ಹೆಣ್ಣಿನ ಮನೆಗೇ ಹೋಗುತ್ತಾರೆ. ನಾಗರಿಕ ಎಂದು ಕರೆಸಿಕೊಳ್ಳುವ ವೈದಿಕ ಸಂಸ್ಕೃತಿಯಲ್ಲಿ ತಮ್ಮ ಮಗಳನ್ನು ವರ ಮಹಾಶಯ ಇರುವ ಮನೆಗೇ ಕರೆದುಕೊಂಡು ಹೋಗಿ ತೋರಿಸಿ ಮುಜುಗರಕ್ಕೊಳಗಾಗುವ ತಂದೆ, ತಾಯಿ ಮತ್ತು ಹುಡುಗಿಯ ಮನಃಸ್ಥಿತಿಗೆ ಈ ಪದ್ಧತಿಯನ್ನು ಹೋಲಿಸಿದರೆ ಕಾಡುತನದಲ್ಲಿಯೇ ಹುದುಗಿರುವ ಹೆಣ್ಣನ್ನು ಗೌರವಿಸುವ ಶಿಷ್ಟತೆ, ಸುಸಂಸ್ಕೃತ ನಡವಳಿಕೆ ವಿಶೇಷವಾದುದಾಗಿದೆ. ಹೆಣ್ಣು ಒಪ್ಪಿಗೆಯಾದ ಮೇಲೆ 'ಒಳ್ಳೆಯ ಮಾತಿಗೆ ಬರುತ್ತೇವೆ' ಎಂದು ದಿನವನ್ನು ನಿಗದಿಪಡಿಸುತ್ತಾರೆ. ಇದನ್ನು ವೀಳ್ಯೆದ ಶಾಸ್ತ್ರ ಅಥವಾ ಎಲೆ, ಅಡಿಕೆ ಶಾಸ್ತ್ರ ಎಂದು ಕರೆಯುತ್ತಾರೆ. ಪಶುಪಾಲನೆ, ಕೃಷಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಈ ಜನರಿಗೆ ಸಂಜೆಯೇ ಬಿಡುವು. ಹಾಗಾಗಿ ಸಂಜೆ ಈ ಕಾರ್ಯ ಇಟ್ಟುಕೊಳ್ಳುತ್ತಾರೆ. ಹೆಣ್ಣಿನ ಕಡೆಯವರೆಲ್ಲಾ ಹೆಣ್ಣಿನ ಮನೆಯಲ್ಲಿ ನೆರೆದಿರುತ್ತಾರೆ. ಹೆಣ್ಣಿನ ಕಡೆಯ ಹಿರಿಯ ಬಂದವರನ್ನು ಸಾಂಪ್ರದಾಯಿಕವಾಗಿ ನೀವೆಲ್ಲ ಏಕೆ ನಮ್ಮ ಮನೆಗೆ ಬಂದಿದ್ದೀರಾ? ಎಂದು ಕೇಳಲು, ಗಂಡಿನ ಕಡೆಯ ಹಿರಿಯ ನಿಮ್ಮ ಮನೆಯಲ್ಲಿ ಹಾಲು-ಅನ್ನ ಊಟ ಮಾಡಲು ಬಂದಿದ್ದೇವೆ ಎನ್ನುತ್ತಾರೆ. ಆಗಬಹುದು ಎಂದರೆ ಮುಂದಿನ ಮಾತುಕತೆ. ಹಾಲು-ತುಪ್ಪ ಶುಭ;

ಅದು ಪವಿತ್ರವಾದ ಆಹಾರ. ಜೀಗತನ ಬೆಳೆಯಲು ಆ ಮೂಲಕ ಸಾಧ್ಯ ಎಂಬ ಆಶಯ ಪಶುಪಾಲಕರಾದ ಇವರಲ್ಲಿದೆ. ನಂತರ ನಡುಮನೆಯಲ್ಲಿ ಕರಿ ಕಂಬಳಿ ಗದ್ದುಗೆ ಹಾಕಿ ಅದರ ಮೇಲೆ ಎಲೆ ಅಡಿಕೆ ಇಟ್ಟು ಪೂಜೆ ಮಾಡಿ ನಮಸ್ಕರಿಸಿ ಈ ಹೆಣ್ಣನ್ನು ಇಂಥವರಿಗೆ ಕೊಡಲು ನಿಮಗೆಲ್ಲಾ ಒಪ್ಪಿಗೆಯೇ ಎಂದು ನೆರೆದವರನ್ನು ಕೇಳುತ್ತಾರೆ. ಒಪ್ಪಿಗೆ ಎಂದು ಹಿರಿಯರೆಲ್ಲಾ ಹೇಳಬೇಕು. ಆಗ ಎಲ್ಲಾ ಬೆಡಗಿನ ಮುಖ್ಯಸ್ಥನನ್ನು ಕರೆದು ಎಲೆ ಅಡಿಕೆ ಕೊಡಲಾಗುತ್ತದೆ. ವೀಳ್ಯ ಮುಟ್ಟಿ ಅವರೆಲ್ಲಾ ಒಪ್ಪಿಗೆ ಕೊಡುವ ಸೂಚನೆಯಿದು. ಅಂದರೆ ಒಂದು ವಿವಾಹ ನಿಶ್ಚಯ ಎಂದರೆ, ಇಡೀ ಸಮುದಾಯದ ಒಪ್ಪಿಗೆಯನ್ನು ಪಡೆದು ಆಗಬೇಕೆಂಬುದೇ ಈ ನಿಯಮ. ನಂತರ ಗದ್ದಿಗೆ ತೆಗೆದು ಮತ್ತೆ ಹಾಸಿ, ಎಲೆ-ಅಡಿಕೆ ಇಟ್ಟು, ಹೆಣ್ಣಿನ ತಾಯಿಯನ್ನು ಕರೆದು ಮೇಲೆ ಕೂರಿಸಿ, ಆಕೆಗೆ ಎಲೆ, ಅಡಿಕೆ, ಕೊಬ್ಬರಿಬಟ್ಟಲು, ಉತ್ತುತ್ತಿಹಣ್ಣು, ಒಂದು ಹಸಿರು ರವಿಕೆ ಕಣವನ್ನು ಮಡಿಲು ತುಂಬಲಾಗುತ್ತದೆ. ಇದು ಕುಟುಂಬದಲ್ಲಿ ತಾಯಿಗೆ ಕೊಡುವ ಪ್ರಾಶಸ್ತ್ಯ, ಆಕೆ ಒಪ್ಪಿ ಮಡಿಲು ತುಂಬಿಸಿ ಕೊಂಡ ನಂತರ ಹೆಣ್ಣನ್ನು ಕೂಡಿಸಿ ಮಡಿಲು ತುಂಬುತ್ತಾರೆ. ಆಕೆ ನೆರೆದ ಹಿರಿಯರ ಪಾದಕ್ಕೆ ನಮಸ್ಕರಿಸಬೇಕು. ಅಲ್ಲಿಗೆ ನಿಶ್ಚಿತಾರ್ಥ ಮುಗಿದಂತೆ. ಇದೇ ವೇಳೆಯಲ್ಲಿ ಹೆಣ್ಣಿಗೆ ಏನೇನು ಒಡವೆ ತರಬೇಕು . ತೆರ ಎಷ್ಟು ಕೊಡಬೇಕು ಎಷ್ಟು ಸುಖಮಂಚಿ ಅಳೆಯಬೇಕು ಎಂದೂ ತೀರ್ಮಾನವಾಗುತ್ತದೆ. 'ತೆರ' ಹೆಣ್ಣಿಗೆ ಕೊಡುವ ವಧುದಕ್ಷಿಣೆ. ಕುಡುಬಿಯರಲ್ಲಿ, ಹಾಲಕ್ಕಿ ಒಕ್ಕಲಿಗರಲ್ಲಿ, ಗೌಡಾಲು ಸಮುದಾಯದಲ್ಲಿಯೂ ಹೆಣ್ಣಿಗೆ 'ತೆರ' ಕೊಡುವ ಪದ್ಧತಿ ಇದೆ. ಹೆಣ್ಣಿಗೆ ಇದ್ದ ಮಾನ್ಯತೆಯ ಪ್ರತೀಕವಿದು. ಇಷ್ಟಲ್ಲದೆ ಈ ಮ್ಯಾಸನಾಯಕ ಸಮುದಾಯದಲ್ಲಿ ಹೆಣ್ಣಿನ ಮನೆಗೆ ಮದುವೆ ಖರ್ಚಿಗೆ ಬೇಕಾಗುವ ಭತ್ತ, ಜೋಳ ಇತರೆ ಧಾನ್ಯವನ್ನು ಗಂಡಿನವರೇ ತಂದು ಹಾಕಬೇಕಾಗಿತ್ತು. ಇದನ್ನೇ 'ಸುಖಮಂಚಿ' ಎಂದು ಕರೆಯುತ್ತಾರೆ. ದಕ್ಷಿಣೆಕೊಟ್ಟು, ವೆಚ್ಚಕ್ಕೂ ಕೊಟ್ಟು ತಾನೇ ಹೆಣ್ಣಿನ ಮನೆಗೆ ಬಂದು ವಿವಾಹ ಮಾಡಿ ಕೊಂಡು ಹೋಗುವ ಪದ್ಧತಿ ಹೆಣ್ಣಿಗೆ ಈ ಬುಡಕಟ್ಟಿನಲ್ಲಿ ಕೊಟ್ಟಿದ್ದ ಪ್ರಾಶಸ್ತ್ಯದ ಸಂಕೇತವಾಗಿದೆ. ಹಾಗೆಯೇ ಮದುವೆಯ ದಿನ ಮದುಮಗಳಿಗೆ ಗಂಡಿನ ಕಡೆಯವರು ಸೀರೆ ತರುವುದಷ್ಟೇ ಅಲ್ಲದೆ ಆಕೆಯ ತಾಯಿಗೂ 'ತಾಯಿ ಸೀರೆ' ಎಂದು ತರಲೇಬೇಕು. ಅಜ್ಜಿ ಬದುಕಿದ್ದರೆ ಆಕೆಗೂ ಅಜ್ಜಿ ಜವಳಿ ಎಂದು ತರುತ್ತಾರೆ. ಇದನ್ನು ಕರಿಕಂಬಳಿ ಗದ್ದಿಗೆಯ ಮೇಲಿಟ್ಟು ಸಮುದಾಯದ ಎಲ್ಲರ ಸಮಕ್ಷಮ ಒಪ್ಪಿಸುತ್ತಾರೆ. ತರದಿದ್ದರೆ ತಂದಿಲ್ಲ ಎಂದು ಆಕ್ಷೇಪಿಸುವ ಹಕ್ಕೂ ಸಮುದಾಯಕ್ಕಿದೆ. ವಿವಾಹದಲ್ಲಿ ಬಳಕೆಯಾಗುವ ಎಲೆ-ಅಡಿಕೆಯೆಲ್ಲಾ ಗಂಡಿನ ಕಡೆಯವರದೇ. ಇದೇ ಅಧಿಕ ಖರ್ಚು ಗಂಡಿನಕಡೆಯವರಿಗೆ, ಹೆಣ್ಣಿನ ಕಡೆಯವರಿಗೆಲ್ಲಾ ಇದನ್ನು ಹಂಚುತ್ತಾರೆ. ವರದಕ್ಷಿಣೆ ಪಡೆದು ಆ ಹಣದಲ್ಲಿಯೇ ತನ್ನ ಅಗತ್ಯಗಳನ್ನು ಪೂರೈಸಿಕೊಂಡು ಸಾಂಕೇತಿಕವಾಗಿ ಈ ಆಚರಣೆಗಳನ್ನು ನಡೆಸುವ ವಿಧಾನ ಈಗ ಇಲ್ಲಿಯೂ ಪ್ರಾರಂಭವಾಗಿದೆ. ಪರಂಪರೆಯ ಸುಸಂಸ್ಕೃತ ಹೆಣ್ಣನ್ನು ಗೌರವಿಸುವ ಪದ್ಧತಿ ಇಲ್ಲವಾಗಿ ತಾನೆ ವಿಜೃಂಭಿಸುವ ನವನಾಗರಿಕತೆಯನ್ನು ಈ ಸಮುದಾಯದ ಪುರುಷರು ಮೈಗೂಡಿಸಿಕೊಳ್ಳುತ್ತಿದ್ದಾರೆ. ಗಂಡಿನ ಕಡೆಯವರು ಹೆಣ್ಣಿಗೆ ಯಾವುದೇ ಒಡವೆ ತರದಿದ್ದರೂ ಕಡ್ಡಾಯವಾಗಿ ಬಲಗೈಗೆ ಒಂದು ಬೆಳ್ಳಿಯ ಕಡಗವನ್ನು ತರಲೇಬೇಕು. ಇದನ್ನು 'ಧಾರೆ ಕಡಗ' ಎಂದೇ ಕರೆಯುತ್ತಾರೆ. ಕಾಡುಗೊಲ್ಲರಲ್ಲಿ ದಪ್ಪನೆಯ ಕಡಗ ಧರಿಸುವ ಪದ್ಧತಿ ಇದೆ. ಮ್ಯಾಸ ನಾಯಕರ ಮಹಿಳೆ ಧರಿಸುವ ಧಾರೆಯ ಕಡಗ ಚಿಕ್ಕದು.

ಮದುವೆಯ ನಿಮಿತ್ತ ಮನೆಯ ಮುಂದೆ ಚಪ್ಪರ ಹಾಕುವ ಸಂಪ್ರದಾಯ ಹಿಂದೆ ಇರಲಿಲ್ಲ. ಅಲೆಮಾರಿ ಪಶುಪಾಲಕರಾದ ಇವರಿಗೆ ನಿಶ್ಚಿತನೆಲೆಯೇ ಇಲ್ಲದಿರುವಾಗ, ನೆಲಗುಡಿಸಲುಗಳೇ ವಸತಿಗಳಾಗಿರುವಾಗ ಚಪ್ಪರ ಎಲ್ಲಿ ಹಾಕಬೇಕು? ತಮ್ಮ ವಸತಿ ವ್ಯವಸ್ಥೆಯ ರೂಪವೇ ಕಾರಣವಾಗಿ ಅವರಲ್ಲಿ ಈ ಚಪ್ಪರ ಹಾಕದಿರುವ ಪದ್ಧತಿ ಬಂದಿರಬಹುದು.



*ಮುತ್ತಿಗಾರರ ಬೊಟ್ಟು, ದೇವರಹಳ್ಳಿ ಬಳಿ ಇರುವ ಬೂದಿಗುಡ್ಡ (ಚಳ್ಳಕೆರೆ ತಾಲ್ಲೂಕು*

ಅಕ್ಷತೆ, ಅರಿಶಿಣ ಯಾವುದೂ ಇಲ್ಲ. ಸ್ನಾನಮಾಡಿ ಗಂಡು ತನ್ನ ಮನೆ ದೇವರ ಗುಡಿಗೆ ಹೋಗಿ ಪೂಜೆ ಮಾಡಿಸಿ, ಅಲ್ಲಿ ಪೂಜಾರಿ 'ಮುತ್ತಿಗಾರರ ಬೊಟ್ಟು' [ಇದು ಮ್ಯಾಸ ಬೇಡರ ಎಲ್ಲಾ ದೇವಾಲಯಗಳಲ್ಲೂ ಇರುತ್ತದೆ. ರಣಗಂಬಗಳ ಬಳಿ ಇರುವ 'ಬೂದಿಗುಮ್ಮಲು'(ಇದರ ವಿವರಣೆಯನ್ನು ಮುಂದೆ ಕೊಟ್ಟಿರುತ್ತೇನೆ) ನಿಂದ ಇದನ್ನು ತಂದಿರುತ್ತಾರೆ] ತಲೆಗೆ ಪೇಟ ಕಟ್ಟಿ ಹೊಂಬಾಳೆ ಮುಡಿಸಿ ಕೈಗೆ ನಿಂಬೆ ಹಣ್ಣು ಸಿಕ್ಕಿಸಿದ ಕತ್ತಿಕೊಟ್ಟು(ಇದು ಶೌರ್ಯದ ಪ್ರತೀಕ) – ತೀರ್ಥ ಕುಡಿಸಿದರೆ ಮದುಮಗನಾದಂತೆ. ಹುಡುಗಿಯೂ ಅಷ್ಟೆ. ಗಂಡು ಮದುಮಗನಾಗಿ ಧಾರೆಯ ಹಿಂದಿನ ದಿನ ರಾತ್ರಿ ಮದುಮಗಳ ಊರಿಗೆ ತಲುಪಿದ ಮೇಲೆಯೇ ಹುಡುಗಿಗೆ ಸ್ನಾನ ಮಾಡಿಸಿ ಆಕೆಯನ್ನು ಕುಲದೇವರ ಗುಡಿಗೆ ಕರೆದೊಯ್ದು ಬೊಟ್ಟು – ಅಂದರೆ ಮುತ್ತಿಗಾರರ ಬೊಟ್ಟು (ಸುಟ್ಟ ಸಗಣಿಯ ಭಸ್ಮ) ಇರಿಸಿ ತೀರ್ಥ ಕುಡಿಸಿದರೆ ಅಲ್ಲಿಗೆ ಆಕೆಯು ಮದುಮಗಳಾದಂತೆ. ಮರುದಿನ ನಿಗದಿತ ವೇಳೆಗೆ ಸೋದರ ಮಾವ ಮದುಮಗಳನ್ನು ಹೊರಗೆ ಕರೆತಂದು ಹುಡುಗನ ಎದುರಿಗೆ ನಿಲ್ಲಿಸಲು ಮದುಮಗ ದಾರಕ್ಕೆ ಪೋಣಿಸಿದ ಕರಿಮಣಿ ಕಟ್ಟುತ್ತಾನೆ. ತಾಳಿ ಅದರಲ್ಲಿ ಇರುವುದಿಲ್ಲ. ಇದಕ್ಕೆ ಮೊದಲು ಮತ್ತೊಮ್ಮೆ ಕರಿಕಂಬಳಿ ಗದ್ದುಗೆ ಹಾಕಿ ಎಲ್ಲರಿಗೂ ಎಲೆ ಅಡಿಕೆ ಹಂಚಿ ತಾವು ತಂದಿದ್ದ ಸೀರೆ, ಒಡವೆಯನ್ನು ಎಲ್ಲರ ಸಮಕ್ಷಮ ಹುಡುಗಿಯ ಮನೆಯವರಿಗೆ ಒಪ್ಪಿಸುತ್ತಾರೆ. ಬಹಳ ಹಿಂದೆ ವರನ ಬದಲಾಗಿ ಕತ್ತಿಯನ್ನೋ, ಕೋಲನ್ನೋ ಕಳಿಸುತ್ತಿದ್ದರಂತೆ. ಇವರೊಂದಿಗೇ ಹುಡುಗಿಗೆ ಮದುವೆ ಶಾಸ್ತ್ರ ನಡೆಯುತ್ತಿತ್ತು ಎಂದು ಹೇಳುತ್ತಾರೆ. ಯೋಧರೂ ಆಗಿದ್ದ ಇವರು ಸೇನೆಯ ಮೀಸಲು ಪಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾರಣ ನಿಗದಿತ ವೇಳೆಗೆ ಬರಲಾಗದಿದ್ದರಿಂದ ಈ ಏರ್ಪಾಡು ರೂಢಿಗೆ ಬಂದಿದ್ದಿರಬಹುದು. ಆದಿನ ಸಂಜೆಯೇ ಹೆಣ್ಣನ್ನು ಕರೆದುಕೊಂಡು ಹೋಗಿ ಗಂಡಿನ ಮನೆ

ತುಂಬಿಸಿಕೊಳ್ಳುತ್ತಾರೆ. ಮುಹೂರ್ತದ ನಂತರ ಹುಡುಗಿ ಎಲ್ಲಾದರೂ ಅಡಗಿಕೊಳ್ಳುವ ನಂತರ ಗಂಡು ಹೋಗಿ ಕರೆತರುವ ಪದ್ಧತಿ ಇದ್ದು ಹಿಂದೆ ಇದ್ದ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹ ವಾಗುತ್ತಿದ್ದ ವ್ಯವಸ್ಥೆಯ ಒಂದು ಸಾಂಕೇತಿಕ ಆಚರಣೆಯಾಗಿದೆ. ಹಾಲಕ್ಕಿ ಒಕ್ಕಲಿಗರಲ್ಲೂ ಈ ಆಚರಣೆ ಇದೆ. ಮೂಲತಃ ಬುಡಕಟ್ಟುಗಳಲ್ಲಿದ್ದ ಮಾತೃಪ್ರಧಾನವ್ಯವಸ್ಥೆ ಇಂದು ಆಚರಣೆಯ ರೂಪಗಳಲ್ಲಿ ಹೆಣ್ಣಿಗೆ ಸ್ಥಾನಮಾನ ಗೌರವ ಕೊಡುವ ಪದ್ಧತಿಯಾಗಿದೆ ಎಂದು ಇಲ್ಲಿ ಭಾವಿಸಲು ಅವಕಾಶವಿದೆ. ಮತ್ತೊಂದು ಅಂಶವೆಂದರೆ ಮದುವೆಯ ಎಲ್ಲಾ ಕ್ರಿಯೆಗಳಲ್ಲೂ ಸೋಬಾನೆ ಪದಗಳಿಗಿರುವ ಪ್ರಾಶಸ್ತ್ಯ ಒಂದು ರೀತಿಯಲ್ಲಿ ಇವೇ ಶುಭನುಡಿಗಳು. ಇವಿಲ್ಲದೆ ಮದುವೆಯೇ ಇಲ್ಲ ಮ್ಯಾಸಬೇಡರಲ್ಲಿ.

ಆದರೆ ಇಂದು ಅನ್ಯ ಧರ್ಮಗಳ ಶಿಸ್ತುಗಳಿಗೆ ತಮ್ಮನ್ನು ಒಪ್ಪಿಸಿಕೊಳ್ಳುವ ತವಕದಲ್ಲಿ ತನ್ನ ಮೂಲ ಸಂಸ್ಕೃತಿಯನ್ನೇ ಮರೆತು ಪುರೋಹಿತರು ಹೇಳುವ ಮಂತ್ರಗಳನ್ನು ಉಚ್ಚರಿಸುತ್ತಾ ಮಂಟಪಗಳಲ್ಲಿ ಮದುವೆಯಾಗುವ ವಿಧಾನಗಳೇ ಸಾಮಾನ್ಯವಾಗುತ್ತಿವೆ.

ಗಂಡಿನ ಕಡೆಯವರಲ್ಲಿಯೂ ಆತನ ಸಹೋದರಿಗೇ ಪ್ರಾಶಸ್ತ್ಯ ಹೆಚ್ಚು. ಮನೆ ತುಂಬಿಸಿ ಕೊಳ್ಳುವಾಗ ಸಾಂಕೇತಿಕವಾಗಿ ಮನೆಯ ಮುಂದೆ ಒಂದು ಅಡಿ ಜಾಗದಲ್ಲಿ ಬಿತ್ತನೆ ಮಾಡಿ ನಂತರ ಒಳಗೆ ಪ್ರವೇಶಿಸುತ್ತಾರೆ. ಗಂಡ ಬಿತ್ತುವ ಸಲಕರಣೆಗಳನ್ನು ಹೊತ್ತು ನಿಂತಿದ್ದರೆ ಹೆಣ್ಣು ಪಶುಪಾಲಕತನದ ಸಂಕೇತವಾಗಿ 'ಕಡಗೋಲನ್ನು' ತನ್ನ ಭುಜಕ್ಕೆ ಆನಿಸಿ ಹಿಡಿದಿರುತ್ತಾಳೆ. ಇಬ್ಬರೂ ಒಟ್ಟಾಗಿ ದುಡಿದು ಉಣ್ಣಬೇಕಾದ ಸಮಾನವಾಗಿ ಜವಾಬ್ದಾರಿ ಹೊರ ಬೇಕಾದ ಸೂಚನೆಯಿದು. ಹಾಗೆಯೇ ಪಶುಪಾಲಕತನದೊಂದಿಗೆ ಕೃಷಿ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವ ವಿಧಾನಕ್ಕೂ ಸಾಂಕೇತಿಕವಿದು.

**ಋತುಮತಿಯಾದಾಗ ಮಾಡುವ ಆಚರಣೆ :**

ಹುಡುಗಿ ಋತುಮತಿಯಾದಾಗ ಮೊದಲು ತಾಯಿಯ ತವರಿಗೆ-ಸೋದರ ಮಾವನಿಗೆ ಸುದ್ದಿ ಮುಟ್ಟಿಸುತ್ತಾರೆ. ಆತ ಬಂದು ಸಂಜೆಯ ವೇಳೆಗೆ ಹೊಂಗೆ, ಬೇವಿನ, ಅತ್ತಿಯ ಮರದ ಸೊಪ್ಪನ್ನು ತಂದು ಹುಡುಗಿಯ ಮನೆಗೆ ಹೊಂದಿಕೊಂಡಂತೆ ಹೊರಗೆ ಒಂದು ಚಿಕ್ಕ ಗುಡಿಸಲನ್ನು ಹಾಕುತ್ತಾನೆ. ಹುಡುಗಿಗೆ ಅತ್ತೆಯರಾಗುವ ೫ ಮಂದಿ ಸೇರಿ ಸ್ನಾನ ಮಾಡಿಸಿ ಕೊಬ್ಬರಿ, ಉತ್ತುತ್ತಿ, ಎಲೆ, ಅಡಿಕೆ ಮಡಿಲು ತುಂಬಿ ಜೊತೆಗೊಬ್ಬ ಚಿಕ್ಕ ಹುಡುಗಿಯನ್ನು ಸೇರಿಸಿ ಗುಡಿಸಿಲ ಒಳಗೆ ಬಿಡುತ್ತಾರೆ. ಸುಮಾರು ಅನೇಕ ಬುಡಕಟ್ಟುಗಳಲ್ಲಿ ಈ ಸಂಪ್ರದಾಯವಿದೆ. ಚೆಂಚರು, ಮಲೆಕುಡಿಯರು, ಗೌಳಿಗರು, ಜೇನುಕುರುಬರು, ಕಾಡುಕುರುಬರೆಲ್ಲಲ್ಲಾ ಹೀಗೆ ಪ್ರತ್ಯೇಕವಾಗಿ ಗುಡಿಸಲನ್ನು ನಿರ್ಮಿಸಿ ಅದರಲ್ಲಿರಿಸುವ ವಿಧಾನಗಳಿವೆ. ಬಹುಶಃ ಈ ಋತುಕ್ರಿಯೆ ಪ್ರಾರಂಭವಾದ ಸಂದರ್ಭವನ್ನು 'ಮುಟ್ಟು' ಮೈಲಿಗೆ ಎಂದು ಪರಿಗಣಿಸುವುದರಿಂದ ಆಕೆಯನ್ನು ಮೈಲಿಗೆಯಾಗಿ ಭಾವಿಸಿ ತಮ್ಮ ಮನೆಯ ಪಾವಿತ್ರ್ಯ ಕೆಡಬಾರದೆಂದು ಒಳಗೆ ಸೇರಿಸುವುದಿಲ್ಲ ಎನ್ನಿಸುತ್ತದೆ. ಹಸಿರು ಗುಡಿಸಲು - ಆಕೆಗೆ ತಾತ್ಕಾಲಿಕ ನೆಲೆಯೂ ಆಗುತ್ತದೆ. ಅಲ್ಲದೆ ಅಲ್ಲಿ ಬಳಸುವ ಅತ್ತಿ, ಬೇವು ಹಾಲನ್ನೊಸರುವ ಫಲವಂತಿಕೆಯನ್ನು ಸಂಕೇತಿಸುವ ಮರಗಳು ಮತ್ತು ಮುಖ್ಯವಾಗಿ ಮಹಿಳೆಗೆ ಔಷಧಿಯ ಮರಗಳೂ ಹೌದು. ಅದರ ವಾಸನೆಯಿಂದಲೇ ಆಕೆಯ ಎಷ್ಟೋ

ಅನಾರೋಗ್ಯಗಳ ನಿವಾರಣೆಯಾಗುತ್ತದೆ ಎನ್ನುತ್ತಾರೆ. ಈ ಎಲ್ಲಾ ಕಾರಣಗಳಿಂದ ಈ ಗುಡಿಸಿಲಿನಲ್ಲಿ ಆಕೆಯನ್ನಿರಿಸುವ ಪದ್ಧತಿ ಬಂದಿರಬಹುದೆನಿಸುತ್ತದೆ. ಜೊತೆಗೆ ಹಸಿರು ಸಮೃದ್ಧಿಯ ಸಂಕೇತ.

ಮರುದಿನದಿಂದ ಆಕೆಯ ಬಂಧು ಬಳಗವೆಲ್ಲಾ 'ಒಸಗೆ' ಎಂದು ಹೇಳಿ ವಿವಿಧ ಬಗೆಯ ಅಡಿಗೆ ತಯಾರಿಸಿ ಆಕೆಗೆ ತಂದು ತಿನ್ನಿಸುತ್ತಾರೆ. ಹಿಂದೆ ಗುಡಿಸಿಲ ಮುಂದೆ ಒಂದು ಬಂಡೆ ಇಟ್ಟು ಅದರ ಮೇಲೆ ಊಟ ಬಡಿಸುತ್ತಿದ್ದರಂತೆ. ಈಗ ಪ್ರತ್ಯೇಕವಾದ ಒಂದು ತಟ್ಟೆ ಕೊಡುತ್ತಾರೆ. ಸಾಮಾನ್ಯವಾಗಿ ೧೧ ದಿನಗಳ ಕಾಲ ಸೂತಕ ಆಚರಿಸುತ್ತಾರೆ. ಅಲ್ಲಿಯವರೆಗೆ ಕೇವಲ ಋತುಮತಿಯಾದ ಹುಡುಗಿಯ ಮನೆಯಲ್ಲಿ ಮಾತ್ರವಲ್ಲದೆ, ಅವರ ದಾಯಾದಿಗಳ ಮನೆಗಳಲ್ಲೂ ಸಹ ಶುಭಕಾರ್ಯ ಮಾಡುವಂತಿಲ್ಲ. ಮೈಲಿಗೆಯ ದಿನಗಳವು. ತಮ್ಮ ಮನೆದೇವರ ಗುಡಿಯ ಒಳಗೆ ಮತ್ತು ಸಮುದಾಯದ ಇತರರ ಮನೆಗೂ ಹೋಗುವಂತಿಲ್ಲ. ಹುಡುಗಿಗೆ ಶುಭಸ್ನಾನ ಮಾಡಿಸಿ ಮನೆಯ ಒಳಗೆ ಕರೆದುಕೊಳ್ಳುವ ಹಿಂದಿನ ದಿನ ಅಂದರೆ ೧೦ನೆಯ ದಿನದ ರಾತ್ರಿ ಆಕೆಯ ತಾಯಿಯ ತವರಿನ ಕಡೆಯವರು, ಮತ್ತು ತಂದೆಯ ಸಹೋದರಿ ಅಂದರೆ ಹುಡುಗಿಯ ಸೋದರತ್ತೆ ವಿಶೇಷವಾದ ಒಸಗೆ ಪುಟ್ಟಿಯನ್ನು ತರಬೇಕು. ಹಿಂದೆ ಈ ವೇಳೆಗಾಗಲೇ ಆ ಹುಡುಗಿಗೆ ಮದುವೆ ನಿಶ್ಚಯವಾಗಿರುತ್ತಿತ್ತು. ಕೆಲವೊಮ್ಮೆ ಮದುವೆಯೂ ಆಗಿರುತ್ತಿತ್ತು. ಒಟ್ಟಿನಲ್ಲಿ ಆಕೆ ಮುಂದೆ ಯಾವ ಮನೆಗೆ ಸೊಸೆಯಾಗಿ ಹೋಗುತ್ತಾಳೋ ಆ ಮನೆಯಿಂದ 'ಒಸಗೆ ಪುಟ್ಟಿ'ತರಬೇಕು. ಅವರೂ ತಮ್ಮ ಬಂಧು ಬಳಗವನ್ನು ಕರೆದುಕೊಂಡು ದೊಡ್ಡ ಗಾತ್ರದ ಅಕ್ಕಿ, ಇತರೆ ಕಾಳುಗಳನ್ನು ಹುರಿದು ತಯಾರಿಸಿದ ತಂಬಿಟ್ಟಿನ ಉಂಡೆ, ಎಳ್ಳಿನ ಉಂಡೆಗಳು, ಸಜ್ಜೆ ಎಂಬ ಧಾನ್ಯದಿಂದ ಮಾಡಿದ ಸುಮಾರು ೪೦-೫೦ ರೊಟ್ಟಿ, ಸಿಹಿ ತಿಂಡಿ, ಎಲೆ, ಅಡಿಕೆ, ಹುರಿಗಡಲೆ, ಹೂವು, ಉಡಿ ತುಂಬುವ ವಸ್ತು ಮತ್ತು ಹೊಸ ಸೀರೆ, ರವಿಕೆ ಕಣದೊಂದಿಗೆ ಸಂಜೆಯ ವೇಳೆಗೆ ಬಂದು ಹುಡುಗಿ ಇರುವ ಗುಡಿಸಲ ಮುಂದೆ ನೆರೆಯುತ್ತಾರೆ. ಹುಡುಗಿಯ ಕಡೆಯವರು 'ಒಸಗೆ' ಬಂದಿವೆ ಬನ್ನಿ ಎಂದು ತಮ್ಮವರನ್ನೆಲ್ಲಾ ಕರೆಯಬೇಕು. ಸೋಬಾನೆ ಪದಗಳನ್ನು ಹಾಡಿಸಿ ಹುಡುಗಿಗೆ ಶಾಸ್ತ್ರಕ್ಕೆ ಮಡಿಲು ತುಂಬಿ ಉಳಿದದ್ದನ್ನೆಲ್ಲಾ ಆಕೆಯ ಮನೆಯವರಿಗೆ ಒಪ್ಪಿಸುತ್ತಾರೆ. ಅವರು ಅದನ್ನು ತಮ್ಮ ಬಳಗಕ್ಕೆ ಹಂಚಬೇಕು. ಆ ದಿನದ ಖರ್ಚು-ವೆಚ್ಚವೆಲ್ಲಾ ಒಸಗೆ ತಂದವರದೇ. ಮರುದಿನ ಬೆಳಗಿನ ಜಾವವೇ ಮತ್ತೆ ಹುಡುಗಿಯ ಸೋದರಮಾವ ಆ ಹುಡುಗಿ ಇದ್ದ ಗುಡಿಸಲನ್ನು ಊರ ಹೊರಗೆ ಕೊಂಡೊಯ್ದು ಸುಟ್ಟು ಬರುತ್ತಾನೆ. ಹುಡುಗಿಗೆ ಮುತ್ತೈದೆಯರು ಮಂಗಳಸ್ನಾನ ಮಾಡಿಸಿ, ಮಡಿ ಮಾಡಿದ ಸೀರೆ ಉಡಿಸಿ, ಎಲೆ, ಅಡಿಕೆ, ಉತ್ತುತ್ತಿ, ಕೊಬ್ಬರಿ ಬಟ್ಟಲನ್ನು ಮತ್ತೆ ಮಡಿಲಿಗೆ ತುಂಬುತ್ತಾರೆ. ಕರಿಯ ಕಂಬಳಿ ಹೊದಿಸಿಕೊಂಡು ಸೋಬಾನೆ ಮತ್ತು ವಾದ್ಯ (ತಮಟೆ ಅಥವಾ ನಾದಸ್ವರಗಳ ವಾದನದ ಮಧ್ಯೆ ಊರ ಹೊರಗಡೆಗೆ ಮಹಿಳೆಯರೆಲ್ಲಾ ಸೇರಿ ಕರೆತರುತ್ತಾರೆ. ತಂಗಟೆ ಗಿಡವೊಂದಕ್ಕೆ ಪೂಜೆ ಮಾಡಿ ತನ್ನ ಉಡಿಯಲ್ಲಿದ್ದುದನ್ನು ಹುಡುಗಿ ಆ ಗಿಡದ ಬುಡಕ್ಕೆ ಇಡಬೇಕು. ನಂತರ ಮೂರು ಬಾರಿ ಗಿಡವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಎಲೆಯನ್ನು ಕೀಳುತ್ತಾ ದಾಟಬೇಕು. ನಂತರ ಗಿಡದ ಉಳಿದ ಎಲ್ಲಾ ಎಲೆಗಳನ್ನು ತರಿದು ಚೆಲ್ಲುತ್ತಾರೆ. ಇದಕ್ಕೆ ಸಮುದಾಯದವರೇ ಕೊಡುವ ಕಾರಣವೆಂದರೆ ನೀರಿನಿಂದಲೂ ಶುದ್ಧಿಯಾಗದ ಮೈಲಿಗೆ ಈ ಹಸಿರು

ಗಿಡವನ್ನು ಮುಟ್ಟುವುದರಿಂದ ಆಗುತ್ತದೆ. ಗಿಡದ ಎಲೆ ತರಿದು ಕೈಯಲ್ಲಿ ಉಜ್ಜಿ ಬಿಸಾಡುವುದರ ಮೂಲಕ ಆಕೆಯ ದೇಹ ಪವಿತ್ರವಾಗುತ್ತದೆ ಎಂದು ಹೇಳುತ್ತಾರೆ. ನಂತರ ಮತ್ತೆ ಮನೆಗೆ ಕರೆತಂದು ಹೊರಬಾಗಿಲಲ್ಲಿ ಹುಡುಗಿಯನ್ನು ಕೂರಿಸುತ್ತಾರೆ. ಆ ವೇಳೆಗೆ ತಂದಿಟ್ಟ ಕುರಿ ಓಕ್ಕೆ ಬೇವಿನ ಸೊಪ್ಪು, ಹಸುವಿನ ಗಂಜಲದೊಂದಿಗೆ ಸೋದರತ್ತೆ ಹೊಸಿಲ ಬಳಿ ಕುಳಿತಿರುತ್ತಾಳೆ. ಕುರಿಓಕ್ಕೆಯೊಂದಿಗೆ ಬೆಂಕಿಯ ಕೆಂಡ ಕಾಯಿಸಿ ಅದರಲ್ಲಿ ಬೇವಿನ ಕಡ್ಡಿ ಸುಟ್ಟು, ನಂತರ ಹುಡುಗಿಯ ನಾಲಿಗೆಗೆ ಇದನ್ನು ಮುಟ್ಟಿಸುತ್ತಾರೆ. ಇದಕ್ಕೆ ನಾಲಿಗೆ ಸುಡುವುದು ಎನ್ನುತ್ತಾರೆ. ನಂತರ ಹಸುವಿನ ಗಂಜಲವನ್ನು ೩ ಹನಿ ಕುಡಿಸುತ್ತಾರೆ. ಇದೆಲ್ಲಾ ಶುದ್ಧಿ ಕ್ರಿಯೆಗಳು. ಇಂತಹ ಶುದ್ಧಿಕ್ರಿಯೆಗಳು ಹೆಣ್ಣಿಗೆ ಅಗತ್ಯವೆಂಬ ಪರಿಕಲ್ಪನೆಯು ಮೊದಲಿನಿಂದಲೂ ಇತ್ತೋ ಅಥವಾ ಮೇಲುವರ್ಗಗಳಿಂದ ಅವತರಿಸಿದೆಯೋ ಹೇಳುವುದು ಕಷ್ಟ. ನಂತರ ಹುಡುಗಿಯ ಕಾಲಬೆರಳಿನ ಉಗುರನ್ನು ಸೋದರತ್ತೆಯೇ ಕತ್ತರಿಸುತ್ತಾಳೆ. ಬಹುಶಃ ಮೈಲಿಗೆಯಾಗಿದ್ದ ದೇಹದ ಯಾವುದಾದರೂ ಭಾಗವನ್ನು ಕತ್ತರಿಸಿ ತೆಗೆದರೆ ದೇಹದ ಮೈಲಿಗೆ ನಿವಾರಣೆಯಾಗುತ್ತದೆ ಎಂಬ ಭಾವನೆ ಈ ಕ್ರಿಯೆಯ ಹಿಂದೆ ಇರಬೇಕೆನಿಸುತ್ತದೆ. ಹಾಗಾಗಿ ಸಾಂಕೇತಿಕವಾಗಿ ಉಗುರನ್ನು ಕತ್ತರಿಸಿ ಬಿಸಾಡುತ್ತಾರೆ. ನಂತರ ಒಳಗೆ ಕರೆದುಕೊಂಡು ಹೋಗಿ, ಹಿಂದಿನ ದಿನ ಒಸಗೆ ಪುಟ್ಟಿಯೊಂದಿಗೆ ತಂದಿದ್ದ ಹೊಸ ಸೀರೆಯನ್ನು ಉಡಿಸಿ ಅಲಂಕರಿಸಿ ಬಾವಿಯ ಬಳಿ ಕರೆದೊಯ್ದು ಗಂಗೆ ಪೂಜೆ ಮಾಡಿಸಿ ನೀರು ತುಂಬಿದ ಬಿಂದಿಗೆ (ಕಲಶ)ಯನ್ನು ಆಕೆಗೆ ಹೊರಿಸಿಕೊಂಡು ಮನೆಗೆ ಕರೆತರುತ್ತಾರೆ. ಇದು ಶುದ್ಧಿ ಕ್ರಿಯೆ ಅಗಿದ್ದು ಮುಂದೆ ಆಕೆ ಫಲವಂತಿಕೆಯನ್ನು ಪಡೆಯಲು ಪೂರಕವಾಗಿ ಮಾಡುವ ಆಚರಣೆ ಎನಿಸುತ್ತದೆ. ಹಸಿರು ಗುಡಿಸಿಲಿನಲ್ಲಿ ಕೂರಿಸುವುದು ಮತ್ತು 'ಒಸಗೆ' ಇಲ್ಲಿರುವ ವಿಶಿಷ್ಟ ಆಚರಣೆಗಳು. ಸಾಮಾನ್ಯವಾಗಿ ಇತರ ಕೆಲವು ಬುಡಕಟ್ಟುಗಳಲ್ಲಿಯೂ ಹೀಗೆ ಸೋದರ ಮಾವನೇ ಋತುಮತಿಯಾದ ಹೆಣ್ಣಿಗೆ ಹಸಿರು ಸೊಪ್ಪನ್ನು ತಂದು ಗುಡಿಸಿಲನ್ನು ಹಾಕುವ ಸಂಪ್ರದಾಯವಿದೆ. ತಾಯಿಯ ನಂತರದ ಸ್ಥಾನವೇ ಸೋದರಮಾವನದು. ಮಾತೃಮೂಲೀಯವಾಗಿದ್ದ ಕುಟುಂಬ ವ್ಯವಸ್ಥೆಯಲ್ಲಿ ಸೋದರ ಮಾವನಿಗೆ ಪ್ರಾಶಸ್ತ್ಯ ಹೆಚ್ಚು. ಋತುಮತಿಯಾದ ಹೆಣ್ಣು ಆತನ ಸೋದರ ಸೊಸೆ. ಹಾಗಾಗಿ ಅಲ್ಲಿ ಹೆಚ್ಚು ನಂಬಿಕೆಗೆ ಅರ್ಹನಾದ ವ್ಯಕ್ತಿ ಎಂದರೆ ಸೋದರ ಮಾವನೇ ಹಾಗಾಗಿಯೇ ಈ ಕೆಲಸ ಅವನ ಪಾಲಿನದಾಗಿರಬಹುದು. ಸಮುದಾಯದ ಎಲ್ಲರೂ ಪ್ರತಿದಿನ ಋತುಮತಿಯಾದ ಹೆಣ್ಣಿಗೆ ವಿಶೇಷವಾದ ಸಿಹಿಯೂಟ ತಯಾರಿಸಿಕೊಡುವುದು ವಿಶೇಷ. ಅಂದರೆ ಆಕೆ ತಮ್ಮ ಹಟ್ಟಿಯ ಮಗಳು. ಆಕೆಯ ಯೋಗಕ್ಷೇಮದ ಹೊಣೆಗಾರಿಕೆ ತಮ್ಮದೂ ಕೂಡ ಎಂಬ ಸಾಮುದಾಯಿಕ ಚಿಂತನೆ ಅಲ್ಲಿದೆ. ಮೂಲತಃ ಇದ್ದಂತಹ ಸಾಮುದಾಯಿಕ ಕುಟುಂಬ ವ್ಯವಸ್ಥೆಯ ಪ್ರತೀಕ ಎನಿಸುತ್ತದೆ.

ಇನ್ನು ಆಕೆಯನ್ನು ಮದುವೆಯಾಗುವ ಮನೆಯಿಂದ ಒಸಗೆ ಬರುವುದು, ಇದು ಕಡ್ಡಾಯ. ತರದಿದ್ದರೆ ಅವರಿಗೆ ಅವಮಾನವೂ ಹೌದು. ಹೆಣ್ಣಿಗಿದ್ದ ಬೇಡಿಕೆ, ಋತುಮತಿಯಾದ ಕೂಡಲೇ ಅಥವಾ ಮೊದಲೇ ತಮ್ಮ ಮನೆಗೆ ತಂದು ಕೊಳ್ಳುವುದು ಎಂದು ಒಂದು ಬಗೆಯ ನಿರ್ಣಯ ಇದರ ಹಿಂದೆ ಇರುತ್ತದೆ. ಹೀಗೆ ಒಸಗೆ ತಂದು ತಮ್ಮ ಹಕ್ಕುಗಾರಿಕೆಯನ್ನು ಸ್ಥಾಪಿಸುವುದು ಇಲ್ಲಿನ ನಿಯಮ. ಮತ್ತು

'ಒಸಗೆ'ಯಲ್ಲಿ ತರುವ ವಿಶೇಷ ತಿಂಡಿಗಳು ಕೇವಲ ಹುಡುಗಿಯ ಮನೆಗೆ ಮಾತ್ರವಲ್ಲ. ಇಡೀ ಆಕೆಯ ಬಳಗಕ್ಕೆಲ್ಲಾ ಸರಬರಾಜಾಗಿ ಎಲ್ಲರೂ ಸಂತೃಪ್ತಿ ಹೊಂದಬೇಕು. ಎಲ್ಲರನ್ನೂ ಸಂತೃಪ್ತಿ ಪಡಿಸಿ ಈ ಮೂಲಕ ಅವರ ಮನೆಯ ಮಗಳನ್ನು ಬೇಡುವ ಒಂದು ವಿಧಾನವಿದು. ಸಮುದಾಯದಲ್ಲಿ ಹೆಣ್ಣಿಗಿದ್ದ ಬೇಡಿಕೆ, ಘನತೆ, ಶ್ರೇಷ್ಠ ಸ್ಥಾನವನ್ನು ಈ ಆಚರಣೆಗಳ ಮೂಲಕ ಗುರುತಿಸಬಹುದು.

**ಆಡಳಿತ ಪದ್ಧತಿ :**

ಸಾಮಾನ್ಯವಾಗಿ ಪ್ರತಿಯೊಂದು ಬುಡಕಟ್ಟು ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿರುತ್ತದೆ. ತಮಗೆ ತಾವೇ ಸ್ವಂತಿಕೆಯನ್ನು ಸ್ವಾತಂತ್ರ್ಯವನ್ನು ಪಡೆದಿದ್ದ ನಮ್ಮ ಹಲವು ಸಮುದಾಯಗಳ ಸ್ವರೂಪವನ್ನು ಇದು ಸ್ಪಷ್ಟಪಡಿಸುತ್ತದೆ. ಒಟ್ಟು ಈ ಮ್ಯಾಸನಾಯಕರ ಸಮುದಾಯದ ಆಡಳಿತ ವ್ಯವಸ್ಥೆಯನ್ನು ಕುಟುಂಬ, ಗುಡಿಕಟ್ಟು, ಕಟ್ಟೇಮನೆ ಎಂದು ಮೂರು ಹಂತಗಳಲ್ಲಿ ವಿಭಾಗಿಸಬಹುದಾಗಿದೆ.

ಪುರುಷನೇ ಮನೆಯ ಮುಖ್ಯಸ್ಥನಾಗಿ ಅದರ ವಹಿವಾಟನ್ನು ನೋಡಿಕೊಳ್ಳುವ ವ್ಯವಸ್ಥೆ ಈಗ ಬಳಕೆಯಲ್ಲಿದೆ. ತನ್ನ ಮನೆಗೆ ಸಂಬಂಧಿಸಿದ ಸಮಸ್ಯೆಯನ್ನು ತಾನೇ ಪರಿಹರಿಸಿಕೊಳ್ಳುತ್ತಾನೆ. ಸಮುದಾಯದಲ್ಲಿ ಆಡಳಿತ ಎಂದಾಕ್ಷಣ ಅಲ್ಲಿಗೆ ಸೌಲಭ್ಯಗಳನ್ನು ಒದಗಿಸುವ ವ್ಯವಸ್ಥೆಯೇನೂ ಅಷ್ಟಾಗಿ ಕಾಣುವುದಿಲ್ಲ. ಏಕೆಂದರೆ ಅಲ್ಲಿಯ ಬದುಕೇ ಬಹಳ ಸರಳವಾದುದು. ಇಲ್ಲಿ ಮುಖ್ಯವಾಗಿ ಆಡಳಿತ ಪ್ರವೇಶ ಮಾಡುವುದೇ ಇಡೀ ಸಮುದಾಯಕ್ಕೆ ಸಂಬಂಧಿಸಿದ ಬಿಕ್ಕಟ್ಟುಗಳು ಉಂಟಾದಾಗ, ಅಥವಾ ಸಮುದಾಯದ ಯಾರೊಬ್ಬನಿಗಾದರೂ ಮತ್ತೊಬ್ಬನಿಂದ ಅನ್ಯಾಯವಾದಾಗ, ತಮ್ಮ ಸಾಂಸ್ಕೃತಿಕ ನಾಯಕನ ಆರಾಧನೆ, ಆಚರಣೆಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳು ತಲೆದೋರಿದಾಗ ಚರ್ಚೆ, ತೀರ್ಮಾನದ ಅವಶ್ಯಕತೆ ಉಂಟಾಗುತ್ತದೆ.

ಬಿಕ್ಕಟ್ಟುಗಳು ಉಂಟಾದಾಗ ಮೊದಲ ಹಂತದ ನ್ಯಾಯ ಪಂಚಾಯತಿ ನಡೆಯುವುದು ಗುಡಿಕಟ್ಟುಗಳಲ್ಲಿ. 'ಗುಡಿಕಟ್ಟು' ಎಂದರೆ ನಿರ್ದಿಷ್ಟವಾದ ಸಾಂಸ್ಕೃತಿಕ ನಾಯಕ/ಕುಲದೇವರನ್ನು ಆರಾಧಿಸುವ ಹಲವು ಬೆಡಗುಗಳುವರು ಸೇರಿ ತಾವು ಆ ನಾಯಕನ ಗುಡಿಕಟ್ಟಿಗೆ ಸೇರಿದವರು ಎಂದು ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಉದಾ: ಕಂಪಳ ದೇವರ ಗುಡಿಕಟ್ಟಿಗೆ ಸೇರಿದವರು. ಬೊಸೇದೇವರು, ದೆಡ್ಡಿ ಸೂರನಾಯಕ, ಬೊಮ್ಮದೇವರ ಗುಡಿಕಟ್ಟಿಗೆ ಸೇರಿದವರು ಇತ್ಯಾದಿ. ಈ ಗುಡಿಕಟ್ಟಿಗೆ ನಾಯಕ ಅಥವಾ ಯಜಮಾನ ಮತ್ತು ದಳವಾಯಿ ಇರುತ್ತಾರೆ. ದಳವಾಯಿ ಎಲ್ಲರನ್ನೂ ಸಭೆ ಸೇರಿಸುತ್ತಾನೆ. ನಾಯಕ ಅಥವಾ ಯಜಮಾನ ಎಂದಾಕ್ಷಣ ಆತನ ಮಾತೇ ಅಂತಿಮವಲ್ಲ. ಇತರ ಹಿರಿಯರ ಮಾತಿಗೆ ಅನುಗುಣವಾಗಿ ಅಲ್ಲಿ ಸಮಸ್ಯೆಯನ್ನು ಇತ್ಯರ್ಥ ಮಾಡಬೇಕಾಗುತ್ತದೆ. ಇಲ್ಲಿ ಇತ್ಯರ್ಥವಾಗದ ಸಮಸ್ಯೆಯನ್ನು ಕಟ್ಟೇಮನೆಗಳ ಹಂತಕ್ಕೆ ತೆಗೆದುಕೊಂಡು ಹೋಗಲಾಗುತ್ತದೆ. ಒಟ್ಟು ಮ್ಯಾಸಮಂಡಲದಲ್ಲಿ ಮೂರು ಕಟ್ಟೇಮನೆಗಳಿವೆ. ಹೀಗೆ ಮೂರು ಕಟ್ಟೇಮನೆಗಳಾಗುವುದಕ್ಕೆ ಸಮುದಾಯದಲ್ಲಿ ಉಂಟಾದ ಬಿರುಕುಗಳೇ ಕಾರಣ. 'ನಾಯಕನ ಹಟ್ಟಿ', 'ಗೋಣೂರು ಮತ್ತು 'ಸಸ್ಸಿವಾಳ' ಇವೆ ಆ ಮೂರು

ಕಟ್ಟೇಮನೆಗಳು. ಪ್ರತಿ ಕಟ್ಟೇಮನೆಗೂ ಒಬ್ಬ 'ದೊರೆ'[೭] ಇರುತ್ತಾನೆ. ನಾಯಕನಹಟ್ಟಿ ಕಟ್ಟೆಮನೆಯ ಇಂದಿನ ದೊರೆ ಶ್ರೀಯುತ ಬಸವರಾಜು, ನನ್ನಿವಾಳ ಕಟ್ಟೆಮನೆಯ ದೊರೆ ಶ್ರೀ ಸೂರಯ್ಯನವರು, ಗೋಣೂರು ಕಟ್ಟೆಮನೆಯ ದೊರೆ ಶ್ರೀ ಬೋಸಯ್ಯನವರು. ಈ ದೊರೆಯ ಪಟ್ಟ ವಂಶಪಾರಂಪರ್ಯವಾಗಿ ಬರುತ್ತದೆ. ಸಮುದಾಯದ ರೀತಿನೀತಿಗಳಿಗೆ ಅನುಗುಣವಾಗಿ ಇವನಿಗೆ ಪಟ್ಟವನ್ನು ಕಟ್ಟುತ್ತಾರೆ. ದೊರೆ ಕುಳಿತುಕೊಳ್ಳುವ ನಿರ್ದಿಷ್ಟವಾದ ಕಟ್ಟೆ ಇದ್ದು ಅದರ ಮೇಲೆ ಯಾರೂ ಕುಳಿತುಕೊಳ್ಳುವಂತಿಲ್ಲ. ಅದೇ ಸಿಂಹಾಸನ. ಇಲ್ಲಿ ದೊರೆಯ ತೀರ್ಮಾನವೂ ಸಹ ಅಲ್ಲಿ ಸೇರಿದ ಹಿರಿಯರ ಮಾತಿಗೆ ಅನುಗುಣವಾಗಿಯೇ ಇರಬೇಕಾಗುತ್ತದೆ. ಸೋಲಿಗ ಮತ್ತು ಕಾಡುಕುರುಬರಲ್ಲಿಯೂ ಇಂತಹ ಕಟ್ಟೇಮನೆಗಳಲ್ಲಿಯೇ ನ್ಯಾಯ ತೀರ್ಮಾನ ಆಗುವ ಪದ್ಧತಿ ಇದೆ. ಗೌಳಿಗರಲ್ಲಿ 'ಜಾಂತೆಲೋಕ್' ಎಂಬ ಹಿರಿಯರ ಸಭೆ ನ್ಯಾಯ ಪಂಚಾಯಿತಿ ಮಾಡುತ್ತದೆ. ಮ್ಯಾಸಬೇಡರ ಕಟ್ಟೇಮನೆಗಳ ಸಭೆಯಲ್ಲಿ, ಸುಳ್ಳು ಹೇಳುವಂತಿಲ್ಲ. ತಾವು ನುಡಿಯುವ ಮಾತಿಗೆ ಸೂರ್ಯನೇ ಸಾಕ್ಷಿ. ಹಿರಿಯರಾದ ದೊರೆ, ನಾಯಕ, ಒಂಭತ್ತು ಅಜ್ಜನವರ ಮುಂದೆ ಪ್ರತಿಭಟಿಸಿ ಮಾತನಾಡುವಂತಿಲ್ಲ. ತಪ್ಪಿ ನುಡಿಯುವವ ದೈವದಿಂದ ಪ್ರತಿಕೂಲ ಅನುಭವಿಸಬೇಕಾಗುತ್ತದೆ ಎಂಬ ಭೀತಿ ಇದೆ. ನ್ಯಾಯತೀರ್ಮಾನ ಮಾಡಿ ಕುಲಾಚಾರಕ್ಕೆ ಸಂಬಂಧಪಟ್ಟ ವಿಷಯವಾದರೆ ನಿಷೇಧ ಹೇರಿ, ನಂತರ ನಿಯಮಾನುಸಾರ ಕುಲದ ಒಳಗೆ ಸೇರಿಸಿಕೊಳ್ಳುವ ಆದೇಶ ನೀಡಲಾಗುತ್ತದೆ. ಕೆಲವೊಮ್ಮೆ ಈ ಕಟ್ಟೇಮನೆಗಳಲ್ಲಿ ಇತ್ಯರ್ಥವಾಗದ ಸಂಗತಿಯನ್ನು ಕಂಪಳ ದೇವರ ಸನ್ನಿಧಾನಕ್ಕೆ ಕೊಂಡೊಯ್ಯಲಾಗುತ್ತದೆ. 'ಪೆದ್ದೋಬಳೇಶ ಎಂದು, ಕಂಪಲಿ ಓಬಯ್ಯ ಎಂಬ ಹೆಸರಿನಲ್ಲೂ ಇಲ್ಲಿ ಅಹೋಬಿಲಂನ ನರಸಿಂಹ ಸ್ವಾಮಿಯನ್ನು ಪೂಜಿಸಲಾಗುತ್ತದೆ. ಮ್ಯಾಸಮಂಡಲದ ವೈಷ್ಣವಧರ್ಮದ ಕೇಂದ್ರವಿದು. ಇಲ್ಲಿಂದ ಚೆದುರಿಹೋಗಿ ತಾವಿರುವ ಎಡೆಯಲ್ಲೆಲ್ಲಾ ಓಬಳದೇವರನ್ನು ಸ್ಥಾಪಿಸಿಕೊಂಡಿದ್ದಾರೆ. ಹಾಗಾಗಿ ಇತ್ಯರ್ಥವಾಗದ ಸಮಸ್ಯೆಯನ್ನು ಈ ಮೂಲಸ್ಥಳಕ್ಕೇ ತಂದು ಚರ್ಚೆಯ ಮೂಲಕ ಮೂರು ಕಟ್ಟೇಮನೆಯ ಮುಖ್ಯಸ್ಥರು ಸೇರಿ ಬಗೆಹರಿಸಿಕೊಳ್ಳಬೇಕು ಎಂಬ ಸಂಪ್ರದಾಯವಿದೆ. ಈ ಕಟ್ಟೇಮನೆಗಳಿಂದ ಸಿಡಿದ ಕೆಲವು ಗುಂಪುಗಳು ಅಲ್ಲಿ ಪ್ರವೇಶಿಸಿದ ರಾಜಕಾರಣ ಕಾರಣವಾಗಿ ತಮ್ಮ ತಮ್ಮ ಗುಡಿಕಟ್ಟುಗಳನ್ನೇ ತಮ್ಮ ಕಟ್ಟೇ ಮನೆಗಳು ಎಂದು ಕರೆದುಕೊಳ್ಳತೊಡಗಿದ್ದಾರೆ. ಹಿಂದೆ ಮಾತೃಮೂಲೀಯ ಕುಟುಂಬ ವ್ಯವಸ್ಥೆಯಿದ್ದ ಬುಡಕಟ್ಟಿದ್ದು ಅಕ್ಕರಾಯಮ್ಮ, ಮಲೆಯಮ್ಮ, ಮುಂಗಲುದೇವಮ್ಮ, ಮಾರಮ್ಮ ನಂತಹ ಮಹಿಳೆಯರೇ ತಮ್ಮ ಹೋರಾಟಗಳ ಮೂಲಕ ಸಂರಕ್ಷಿಸಿಕೊಂಡು ಬಂದ ಬುಡಕಟ್ಟಿದು. ಆದರೆ ಈಗ ನ್ಯಾಯತೀರ್ಮಾನ ಮತ್ತು ಇತರ ಆಡಳಿತದ ವ್ಯವಹಾರಗಳಲ್ಲಿ ಸಮುದಾಯದ ಮಹಿಳೆಯರು ಭಾಗವಹಿಸುವಂತಿಲ್ಲ. ಇಲ್ಲಿ ಪ್ರವೇಶಿಸಿದ ಪುರುಷ ರಾಜಕಾರಣ ಇದಕ್ಕೆ ಕಾರಣ ಎಂಬುದರಲ್ಲಿ ಸಂಶಯವಿಲ್ಲ.

---

[೭] ಡಿ.ಡಿ. ಕೊಸಾಂಬಿ, 'ಪ್ರಾಚೀನ ಭಾರತದ ಚರಿತ್ರೆ', ಮಲ್ಲರು ಅರಣ್ಯಕ ಸಮುದಾಯ,. ಈ ವ್ಯವಸ್ಥೆಯಲ್ಲಿ ಪ್ರಮುಖರ ಸಭೆ ಇರುತ್ತದೆ. ಈ ಸಭೆ ತನ್ನಲ್ಲೇ ಒಬ್ಬನನ್ನು 'ತಾತ್ಕಾಲಿಕ ರಾಜ'ನೆಂದು ನೇಮಿಸುತ್ತದೆ. ಆದರೂ ರಾಜ ಸಾರ್ವಭೌಮನಲ್ಲ. ಸಭೆಯ ಅಭಿಮತ ಮುಖ್ಯ ಎಂದು ಹೇಳುತ್ತಾರೆ. ಪು ೧೨೭

ಹೀಗೆ, ತಮ್ಮದೇ ಆದ ಸ್ವಾಯತ್ತ ವ್ಯವಸ್ಥೆಯೊಂದನ್ನು ರೂಢಿಸಿಕೊಂಡು ಬದುಕುತ್ತಿದ್ದ ಸಮುದಾಯಗಳ ಮೇಲೆ ಆಕ್ರಮಣಕಾರೀ ಮನೋಭಾವದ ವಸಾಹತುಶಾಹಿಗಳು ತಮ್ಮ ಅಧಿಕಾರದ ಜಾಲವನ್ನು ಹರಡಿ ತಮ್ಮ ಅಧೀನಕ್ಕೊಳಪಡಿಸಿಕೊಂಡಾಗಲೇ ಅಲ್ಲಿನ ವ್ಯವಸ್ಥೆ ಹಾಳಾಯಿತು. ಸಲ್ಲದ ರಾಜಕಾರಣ ಸಮುದಾಯದ ಅಂತಃಸತ್ವವನ್ನು ಹಾಳು ಮಾಡತೊಡಗಿತು. ಇದರ ಮಧ್ಯೆಯೂ ಈ ವ್ಯವಸ್ಥೆ ಉಳಿದುಕೊಂಡು ಬಂದಿದ್ದು ಆದಷ್ಟೂ ಕಟ್ಟೇಮನೆಗಳ ಮಟ್ಟದಲ್ಲಿಯೇ ಸಮುದಾಯದ ಆಂತರಿಕ ಬಿಕ್ಕಟ್ಟುಗಳನ್ನು ಪರಿಹರಿಸಲು ಪ್ರಯತ್ನಿಸುವುದು ಅದರ ಗಟ್ಟಿತನವನ್ನು ತೋರ್ಪಡಿಸುತ್ತದೆ.

**ದೈವಾರಾಧನೆ :**

'ದೇವರು' ಎಂದರೆ, ಇಂದು ನಮ್ಮಲ್ಲಿ ಸಾಮಾನ್ಯವಾಗಿರುವ ಪರಿಕಲ್ಪನೆ ಎಂದರೆ ನಮ್ಮನ್ನೆಲ್ಲಾ ನಿಯಂತ್ರಿಸುವ, ಕಾಪಾಡುವ ಶಕ್ತಿ, ಈ ಶಕ್ತಿಯನ್ನು ನಾವು ಪೂಜೆಯ ಮೂಲಕ ಸಂಪ್ರೀತಗೊಳಿಸಿದರೆ ಆ ಶಕ್ತಿ ನಮ್ಮನ್ನು ಕಾಪಾಡುತ್ತದೆ. ನಮ್ಮ ಬಗ್ಗೆ ಮುನಿಯುವುದಿಲ್ಲ ಎಂಬುದಾಗಿದೆ. ಪ್ರಕೃತಿಯ ವಿಶಿಷ್ಟತೆಯನ್ನೇ ದೈವ ಎಂದು ಭಾವಿಸಿ ಅದು ಮುನಿದಾಗ ಕ್ಷಾಮ, ಡಾಮರ, ಭಯಂಕರ ರೋಗಗಳೂ, ಸಂತೃಪ್ತಿ ಹೊಂದಿರುವಾಗ ಜಗತ್ತಿಗೆ ಒಳಿತೂ ಆಗುವುದು ಎಂಬ ತಿಳುವಳಿಕೆಯೂ ಈ ಆರಾಧನೆ ಅಥವಾ ಪೂಜೆ ಎಂಬ ಕ್ರಿಯೆಯ ಹಿಂದೆ ಅಡಗಿದೆ. ದೈವವನ್ನು ಒಂದು ವಿಶಿಷ್ಟ ಶಕ್ತಿ, ನಮಗೆ ಎಟುಕದ್ದು. ಯಾವುದೋ ಲೋಕದ್ದು ಎಂಬ ಭಾವವೇ ಅಧಿಕವಾಗಿರುವ ಈ ವಿಚಾರದೊಂದಿಗೆ ಬುಡಕಟ್ಟಿನ ದೇವರ ಪರಿಕಲ್ಪನೆಯನ್ನು ಹೋಲಿಸಿದಾಗ ಬುಡಕಟ್ಟಿನ ದೇವರು ಹೀಗೆ ಕಾಣದ ಲೋಕದವರಲ್ಲ, ತಮ್ಮವರೇ. ಮೊದಲನೆಯದಾಗಿ ಸೃಷ್ಟಿಗೆ ಕಾರಣವಾಗುವ ತಾಯಿಯೇ ಮೊದಲ ದೈವ. ಈ ಪರಿಕಲ್ಪನೆಯ ಹಿನ್ನೆಲೆಯಲ್ಲಿ ರೂಪುಗೊಂಡಿದ್ದೇ ಮಾತೃದೇವತಾರಾಧನೆ. ಅಂದರೆ ಈಕೆ ಬೇರೆ ಯಾರೂ ಅಲ್ಲ. ನಮ್ಮನ್ನು ಸೃಷ್ಟಿಸುವ ಪೊರೆಯುವ 'ಅಮ್ಮ' ನೀಕೆ.

ಎರಡನೆಯದಾಗಿ ತಮಗೆ ಬದುಕನ್ನು ಕೊಟ್ಟ ತಮ್ಮ ಜೀವನಾವಶ್ಯಕತೆಯನ್ನು ಪೂರೈಸುವ ಮೂಲ. ಅದು ಬೇಟೆಯಾದಾಗ ಪೂಜಿಸುವ ದೈವಬ್ಯಾಟೆಬೀರ[೮] ಮ್ಯಾಸನಾಯಕರಲ್ಲಿ ಬೇಟೆ ಮಾರಮ್ಮ. ಪಶುಪಾಲನೆಯೇ ಅನ್ನದ ಅವಶ್ಯಕತೆಯನ್ನು ನೀಗಿಸುವ ಮೂಲವಾದಾಗ ತಮ್ಮ ದನಕರುಗಳ ಮಂದೆಯೇ ದೇವರುಗಳು. ಮ್ಯಾಸ ನಾಯಕರಲ್ಲಿ ತಮ್ಮ ಮೂಲ ಪುರುಷ ಹುಟ್ಟಿದ್ದೇ ಎತ್ತಿನ ಕಾಲಿನ ಗೊರಸಿನಲ್ಲಿ ಎಂಬ ಭಾವನೆ ಇರುವಾಗ ಎತ್ತುಗಳು ದೈವದ ಸ್ಥಾನದಲ್ಲಿ ನಿಲ್ಲಲೇ ಬೇಕಲ್ಲವೇ. ಸಾಮಾನ್ಯವಾಗಿರುವ ಬುಡಕಟ್ಟಿನ ನಂಬಿಕೆಯಂತೆ, ಈ ಸಮುದಾಯದಲ್ಲಿಯೂ ಎತ್ತುಗಳು, ಅವುಗಳನ್ನು ಸಂರಕ್ಷಣೆ ಮಾಡಿದ ನಾಯಕರು ದೈವೀಕಸ್ಥಾನದಲ್ಲಿದ್ದು ಪೂಜೆಗೊಳ್ಳುತ್ತಿದ್ದಾರೆ. ಅಂದರೆ ಇವರು ತಮಗೆ ಬದುಕನ್ನು ಕೊಟ್ಟವರು. ಹಾಗಾಗಿ ಇಲ್ಲಿ ನಡೆಯುವ ಆರಾಧನೆಯಲ್ಲಿ ಬೇಡಿಕೆಗಿಂತಲೂ ಹೆಚ್ಚಾಗಿ ಋಣವನ್ನು ಸಲ್ಲಿಸುವ ಪರಿಕಲ್ಪನೆ ಇದೆ. ಹಾಗಾಗಿಯೇ ಹಾಲು-ಮೊಸರಿನ ಮೀಸಲು-ನೈವೇದ್ಯ, ಕಾಸು ಇಡುವುದು, ಬೆಳೆದ ಹೊಸ ಧಾನ್ಯವನ್ನು ಸಮರ್ಪಿಸುವುದು ಇವೆಲ್ಲಾ ಆರಾಧನಾ ಪದ್ಧತಿಗಳಾಗಿವೆ.

---

೮ ಹಾಲಕ್ಕಿ ಒಕ್ಕಲಿಗರು, ಬುಡಕಟ್ಟು ದೈವಾರಾಧನೆ, ಹಿ.ಚಿ. ಬೋರಲಿಂಗಯ್ಯ

ಮ್ಯಾಸಬೇಡರು ಪ್ರಮುಖವಾಗಿ ತಮ್ಮ ಸಾಂಸ್ಕೃತಿಕ ನಾಯಕ/ನಾಯಕಿ ಮತ್ತು ಆಹೋಬಿಲಾ ನರಸಿಂಹಸ್ವಾಮಿಯ ಹೆಸರಿನಲ್ಲಿ ನಡೆಸುವ ಹಬ್ಬಗಳೆಂದರೆ

೧. ಗುಗ್ಗರಿಹಬ್ಬ

೨. ಶ್ರಾವಣಮಾಸದ ನಾಗಾರಾಧನೆ

೩. ದೀಪಾವಳಿ ಹಬ್ಬ

೪. ಮುಂಗಾರಿ ಹಬ್ಬ.

**ಗುಗ್ಗರಿಹಬ್ಬ:**

ಪಶುಪಾಲಕತನದೊಂದಿಗೇ ಕೃಷಿಯೂ ನಮ್ಮ ಪ್ರಾಚೀನರಲ್ಲಿ ಪ್ರಾರಂಭವಾದ ವಿವರಗಳನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಕೃಷಿ ಎಂದಾಗ, ಮುಖ್ಯವಾಗಿ ಮಧ್ಯಕರ್ನಾಟಕದ ಪ್ರಮುಖ ಬೆಳೆ ರಾಗಿ, ಸಜ್ಜೆ, ಜೋಳ, ನವಣೆ, ಮತ್ತು ದ್ವಿದಳ ಧಾನ್ಯಗಳು ಆದರಲ್ಲೂ ಹುರುಳಿ ಪ್ರಮುಖ ಬೆಳೆ. ಹುರುಳಿಯನ್ನು ದನಕರುಗಳಿಗೂ ಪೌಷ್ಠಿಕ ಆಹಾರವಾಗಿ ತಿನ್ನಿಸುವ ಅಭ್ಯಾಸವೂ ಇದೆ. ಇದರಿಂದಾಗಿ ಬೆಳೆದ ಬೆಳೆಯನ್ನು ತಮ್ಮ ದೈವಕ್ಕೆ ಅರ್ಪಿಸುವವರೆಗೂ ಬಳಸುವುದಿಲ್ಲ. ಕಾಳನ್ನು ಬೇಯಿಸಿ ಗುಗ್ಗರಿ ಮಾಡಿ, ಜೋಳ, ಸಜ್ಜ ಅಥವಾ ನವಣೆಯನ್ನು ಕುಟ್ಟಿ ಅಕ್ಕಿ ಮಾಡಿ ಬೇಯಿಸಿ ಮೀಸಲಾಗಿರಿಸಿದ್ದ ಹಾಲು ಮೊಸರಿನೊಂದಿಗೆ ನೈವೇದ್ಯ ಮಾಡುತ್ತಾರೆ. ತೆಂಗಿನಕಾಯಿಯ ನೈವೇದ್ಯ ಇಲ್ಲ. ಇತ್ತೀಚೆಗೆ ಸೇರಿಕೊಂಡಿದೆ. ಅಂದರೆ ಇಲ್ಲಿ ಸಾಂಕೇತಿಕವಾದ ಬಲಿಯೂ ಇಲ್ಲ. ಬದಲಾಗಿ ಬಾಳೆಹಣ್ಣಿನ ಪೂಜೆಯೇ ಇಲ್ಲಿ ಮುಖ್ಯವಾದುದು. ಈ ಗುಗ್ಗರಿ ಹಬ್ಬದಲ್ಲಿ ತಮ್ಮ ನಾಯಕನಿಗೆ ಸಂಬಂಧಿಸಿದ ಎತ್ತುಗಳನ್ನೂ ಕಾಡಿನಲ್ಲಿರುವ ಗೂಡುಗಳಿಂದ ಕರೆಯಿಸಿ ಅವುಗಳಿಗೂ ಪೂಜೆ, ನೈವೇದ್ಯ ಮಾಡಲಾಗುತ್ತದೆ. ಕಾಡುಗೊಲ್ಲರಲ್ಲಿಯೂ ಈ ಗುಗ್ಗರಿ ಹಬ್ಬದ ಆಚರಣೆ ಇದೆ. ನಾಯಕನ ಪರಂಪರೆಗೆ ಸೇರಿದ ಪ್ರತಿ ಬೆಡಗಿನವರೂ ಈ ಹಬ್ಬದಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. ಕೆಲವೊಮ್ಮೆ, ಇದನ್ನು 'ಅಮಾವಾಸ್ಯೆ ಹಬ್ಬ' ಎಂದೂ ಕರೆಯುತ್ತಾರೆ. ಅಂದರೆ ತಮ್ಮ ಹಿರೀಕನ ಹಬ್ಬ ಎಂಬ ಅರ್ಥದಲ್ಲಿ. ಆ ದಿನ ಪ್ರತಿ ಮನೆಯಲ್ಲಿಯೂ ಒಂದು ಮಣ್ಣಿನ ದೀಪ ಹಚ್ಚಿಟ್ಟು ಅದಕ್ಕೆ ಪೂಜೆ ಮಾಡಿ ಇಡೀ ರಾತ್ರಿ ದೀಪ ಉರಿಸುತ್ತಾರೆ. ರಾತ್ರಿಯಿಡೀ ಗುಡಿಯಲ್ಲಿ ಪೂಜೆ ನಡೆಯುವಾಗ ಮನೆಯಲ್ಲಿ ದೀಪ ಉರಿಯಬೇಕು. ಬೆಳಿಗ್ಗೆ ಮತ್ತೊಮ್ಮೆ ಪೂಜಿಸಿ ದೀಪ ಕಳುಹಿಸಿಕೊಡುವುದು ಎನ್ನುತ್ತಾರೆ.

**ಶ್ರಾವಣದ ನಾಗಾರಾಧನೆ :**

ಶ್ರಾವಣಮಾಸದಲ್ಲಿ ಸಾಮಾನ್ಯವಾಗಿ ಆಚರಿಸುವ ಹಬ್ಬ ನಾಗರಪಂಚಮಿ. ಮ್ಯಾಸಬೇಡರಲ್ಲಿ, ಸಂಬಂಧಿಸಿದ ದೇವಾಲಯದಲ್ಲಿ ರಾತ್ರಿ ಗುಗ್ಗರಿ ಅನ್ನ ತಂಬಿಟ್ಟು ಚಿಗಳಿ (ಎಳ್ಳಿನ ಉಂಡೆ) ತಯಾರಿಸಿ ಬೆಳಗಿನ ಜಾವ ಪೂಜೆ ಮಾಡಿ ನಂತರ ಹುತ್ತ ಅಥವಾ ನಾಗರ ಕಲ್ಲುಗಳಿಗೆ ಹೋಗಿ ಹಾಲೆರೆದು ತಂಬಿಟ್ಟು, ಚಿಗಳಿ ನೈವೇದ್ಯ ಮಾಡಿ ಬರುತ್ತಾರೆ. ಇದನ್ನು ಪುರುಷರೇ ನಿರ್ವಹಿಸುತ್ತಾರೆ. ಪ್ರತಿ ಮನೆಯವರೂ ಹಿಂದಿನ ದಿನ ಸಂಜೆಯೆ ಎಳ್ಳು, ಮೀಸಲು, ಹುರುಳಿಯನ್ನು ದೇವಾಲಯಕ್ಕೆ ಕೊಟ್ಟಿರುತ್ತಾರೆ. ಮರುದಿನ ಗುಡಿಗೆ ಬಂದು

ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಮುಖ್ಯ ಪೂಜೆ ನಡೆಯುವಾಗ, 'ಕಾಸು' ಇಡುತ್ತಾರೆ. ಪ್ರತಿ ಮನೆಯಿಂದ ಹುತ್ತಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುವ ಪದ್ಧತಿ ಇಲ್ಲವೇ ಇಲ್ಲ. ಅದು ಕಡ್ಡಾಯವಲ್ಲ. ಇತ್ತೀಚೆಗೆ ಇದು ಅಲ್ಲಲ್ಲಿ ಪ್ರಾರಂಭವಾಗಿದೆ. ಸಾಮೂಹಿಕ ಜೀವನ ವಿಧಾನವಿದ್ದ ಸಮುದಾಯಗಳಲ್ಲಿ ಧಾರ್ಮಿಕ ಆಚರಣೆಗಳೂ ಕೂಡ ಸಾಮೂಹಿಕಕ್ರಿಯೆಯೇ ಹೊರತು ವೈಯಕ್ತಿಕವಾದುದಲ್ಲ.

**ದೀಪಾವಳಿ :**

ಪ್ರತಿಮನೆಯಿಂದ ಕಾಸು, ಮೀಸಲನ್ನು ಗುಡಿಗೆ ಒಪ್ಪಿಸುತ್ತಾರೆ. ಕೆಲವು ಕಡೆ ಈ ಸಮಯದಲ್ಲಿಯೂ ಎತ್ತುಗಳು ಬರುತ್ತವೆ. ಈ ವೇಳೆಗೆ ಹೊಸ ಫಸಲಾಗಿ ಸಜ್ಜೆ ಬಂದಿರುತ್ತದೆ. ಅದರ ತೆನೆಯನ್ನೇ ಇಡಿಯಾಗಿ ಗುಡಿಗೆ ಒಪ್ಪಿಸುತ್ತಾರೆ. ಗುಗ್ಗರಿ ಬೇಯಿಸಿ, ಜೋಳದ ಅನ್ನ, ಮೀಸಲು ಮೊಸರಿನ ನೈವೇದ್ಯ ಮಾಡುತ್ತಾರೆ. ಕಂಪಳದೇವರು, ಬೋಸೇದೇವರ ಪೆಟ್ಟಿಗೆಯನ್ನು ಹಟ್ಟಿಯಿಂದ ಹೊರಗೆ ತಂದು ಬಯಲಿನಲ್ಲಿ ಆವರಣಕಟ್ಟಿ ಗುಡಿಸಿಲಿನಲ್ಲಿ ಕೂರಿಸಿ ಉದಿ–ಪದಿ ಪೂಜೆ ಸಲ್ಲಿಸುತ್ತಾರೆ. ('ಉದಿ' ಎಂದರೆ ದೇವರ ಗುಡಿಸಿಲಿನ ಸುತ್ತ ಇರುವ ಸೊಪ್ಪಿನ ಆವರಣ. 'ಪದಿ' ಎಂದರೆ ಈ ಆವರಣಕ್ಕೆ ಹೊಂದಿಕೊಂಡಂತೆ ಎಡ ಪಕ್ಕದಲ್ಲೆ ಕಟ್ಟಿರುವ ಸುಮಾರು ನಾಲ್ಕು ಅಡಿ ಎತ್ತರ, ಐದು ಅಡಿ ಅಗಲವಿರುವ ಹಸಿ ಸೊಪ್ಪು, ಕಟ್ಟಿಗೆ ಬಳಸಿ ಗೋಡೆಯ ಹಾಗೆ ನಿರ್ಮಿಸಿದ ತಡಿಕೆ ಎತ್ತುಗಳಿಗೆ ಸಂಬಂಧಿಸಿದ ವಸ್ತು ಮತ್ತು ತಮ್ಮ ಕೊಡಲಿ, ಕೋಲು, ಕಂಬಳಿ ಇತ್ಯಾದಿಗಳನ್ನು ಇಲ್ಲಿ ಇಟ್ಟುಕೊಂಡಿರುತ್ತಾರೆ.)

**ಮುಂಗಾರಿಹಬ್ಬ :**

ಯುಗಾದಿ ಹಬ್ಬದ ಅಮಾವಾಸ್ಯೆ ಕಳೆದ ನಂತರ ಬರುವ ಅಮಾವಾಸ್ಯೆಯನ್ನು 'ಬಾದಾಮಿ ಅಮಾವಾಸ್ಯೆ' ಎಂದು ಕರೆಯುತ್ತಾರೆ. ಆದಿನ ಮ್ಯಾಸನಾಯಕರಲ್ಲಿ ಮುಂಗಾರಿ ಹಬ್ಬದ ಆಚರಣೆ ನಡೆಯುತ್ತದೆ. ಮೊದಲ ಕಾರಿಗೆ ಮುನ್ನ ಅದರ ಆರಂಭ ಬಯುಸಿ ಸಮೃದ್ಧಿಯಾಗಲಿ ಎಂದು ದನಗಾಹಿಗಳಾದ ಇವರು ಬಯಸಿ ದೇವರಿಗೆ ಬೇಡಿಕೊಳ್ಳುವ ಆಚರಣೆಯಿದು. ಕಂಪಳ ದೇವರಲ್ಲಿ ಮತ್ತು ನಲಗೇತನ ಹಟ್ಟಿಯಲ್ಲಿರುವ ಚನ್ನಕೇಶವನ ದೇವಾಲಯದಲ್ಲಿ ಈ ವಿಶೇಷವಾದ ಪೂಜೆ ನಡೆಯುತ್ತದೆ. ಮ್ಯಾಸ ನಾಯಕರ ಮೂಲ ಪದ್ಧತಿ ಆಚರಣೆಗಳು ತಪ್ಪದಂತೆ ಪ್ರತಿಯೊಂದೂ ಈ ನೆಲೆಗಳಲ್ಲಿ ಮಾತ್ರ ನಡೆದುಕೊಂಡು ಬರುತ್ತಿದೆ. ಬಾದಾಮಿ ಅಮಾವಾಸ್ಯೆ ನಂತರ ಬರುವ ಶುಕ್ರವಾರ ಮೀಸಲುಹಾಲನ್ನು ಕಾಯಿಸಿ ಬೆಣ್ಣೆ ತೆಗೆದು ಶನಿವಾರ ಮುಂಜಾನೆ ಗುಡಿಗೆ ಕೊಡಲಾಗುತ್ತದೆ. ಗುಡಿ ಎಂದರೆ ಇಲ್ಲಿ ಗುಡಿಸಲೇ ಗುಡಿ. ಗುಡಿಸಿಲಿನಲ್ಲಿ ಒಂದು ಎತ್ತಿನಕೊಂಬನ್ನು ಇರಿಸಿಕೊಂಡಿರುತ್ತಾರೆ. ಹಟ್ಟಿಯ ಮನೆಗಳವರು ಕೊಟ್ಟ ಬೆಣ್ಣೆಯನ್ನು ಈ ಕೊಂಬಿನಲ್ಲಿ ಶೇಖರಿಸಲಾಗುತ್ತದೆ. ಹಾಲನ್ನು ಕಾಯಿಸಿ ಮೊಸರು ಮಾಡಿರುತ್ತಾರೆ. ನಗರಿ ಮನೆಯವರು (ಒಂದು ಬೆಡಗಿನವರು) ಈ ಬೆಣ್ಣೆಯನ್ನು ಕಾಯಿಸಿ ಪೂಜೆಯ ವೇಳೆಗೆ ದೀಪ ಹಚ್ಚುತ್ತಾರೆ. ಶನಿವಾರ ಬೆಳಗಿನ ವೇಳೆಗೆ ವಿಶೇಷ ಪೂಜೆ, ಜೋಳದ ಅನ್ನ ಮತ್ತು ಮೊಸರನ್ನು ನೈವೇದ್ಯ ಮಾಡುತ್ತಾರೆ. ನಂತರ ಎಲ್ಲರೂ ಒಟ್ಟಾಗಿ ಕಾಸಿಟ್ಟು, ಸೂರ್ಯನಿಗೆ ನಮಸ್ಕರಿಸಿ, ದೇವರಿಗೂ ನಮಸ್ಕರಿಸಿ ಉತ್ತಮ ಮಳೆ

ಸುರಿಯಲಿ, ಮುಂಗಾರು ಪ್ರಾರಂಭವಾಗಲಿ ಎಂದು ಬೇಡಿಕೊಳ್ಳುತ್ತಾರೆ. ಬೆಳಿಗ್ಗೆ ದಾಸೋಹ-ನಂತರ ಎತ್ತುಗಳು ಬರುತ್ತವೆ. ಗದ್ದಿಗೆ ಹಾಕಿ, ಕಾಸಿಟ್ಟು ಗೌರವ ತೋರಿ ಈ ಮೊದಲು ಅಕ್ಕಿ ಮತ್ತು ಅರಿಶಿಣ ಕುಟ್ಟಿ ತಯಾರಿಸಿದ ಭಂಡಾರವನ್ನು ಎತ್ತುಗಳು ಬಂದಕೂಡಲೇ ಅವುಗಳಿಗೆ ಹಚ್ಚಿ ಸುತ್ತಲೂ ತಿರುಗಿ ಭಂಡಾರ ಎತ್ತುಗಳ ಮೇಲೆ ಚೆಲ್ಲುತ್ತಾರೆ. ನಂತರ ಎರಿಪೋತುನಿಂದ (ಎರಿಪೋತು ಈತ ನಿರ್ದಿಷ್ಟ ಬೆಡಗಿಗೆ ಸೇರಿದ ವ್ಯಕ್ತಿ. ಈತ ಸಾಮಾನ್ಯವಾಗಿ ಮ್ಯಾಸಬೇಡರಿಗೆ ಸಂಬಂಧಿಸಿದ ಎಲ್ಲಾ ದೈವಾರಾಧನೆಗಳಲ್ಲಿ ಅಲಗುಸೇವೆ ನಡೆಸುತ್ತಾನೆ) ಅಲಗುಸೇವೆ ನಡೆಯುತ್ತದೆ. ಎತ್ತುಗಳನ್ನು ಓಡಿಸುತ್ತಾರೆ. ದನಗಾಹಿಗಳಾದ ಈ ಸಮುದಾಯದಲ್ಲಿ ಹುಲ್ಲು ನೀರಿನ ಅವಶ್ಯಕತೆ ಜಾಸ್ತಿ. ಆದರ ನಿಮಿತ್ತ ಮಳೆಗಾಗಿ ಪ್ರಾರ್ಥಿಸುವುದೇ ಈ ಮುಂಗಾರಿ ಹಬ್ಬದ ವಿಶೇಷ. ಆ ವರ್ಷದಲ್ಲಿ ಸತ್ತ ದೇವರ ಎತ್ತಿನ ತಲೆಯನ್ನು ಹಾಗೆಯೇ ಸಂರಕ್ಷಿಸಿ ಇಟ್ಟಿರುತ್ತಾರೆ. ಉಳಿದ ಭಾಗವನ್ನು ಎತ್ತು ಸತ್ತಾಗಲೇ ತಿಂದು ಮುಗಿಸಿರುತ್ತಾರೆ. ಪಶುಪಾಲಕರಾದ ಈ ಸಮುದಾಯದಲ್ಲಿ ದನ ಸತ್ತಾಗ ತಿನ್ನುವ ಪದ್ಧತಿ ಇತ್ತು. ಈಗ ಇಲ್ಲವೇ ಇಲ್ಲ ಅನ್ನುವಷ್ಟು ಮರೆಯಾಗಿದೆ. ಎತ್ತಿನ ತಲೆಯನ್ನು ರಂಗಯ್ಯನ ಗುಡ್ಡಕ್ಕೆ ತೆಗೆದುಕೊಂಡು ಹೋಗಿ ಹೂಳಿ ಬರುತ್ತಾರೆ. ರಂಗಯ್ಯನ ಗುಡ್ಡದಲ್ಲಿ ಕಂಪಳ ದೇವರ ಪೂಜಾರಿಯ ಸಮಾಧಿಯೂ ಇದೆ. ಅಪರೂಪಕ್ಕೆ ದೇವರು ಅಲ್ಲಿಗೆ ಹೋಗುವುದೂ ಉಂಟು.

**ಮಾತೃದೇವತಾರಾಧನೆ :**

ಮೂಲತಃ ಮಾತೃಪ್ರಧಾನ ವ್ಯವಸ್ಥೆ ಇದ್ದ ಸಮುದಾಯವಿದು. ಸೃಷ್ಟಿಮೂಲವಾದ ಸ್ತ್ರೀಯನ್ನು ಗೌರವದಿಂದ ಕಂಡ ಸಮುದಾಯವಿದು. ಹಾಗಾಗಿ ಅಮ್ಮನ ಆರಾಧನೆ, ಈ ಸಮುದಾಯದಲ್ಲಿ ವ್ಯಾಪಕವಾಗಿ ಇದೆ. ಸಾಂಸ್ಕೃತಿಕ ನಾಯಕಿಯರನ್ನೂ 'ಅಮ್ಮ' ನೊಂದಿಗೇ ಸಮೀಕರಿಸಿ ಮಾರಮ್ಮನೆಂದೇ ಪೂಜಿಸುವ ಪದ್ಧತಿ ಇದೆ. ಹಾಗಾಗಿ ಗುಗ್ಗರಿ ಹಬ್ಬ ಮಾಡುವುದಲ್ಲದೆ ಕುರಿ, ಕೋಣದ ಬಲಿಯೂ ಉಂಟು. ಬೇವಿನ ಸೀರೆ, ಬಾಯಿಬೀಗದ ಸೇವೆ ಪಡೆಯುವ, ದಢಾರ, ಸಿಡುಬುಗಳನ್ನು ತರಿಸುವ-ನಿವಾರಿಸುವ ಶಕ್ತಿಗಳಾಗಿ ಇವರು ಪೂಜೆಗೊಳ್ಳುತ್ತಿದ್ದಾರೆ. ಭಾದ್ರಪದ ಮಾಸದಲ್ಲಿ ಮತ್ತು ಶೂನ್ಯಮಾಸದಲ್ಲಿ ಮ್ಯಾಸನಾಯಕರು ವಾಸಿಸುವ ಊರು, ಹಟ್ಟಿಗಳಲ್ಲಿ ಒಂದೊಂದು ಮಂಗಳವಾರ ಕೆಲವು ಹಟ್ಟಿಗಳಂತೆ ನಿಗದಿಪಡಿಸಿಕೊಂಡು ಮನೆಗೊಂದರಂತೆ ಮಾರಮ್ಮನಿಗೆ ಕುರಿಕೊಯ್ದು ಹಬ್ಬ ಆಚರಿಸುತ್ತಾರೆ. ಇದನ್ನು ದೇವಿಗೆ ಬಲಿ ಎಂದು ಹೇಳುವುದಿಲ್ಲ. ಬದಲಾಗಿ ಬೇಟೆ ಕಡಿಯುವ ಹಬ್ಬ. ಬೇಟೆ ಮಾರಮ್ಮ ಎಂದೇ ಹೇಳಲಾಗುತ್ತದೆ. ಹಿಂದೆ ಬೇಟೆ ಸಾಮಾನ್ಯವಾಗಿದ್ದ ಸಮುದಾಯವಿದ್ದು ಇಂದು ಅಲ್ಲಿಂದ ಬಹುದೂರ ನಡೆದುಬಂದಿದ್ದರೂ ಆ ಮೂಲ ಪ್ರವೃತ್ತಿ ಒಂದು ಆಚರಣೆಯಾಗಿ ಉಳಿದಿದ್ದು ವರ್ಷಕ್ಕೊಮ್ಮೆಯಾದರೂ ವಿಜೃಂಭಿಸಿ, ಮನಸಾರೆ ಕುರಿ.ಮೇಕೆ ಕಡಿದು, ಮಾಂಸಾಹಾರ ಮಾಡಿ ತೃಪ್ತಿಪಡುವ ಒಂದು ಹಬ್ಬದ ಸ್ವರೂಪದಲ್ಲಿ ಉಳಿದುಬಂದಿದೆ.

**ಆರಾಧನೆಯಲ್ಲಿ ಕಂಡುಬರುವ ಕೆಲವು ಸಾಂಸ್ಕೃತಿಕ ವಿಶೇಷತೆಗಳು :**

**ದೇವರ ಸ್ವರೂಪ :**

ತಮ್ಮ ನಾಯಕ/ನಾಯಕಿಗೆ ಸಂಬಂಧಿಸಿದ ವಸ್ತು ವಿಶೇಷಗಳನ್ನು ಇಲ್ಲಿ ಪೂಜಿಸುವ ಪದ್ಧತಿ ಇದೆಯೇ ಹೊರತಾಗಿ ವಿಗ್ರಹ ಅಥವಾ ಮೂರ್ತಿಯ ಪೂಜೆ ಇಲ್ಲ. ಶೈವಾರಾಧನೆ ಮೂಲದವರಾದ ಇವರು ಶೈವ ಸಂಸ್ಕೃತಿ ಪ್ರತೀಕವಾಗಿ ಒಂದು ಕಲ್ಲನ್ನೇ ಲಿಂಗ, ಭೈರವ, ಬೋರುವ ಎಂದು ಪೂಜಿಸುತ್ತಾರೆಯೇ ಹೊರತು ಅದೂ ಕೆತ್ತಿಕಟ್ಟಿದ ಸುರೂಪಿ ಲಿಂಗವಲ್ಲ. ತಮ್ಮ ಸಾಂಸ್ಕೃತಿಕ ವೀರರ ನೆನಪಿನಲ್ಲಿ ಕೆಲವು ಕಡೆ ಅವರ ಅಲಗು, ಅಥವಾ ಬಿಲ್ಲನ್ನು ಪೂಜಿಸುವ ಪರಿಪಾಠವಿದೆ. ದೇವರ ನೆಲೆಗಳು ಗುಡಿಸಿಲುಗಳು. ಇದರಲ್ಲಿ ಈ ವಸ್ತುವನ್ನು ಇಟ್ಟಿರುತ್ತಾರೆ. ಉಳಿದಂತೆ ಪೆಟ್ಟಿಗೆ ದೇವರು ಎಂದು ಪೂಜಿಸುತ್ತಾರೆ. ಇದನ್ನು ಬಿದಿರಿನ ಕಡ್ಡಿಯನ್ನು ಬಳಸಿ ತಯಾರಿಸಿರುತ್ತಾರೆ. ಬಿದಿರಿನ ಕಡ್ಡಿಯನ್ನು ಒತ್ತಾಗಿ ಜೋಡಿಸಿ ಹೆಣೆದು ದುಂಡನೆಯ ಆಕಾರದಲ್ಲಿರುವ ೧.೫ ಯಿಂದ ೨ ಅಡಿ ಅಗಲವಿದ್ದು ಮೇಲೆ ಮುಚ್ಚಳವಿರುವ ಬುಟ್ಟಿಯಿದು. ಇದನ್ನೇ ಪೆಟ್ಟಿ, ಪೆಟ್ಟಿಗೆ ಎಂದು ಕರೆಯುತ್ತಾರೆ. ಇದಕ್ಕೊಂದು ಬಟ್ಟೆಯನ್ನು ಸುತ್ತಿ, ಆಭರಣಗಳನ್ನು ಸಿಕ್ಕಿಸಿದಾಗ ವಿಶಿಷ್ಟವಾದ ರೂಪ ಅದಕ್ಕೆ ಬರುತ್ತದೆ. ಹಿಂದೆ ವಲಸಿಗರಾಗಿದ್ದ ಇವರು ತಮ್ಮ ವಸ್ತು ವಿಶೇಷಗಳನ್ನು ಇಂತಹ ಬುಟ್ಟಿಯಲ್ಲಿಯೇ ಹೊತ್ತು ಒಯ್ಯುತ್ತಿದ್ದ ವಿಧಾನವಿದು. ಹಾಗಾಗಿಯೇ ತಮ್ಮ ನಾಯಕನಿಗೆ ಸಂಬಂಧಿಸಿದ ವಸ್ತುಗಳನ್ನೂ ಇಂತಹ ಪೆಟ್ಟಿಗೆಯಲ್ಲಿಯೇ ಇರಿಸಿ, ಪೂಜಿಸುವ ವಿಧಾನವಿದೆ. ಅಹೋಬಿಲಂ ನರಸಿಂಹಸ್ವಾಮಿಯ ಹೆಸರಿನಲ್ಲಿ ಪೂಜಿಸಲಾಗುವ ಓಬಳದೇವರ ಪೆಟ್ಟಿಗೆಗಳಲ್ಲಿ ಸಾಂಕೇತಿಕವಾಗಿ ಸಾಲಿಗ್ರಾಮಗಳಿವೆ ಎಂದು ಹೇಳಲಾಗುತ್ತದೆ. ಇದಲ್ಲದೆ ಕಾಡಿನ ಗೂಡುಗಳಲ್ಲಿರುವ ದೇವರ ಎತ್ತುಗಳೂ ಕೂಡ ಇವರಿಗೆ ದೇವರ ಸಮಾನವೇ. ಅವುಗಳನ್ನು ಪೂಜಿಸುತ್ತದೆ ಈ ಸಮುದಾಯ. ಗುಗ್ಗರಿ ಹಬ್ಬದ ದಿನ ಕಾಡಿನ ಗೂಡಿನ ಎತ್ತುಗಳು, ಈಗ ಹಟ್ಟಿಗಳಾಗಿ ಗ್ರಾಮ್ಯೀಕರಣಗೊಂಡು ಅಲ್ಲಿರುವ ತಮ್ಮ ದೈವಿಕ ನೆಲೆಗಳ ಬಳಿ ಕರೆತರಲ್ಪಟ್ಟು ವಿಶೇಷವಾದ ಗೌರವ ಪಡೆಯುತ್ತವೆ.

**ಸೂರ್ಯನಮಸ್ಕಾರ :**

ಪ್ರತಿ ದೇವಾಲಯದಲ್ಲೂ, ಪ್ರತಿ ಹಬ್ಬದಲ್ಲೂ ತಮ್ಮ ದೈವಕ್ಕೆ ಪೂಜೆಸಲ್ಲಿಸಿದ ನಂತರ 'ಸೂರ್ಯನ ಮೊಕ್ಕು'(ಇದೂ ತೆಲುಗು ಪದವೇ ಆಗಿದೆ.) ಎಂದು ಸಾಮೂಹಿಕವಾಗಿ ಗುಡಿಯ ಅಂಗಳದಲ್ಲಿ ಪೂಜಾರಿಯ ಜೊತೆಯಾಗಿ ನಿಂತು ಸೂರ್ಯನ ಕಡೆ ತಿರುಗಿ ನಮಸ್ಕರಿಸಿ, ನಂತರ ದೇವರ ಗರ್ಭಗುಡಿಯ ಕಡೆ ತಿರುಗಿ ನಮಸ್ಕರಿಸಿ ನಂತರ ಪರಸ್ಪರ ಕೈಮೊಕ್ಕು ಎಂದು ಕೈಕೈಮುಟ್ಟಿ ನಮಸ್ಕರಿಸಿಕೊಳ್ಳುತ್ತಾರೆ. ಇದೊಂದು ವಿಶಿಷ್ಟವಾದ ನಮನ. ಸಮುದಾಯದ ಸಾಮೂಹಿಕ ಬದುಕಿನ ಕ್ರಮದ ಒಂದು ಸ್ವರೂಪವಾಗಿ ಇದು ಉಳಿದುಬಂದಿದೆ.

**ಮೀಸಲು :**

ಹಬ್ಬದ ಆಚರಣೆಯಲ್ಲಿ ಇದಕ್ಕೆ ಬಹಳ ಪ್ರಾಶಸ್ತ್ಯವಿದೆ. ಹಬ್ಬದಾಚರಣೆಯ ಮುನ್ನಾ ದಿನದ ವೇಳೆಗೆ ತಮ್ಮ ನೆಲೆಯನ್ನು ಸುಣ್ಣ, ಮಣ್ಣಿನಿಂದ ಬಳಿದು ಮಡಿಮಾಡಬೇಕು. ಆ ದಿನ ಸೂತಕದಲ್ಲಿರುವ ಮಹಿಳೆಯರು ಮನೆಯೊಳಗೆ ಇರುವಂತಿಲ್ಲ. ಸಾವಿನ ಸೂತಕದಲ್ಲಿರುವ ಮನೆಯಲ್ಲಿ ಮೀಸಲು ಹಾಕುವುದೇ ಇಲ್ಲ. ತಾವು ಸಾಕಿರುವ ಹಸು, ಎಮ್ಮೆಗಳಲ್ಲಿ ಮಡಿಯಿಂದ ಹಾಲು ಕರೆದು ಅದನ್ನು ದೇವಸ್ಥಾನಕ್ಕೆ ಒಪ್ಪಿಸುತ್ತಾರೆ. ಅಲ್ಲಿ ಹೀಗೆ ಎಲ್ಲಾ ಮನೆಯಿಂದ ಕೊಟ್ಟ ಹಾಲನ್ನು ಕಾಯಿಸಿ ಮೊಸರು ಮಾಡಿ ಮರುದಿನ ಕಡೆದು ಬೆಣ್ಣೆ ತೆಗೆದು, ದೇವರಿಗೆ ಪೂಜೆಯ ಸಂದರ್ಭದಲ್ಲಿ ದೀಪ ಹಚ್ಚಲು ಬಳಸುತ್ತಾರೆ. ಇದಲ್ಲದೆ ಎತ್ತಿನ ಗೂಡಿನಿಂದಲೂ ಕಿಲಾರಿಗಳು ಮೀಸಲು ಮೊಸರನ್ನು ಪೂಜೆಯ ವೇಳೆಗೆ ಬರಿಗಾಲಲ್ಲಿ ನಡೆದು ಹೊತ್ತು ತರುತ್ತಾರೆ. ಈ ಗೂಡಿನಿಂದ ಮೀಸಲು ಬಂದ ನಂತರವೇ ದೇವಾಲಯದಲ್ಲಿ ಕಾರ್ಯಾಚರಣೆ ಪ್ರಾರಂಭವಾಗುವುದು. ಈ ಮೊಸರನ್ನು ಜೋಳದ ಅನ್ನದೊಂದಿಗೆ ನೈವೇದ್ಯ ಮಾಡುತ್ತಾರೆ. ಉಳಿದಂತೆ ಎಲ್ಲವನ್ನೂ ಸೇರಿಸಿ ದಾಸೋಹಕ್ಕೆ ಬಳಸಲಾಗುತ್ತದೆ.

ಹಬ್ಬವನ್ನು ಬಿಟ್ಟರೆ ಉಳಿದಂತೆ ವಾರದ ದಿನ ಅಂದರೆ ಭಾನುವಾರ, ಸೋಮವಾರ, ಅಥವಾ ಶನಿವಾರ, ಶುಕ್ರವಾರ ಕೆಲವರು ಮಂಗಳವಾರ ಮನೆಯಲ್ಲಿ ಹಾಲನ್ನು ಬಳಸದೆ ಮೀಸಲು ಎಂದು ಕಾಯಿಸಿ ಮೊಸರು ಮಾಡಿ ಮರುದಿನ ಬೆಣ್ಣೆ ತೆಗೆದು ಅದನ್ನು ಹತ್ತಿರ ಇದ್ದವರು ದೇವಾಲಯದಲ್ಲಿ ಮತ್ತು ಉಳಿದವರು ಮನೆಯಲ್ಲಿ ದೀಪ ಉರಿಸುತ್ತಾರೆ.

**ಕಾಸು :**

ಹಬ್ಬದಾಚರಣೆಯಲ್ಲಿ ಪೂಜೆಯ ನಂತರ ಕರಿಕಂಬಳಿಯನ್ನು 'ಗದ್ದುಗೆ' ಯೆಂದು ಹಾಸಿ ಅದರ ಮೇಲೆ 'ಪ್ರತಿ ಮನೆಗೆ ಒಬ್ಬರಂತೆ ಒಂದು 'ಕಾಸು' ಎಂದು ನಾಣ್ಯವನ್ನು ಇರಿಸಿ ನಮಸ್ಕರಿಸುತ್ತಾರೆ. ಇದು ತಮ್ಮ ಸಾಂಸ್ಕೃತಿಕ ನಾಯಕನಿಗೆ ಸಲ್ಲಿಸುವ ಗೌರವದ ಕಾಣಿಕೆ. ಇದನ್ನು ಪೂಜಾರಿ ತೆಗೆದುಕೊಳ್ಳುತ್ತಾರೆ. ಹಾಗೆಯೇ ಎತ್ತಿನ ಗೂಡಿನ ಬಳಿ ಹೋದಾಗ, ಅಥವಾ ಎತ್ತುಗಳು ಗುಡಿಯ ಬಳಿ ಬಂದಾಗಲೂ ಹೀಗೆಯೇ ಅವುಗಳಿಗೂ 'ಕಾಸು' ಇಡಲಾಗುತ್ತದೆ. ಅದನ್ನು ಪಟ್ಟದ ಕಿಲಾರಿ ತೆಗೆದುಕೊಳ್ಳುತ್ತಾರೆ.

ಈ ಎಲ್ಲಾ ಆರಾಧನೆಗಳನ್ನು ಗಮನಿಸಿದಾಗ ಬಹುಶಃ ಹೀಗೆ ವ್ಯಾಖ್ಯಾನಿಸಿಕೊಳ್ಳಬಹುದೆನಿಸುತ್ತದೆ. ಸಾಂಸ್ಕೃತಿಕ ನಾಯಕ ಅಥವಾ ನಾಯಕಿ ಸಮುದಾಯದ ಸ್ಮರಣೆಯಲ್ಲಿ ಉಳಿದುಬಂದಾಗ ಅವರನ್ನು ಸ್ಮರಿಸುವ, ಆದರ್ಶವಾಗಿರಿಸಿಕೊಳ್ಳುವ ಒಂದು ವಿಧಾನವೇ ಅವರನ್ನು ಕೇಂದ್ರವಾಗಿರಿಸಿಕೊಂಡು ಮಾಡುವ ಆರಾಧನೆಗಳು. ಇದನ್ನು ನಾವು ಸರಳವಾಗಿ ದೈವಾರಾಧನೆ, ಇವರು ದೈವೀಕ ನೆಲೆಗೆ ಏರಿದವರು ಎಂದು ವ್ಯಾಖ್ಯಾನಿಸುವುದೇ ಬಹಳ ಸಹಜವಾದುದಾಗಿದೆ. ಆದರೆ ದೈವ-ದೇವರು ಎಂದರೆ ಒಂದು ವಿಶಿಷ್ಟವಾದ ಶಕ್ತಿ. ನಮ್ಮ ಕೈಗೆ ಎಟುಕದ ಲೋಕದ್ದು. ಹೀಗಾಗಿ ಪೂಜೆ, ಧ್ಯಾನದ ಮೂಲಕ ಸಂಪ್ರೀತಗೊಳಿಸಬಹುದೇ ಹೊರತು ಆ ದೇವರು ನಮ್ಮೊಂದಿಗಿನ ವ್ಯಕ್ತಿಯಾಗಲು ಸಾಧ್ಯವಿಲ್ಲ. ಒಂದು ಅಂತರ ಇಲ್ಲಿ ಇದ್ದೇ

ಇರುತ್ತದೆ. ಈ ಹಿನ್ನೆಲೆಯಿಂದ ನೋಡಿದಾಗ ಈ ನಾಯಕಿಯರಿಗೆ ಸಂಬಂಧಿಸಿದ ಆರಾಧನೆಯನ್ನು 'ದೈವಾರಾಧನೆ' ಎಂದು ಅರ್ಥೈಸಿಕೊಳ್ಳುವುದು ಸಮಂಜಸವಲ್ಲವೇನೋ ಎನ್ನಿಸುತ್ತದೆ. ಕಾರಣ ಇವರು ಸಮುದಾಯದ ಹಿರಿಯ ಚೇತನಗಳು. ಕಾಣದ ಲೋಕದ, ಅಮೂರ್ತ ಚೇತನಗಳಲ್ಲ. ಇದರಿಂದ ಈ ನಾಯಕಿಯರಿಗೆ ಅಥವಾ ನಾಯಕರಿಗೆ ಸಂಬಂಧಿಸಿದ ಆಚರಣೆ, ಆರಾಧನೆಗಳು ಸ್ಮರಣೆಯ ಒಂದು ವಿಧಾನವಷ್ಟೇ ಹೊರತು ದೈವಾರಾಧನೆಯಲ್ಲ. ಇವರನ್ನು ಗತಕ್ಕೆ ತಳ್ಳುವ, ಈ ಮೂಲಕ ಮರೆಯುವ ಇಚ್ಛೆ ಇಲ್ಲದೆ, ಸದಾ ತಮ್ಮೊಂದಿಗೆ ಈ ಮೂಲಕವಾಗಿ ಜೀವಂತವಾಗಿರಿಸಿಕೊಳ್ಳುವ ಒಂದು ವಿಧಾನವೇ ಇಲ್ಲಿ ಪ್ರಮುಖವಾಗುತ್ತದೆ. ಅಲ್ಲದೆ ಇವರು ಆರಾಧನೆ ಮಾಡುವವರ ವಂಶದ ಹಿರಿಯರೇನೂ ಅಲ್ಲವಾದ್ದರಿಂದ ಇದನ್ನು ಪಿತೃಗಳ ಪೂಜೆಯೊಂದಿಗೆ ಸಮೀಕರಿಸುವಂತಿಲ್ಲ. ಇದು ಇಡೀ ಬುಡಕಟ್ಟಿಗೆ ಹಿರಿಯರಾದವರ ಆರಾಧನೆಯಾಗಿದೆ. ಮೇಲು ವರ್ಗಗಳಲ್ಲಿ ಕಂಡುಬರದ ಈ ಗುಣವು ಬುಡಕಟ್ಟು ಸಂಸ್ಕೃತಿಯ ಒಂದು ವಿಶೇಷವೂ ಹೌದು.

**ಧಗಮು :**



*ದೀಪಾವಳಿ ಹಬ್ಬದ ಆಚರಣೆಯಲ್ಲಿ ಭೇರಿ (ಧಗಮು) ಭಾರಿಸುತ್ತಿರುವುದು*
*(ಭಾರಿಸುತ್ತಿರುವವರು ನಗರಿಮನೆ ಸಣ್ಣಬೋರಯ್ಯ, ಕಂಪಳದೇವರ ಹಟ್ಟಿಯಲ್ಲಿ*

ಇದೊಂದು ವಾದ್ಯ. ಕಂಚು ಅಥವಾ ಹಿತ್ತಾಳೆಯಿಂದ ಮಾಡಿದ, ತಳ ಚಿಕ್ಕದಾಗಿದ್ದು ಮೇಲೆ ಅಗಲವಾಗಿರುವ ಸುಮಾರು ೩ ರಿಂದ ೪ ಅಡಿ ಎತ್ತರವಾಗಿರುವ, ಮೇಲೆ ಹಸುವಿನ ಚರ್ಮವನ್ನು ಬಿಗಿದು ಕಟ್ಟಿರುವ ವಾದ್ಯವಿದು. ಇದನ್ನು ತಯಾರಿಸಲೂ ನಿಯಮವಿದೆ. ಗೊಡ್ಡು ಹಸುವಿನ ಚರ್ಮವನ್ನು ಅದು ಜೀವದಿಂದಿರುವಂತೆಯೇ ತೆಗೆದು ಆ ಚರ್ಮವನ್ನು ಹದಗೊಳಿಸಿ ಈ ಭೇರಿ ತಯಾರಿಸುತ್ತಾರೆ. ಭೇರಿ ತಯಾರಿಸಿದ ಮೇಲೆ, ಸಂಬಂಧಿಸಿದ ಬೆಡಗಿನವರು ದೇವರಿಗೆ ಪೂಜೆ ಸಲ್ಲಿಸಿ ಇದನ್ನು ದೇವರಿಗೆ ಒಪ್ಪಿಸಿದ ನಂತರ ಅದು ಪೂಜಾಕಾರ್ಯಗಳಲ್ಲಿ ಬಳಕೆಯಾಗುತ್ತದೆ. ಅದನ್ನು ಬಡಿಯಲು ಚರ್ಮದಿಂದ ಮಾಡಿದ ಕೈಗಳಾಕಾರದ ಜೋಡು ಇರುತ್ತದೆ. ದೇವರು ಹೊರಗೆ ಹೊರಟಾಗ ಮಡಿಚಿದ ಕಂಬಳಿಯನ್ನು ತಲೆಯ

ಮೇಲೆ ಹಾಕಿಕೊಂಡು ಒಬ್ಬ ಇದನ್ನು ಹೊತ್ತುಕೊಂಡರೆ ಮತ್ತೊಬ್ಬ ಹಿಂದೆ ಚರ್ಮದ ಪಟ್ಟಿಯಿಂದ ಬಡಿಯುತ್ತಾ ಹೋಗುತ್ತಾನೆ. ಉಳಿದಂತೆ ಗುಡಿಯಲ್ಲಿ ಪೂಜೆ ನಡೆಯುವಾಗ ಗುಡಿಯ ಆವರಣದಲ್ಲಿಯೇ ನೆಲದ ಮೇಲೆ ಇದನ್ನಿರಿಸಿ ಬಡಿಯಲಾಗುತ್ತದೆ. ಇಲ್ಲಿಯ ದೇವರುಗಳು ಸಾಂಸ್ಕೃತಿಕ ನಾಯಕರು, ಹುಟ್ಟು ಹೋರಾಟಗಾರರು. ಭಕ್ತರೂ ಈ ವೀರ ಪರಂಪರೆಯಿಂದ ಬಂದವರೇ. ಹಾಗಾಗಿ ರಣ ವಾದ್ಯಗಳನ್ನು ಬಳಕೆಯೇ ಇಲ್ಲಿ ಸಾಮಾನ್ಯ. ಆವರಣದ ಹೊರಗೆ ನಿಂತ ಛಲವಾದಿಗಳು ಉರುಮೆಯನ್ನೂ, ಮಾದಿಗ ಸಮುದಾಯದವರು ಕಹಳೆ, ತಮ್ಮಟೆಯ ವಾದ್ಯವನ್ನು ನುಡಿಸುತ್ತಾರೆ. ಇವೆಲ್ಲವೂ ರಣ ವಾದ್ಯಗಳೆಂಬುದೇ ವಿಶೇಷ. ಕಾಡುಗೊಲ್ಲರಲ್ಲಿಯೂ ಈ 'ಧಗಮು' ವಾದ್ಯ ಭಾರಿಸುತ್ತಾರೆ.

**ಗಣೆ:**

ಪಶುಪಾಲಕನಾದ ಶ್ರೀಕೃಷ್ಣನ ಕೈಯಲ್ಲಿರುವ ವಾದ್ಯವೇ ಕೊಳಲು. ಅದೇ ಮೂಲದಿಂದ ಬಂದವರು ತಾವು ಎಂದು ಹೇಳಿಕೊಳ್ಳುವ ಈ ಸಮುದಾಯದಲ್ಲಿಯೂ ಕಾಡುಗೊಲ್ಲರಲ್ಲಿ ಇರುವಂತೆ ಗಣೆಯನ್ನು ನುಡಿಸುವ ಪದ್ಧತಿ ಇದೆ. ಕೊಳಲ ಆಕಾರದಲ್ಲಿಯೇ ಇರುವ, ಉದ್ದನೆಯ ಬಿದಿರಿನಿಂದ ಮಾಡಿದ ವಾದ್ಯವಿದು. ಕಂಪಳದೇವರ ಗುಡಿಯಲ್ಲಿ, 'ಮುಂಗಾರಿಹಬ್ಬದ' ದಿನ ಈ ಗಣೆಯನ್ನು ನುಡಿಸುತ್ತಾ ಬಿದಿರಮ್ಮನ ಪದವನ್ನೂ ಮತ್ತು ಪೆದೋಬಳೇಶನ ಸ್ತುತಿಯನ್ನೂ ನುಡಿಸಲಾಗುತ್ತದೆ. ಕಾಡಿನಲ್ಲಿ ಅಲೆಯುತ್ತಾ ಪಶುಪಾಲನೆಯನ್ನು ಮಾಡುತ್ತಿದ್ದ ಇವರು ಏಕತಾನತೆಯನ್ನು ಕಳೆದುಕೊಳ್ಳಲು, ತಮ್ಮ ಪಶುಮಂದೆಯನ್ನು ತಮ್ಮ ಬಳಿ ಕರೆಯಲು, ತಮ್ಮ ಹಿಂದೆ ಬರುವಂತೆ ಮಾಡಲು ಈ ಗಣೆಯನ್ನು ಬಳಸುತ್ತಿದ್ದು ಈಗ ಇದು ಒಂದು ಆಚರಣೆಯ ಸ್ವರೂಪದಲ್ಲಿ ಉಳಿದುಬಂದಿದೆ.

**ಎತ್ತಿನಗೂಡುಗಳು :**



*ಕಂಪಳದೇವರ ಎತ್ತಿನ ಗೂಡು ಮತ್ತು ಮ್ಯಾಸಬೇಡ ಮಹಿಳೆಯರು*

ಎತ್ತುಗಳನ್ನು 'ಮುತ್ತೈಗಳು' ಎಂದು ಕರೆಯಲಾಗುತ್ತದೆ. ಶ್ರೀಶೈಲದಿಂದ ಬಂದವರು ೧೦ ಜನ ಹಿರಿಯರ ಮಾರ್ಗದರ್ಶನದಲ್ಲಿ ಬಂದರು. ಈ ಹತ್ತು ಮಂದಿಗೆ 'ಪದಿ ಮುತ್ತಿಗಾರರು (೧೦ ಜನ

ಹಿರಿಯರು) ಎಂದು ಕರೆಯಲಾಗುತ್ತದೆ. ಅವರಷ್ಟೆ ಹಿರಿತನದಿಂದ ಎತ್ತುಗಳ ರೂಪದಲ್ಲಿ ಅವರನ್ನು ಸ್ಮರಿಸಲಾಗುತ್ತದೆ. ಹಿಂದೆ ಪಶುಸಂಪತ್ತೇ ಮ್ಯಾಸನಾಯಕರಿಗೆ ಬದುಕುವ ಮಾರ್ಗವೂ ಆಗಿತ್ತು. ಕ್ರಮೇಣ ಕಾಡಿನ ನೆಲೆಯನ್ನು ಕಳೆದುಕೊಂಡು ಪಶುಸಂಗೋಪನೆಯ ಮೂಲಕ ಬದುಕುವುದು ದುಸ್ತರವಾದಾಗ, ಊರುಗಳನ್ನು ಸೇರಿದ ಈ ಪಶುಪಾಲಕರು ಇಂದು ಜೀವನ ನಿರ್ವಹಣೆಗೆ ಕೃಷಿಕಾರ್ಮಿಕರಾಗಿ, ಕೃಷಿಕರಾಗಿ, ಕೆಲವೆಡೆ ಕುರಿ ಸಾಕಾಣಿಕೆ ಇತರೆ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆ ಮೂಲದ ದನಕರುಗಳನ್ನು ಈಗ ಆಯಾ ಸಾಂಸ್ಕೃತಿಕ ನಾಯಕನ ಹೆಸರಿನಲ್ಲಿ ಸನಿಹದ ರಕ್ಷಿತ ಅರಣ್ಯಗಳಲ್ಲಿ 'ಗೂಡುಗಳನ್ನಿಟ್ಟುಕೊಂಡು ಆರಾಧನಾ ಸ್ವರೂಪದಲ್ಲಿ ದೈವೀಕ ಎಂಬ ಭಾವನೆಯಿಂದ ಉಳಿಸಿಕೊಂಡು ಬಂದಿದ್ದಾರೆ. ಇವುಗಳ ನೆಲೆಯನ್ನೇ ಎತ್ತಿನಗೂಡು ಎಂದು ಕರೆಯಲಾಗುತ್ತದೆ. ವಿಪರ್ಯಾಸವೆಂದರೆ, ಇಲ್ಲಿ ಕೆಲವು ಹಸುಗಳು ಇದ್ದರೂ ಕರೆಯುವುದು ಮಾತ್ರ ಎತ್ತಿನಗೂಡು ಎಂದೇ. ದೇವಸ್ಥಾನದ ಬಳಿ ಕರೆತರುವುದೂ ಎತ್ತುಗಳನ್ನು ಮಾತ್ರ. ಪೂಜೆ, ಗೌರವ ಸಲ್ಲುವುದೂ ಎತ್ತುಗಳಿಗೇ. ಇಲ್ಲಿಯೂ ಪುರುಷ ಪ್ರಧಾನತೆ ಎಂದು ಭಾವಿಸಬೇಕೋ ಅಥವಾ ಕೃಷಿ ಸಂಸ್ಕೃತಿ ಅಡಿಯಿರಿಸಿದ ಮೇಲೆ ಉಳುವ ಎತ್ತಿಗೆ ಸಿಕ್ಕ ಪ್ರಾಶಸ್ತ್ಯ (ಶಿವನ ದೇವಾಲಯದಲ್ಲಿ ನಂದಿಯನ್ನು ಪೂಜಿಸುವ ಶೈವಾಚಾರದಂತೆ) ಎಂದು ತಿಳಿದುಕೊಳ್ಳಬೇಕೋ ತಿಳಿಯದಾಗಿದೆ.

**ಕಿಲಾರಿಗಳು :**



ಜಾತ್ರೆಯಲ್ಲಿ ಮ್ಯಾಸಬೇಡ ಕಿಲಾರಿಗಳು



ಕಂಪಳ ದೇವರ ಪೂಜಾರಿ
ಶ್ರೀ ರೇವಣ್ಣನವರು

ಈ ಪದವೇ ವಿಶೇಷವಾದುದಾಗಿದೆ. ಮ್ಯಾಸಬೇಡರಲ್ಲಿ ಈ ಪದ ಹೇಗೆ ಬಂದಿತು ಎಂಬುದೇ ಅಚ್ಚರಿಯ ಸಂಗತಿ. 'ಕಿಲಾರಿ' ಎಂಬ ಸ್ಥಳ ಮಹಾರಾಷ್ಟ್ರದಲ್ಲಿ ಬರುತ್ತದೆ. ಎತ್ತುಗಳ ಒಂದು ತಳಿಗೆ 'ಕಿಲಾರಿ ತಳಿ' ಎಂದು ಕರೆಯಲಾಗುತ್ತದೆ. ಮಹಾರಾಷ್ಟ್ರ ಮತ್ತು ಬೆಳಗಾಂ ಕಡೆ ಈ ಜಾತಿಯ ಎತ್ತುಗಳು

ಹೆಚ್ಚಾಗಿವೆ. ಕುರುಬರಲ್ಲಿ ಈ ಹೆಸರಿನ ಮನೆತನವೊಂದಿದೆ. ತಾವು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಬಂದವರು, ಹಾಗಾಗಿ ತಮಗೆ ಈ ಹೆಸರು ಜೊತೆಯಾಗಿದೆ ಎಂಬುದು ಅವರ ಅಭಿಪ್ರಾಯ. ಮಲ್ಲಯ್ಯನನ್ನು ಪೂಜಿಸುವ ಇವರು ಮೀಸಲು ಹುಗ್ಗಿ ಮಾಡಿ ಕೈಯಿಂದಲೇ ಅದನ್ನು ತಿರುವಿ ಬೇಯಿಸಿ ನೈವೇದ್ಯ ಮಾಡುತ್ತಾರೆ.

ಕಿಲಾರಿ ಪದ ಸ್ಥಳನಾಮ ಆಗಿರುವಂತೆ ಮರಾಠಿ ಇಂಗ್ಲೀಷ್ ಪದಕೋಶದಲ್ಲಿ(ಅಂತರ್ಜಾಲದಲ್ಲಿ Uchicago.edu.) 1. A herd's man, 2. A Keeper both of herds and floks of buffaloes, cows, sheep & goats, 3. Shephared ಎಂಬ ಅರ್ಥಗಳಿದ್ದು, ಇವೆಲ್ಲವೂ ಬಳಕೆಯಾಗಿ ಪಶುಸಂಗೋಪನೆ ಮಾಡುವವರನ್ನು ಸಂಕೇತಿಸುತ್ತವೆ. ಈ ಎಲ್ಲಾ ವಿವರಣೆಗಳು ಮತ್ತು ಪಶುಪಾಲಕರಾದ ಮ್ಯಾಸಬೇಡರಲ್ಲಿರುವ 'ಕಿಲಾರಿ' ಪದಕ್ಕೆ ಸರಿಹೊಂದುವಂತಿದ್ದು ಆಂಧ್ರ, ಮಹಾರಾಷ್ಟ್ರದಲ್ಲೆಲ್ಲಾ ಅಲೆದಾಡಿ ಬಂದ ಈ ದನಗಾರರಲ್ಲಿ ಈ ಪದ ಉಳಿದು ಬಂದಿರುವುದು ಸಹಜವಾದುದಾಗಿದೆ.

ಮ್ಯಾಸಬೇಡರ ದೇವರ ಎತ್ತುಗಳನ್ನು ಕಾಯುವವರನ್ನು 'ಕಿಲಾರಿ'ಗಳು ಎಂದು ಕರೆಯಲಾಗುತ್ತದೆ. ಕಿಲಾರಿಗಳಲ್ಲೂ ಒಬ್ಬ ಮುಖ್ಯಸ್ಥನಿರುತ್ತಾನೆ. ಆ ಪದವಿಯೂ ವಂಶಪಾರಂಪರ್ಯವಾಗಿಯೇ ಬರುತ್ತದೆ. ಪಟ್ಟವನ್ನು ಮಾಡುವ ಮೂಲಕ ಈ ಪದವಿಯನ್ನು ಈತನಿಗೆ ವಹಿಸಿಕೊಡಲಾಗುತ್ತದೆ. ಕಿಲಾರಿಗಳ ವೇಷ ಮೊಣಕಾಲ ಮೇಲಕ್ಕಿರುವ ಬಿಳಿಯ ಚಲ್ಲಣ, ತಲೆಗೊಂದು ಪೇಠ, ಬರಿಮೈಗೆ ಹೊದೆಯಲು ಒಂದು ಬಿಳಿಯ ಹಚ್ಚಡ. ಕೈಯಲ್ಲಿ ಒಂದು ಕೋಲು, ಹಗಲೆಲ್ಲಾ ದನಕರು ಕಾದು ರಾತ್ರಿ ಈ ಗೂಡಿನ ಬಳಿಯೇ ಮಲಗುತ್ತಾರೆ. ಇವರ ಸಂಸಾರ ಹತ್ತಿರದ ಹಟ್ಟಿಯಲ್ಲಿ ಇರುತ್ತದೆ. ಬಂದರಿಕೆ ಸೊಪ್ಪನ್ನು ಜೋಡಿಸಿ ಹೊಲಿದು ತಡಿಕೆಯನ್ನಾಗಿ ಮಾಡಿಕೊಂಡು ಇದನ್ನೇ ಮಲಗಲು ಹಾಸಿಗೆಯಂತೆ ಬಳಸುತ್ತಾರೆ. ಹೊದೆಯಲು ಕಂಬಳಿ. ಪ್ರಾಚೀನ ಮಾನವನ ಬದುಕಿನ ಸ್ವರೂಪವನ್ನು ಇವರ ಬದುಕಿನ ಕ್ರಮದಲ್ಲಿ ಕಾಣಲು ಸಾಧ್ಯವಿದೆ. ಇವರು ತಮ್ಮದೇ ಸಮುದಾಯದ ಈಗ ಗ್ರಾಮ್ಯೀಕರಣ ಗೊಂಡಿರುವವರ ಮನೆಗಳಿಗೆ ಹೋದಾಗ ತಟ್ಟೆಯಲ್ಲಿ ಊಟ ಮಾಡುವುದಿಲ್ಲ. ಕಾಡಿನಿಂದ ತಾವು ಹೋಗುವಾಗಲೇ ಮುತ್ತುಗದ ಎಲೆಗಳನ್ನು ತಮ್ಮ ಕಂಬಳಿ ಮಡಿಕೆಯಲ್ಲಿಟ್ಟುಕೊಂಡು ತಂದಿರುತ್ತಾರೆ. ಅದನ್ನು ತಟ್ಟೆಯಂತೆ ಹೊಲಿದುಕೊಂಡು ಊಟ ಮಾಡಿ ತಮ್ಮ ಪಾವಿತ್ರ್ಯವನ್ನು ಕಾಪಾಡಿಕೊಳ್ಳುತ್ತಾರೆ. ಊರುನಾಯಕರಿಂದ ಪ್ರತ್ಯೇಕತೆ ಕಾದು ಕೊಳ್ಳುತ್ತಿದ್ದ 'ಮ್ಯಾಸ ನಾಯಕರು' ಈಗ ಇವರಿಂದಲೇ ಪ್ರತ್ಯೇಕತೆ ಕಾದುಕೊಳ್ಳುವ 'ಕಿಲಾರಿ'ಗಳು ಈ ನಡವಳಿಕೆ ಗಮನಿಸಿದಾಗ ಊರ ಮಂದಿಯ ಬಗ್ಗೆ ಕಾಡಿನ ಮಂದಿಗಿರುವ ಭಾವನೆಯು ಸ್ಪಷ್ಟವಾಗುತ್ತದೆ. ಹಿಂದೆ ಈ 'ಕಿಲಾರಿ'ಗಳು ಭತ್ಯಕ್ಕಾಗಿ ಅಂದರೆ ಹಿಟ್ಟು ಮತ್ತು ನುಚ್ಚು ಪಡೆಯಲು ತಮ್ಮ ಸಮುದಾಯದವರ ಮನೆಗಳಿಗೆ ಬರುತ್ತಿದ್ದರು. ತಮ್ಮ ಕರ್ತವ್ಯ ಎಂಬಂತೆ ಭಕ್ತಿಯಿಂದಲೇ ಅವರಿಗೆ ಗೌರವಪೂರ್ವಕವಾಗಿ ಜನ ಕೊಟ್ಟು ಕಳಿಸುತ್ತಿದ್ದರು. ಈಗ ಬದಲಾದ ಬದುಕಿನ ಮಾರ್ಗಗಳೇ ಕಾರಣವಾಗಿ ಬರುತ್ತಿಲ್ಲ. ಜಾತ್ರೆಯಲ್ಲಿ ಎತ್ತುಗಳೊಂದಿಗೆ ಬರುತ್ತಾರೆ. ಆಗ ಅವರಿಗೆ, ಬಟ್ಟೆ, ಧಾನ್ಯ, ಕಂಬಳಿ, ಹಣ ಕೊಡುವ ವಾಡಿಕೆ ಇದೆ.

**ಒಡಪು ಹಾಕುವುದು :**

ಕಾಡಿನಲ್ಲಿರುವ ದನಕರುಗಳ ಗೂಡಿನ ಬಳಿ ರಾತ್ರಿಯ ವೇಳೆ ಸದಾ ಬೆಂಕಿಯನ್ನು ಉರಿಸುತ್ತಾರೆ. ಒಂದು ಮೊಳದಷ್ಟು ಆಳದ ಗುಂಡಿ ತೆಗೆದು ಒಣಗಿದ ತರಗೆಲೆ, ಕಟ್ಟಿಗೆಗಳನ್ನು ಹಾಕಿ ಕಿಲಾರಿಗಳು ಬೆಂಕಿ ಉರಿಸುತ್ತಾರೆ. ಕಾಡುಪ್ರಾಣಿಗಳಿಂದ ರಕ್ಷಣೆ ಪಡೆಯಲು, ದನಕರುಗಳ ಗೂಡುಗಳನ್ನು ರಕ್ಷಿಸುವ ಸಲುವಾಗಿ ಬಯಲಿನಲ್ಲಿಯೇ ಮಲಗಬೇಕಾದಾಗ ಚಳಿಯಿಂದ ರಕ್ಷಿಸಿಕೊಳ್ಳಲು, ಈ ಬೆಂಕಿಯನ್ನು ಉರಿಸುವ ಸಂಪ್ರದಾಯವಿದೆ. ಇದೇ ಅವರಿಗೆ ರಾತ್ರಿಯ ವೇಳೆ ಬೆಳಕಿನ ಮೂಲವೂ ಹೌದು. ತೆಲುಗು ಪದಕೋಶದ ಪ್ರಕಾರ ಒಡಪು ಎಂದರೆ ಬೆಳಕು ಎಂದು ಅರ್ಥ ಬರುತ್ತದೆ. ಈ ಬೆಳಕಿನಲ್ಲಿಯೇ ಸರಿ ರಾತ್ರಿಯವರೆಗೂ ಕೋಲಾಟ, ಇಲ್ಲವೇ ಪದ, ಅಥವಾ ಕತೆ ಹೇಳುತ್ತಾ, ಕೇಳುತ್ತಾ ಕಾಲಹರಣ ಮಾಡುವುದೂ ಉಂಟು. ಹೀಗೆ ರಾತ್ರಿಯಿಡೀ ಬೆಂಕಿ ಉರಿಯುತ್ತಿದ್ದುದನ್ನು ಕಂಡ ಇತರರು ಇವರನ್ನು 'ಕೊಳ್ಳಿಮ್ಯಾಸರು' ಎಂದು ಕರೆಯುತ್ತಿದ್ದುದೂ ಉಂಟು. ಮ್ಯಾಸರನ್ನು, ಕೊಳ್ಳಿಮ್ಯಾಸ, ಕಳ್ಳೇಮ್ಯಾಸ, ಅಡವಿಮ್ಯಾಸ ಎಂದೂ ಕರೆಯುತ್ತಾರೆ ಎಂದು ಎಂ.ಜಿ.ಈಶ್ವರಪ್ಪನವರು ತಮ್ಮ ಮ್ಯಾಸಬೇಡರು ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**ಅಂಬು ವಾಸು ಕೊಯ್ಯುವುದು :**

ಬೇಟೆಯ ಮೂಲದಿಂದ ಪಶುಪಾಲನೆಯ ಕಡೆ ಮಾರ್ಪಾಡುಗೊಂಡ ಸಮುದಾಯವಿದು. ಹಾಗಾಗಿ ಈ ಬೇಟೆಯ ಪ್ರವೃತ್ತಿ, ಮಾಂಸ, ರಕ್ತದ ನೈವೇದ್ಯ ತಮ್ಮ ದೈವಕ್ಕೆ ಸಲ್ಲಿಸುವುದು ಆಚರಣೆಯ ರೂಪದಲ್ಲಿ ಉಳಿದುಬಂದಿದೆ. ಮ್ಯಾಸಬೇಡರ ಇತಿಹಾಸವನ್ನು ಹೇಳುವ ಹೆಳವರ ವಿವರಗಳಲ್ಲೆಲ್ಲಾ 'ಶಿವಗಂಗೆ ಮಾಳಮ್ಮನಿಗೆ ಅಂಬುವಾಸೆ ಕೊಯ್ದು ಎಂದು ಹೇಳುತ್ತಾರೆ. ಎಲ್ಲೆಲ್ಲಿ ತಮ್ಮ ಆರಾಧನಾ ನೆಲೆಗಳನ್ನು ಗುರುತಿಸಿಕೊಂಡು ಸಾಂಸ್ಕೃತಿಕ ನಾಯಕ ನಾಯಕಿಯನ್ನು ಸಾಂಕೇತಿಕವಾಗಿ ಇರಿಸಿಕೊಳ್ಳುತ್ತಾರೋ ಅಲ್ಲೆಲ್ಲಾ ಅಂಬುವಾಸೆ ಕೊಯ್ಯಲಾಯಿತು ಎಂದೇ ಹೇಳುತ್ತಾರೆ. ಈಗಲೂ ಸಾಕಷ್ಟು ಕಡೆ ಮ್ಯಾಸಬೇಡರ ಆರಾಧನಾ ವಿಧಿಗಳಲ್ಲಿ ಇದೂ ಒಂದಾಗಿದೆ. ಹರಕೆಯಾಗಿ ಅಂದು ಬೋರುವ ಸನ್ನಿಧಿಯಲ್ಲಿ 'ವಾಸು' ಕೊಯ್ದು ದೊರೆಯ ಬದಲಾಗಿ ದೊರೆ ಬರುವ ಮೊದಲೇ ಆತನ ಸಹೋದರನ ಮುಖಂಡತ್ವದಲ್ಲಿ ವಾಸುಕೊಯ್ದರು ಎಂದೇ ಇಡೀ ಮ್ಯಾಸಮಂಡಲ ಒಡೆದು ಹೋಯಿತು. ಹಾಗೆಯೇ ಶುಭಕಾರ್ಯವಾದ ಮಕ್ಕಳ ಜಾವಳ ಕ್ರಿಯೆ ಮಾಡುವಾಗಲೂ ಬೋರುವನ ಗುಡಿ ಮುಂದೆ ವಾಸು ಕೊಯ್ಯುತ್ತಾರೆ. ಬೇರೆ ಬೇರೆ ದೈವೀಕ ನೆಲೆಗಳಲ್ಲೂ ಈ ಆಚರಣೆ ಇದೆ. 'ಅಂಬು' ಎಂದರೆ ಚೂಪಾದ ಆಯುಧ ಎಂದಾಗುತ್ತದೆ. 'ವಾಸ್' ಎಂದರೆ ಸಂಸ್ಕೃತದಲ್ಲಿ ಕತ್ತರಿಸು, ಕೊಯ್ಯು, ಚುಚ್ಚು ಎಂದರ್ಥ, ಇಲ್ಲಿ ಕುರಿಯನ್ನು ಕೊಯ್ಯುವ ವಿಧಾನವೇ ಅಂತಹುದು. 'ಅಂಬುವಾಸ್' ಅಂದರೆ ಚೂಪಾದ ಕತ್ತಿಯಿಂದ ಕುರಿಯ ಕತ್ತನ್ನು 'ವಾಸ್‌ಗುಂಡಿ'ನ (ನಿರ್ದಿಷ್ಟವಾದ ದೇವಾಲಯದ ಮುಂದಿರುವ ಕಲ್ಲು). ಮೇಲಿರಿಸಿ ಕುರಿಯನ್ನು ಅಂಗಾತ ಮಲಗಿಸಿ ಕತ್ತನ್ನು ಕತ್ತರಿಸಲಾಗುತ್ತಡೆ. ಆ ರಕ್ತ ಆ ಗುಂಡಿನ ಮೇಲೆ ಚೆಲ್ಲಿರುತ್ತದೆ. ಉಳಿದದ್ದನ್ನು ಅದರ ಪಕ್ಕದ ಗುಂಡಿಯಲ್ಲಿ

ಹಾಕಿ ಮುಚ್ಚಲಾಗುತ್ತದೆ. ಕಾಡುಗೊಲ್ಲರಲ್ಲಿಯೂ ಈ ಪದ್ಧತಿ ಇದೆ. ಡಾ. ಮೀರಾ ಸಾಬಿಹಳ್ಳಿ ಶಿವಣ್ಣನವರು ಇದನ್ನು ಅಪರಕ್ರಿಯೆಯಂತೆ ಇದೆ ಎಂದು ಅಭಿಪ್ರಾಯ ಪಡುತ್ತಾರೆ.



*ವಾಸುಗುಂಡಿಗೆ ಪೂಜಾರಿಯಿಂದ ವಾಸು ಕೊಯ್ಯುವ ಮೊದಲು ಪೂಜೆ ಬೋರೇದೇವರಗುಡಿ (ಖುದಾಪುರ)*



*ವಾಸು ಕುಯ್ಯುತ್ತಿರುವುದು*

ಒಟ್ಟು ಈ ಎಲ್ಲಾ ಧಾರ್ಮಿಕ ಆಚರಣೆಗಳಲ್ಲಿ ಮಹಿಳೆಯರ ಪಾತ್ರ ಎಷ್ಟು ಎಂದು ಯೋಚಿಸಿದಾಗ ಅವರ ಪಾತ್ರವೇನಿದ್ದರೂ ತೆರೆಯ ಹಿಂದಿನದೇ. ಮನೆ ಬಳಿದು, ಸಾರಿಸಿ, ಮನೆಯಲ್ಲೇ ಮೀಸಲು ಹಾಲು ಕಾಯಿಸಿ, ಕಡೆದು ಬೆಣ್ಣೆ, ತುಪ್ಪ ತೆಗೆದು ದೀಪ ಉರಿಸುವುದು ಮತ್ತು ಸಮುದಾಯದ ಒಬ್ಬ ಮಹಿಳೆ ಹೋಗಿ ಗುಡಿಯಲ್ಲಿನ ಮೀಸಲು ಮೊಸರನ್ನು ಕಡೆದು ಬೆಣ್ಣೆ ತೆಗೆದುಕೊಡುವುದನ್ನು ಬಿಟ್ಟರೆ ಉಳಿದಂತೆ ಎಲ್ಲಾ ಕಾರ್ಯಗಳನ್ನು ಮಾಡುವವರು ಬಹುಪಾಲು ಪುರುಷರೇ. ಪೂಜಾರಿಯ ಹೆಂಡತಿ ಮಾಕನಾಡುವಿನ ಓಬಳದೇವರ ಗುಗ್ಗರಿಹಬ್ಬದಲ್ಲಿ ನೈವೇದ್ಯಕ್ಕಾಗಿ ನವಣೆಯ ಅಕ್ಕಿಯ ಅನ್ನವನ್ನು ತಯಾರಿಸುವಾಗ ಆಕೆಯ ಪಾತ್ರ ವಿಶೇಷವಾದುದು. ಕುದಿಯುವ ಅನ್ನವನ್ನು ಸೌಟಿಗೆ ಬದಲಾಗಿ ತನ್ನ ಕೈಯನ್ನೇ ಇಟ್ಟು ತಿರುಗಿಸುವ ಸಾಹಸ ಈಕೆಯದು. ಇವರ ಹಿಂದೆ ನಿಯಮನಿಷ್ಠೆ ಇದ್ದು ಇದೊಂದು ಸೇವೆ ಎಂಬ ಭಾವನೆ ಇದೆ. ಓಬಳದೇವರು ಗಂಗೆ ಪೂಜೆಗೆ ಹೊರಟಾಗ ಪೂಜಾರಿಯ ಹೆಂಡತಿ ಕಲಶ ಹಿಡಿಯುತ್ತಾಳೆ. ಕಂಪಳದೇವರ ಜಾತ್ರೆಯಲ್ಲಿ ಗುಡಿಯ ಹಿಂಭಾಗದಲ್ಲಿ ಕಟ್ಟಿರುವ ಆವರಣದಲ್ಲಿ ನಿಂತು ದೇವರೆತ್ತುಗಳು ಬಂದಾಗ ಅವುಗಳಿಗೆ ಅಲ್ಲಿಯೇ ಅನ್ನವನ್ನು ತಿನ್ನಿಸುತ್ತಾರೆ. ಹೀಗೆ ಅಲ್ಲಲ್ಲಿ ಸಣ್ಣಪುಟ್ಟ ಕಾರ್ಯನಿರ್ವಹಣೆ ಬಿಟ್ಟರೆ

ಪ್ರಮುಖ ಪಾತ್ರವಿಲ್ಲ. ಕಂಪಳದೇವರ ಗುಡಿಯಲ್ಲಂತೂ ಯಾವ ಮಹಿಳೆಗೂ ಆವರಣದ ಒಳಗೆ ಪ್ರವೇಶವೇ ಇಲ್ಲ. ಅಷ್ಟು ನಿರ್ಬಂಧವಿದೆ. ಹೀಗೆ ಮಹಿಳೆಯರ ವತಿಯಿಂದ ನಡೆಯುವ ಆಚರಣೆಗಳು ಒಟ್ಟಾರೆ ಕಡಿಮೆಯೇ.

**ಉಡುಪು :**



ಮ್ಯಾಸಬ್ಯಾಡರ ಬಾಲಕ ಸಾಂಪ್ರದಾಯಿಕ ಉಡುಗೆಯಲ್ಲಿ

ಈ ಬುಡಕಟ್ಟಿನಲ್ಲಿ ಪುರುಷರು ಮೂಲತಃ ಧರಿಸುತ್ತಿದ್ದುದು ಮೊಣಕಾಲ ಮೇಲಕ್ಕಿರುವ ಒಂದು ಬಿಳಿಯ ಒರಟಾದ ಬಟ್ಟೆಯಿಂದ ಹೊಲಿದ ಚಲ್ಲಣ, ತಲೆಗೊಂದು ಬಿಳಿಯ ಬಣ್ಣದ್ದೇ ರುಮಾಲು ಅಥವಾ ಪೇಟ. ಬರಿಮೈಗೆ ಹೊದೆಯಲು ಬಿಳಿಯ ಹಚ್ಚಡ ಅಥವಾ ಕಂಬಳಿ ಕೈಯಲ್ಲಿ ಕೋಲು, ಕಿವಿಗೆ ಹತ್ತ ಕಡಕುಗಳು. ಕೆಲವೊಮ್ಮೆ ಹೆಗಲ ಮೇಲೆ ಮಡಚಿದ ಅಥವಾ ಹೊದೆದ ಕಂಬಳಿ. ಈಗಲೂ ಮ್ಯಾಸಬೇಡರು ಇನ್ನೂ ಆದಷ್ಟು ಮೂಲ ಸ್ಥಿತಿಯಲ್ಲಿಯೇ ಉಳಿದಿರುವ ಕಂಪಳ ದೇವರ ಹಟ್ಟಿಯಲ್ಲಿ ಇದೇ ಧಿರಿಸು ಧರಿಸಿರುವ ಎಂದೂ ಮೈಗೆ ಅಂಗಿಯನ್ನು ತೊಡದೆ ಇರುವವರೂ ಇದ್ದಾರೆ. ಪದ್ಧತಿಯನ್ನು ಬಿಡಲಾಗದು ಎಂಬ ಮನೋಭಾವನೆ ಅಲ್ಲಿದೆ. ಇತ್ತೀಚಿನ ಜನ ತುಂಬು ಬಟ್ಟೆಯನ್ನು ಧರಿಸುತ್ತಾರೆ. ಆದರೆ ಧಾರ್ಮಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಾಗ ಕಡ್ಡಾಯವಾಗಿ ಈ ಸಾಂಪ್ರದಾಯಿಕ ಉಡುಪನ್ನೇ ಧರಿಸುತ್ತಾರೆ. ಮ್ಯಾಸನಾಯಕರು ವಾಸಿಸುವ ಎಲ್ಲಾ ನೆಲೆಗಳಲ್ಲಿಯೂ ಈಗ ಸಾಕಷ್ಟು ಬದಲಾವಣೆಯಾಗಿದ್ದು ಇದು ಆರಾಧನೆ ಆಚರಣೆಯ ಸಂದರ್ಭಗಳಲ್ಲಿ ಮಾತ್ರ ಉಳಿದು ಬಂದಿದೆ. ಕಂಪಳದೇವರ ಪೂಜಾರಿಯಾಗಿರುವ, ಕಾಲೇಜು ಕಂಡ ಶ್ರೀಯುತ ರೇವಣ್ಣನವರು ಸಹ ಸದಾ ಧರಿಸುವುದು ಉದ್ದನೆಯ ಒಂದು ಪಾದ ಮುಚ್ಚುವಂತೆ ಉಟ್ಟಿರುವ ಬಿಳಿಯ ಪಂಚೆ, ತಲೆಗೆ ಬಿಳಿಯ ಪೇಟ, ಮೈತುಂಬಾ ಬಿಳಿಯ ಬಟ್ಟೆಯನ್ನು ಹೊದ್ದಿರುತ್ತಾರೆ. ಬುಡಕಟ್ಟಿನ ನಿಯಮವನ್ನು ನಿಷ್ಠೆಯಿಂದ ಪಾಲಿಸುವ ವಿಧಾನ ಇಲ್ಲಿ ಅಚ್ಚರಿ ಮೂಡಿಸುತ್ತದೆ.

**ಮಹಿಳೆಯರ ಉಡುಪು :**

ಮ್ಯಾಸನಾಯಕರ ಹಟ್ಟಿಯ ಮಹಿಳೆಯ ಉಡುಪೆಂದರೆ ಬಿಳಿಯ ಸೀರೆ. ರವಿಕೆ ಇಲ್ಲ, ಮೈ ತುಂಬಾ ಸೀರೆಯ ,ಸೆರಗನ್ನೇ ಹೊದ್ದಿರುತ್ತಿದ್ದ ಇವರ ಕೈ ತುಂಬಾ ದಪ್ಪ ಗಾಜಿನ ಬಳೆಗಳು ಮತ್ತು ಬೆಳ್ಳಿಯ ಕಡಗ. ಕಿವಿಗೆ ಬುಗುಡಿ ಮತ್ತು ಓಲೆ ಸ್ವಲ್ಪ ಸ್ಥಿತಿವಂತರಾಗಿದ್ದರೆ ಕೊರಳಿಗೆ 'ಚಿಂತಾಕು' ಎಂದು ಕರೆಯಲ್ಪಡುತ್ತಿದ್ದ ಪಟ್ಟಿಯಂತಹ ಆಭರಣ, ಬೆಳ್ಳಿಯ ಚಿಕ್ಕ ವಿನ್ಯಾಸದ ಕಡಗಗಳು, ಕಾಲಿಗೆ ಗೆಜ್ಜೆ ಧರಿಸುತ್ತಿರಲಿಲ್ಲ. ಕಾರಣ ನಮ್ಮ ದೇವರ ಎತ್ತುಗಳಿಗೆ ಕಾಲಿಗೆ ಗಗ್ಗರ ಇತ್ಯಾದಿ ಆಭರಣ ತೊಡಿಸುತ್ತೇವಾದ್ದರಿಂದ ಅದು ದೇವರಿಗೆ

ಸಲ್ಲ ಬೇಕಾದುದೇ ಹೊರತು ತಾವು ಧರಿಸುವಂತಿಲ್ಲ ಎಂದು. ಕಾಲಿಗೆ ಕಾಲುಂಗರ ಇಲ್ಲ. ಕರಿಮಣಿ ಸರ, ತವರಿನವರು ಕೊಟ್ಟಿದ್ದ ಬುಡತಾಳಿ ಅದಕ್ಕೆ ಕಟ್ಟುಕೊಳ್ಳುತ್ತಿದ್ದರು. ಮದುವೆಯಲ್ಲಿ ತಾಳಿ ಇಲ್ಲದ ಕರಿಮಣಿ ಮಾತ್ರ ಕಟ್ಟುತ್ತಿದ್ದರು.



*ಆಧುನಿಕಗೊಂಡ ಕಂಪಳದೇವರ ದೇವಾಲಯದ ಮುಂದೆ ಮ್ಯಾಸಬೇಡ ಮಹಿಳೆಯರು*

**ಡಿಕ್ಕಿಹಬ್ಬ:** 'ನನ್ನಿವಾಳ'ದಲ್ಲಿ ಗಾದರಿಪಾಲನಾಯಕ ಮತ್ತು ಬಂಗಾರು ದೇವರ ಜಾತ್ರೆ ಅಂದರೆ ಪ್ರತಿವರ್ಷ ಗುಗ್ಗರಿ ಹಬ್ಬ ನಡೆಯುತ್ತದೆ. ಆ ಸಂದರ್ಭದಲ್ಲಿ ಈ ಡಿಕ್ಕಿ ಹಬ್ಬ ಆಚರಿಸಲಾಗುತ್ತದೆ. ಇದು ಮಹಿಳೆಯರೇ ಪಾಲ್ಗೊಳ್ಳುವ ಆಚರಣೆ. ನನ್ನಿವಾಳದ ದೊರೆಯ ಮನೆತನದ ಹೆಣ್ಣುಮಕ್ಕಳು ಅಂದರೆ ದೊರೆಯ ಸಹೋದರಿಯರು ಮತ್ತು ಬಂಗಾರುದೇವರ ಪೂಜಾರಿಯ ಸಹೋದರಿಯರ ಮಧ್ಯೆ ಈ ಘರ್ಷಣೆ ನಡೆಯುತ್ತದೆ. 'ಬಂಗಾರು ದೇವರು' ಎಂದರೆ ಹುಲಿದೇವರು. ಬಂಗಾರದಲ್ಲಿ ಒಂದು ಪುಟ್ಟ ಹುಲಿಯನ್ನು ಮಾಡಿ ಪೆಟ್ಟಿಗೆಯಲ್ಲಿಟ್ಟು ಮ್ಯಾಸಬೇಡರು ಇಲ್ಲಿ ಪೂಜಿಸುತ್ತಾರೆ. ದನಗಾಹಿಯಾಗಿದ್ದ ಗಾದರಿಪಾಲನಾಯಕನ ಬಂಧುಗಳು ಹುಲಿಯ ಮರಿಗಳನ್ನು ಕೊಂದ ಕಾರಣದಿಂದಾಗಿ ರೊಚ್ಚಿಗೆದ್ದ ಹುಲಿಗಳಾದ ತಾಯಿ ಮತ್ತು ತಂದೆ ಹುಲಿ ಇವನೊಂದಿಗೆ ಘರ್ಷಣೆಗಿಳಿಯುತ್ತವೆ. ಮೊದಲು ಗಂಡು ಹುಲಿ ಸಾಯುತ್ತದೆ. ಆ ಸ್ಥಳ ಬಿಟ್ಟು ಈತ ಮಿಂಚೇರಿ ಕಡೆ ಹೋದಾಗ ಅಲ್ಲಿಗೂ ಹಿಂಬಾಲಿಸಿಕೊಂಡು ಹೋದ ಹೆಣ್ಣುಹುಲಿ ಈತನೊಂದಿಗೆ ಹೋರಾಡಿ ತಾನೂ ಮಡಿಯುತ್ತದೆ. ಈತನೂ ಸತ್ತು ಹೋಗುತ್ತಾನೆ. ಕಾಡಿನ ವಾಸಿಗಳಾಗಿದ್ದ ಇವರು ನಿರಂತರವಾಗಿ ಇಂತಹ ಕ್ರೂರ ಮೃಗಗಳ ಭಯದಲ್ಲಿಯೇ ಬದುಕುವ ಅನಿವಾರ್ಯವನ್ನು ಈ ಘಟನೆ ಸ್ಪಷ್ಟಪಡಿಸುತ್ತದೆ. ಅಂದಿನಿಂದ ಹುಲಿಯೊಂದಿಗೆ ಅನುಸಂಧಾನ ಮಾಡಿಕೊಂಡವರಂತೆ ಮ್ಯಾಸಬೇಡರು ಈ ಹುಲಿಯ ಪ್ರತಿಮೆಯನ್ನು ಬಂಗಾರುದೇವರು ಎಂಬ ಹೆಸರಿನಲ್ಲಿ ಪೂಜಿಸುತ್ತಾರೆ. ಕರ್ನಾಟಕದ ಬುಡಕಟ್ಟುಗಳಲ್ಲೊಂದಾದ ಕರೆಒಕ್ಕಲಿಗರಲ್ಲೂ ಹುಲಿದೇವರನ್ನು[೯] ಪೂಜಿಸುವ ಪದ್ಧತಿ ಇದೆ.

---

[೯] ಕರ್ನಾಟಕದ ಬುಡಕಟ್ಟುಗಳು. ಸಂಪುಟ ೧. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ. ಪು.೪೫೧. ಕರೆಒಕ್ಕಲರನ್ನು ಕುರಿತ ಡಾ.ಆರ್.ಪಿ.ಹೆಗಡೆಯರ ಲೇಖನ)

ಧಿಕ್ಕಿ ಹಬ್ಬದ ಆಚರಣೆಯ ಹಿನ್ನೆಲೆ ಗಮನಿಸಿದಾಗ ಈ ಗಾದ್ರಿಪಾಲನಾಯಕ ಮತ್ತು ಹುಲಿಯ ಮಧ್ಯೆ ನಡೆದ ಹೋರಾಟದ ಸಾಂಕೇತಿಕ ಆಚರಣೆ ಇದು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಭಾಗವಹಿಸುವವರು ಮಹಿಳೆಯರು ಎಂಬುದು ಮತ್ತೊಂದು ವಿಶೇಷ. ಗಾದ್ರಿಪಾಲನಾಯಕ ಅಂದರೆ ಈತನ ಪರಂಪರೆಯವರನ್ನೇ ಇಂದು ನನ್ನಿವಾಳದ ದೊರೆಗಳು ಎಂದು ಕರೆಯಲಾಗುತ್ತದೆ. ಈ ಮನೆತನದ ಸಹೋದರಿಯರು ಮತ್ತು ಬಂಗಾರು ದೇವರು (ಹುಲಿ) ಪೂಜಾರಿಯ ಸಹೋದರಿಯರು ಇವರೀರ್ವರ ಮಧ್ಯೆಯೇ ಧಿಕ್ಕಿ ಹಬ್ಬ ನಡೆಯುವುದು. ಈ ಇಬ್ಬರಿಗೂ ಮೊದಲು ಹಣೆಗೆ ಅರಿಷಿಣ (ಭಂಡಾರ) ಹಚ್ಚುತ್ತಾರೆ. ನೂರಾರು ಮಂದಿ ನೆರೆದಿರುತ್ತಾರೆ. ಆಗ ದೊರೆ ಅಲ್ಲಿರುವುದಿಲ್ಲ. ಪರಸ್ಪರ ಎರಡೂ ಬಣದ ಮಹಿಳೆಯರು ಪರಸ್ಪರ ಹೂಂಕರಿಸುತ್ತಾ, ಧಿಕ್ಕಿ ಹಾಕುತ್ತ ಎದುರುಬದರಾಗಿ ಕುಳಿತು ತಲೆಗೆ ತಲೆ ಘಟ್ಟಿಸಿಕೊಳ್ಳುತ್ತಾರೆ. ಗಾಯವಾಗಿ ರಕ್ತ ಒಸರುವ ಮಟ್ಟಿಗೆ ಇವರು ಧಿಕ್ಕಿ ಹೊಡೆಯುತ್ತಾರೆ. ನೆರೆದ ಜನ ಎರಡೂ ಬಣಗಳವರು ತಮ್ಮವರನ್ನು ಪ್ರೋತ್ಸಾಹಿಸುತ್ತಾರೆ. ಇದೊಂದು ಮನರಂಜನೆಗಾಗಿ ಹೂಡಿದ ಆಟವೇನೋ ಎಂಬಂತಿರುತ್ತದೆ. ಆದರೆ ಇವರ ಹಿನ್ನೆಲೆಯೇ ಬೇರೆಯಾಗಿದೆ. ಹೆಚ್ಚು ಪ್ರಶ್ನೆ ಮಾಡುತ್ತ ಕೆದಕಿದಾಗ ಸತ್ಯಾಂಶ ಹೊರಬೀಳುತ್ತದೆ. ಅಂದು ಗಾದ್ರಿಪಾಲನಾಯಕ ಮತ್ತು ಹುಲಿಯೊಂದಿಗೆ ನಡೆದ ಹೋರಾಟವಿದು. ದೇವತೆಗಳಿಗೆ ಬಲಿಕೊಡುವುದು, ಸಾಂಕೇತಿಕ ಬಲಿ ಕೊಡುವುದು (ತೆಂಗಿನಕಾಯಿ, ಕುಂಬಳಕಾಯಿ ಇತ್ಯಾದಿ) ಎಲ್ಲಾ ಮುಂದೆ ಬರಲಿರುವ ವಿಪತ್ತುಗಳನ್ನು ತಡೆಯಲು ಮೊದಲೇ ಆ ದೇವರಿಗೆ ತಮ್ಮ ಬಲಿಯಾಗದಿರಲಿ ಎಂದು, ಬೇರೆಯ ಪ್ರಾಣಿ ಮತ್ತು ಇತರೆ ವಸ್ತುವನ್ನು ಬಲಿಕೊಡುವ ಸಂಸ್ಕಾರವನ್ನು ಮನುಷ್ಯ ರೂಢಿಸಿಕೊಂಡ. ಇಲ್ಲಿಯೂ ಹುಲಿಯಿಂದ ಗಾದ್ರಿಪಾಲನಾಯಕ ಮರಣ ಹೊಂದಿದಾಗ ಮತ್ತೆ ಇನ್ನೆಂದೂ ಅಂತಹ ಪ್ರಸಂಗ ಜರುಗದೇ ಇರಲಿ ಎಂದು ಮೊದಲೇ ಹೀಗೆ ಸಂಘರ್ಷವೇರ್ಪಡಿಸಿ ಹುಲಿ ಕಡೆಯವರೇ ಸೋತರು ಎಂದು ನಿರ್ಣಯಿಸುತ್ತಾರೆ. ಮತ್ತೊಂದು ವಿಶೇಷವೆಂದರೆ ಇಲ್ಲಿ ಹುಲಿ ಅಂದರೆ ಬಂಗಾರು ದೇವರ ಪೂಜಾರಿಯ ಮನೆಯ ಹೆಣ್ಣುಮಗಳು ಗೆದ್ದರೂ ಸಹ ನಿರ್ಣಯ ಕೊಡುವುದು ದೊರೆಯ ಮನೆಯ ಸಹೋದರಿಯರೇ ಗೆದ್ದರು ಎಂಬುದಾಗಿ. ಕಾರಣ ದೊರೆಯ ಕಡೆಯವರು ಸೋತರು ಎಂದರೆ ದೊರೆಯ ಪ್ರತಿಷ್ಠೆ ಭಂಗವಾಗುತ್ತದೆ ಎಂಬ ಕಾರಣವಲ್ಲ. ಸೋತರು ಎಂದರೆ ದೊರೆ ಹುಲಿಗೆ ಸೋತ ಅರ್ಥಾತ್ ದೊರೆ ಸತ್ತ ಎಂಬ ತೀರ್ಮಾನವಾದಂತೆ. ದೊರೆಗೆ ಸಾವಾಗುತ್ತದೆ ಎಂಬ ಪ್ರತೀತಿ ಬೆಳೆದಿರುವುದರಿಂದ ಗೆಲುವನ್ನು ಅವರಿಗೇ ಬಿಟ್ಟುಕೊಟ್ಟು ದೊರೆಯನ್ನು ಉಳಿಸುವ ಆಶಯ ಇದಾಗಿದೆ. ಹೀಗೆ ವಿಶಿಷ್ಟವಾದ ಆಚರಣೆ ಇದು. ಮಹಿಳೆಯರೇ ಏಕೆ ಇದನ್ನು ನಡೆಸುತ್ತಾರೆ ಎಂದರೆ ತಮ್ಮ ತವರನ್ನು ರಕ್ಷಿಸುವ ಹಂಬಲ.

'ಹಾಲುಂಡ ತವರೀಗೆ ಏನೆಂದು ಹಾಡಲಿ, ಹೊಳೆದಂಡೆಲಿರುವ ಗರಿಕೇಯ ಕುಡಿಹಂಗೆ, ಹಬ್ಬಲಿ ಅವರ ರಸಬಳ್ಳಿ ' **ಎಂದು** ಹಾರೈಸುವ ಮಹಿಳೆಯರು ತಮ್ಮ ತವರನ್ನು ರಕ್ಷಿಸುವ ಸಲುವಾಗಿ, ಹುಲಿಯ ಶಾಪದಿಂದ ಇವರನ್ನು ಕಾಪಾಡುವ ಸಲುವಾಗಿ ಸಾಂಕೇತಿಕವಾಗಿ ಈ ಆಚರಣೆಯನ್ನು ನಡೆಸಿಕೊಂಡು ಬಂದಿದ್ದಾರೆ. ಮೇಲ್ನೋಟಕ್ಕಂತೂ ಇದೊಂದು ಅಪ್ಪಟ ಮನರಂಜನೆಯಂತೆ ಭಾಸವಾಗುತ್ತದೆ. ಈ ಎರಡೂ ಮನೆತನಗಳ ಮಧ್ಯೆ ಬೀಗತನದ ಸಂಬಂಧವೂ ಇರುವುದರಿಂದ ಈ ಎರಡೂ ಬಣದ ಮಹಿಳೆಯರು ಪರಸ್ಪರ ಅತ್ತಿಗೆ-ನಾದಿನಿಯರೋ ಅಥವಾ ಅತ್ತೆ ಸೊಸೆಯರೋ ಆಗಿರುತ್ತಾರೆ. ಹಾಗಾಗಿ ಒಂದು ಬಗೆಯ

ಪೈಪೋಟಿ ಪ್ರಾರಂಭವಾಗಿ ಪರಸ್ಪರ ಢಿಕ್ಕಿ ಹೊಡೆದುಕೊಳ್ಳುವ ವಿಧಾನ ಆಟದ ಸ್ವರೂಪ ಪಡೆದು ಬಿಡುತ್ತದೆ. ಕೊನೆಗೆ ಯಾರಾದರೂ ಮಧ್ಯೆ ಹೋಗಿ ಬಿಡಿಸಿಕೊಳ್ಳಬೇಕು. ಕೊನೆಗೆ ಇಂತಹ ಆವೇಶ ಇಲ್ಲಿರುತ್ತದೆ. ಡಿಕ್ಕಿ ಹಬ್ಬದಲ್ಲಿ ಭಾಗವಹಿಸುವ ಮಹಿಳೆಯರು ಬಿಳಿಬಣ್ಣದ ಸೀರೆಯನ್ನೇ ಉಡಬೇಕೆಂಬ ಪದ್ಧತಿ ಇದ್ದು, ಈಗ ಈ ನಿಯಮ ಸಡಿಲಗೊಳ್ಳುತ್ತಿದೆ. ಇತ್ತೀಚೆಗೆ ಇದನ್ನು ಅತ್ತೆ ಸೊಸೆಯರ ಮಧ್ಯೆ ನಡೆಯುವ ಆಟ, ಅವರ ಸಾಮರಸ್ಯದ ಸಂಕೇತ ಎಂದೆಲ್ಲಾ ತಪ್ಪಾಗಿ ವ್ಯಾಖ್ಯಾನಿಸಲಾಗುತ್ತಿದೆ.

**ಕಲೆ :**

ಕರ್ನಾಟಕದ ಹಲವು ಬುಡಕಟ್ಟುಗಳಲ್ಲಿ ಶ್ರೀಮಂತ ಸಮೃದ್ಧ ಕಲೆ ಇರುವುದನ್ನು ಅಧ್ಯಯನಗಳು ಗುರುತಿಸಿವೆ. ಉದಾ : ಗಾವೊಕ್ಕಲು, ಹಾಲಕ್ಕಿ ಒಕ್ಕಲಿಗರು, ವಿಶೇಷವಾಗಿ ಮಹಿಳೆಯರು ಮನೆಯ ಗೋಡೆಗಳ ಮೇಲೆ ವಿಶೇಷವಾದ ಚಿತ್ರಗಳನ್ನು ಬಿಡಿಸಿರುತ್ತಾರೆ. ಪ್ರಕೃತಿಯ ಮಧ್ಯೆಯೇ ಬದುಕುವ ಇವರು ಸೂರ್ಯ, ಚಂದ್ರ, ನೀರು, ಹಾವು, ಗಿಡ, ಮರ, ಬಳ್ಳಿ ಇವನ್ನೆಲ್ಲಾ ರೇಖೆಗಳ ಮೂಲಕ ಬಿಡಿಸಿ ಗುಡಿಸಲ ಗೋಡೆಗಳನ್ನು ಅಂದವಾಗಿಸುತ್ತಾರೆ. ಮದುವೆ ಇತ್ಯಾದಿ ಶುಭಕಾರ್ಯಗಳಲ್ಲೂ ಹಸೆ ಬರೆದು ಅಲಂಕಾರಿಕವಾಗಿ ತಮ್ಮ ಕಲಾನಿಪುಣತೆಯನ್ನು ಅಭಿವ್ಯಕ್ತಿ ಮಾಡುತ್ತಾರೆ. ಆದರೆ ಈ ಚಿತ್ರಕಲೆ ಮ್ಯಾಸನಾಯಕರ ಮಹಿಳೆಯರಲ್ಲಿ ಇಲ್ಲ. ಕಲೆಗೆ ಪೂರಕವಾಗಿ ಬಳಕೆಯಾಗುವ ಸಾಮಗ್ರಿಯೆಂದರೆ ಅನುಭವ. ಈ ಅನುಭವ ಕಾಡನ್ನೇ ನೆಲೆಯನ್ನಾಗಿ ಮಾಡಿಕೊಂಡಿದ್ದ ಮ್ಯಾಸಬೇಡ ಮಹಿಳೆಯರಿಗೂ ಇರಲೇ ಬೇಕು. ಆದರೆ ಇದರೊಂದಿಗೆ ಬೇಕಾಗುವ ಇತರ ಪರಿಕರ ಮೂಲತಃ ಚಿತ್ರಕಲೆಯ ಅನಾವರಣಕ್ಕೆ ಬೇಕಾದ ಭಿತ್ತಿಯೇ ಇವರಿಗಿಲ್ಲ. ಪಶುಪಾಲನೆ ಮಾಡುತ್ತ ಒಂದೆಡೆಯಿಂದ ಮತ್ತೊಂದೆಡೆಗೆ ತಮ್ಮ ನೆಲೆಯನ್ನು ಬದಲಾಯಿಸುತ್ತಲೇ ಇದ್ದ ಇವರು ವಾಸಮಾಡುತ್ತಿದ್ದುದೇ ಸೊಪ್ಪು-ಹುಲ್ಲಿನಿಂದ ತಯಾರಿಸಿದ ನೆಲ ಗುಡಿಸಿಲುಗಳಲ್ಲಿ. ಅನಂತರ ಬಂದಿದ್ದು ಗೋಡೆಯ ಮೇಲೆ ಹೊದಿಸಿದ ಹುಲ್ಲಿನ ಗುಡಿಸಲುಗಳು. ಹೀಗಾಗಿ ಇವರಲ್ಲಿ ಚಿತ್ರಕಲೆ ರೂಢಿಯಾಗಿರಲಿಕ್ಕಿಲ್ಲ ಎನಿಸುತ್ತದೆ. ಇಂದಿಗೂ ಸಹ ಈ ಸಮುದಾಯದ ಸಂಪ್ರದಾಯಸ್ಥರ ಮನೆಯ ಮುಂದೆ ರಂಗೋಲಿ ಸಹ ಹಾಕುವುದಿಲ್ಲ. ಈ ಕಲೆ ಬಹುಶಃ ಇವರಿಗೆ ತಿಳಿಯದ್ದರಿಂದಲೋ ಅಥವಾ ವೈದಿಕರು ಅನುಸರಿಸುವ ಈ ಪದ್ಧತಿಯನ್ನು ತಾವು ಮಾಡಬಾರದೆಂದೋ, ಅಥವಾ ಮಾಟ ಮಂತ್ರ ಮಾಡುವಾಗ ಬರೆಯುವ ರಂಗವನ್ನು ಮನೆಯ ಮುಂದೆ ಬರೆಯಬಾರದು ಎಂಬ ಆಲೋಚನೆ ಕಾರಣವಾಗಿಯೋ ಇದಕ್ಕೆ ನಿಷೇಧವಿದೆ. ಬಾಗಿಲಿಗೆ ಅರಿಷಿಣ, ಕುಂಕುಮ ಸಹ ಹಚ್ಚುವುದು ತಮಗೆ ನಿಷೇಧ ಎನ್ನುತ್ತಾರೆ. ಅದರೆ ಒಲೆಯ ಬೂದಿಯನ್ನು ಒದ್ದೆ ಮಾಡಿ ಮೂರು ಬೆರಳಿಗೆ ಹಚ್ಚಿಕೊಂಡು ಹೊಸಲಿಗೆ ವಿಭೂತಿ ಎಂದು ಹಚ್ಚುತ್ತಾರೆ. ಹಾಗೆಂದಾಕ್ಷಣ ಇವರಿಗೆ ಕಲೆಯ ಬಗ್ಗೆ ಆಸಕ್ತಿ ಇಲುವೆಂದಲ್ಲ. ಏಕೆಂದರೆ ಈ ಮ್ಯಾಸಬೇಡ ಮಹಿಳೆಯರು ಹಚ್ಚೆಯ (ತುಂಬೆಯ ಸೊಪ್ಪಿನ ರಸ ತೆಗೆದು ಅರಿಷಿಣ ಪುಡಿ ಸೇರಿಸಿ ಇದನ್ನು ಒಂದು ತೆಳುವಾದ ಬಟ್ಟೆಗೆ ಲೇಪಿಸಿ ಅದನ್ನು ಹರಳೆಣ್ಣೆ ದೀಪಕ್ಕೆ ಹಿಡಿದು ಕಾಯಿಸುವುದು. ನಂತರ ಇದಕ್ಕೆ ಎದೆಹಾಲು ಬೆರೆಸಿ ರಸ ಮಾಡಿ ಮಣ್ಣಿನ ಚಿಕ್ಕ ಕುಡಿಕೆಯಲ್ಲಿಟ್ಟು ಬಟ್ಟೆ ಮುಚ್ಚಿ ಕಟ್ಟಿಡುತ್ತಾರೆ. ಮೂರು ಸೂಜಿ ಸೇರಿಸಿ ಬಿಗಿಯಾಗಿ ಕಟ್ಟಿ ರಸದಲ್ಲಿ ಬಿಡಿಸಿದ ಚಿತ್ರದ ಮೇಲೆ ಚುಚ್ಚುತ್ತಾ ಬರುತ್ತಾರೆ. ಚುಚ್ಚಿದ ಜಾಗ ಸ್ವಲ್ಪ ಊದಿಕೊಂಡು ನೋವಾಗುತ್ತದೆ. ಎರಡು ದಿನದಲ್ಲಿ ಮಾಯುತ್ತದೆ. ಈ ಭಾಗ

ಹಸುರಾಗಿ ಶಾಶ್ವತವಾಗಿ ಉಳಿಯುತ್ತದೆ. ಕಾಡಿನ ಕಲೆಯಾದ ಇದು ಇತ್ತೀಚೆಗೆ ನಾಡಿನ ಕಲೆಯಾಗುತ್ತದೆ.) ಬಗ್ಗೆ ವಿಶೇಷವಾದ ಪ್ರೀತಿಯನ್ನು ಹೊಂದಿದ್ದು ಅದನ್ನು ಹಣೆ, ಗಲ್ಲ, ಕೈಮೇಲೆ ಹಾಕಿಸಿಕೊಳ್ಳುತ್ತಿದ್ದರು. ಇದು ಶುಭ ಸಂಕೇತವೂ ಹೌದು, ಹಾಗೆಯೇ ತಮ್ಮ ಸೌಂದರ್ಯವನ್ನು ಹೆಚ್ಚು ಮಾಡುವ ಒಂದು ವಿಧಾನವೂ ಹೌದು. ಕೈಮೇಲೆ ಹಚ್ಚೆಯ ಗಿಂಡಿಯನ್ನು ಹಾಕಿಸಿಕೊಳ್ಳುವುದು ಇವರಲ್ಲಿ ಕಡ್ಡಾಯವಾಗಿತ್ತು. 'ಹಚ್ಚೆ ಗಿಂಡಿ ಇಲ್ಲೋರು ಗಂಡನ ಕೈಗೆ ನೀರು ಕೊಡಬಾರ್ದು' ಎಂಬ ನಂಬಿಕೆ ಇವರಲ್ಲಿದೆ. ಮುಂಗೈ ಹೆಬ್ಬೆರಳಿನ ಮೇಲ್ಭಾಗದಲ್ಲಿ ಮೂರು ಹಚ್ಚೆಯ ಚುಕ್ಕೆ ಇರಿಸಿಕೊಂಡು ಇದನ್ನು 'ಒಲೆಗುಂಡು' ಎಂದು ಕರೆಯುತ್ತಾರೆ. ಇದನ್ನು ಹಾಕಿಸಿಕೊಂಡರೆ ಅಡಿಗೆ ರುಚಿಯಾಗುತ್ತೆ ಎಂಬುದು ಅವರ ನಂಬಿಕೆ. ಇದರ ಬಗ್ಗೆ ಪ್ರೀತಿ, ಆಸೆ ಇದ್ದರೂ ಇದನ್ನು ಹಾಕುವವರು ಈ ಮಹಿಳೆಯರಲ್ಲ. ಕೊರಚರು ಮತ್ತು ಕಿಳ್ಳೇಕ್ಯಾತರ ಹೆಂಗಸರು ಇದನ್ನು ಹಾಕುತ್ತಾರೆ.

**ಸಾಹಿತ್ಯ – ಸಂಗೀತ :**

ಮ್ಯಾಸಬೇಡರಲ್ಲಿ ಕಾಡುಗೊಲ್ಲರಲ್ಲಿರುವಂತೆ ಸಮೃದ್ಧವಾದ ಸಾಹಿತ್ಯವಿಲ್ಲ ಎಂಬುದು ಇವೆರಡನ್ನೂ ಹೋಲಿಸಿ ನುಡಿಯುವ ಅಧ್ಯಯನಕಾರರ ಅಭಿಪ್ರಾಯವಾಗಿದೆ. ಆದರೆ ಸಮುದಾಯದ ಒಳಹೊಕ್ಕು ನೋಡಿದಾಗ ಸಾಕಷ್ಟು ಸಾಹಿತ್ಯವನ್ನು ತಮ್ಮ ಸೃಜನಶೀಲ ಗುಣದಿಂದ ಕಟ್ಟಿ ಸ್ಮರಣೆಯಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಈ ಜನಪದರ ಪ್ರತಿಯೊಬ್ಬ ನಾಯಕ, ನಾಯಕಿಗೆ ಸಂಬಂಧಿಸಿದ ಕಥನಗಳಿವೆ. ಶುಭಕಾರ್ಯಗಳಂತೂ ಸೋಬಾನೆ ಪದಗಳಿಲ್ಲದೆ ನಡೆಯುವುದೇ ಇಲ್ಲ. ಸಸಿ ನೆಡುವ, ಬಿತ್ತುವ, ಕೊಯ್ಲು ಮಾಡುವ, ತಿಂಗಳಮಾಮನ ಪದಗಳು, ಗಂಗೆ-ಗೌರಿ ಪದಗಳು, ಎತ್ತುಗಳ ಮೇಲೆ ಹಾಡುವ ಪದಗಳು ಜೊತೆಗೆ ಕಥೆಗಳು ಒಗಟು, ಗಾದೆ ಹೀಗೆ ಸಮೃದ್ಧವಾದ ಸಾಹಿತ್ಯ ಭಂಡಾರವೇ ಇಲ್ಲಿದೆ. ಪುರುಷರೂ ಕೂಡ ಸಮುದಾಯದ ಸಾಂಸ್ಕೃತಿಕ ನಾಯಕರು, ನಾಯಕಿಯರನ್ನು ಕುರಿತು ಹಾಡುತ್ತಾರೆ.

ಪದ್ಯ ಕಥನಗಳಲ್ಲಿ ದಾಖಲಾಗದ ಎಷ್ಟೋ ಸಮುದಾಯಕ್ಕೆ ಸಂಬಂಧಿಸಿದ ಕಥೆ, ಇತಿಹಾಸವನ್ನು ಪುರುಷರು ಗದ್ಯದಲ್ಲಿ ಹೇಳುತ್ತಾರೆ. ಕ್ಷೇತ್ರಕಾರ್ಯದಲ್ಲಿ ನನ್ನ ಗಮನಕ್ಕೆ ಬಂದಿರುವ ಸಂಗತಿಯಿದು. ಎತ್ತುಗಳನ್ನು ಕುರಿತು ಕೋಲ ಪದ ಕಟ್ಟಿ ತೆಲುಗಿನಲ್ಲಿ ಹಾಡುತ್ತಾರೆ. ಇಲ್ಲಿರುವ ಇನ್ನೊಂದು ವಿಶೇಷವೆಂದರೆ ಇವರ ಮೂಲಭಾಷೆ ತೆಲುಗು. ಪರಿಸರದ ಭಾಷೆ ಕನ್ನಡ. ಹೀಗಾಗಿ ಒಂದು ಬಗೆಯ ಗೊಂದಲವೂ ಸಾಹಿತ್ಯ ಸೃಷ್ಟಿಯಲ್ಲಿ ತಲೆದೋರಿರಬಹುದು. ಕಥನಗಳನ್ನೆಲ್ಲಾ ಕನ್ನಡದಲ್ಲೇ ಹಾಡುತ್ತಾರೆ. ಜಗಲೂರಜ್ಜನ ಕಾವ್ಯ, ಪೆದೋಬಳೇಶನ ಕಾವ್ಯವನ್ನು ತೆಲುಗಿನಲ್ಲಿ ಹಾಡುತ್ತಾರೆ. ಪರಿಸರದ ಭಾಷೆಯನ್ನು ಕಲಿತು ಅದರಲ್ಲೇ ಕಥನಗಳನ್ನು ಕಟ್ಟಿ ಹಾಡುವ ಇವರಲ್ಲಿ ಕಲಾಸೃಷ್ಟಿಗೆ ಕಾರಣವಾಗುವ ಸೃಜನಶೀಲತೆ ಸಾಕಷ್ಟಿದೆ ಎಂದೇ ಹೇಳಬಹುದು. ಅಷ್ಟೇ ಅಲ್ಲದೆ ಈ ಕಥನಗಳನ್ನು ಹಾಡುವ ಧಾಟಿಯೂ ವೈವಿಧ್ಯಮಯವಾದುದು, (ಶಿಷ್ಟರಲ್ಲಿ ಶಾಸ್ತ್ರೀಯವಾಗಿ ರಾಗ, ತಾಳ ಎಂದು ಕರೆದರೆ, ಇವರು 'ದನಿ' ಎಂದು ಕರೆಯುತ್ತಾರೆ) ಒಂದು ಕಥನದಲ್ಲಿ ಕನಿಷ್ಠ ಆರೇಳು ಧ್ವನಿಗಳನ್ನು ಹಾಕಿಕೊಳ್ಳುತ್ತಾರೆ. ಹಿಮ್ಮೇಳ, ಮುಮ್ಮೇಳ ಮಾಡಿಕೊಂಡು ಹಾಡುವ ಮಹಿಳೆಯರ ಮೇಳ (ಗುಂಪು) ರಾತ್ರಿಯಿಡೀ ದಣಿವಿಲ್ಲದೆ ಹಾಡುತ್ತಾರೆ. ಈ ಸಾಹಿತ್ಯದ ಮೂಲಕ

ತಮ್ಮ ಬುಡಕಟ್ಟಿನ ಇತಿಹಾಸವನ್ನೂ, ಸಂಸ್ಕೃತಿಯನ್ನೂ ದಾಖಲೆಯಲ್ಲಿಟ್ಟುಕೊಳ್ಳುತ್ತಾ ಬಂದಿದ್ದಾರೆ. ತನ್ನ ಸಮುದಾಯದ ಬದುಕಿನ ವಿವರಗಳನ್ನು ಕೊಡುವುದರೊಂದಿಗೆ ತಾನು ಬದುಕಿ ಬಾಳಬೇಕಾಗಿರುವ ಇತರ ಸಮುದಾಯಗಳ ಸಾಮಾಜಿಕ ಸ್ಥಿತಿಗತಿಗಳನ್ನು ಹೇಳುತ್ತಲೇ ಒಟ್ಟಾರೆ ತುಂಬಾ ಜವಾಬ್ದಾರಿಯಿಂದ ಒಟ್ಟು ಒಂದು ಸಮಾಜದ ಸ್ತರವಿನ್ಯಾಸವನ್ನು ಕಟ್ಟಿಕೊಡುತ್ತಾರೆ. ಇವುಗಳ ಓದು ಅಥವಾ ಕೇಳಿಸಿಕೊಳ್ಳುವುದರ ಮೂಲಕ ಒಂದು ಸಾಮಾಜಿಕ ಅಧ್ಯಯನ ಮಾಡಲು ಇಂದು ಸಾಧ್ಯವಾಗುತ್ತದೆಂಬುದೇ ಈ ಸಾಹಿತ್ಯದ ವಿಶೇಷ.

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಗಾದೆ ಪ್ರಮುಖವಾದುದು. ಮಾತಿನ ನಡುವೆಯೇ ಸಹಜವಾದ ಅನುಭವದ ಮೂಸೆಯಲ್ಲಿ ಅರಳುತ್ತದೆ. ಮ್ಯಾಸಬೇಡರ ಭಾಷೆ ತೆಲಗು ಆಗಿರುಹುದರಿಂದ ಗಾದೆಗಳನ್ನು ತೆಲುಗಿನಲ್ಲಿ ಕಟ್ಟಿಕೊಂಡಿದ್ದಾರೆ. ಉದಾ: 'ಕುಂಟದಿ ಕೂಡಿ ಪೆಟ್ಟೆ, ಗುಡ್ಡಿದಿ ಪಾವಕಟ್ಟೆ'. ಅಂದರೇ ಕುಂಟಿ ಕೂಡಿಟ್ಟರೆ, ಕುರುಡಿ ಹಾಳುಮಾಡಿದಳು ಎಂದು ಅರ್ಥ. 'ಗಂಜಿಕೆ ಲೇಕವುಂಟೆ, ಲಂಜಿಕೆ ಬುಲಾಕು' ಅಂದರೆ ಗಂಜಿಗೆ ಗತಿ ಇಲ್ಲದಿದ್ದರೂ ತಮ್ಮ ವೇಶ್ಯೆಗೆ ಬುಲಾಕು ಮಾಡಿಸಿಕೊಟ್ಟ ಎಂಬ ಅರ್ಥ. 'ಕೂಲಿ ಚೇಸ್ತೆ ಕುಂಡಗಾಲೆ – ಲ್ಯಾಕ ಪೋತೆ ಎಂಡಗಾಲೆ' ಕೂಲಿ ಮಾಡಿದರೆ ಮನೆಯಲ್ಲಿ ಮಡಕೆ ಕಾಯುತ್ತದೆ ಇಲ್ಲವಾದರೆ ಬಿಸಿಲಿಗೆ ಒಣಗುವುದೇ ಗತಿ ಎಂದರ್ಥ. ಹೀಗೆ ಅನೇಕ ಗಾದೆಗಳನ್ನು ಇಲ್ಲಿ ಕಾಣಬಹುದು. ಇಷ್ಟಲ್ಲದೆ ಒಡಪುಗಳ ಸಂಗ್ರಹವೂ ಇಲ್ಲಿ ಸಾಕಷ್ಟಿದೆ. ಉದಾಹರಣೆಗೆ "ಬಳ್ಳಾರ್ಲ ಬಾವಿ ಸೂಡು, ಬಾವಿಕೆ ನೀಳ್ಳೂಕೊಚ್ಚೆ ಆಟದಿ ಸೂಡು, ಆಟದಿ ಸೇತಲಾನೆ ಕಡವು ಸೋಡು, ಕಡವು ಮಿಂದ ಉನ್ನ ಚೇಯಿಸೂಡು, ಚೇತ ಮೀದ ಪಚ್ಚೆಸೂಡು, ಪಚ್ಚೆಸೂಸೆ ನನ್ನ ಮೆಚ್ಚಿ ಒಚ್ಚಿನಾರು" – ಬೋರಯ್ಯ. ಇದರ ಅರ್ಥ ಬಳ್ಳಾರಿಯಲ್ಲಿರುವ ಬಾವಿ ನೋಡು, ಬಾವಿಗೆ ಬರುವ ಹೆಣ್ಣು ನೋಡು, ಆಕೆಯ ಕೈಯಲ್ಲಿರುವ ಬಿಂದಿಗೆ ನೋಡು, ಬಿಂದಿಗೆ ಮೇಲಿರುವ ಕೈ ನೋಡು, ಕೈಮೇಲಿನ ಹಚ್ಚೆ ನೋಡು, ಹಚ್ಚೆ ನೋಡಿ ನನ್ನ ಮೆಚ್ಚಿ ಬಂದವರು ಎಂದು ತನ್ನ ಗಂಡನ ಹೆಸರನ್ನು ಕಾವ್ಯಮಯವಾಗಿ ಹೇಳುವ ಜಾಣೆಯರು ಇವರು.

ಇವೆಲ್ಲಾ ಇಲ್ಲಿರುವ ಸಾಹಿತ್ಯದ ಸಮೃದ್ಧಿಯನ್ನು ಸೂಚಿಸುತ್ತದೆ.

**ಕೋಲಾಟ :**

ಪ್ರದರ್ಶನ ಕಲೆಗಳಲ್ಲಿ ಒಂದಾಗಿರುವ ಕೋಲಾಟವು ಮ್ಯಾಸಬೇಡರಲ್ಲಿ ರೂಢಿಯಲ್ಲಿದೆ. ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ, ಸಾಂಸ್ಕೃತಿಕ ನಾಯಕನ ಜಾತ್ರೆ ಇತರೆ ಸಂದರ್ಭಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ ಪದಗಳನ್ನು ಹಾಡುತ್ತ ಕೋಲು ಹಾಕುತ್ತಾರೆ. ಅಲೆಮಾರಿ ಪಶುಪಾಲಕ ಸಮುದಾಯದವರಾದ ಇವರು ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ ಬೇಸರ ಕಳೆಯಲು ಕೋಲಾಟವನ್ನು ರೂಢಿಸಿಕೊಂಡಿರುವ ಸಾಧ್ಯತೆಗಳಿವೆ. ಇಲ್ಲಿ ಸಾಂಸ್ಕೃತಿಕ ನಾಯಕರಿಗೆ ಸಂಬಂಧಿಸಿದ, ಎತ್ತುಗಳ ಮೇಲಾಟಕ್ಕೆ ಸಂಬಂಧಿಸಿದ ಹಾಡುಗಳೇ ಹೆಚ್ಚು. ಮತ್ತೊಂದು ವಿಶೇಷವೆಂದರೆ ತಮ್ಮ ಪ್ರೇಯಸಿಯನ್ನು ಕುರಿತು ಕಟ್ಟಿ ಹಾಡುವ ಕೋಲಾಟದ ಪದಗಳು. ಸಮುದಾಯದ ಚಿಕ್ಕ ಹುಡುಗಿಯರಿಗೂ ಕೋಲಾಟ ಕಲಿಸಿ ಆಡಿಸುವ ವಿಧಾನಗಳಿವೆ.

**ಜಾತ್ರೆಯ ಕುಣಿತ:**

ಸಾಂಸ್ಕೃತಿಕ ನಾಯಕನ ಆರಾಧನೆ ನಿಮಿತ್ತ ಏರ್ಪಡಿಸುವ ಜಾತ್ರೆಗಳಲ್ಲಿ ಪುರುಷರು ಎತ್ತುಗಳ ಸುತ್ತ ನವಿಲು ಗರಿ ಮತ್ತು ಬೆಳ್ಳಿಯ ಹಿಡಿಯಿರುವ ಚವರಿ, ಕೋಲುಗಳನ್ನು ಹಿಡಿದು ಲಯಬದ್ದವಾಗಿ ಉರುಮೆ ವಾದ್ಯದ ಶಬ್ದದ ಗತಿಗೆ ತಕ್ಕಂತೆ ಲಯಬದ್ದವಾಗಿ ಕುಣಿಯುತ್ತಾರ್ರೆ. ಗುಂಪಾಗಿ ಒಂದೆಡೆ ನಿಂತು ಕುಣಿಯುತ್ತಾರೆ. ಭಂಡಾರವನ್ನು ಎತ್ತುಗಳ ಮೇಲೆ ಎರಚುತ್ತಲೂ ಬಸವಂತಗಳಾಡುವುದು ಎಂದು ಸುತ್ತಲೂ ಕುಣಿಯುತ್ತಾರೆ.

**ಬಯಲಾಟ :**

ಬಹುಶಃ ಕಾಡಿನ ನೆಲೆಯಿಂದ ನಿಶ್ಚಿತವಾಗಿ ಒಂದೆಡೆ ನೆಲೆ ನಿಂತು ಹಟ್ಟಿ, ಗ್ರಾಮ ಎಂದು ಬದುಕುವ ಸಂದರ್ಭ ಪ್ರಾರಂಭವಾದಾಗ ಕಲಿತಿರುವ ಕಲಾಪ್ರಕಾರವಿದು ಎನಿಸುತ್ತದೆ. ಅಲ್ಲಿ ಬಳಕೆಯಾಗುವ ತಾಳ, ಹಾರ್ಮೋನಿಯಂ, ಮದ್ದಲೆ ಇವೆಲ್ಲಾ ಶಿಷ್ಟ ಸಂಸ್ಕೃತಿಯಲ್ಲಿರುವಂತಹವು. ಇದು ಬಹುಶಃ ತಾನು ನೆಲೆಗೊಂಡಿರುವ ಅರೆ ಶಿಷ್ಟ ಸಂಸ್ಕೃತಿಯಿಂದ ರೂಢಿಸಿಕೊಂಡ ಕಲೆ ಎನಿಸುತ್ತದೆ. ಆದರೆ ಇಂದು ಮಧ್ಯ ಕರ್ನಾಟಕದ ಹಳ್ಳಿಗಳಲ್ಲಿ ಬಯಲಾಟ ಆಡುವವರೆಂದರೆ ನಾಯಕರೇ. ಶಿಕ್ಷಣ ಇಲ್ಲದವರೂ ಕೂಡ ಕೇಳಿ ಕಲಿತು ಸಂಭಾಷಣೆಯನ್ನು ಒಪ್ಪವಾಗಿ ಒಪ್ಪಿಸುವಂತಹ ಪ್ರವೀಣರು. ಈಗ ಈ ಪ್ರಾಂತ್ಯದಲ್ಲಿ ಜಾತ್ರೆಗಳ ಸಂದರ್ಭದಲ್ಲಿ ನಾಯಕರದು ಬಯಲಾಟ. ಅಷ್ಟೇ ಬಹು ಸಂಖ್ಯಾತರಾದ ಈ ಸೀಮೆಯ ಲಿಂಗಾಯತರದು ಸಂಗೀತ ನಾಟಕ ಎಂಬ ಅಭಿಪ್ರಾಯವಿದೆ. ಸಂಗೀತ ನಾಟಕ ಹಣ ಕೊಟ್ಟು ನೋಡಬೇಕು. ಬಯಲು ನಾಟಕಕ್ಕೆ ಇದರ ಅಗತ್ಯವಿಲ್ಲ ಮನೆಯಿಂದ ತಾವೇ ತಂದ ಚಾಪೆ ಹಾಸಿ ರಗ್ಗು ಹೊದ್ದು ಕುಳಿತುಬಿಟ್ಟರೆ ಆಯಿತು.

**ಬೇಟೆ :**

ಇತಿಹಾಸ ತಜ್ಞರು ಮಾನವನ ಬದುಕಿನ ವಿಕಾಸವನ್ನು ಮೂರು ಹಂತಗಳಲ್ಲಿ ಗುರುತಿಸುತ್ತಾರೆ. ಆಹಾರ ಸಂಗ್ರಹಣೆಯ ಹಂತ ಆಹಾರ ಉತ್ಪಾದನೆಯ ಹಂತ, ಇವೆರಡರ ಮಧ್ಯೆ ಇದ್ದದ್ದು ಪಶುಪಾಲನೆಯ ಹಂತ. ಉತ್ಪಾದನೆಯ ಹಂತ ಎಂದಾಗ ಅಲ್ಲಾಗಲೇ ಕೃಷಿಯನ್ನು ಕಲಿತಿದ್ದ ಮಾನವ. ಒಂದರ ನಂತರ ಮತ್ತೊಂದು ಎಂದು ವಿಭಾಗಿಸಿದ್ದಾಗ್ಯೂ ಒಂದನೆಯ ಹಂತ ಎರಡು ಮೂರನೆಯ ಹಂತದಲ್ಲೂ ಸ್ವಲ್ಪ ಮಟ್ಟಿಗಾದರೂ ಜೊತೆಗೂಡಿಯೇ ಇರುತ್ತದೆ. ಕೊನೆಗೆ ಆಚರಣೆಯ ರೂಪದಲ್ಲಿಯಾದರೂ ಉಳಿದಿರುತ್ತದೆ. ಇದು ಸಮುದಾಯವೊಂದರ ಯಾವುದೇ ಸಾಂಸ್ಕೃತಿಕ ವಿವರಕ್ಕೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಆಹಾರದ ಕ್ರಮ ಬದಲಾದರೆ, ಹಳೆಯದು ಹಬ್ಬ ಹರಿದಿನಗಳಲ್ಲಿ ಒಂದು ಆಚರಣೆಯ ನಿಮಿತ್ತವಾಗಿಯಾದರೂ ಮರುಬಳಕೆಯಾಗುತ್ತದೆ. ಉಡುಪು ತೊಡಪುಗಳಲ್ಲಿ ಎಷ್ಟೇ ಆಧುನಿಕತೆಯನ್ನು ಮನುಷ್ಯ ರೂಢಿಸಿಕೊಂಡಿದ್ದರೂ ಮೂಲ ಒಂದು ಆಚರಣೆಯಾಗಿ ಹಬ್ಬ, ಹರಿದಿನ, ವಿವಾಹ ಇತರ ಕಾರ್ಯಗಳಲ್ಲಿ ಹಳೆಯ ರೂಪದ ಧಿರಿಸುಗಳು ಬಳಸಲ್ಪಡುತ್ತದೆ.



ಮ್ಯಾಸಬೇಡರು ಬೇಟೆಗೆ ಹೊರಟಿರುವ ದೃಶ್ಯ

ಮೂಲದಲ್ಲಿ ಬೇಟೆಗಾರರಾಗಿದ್ದ ಮ್ಯಾಸಬೇಡರು ಅರಸರ ಪಡೆಗಳಲ್ಲಿ ಮುಂದಾಳುಗಳಾಗಿ ಸೇವೆ ಸಲ್ಲಿಸಿ, ಪಾಳೆಯ ಪಟ್ಟುಗಳನ್ನು ಕಟ್ಟಿ ಆಳಿದ ನಂತರ ಇವರ ನಾಯಕತ್ವ ಗುಣವೇ ಕಾರಣವಾಗಿ 'ನಾಯಕ'ರೆನಿಸಿದರು. ಬೇಟೆಯ ಹಂತದಿಂದ ಪಶುಪಾಲನೆಯ ಕಡೆ ಪಲ್ಲಟಗೊಂಡು ಅಲ್ಲಿಂದ ಕೃಷಿ, ಇತರೆ ಉದ್ಯೋಗದ ಕಡೆ ಪಲ್ಲಟಗೊಂಡಿದ್ದರೂ ಮೂಲದ ಬದುಕಿನ ವಿಧಾನ ಒಂದು 'ಆಚರಣೆಯಾಗಿ' ಈ ಸಾಹಸೀ ಕಾಡು ಜನರಲ್ಲಿ ಉಳಿದುಕೊಂಡು ಬಂದಿದೆ. ವಿಶೇಷವೆಂದರೆ ವಾರ್ಷಿಕ ಆಚರಣೆಯಾದ ಬೇಟೆಗೆ ಸಮುದಾಯದ ಸಾಮಾನ್ಯವಾಗಿ ಯುವಕರು. ಜೊತೆಗೆ ಒಂದಿಷ್ಟು ಹಿರಿಯರು ಹೊರಟಾಗ ಹಂದಿ ಬೇಟೆಗೆ ಹೋಗುವುದು ಎನ್ನುತ್ತಾರೆ. ಏಕೆಂದರೆ ವಿರಳವಾಗಿರುವ ಕಾಡಿನಲ್ಲಿ ಇವರಿಗೆ ಸಿಗುವ ಬೇಟೆಯಾದರೂ ಯಾವುದು? ಕಾಡುಹಂದಿಬಿಟ್ಟರೆ ಬೇರೆ ಇಲ್ಲ. ಸಂರಕ್ಷಿತ ಪವಿತ್ರ ಅರಣ್ಯಗಳಲ್ಲಿ ಬೇಟೆಯೇ ನಿಷಿದ್ಧ. ಹಾಗಾಗಿ ಊರ ಹೊಲಗಳ ಮತ್ತು ಕಾಡಿನ ಮಧ್ಯೆ ಇರುವ ಅಂಚಿನಲ್ಲಿಯೇ ಈ ಬೇಟೆಯ ಪಾರುಪತ್ಯ ಜರುಗಬೇಕು. ಬೇಟೆಗೆ ಹೋಗುವ ದಿನವನ್ನು ಮೊದಲೇ ಎಲ್ಲರೂ ಕಲೆತು ನಿಶ್ಚಯಿಸುತ್ತಾರೆ. ಕೆಲವು ಹಟ್ಟಿ, ಹಳ್ಳಿಗಳಲ್ಲಿ ಯುಗಾದಿ ಕಳೆದ ಮೂರನೆಯ ದಿನ ಹೋಗುತ್ತಾರೆ. ಇದಾಗಲೇ ಪೂರ್ವನಿಶ್ಚಿತ. ಎಲ್ಲರೂ ಒಂದೆಡೆ ಕಲೆತು ಮನೆಯ ಮೂಲೆಯಲ್ಲಿರುವ ಭರ್ಚಿ, ಈಟಿ, ಕತ್ತಿ, ಕುಡುಗೋಲು, ಕೊಡಲಿ, ಬಡಿಗೆ ಹಿಡಿದು ಊರ ಬುಡದ ಕಲ್ಲಿನ ಬಳಿ ಸೇರುತ್ತಾರೆ. ಈ ಆಯುಧಗಳನ್ನು ಕೈಯಲ್ಲಿ ಹಿಡಿದು ಕುಣಿಯುತ್ತಾ, ಕೇಕೆ ಹಾಕುತ್ತಾ ತಮ್ಮಟೆ ಸದ್ದಿನ ನಡುವೆ ಈ ಬೇಡ ಪಡೆ ಬುಡದ ಕಲ್ಲಿನ ಬಳಿ ಬರುತ್ತದೆ. ಅಲ್ಲಿ ಪೂಜೆ ಸಲ್ಲಿಸಿ ಕಾಡಿನ ಕಡೆ ನಡೆಯುತ್ತಾರೆ. ಬೇಟೆ ಸಿಗುವವರೆಗೆ ಊರಿಗೆ ಹಿಂದಿರುಗುವಂತಿಲ್ಲ. ಇತ್ತೀಚೆಗೆ ಒಂದು 'ಹಂದಿ', 'ನರಿ', ಮೊಲ ಸಿಗುವುದೂ ಕಷ್ಟವೇ. ಒಂದೆರಡು ದಿನ ಅಲ್ಲಿಯೇ ಕಳೆಯಬೇಕಾಗಿ ಬಂದು ಊರಿನಿಂದ ಊಟ ಪೂರೈಸುವುದೂ ಉಂಟು. ಬೇಟೆ ಸಿಕ್ಕ ನಂತರ ಊರಿಗೆ ಹಿಂದಿರುಗುತ್ತಾರೆ. ಆಗಲೂ ಮತ್ತೆ ಅದೇ ಸಂಭ್ರಮ, ವಿಜಯೋತ್ಸವದಿಂದ ಬರುವ ಇವರಿಗೆ ಮಹಿಳೆಯರ ಆರತಿಯ ಸ್ವಾಗತ, ಬುಡದ ಕಲ್ಲಿನ ಬಳಿ ಬೇಟೆಯಾಡಿಕೊಂಡು ಬಂದ ಪ್ರಾಣಿಯ ಕಾಲಿನ ಉಗುರು, ಬಾಲ, ಕಿವಿಯನ್ನು ಕತ್ತರಿಸಿ 'ಹುಲುಸು' ಎಂದು ಒಂದುಗುಂಡಿ ತೋಡಿ ಹೂಳುತ್ತಾರೆ. ಆಗ ಯಾರಾದರೂ ಪರ ಊರಿನವರು ಹೊಂಚು ಹಾಕಿ ಕಾಯ್ದಿದ್ದು

ಈ ಹುಲಸನ್ನು ತಮ್ಮ ಊರಿಗೆ ಕದ್ದೊಯ್ಯುವುದೂ ಉಂಟು. ಆಗ ಊರ, ಹಟ್ಟಿಯ ಸಮೃದ್ಧಿ ತಪ್ಪಿ ಹೋಯಿತು. ಅಶುಭ ಎಂಬ ಭಾವನೆ ಇದೆ. ಹಾಗಾಗಿ ಯಾರೂ ನುಸುಳದಂತೆ ಎಚ್ಚರ ವಹಿಸುತ್ತಾರೆ. ನಂತರ ಊರಲ್ಲೆಲ್ಲಾ ತಂದ ಬೇಟೆಯನ್ನು ಮೆರವಣಿಗೆ ಮಾಡಿ ಅದನ್ನು ಆಯಗಾರರಿಗೆ ಕೊಡಲಾಗುತ್ತದೆ. ಇಲ್ಲಿ ತಿನ್ನುವ ಆಸೆಗಿಂತ ಕಾಡಿಗೆ ಹೋಗಿ ಬೇಟೆಯಾಡಬೇಕೆಂಬ ಹುಮ್ಮಸ್ಸೇ ಹೆಚ್ಚು. ಈ ಹುಮ್ಮಸ್ಸಿನ ಹಿಂದೆ ಸಮುದಾಯದ ಮೂಲ ಪ್ರವೃತ್ತಿ ಕೆಲಸ ಮಾಡುತ್ತದೆ. ಹೀಗೆ ಮೂಲತಃ ಇದ್ದ ಬದುಕಿನ ವಿಧಾನವು ಹೊಸ ವ್ಯವಸ್ಥೆಯೊಂದು ಅಲ್ಲಿ ನಿರ್ಮಾಣಗೊಂಡ ನಂತರ ಈ ಹಳೆಯ ವಿಧಾನವನ್ನು ಉಳಿಸಿಕೊಂಡೇ ಕೆಲವು ದಿನ ಸಾಗುತ್ತದೆ. ಮೂಲಸ್ಥಿತಿಯಿಂದ ಬಹು ದೂರ ಸಾಗಿ ಬಂದ ಮೇಲೆ ಆ ಮೂಲ ಕೇವಲ ಸಾಂಪ್ರದಾಯಿಕ ಆಚರಣೆಯ ರೂಪದಲ್ಲಿಯಾದರೂ ಉಳಿದುಕೊಳ್ಳುತ್ತದೆ. ಇಂದು ಬೇರೆ ಬೇರೆ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮ್ಯಾಸಬೇಡರಲ್ಲಿ 'ಬೇಟೆ' ಯುಗಾದಿ ಹಬ್ಬದ ದಿನ ಎಲ್ಲರೂ ಒಟ್ಟಾಗಿ ಹೋಗಿ ಬೇಟೆಯಾಡಿ ಬರುವುದು ಒಂದು ಸಂಪ್ರದಾಯವಾಗಿದೆ ಹಾಗೆಯೇ ಪಶುಸಂಪತ್ತು ಆರಾಧನಾ ಸ್ವರೂಪದಲ್ಲಿ ಸಂರಕ್ಷಿಸಲ್ಪಡುತ್ತಿದ್ದು ನಿರ್ದಿಷ್ಟ ನಾಯಕನ ವಾರ್ಷಿಕ ಹಬ್ಬದಲ್ಲಿ ಆತನ ನೆಲೆ ಇರುವಲ್ಲಿಗೆ ಹೋಗಿ ಅವುಗಳಿಗೆ ಗೌರವ ಅರ್ಪಿಸುವ ಆಚರಣೆಯಾಗಿ ಉಳಿದು ಬಂದಿದೆ.

ಭಾದ್ರಪದ ಮಾಸದಲ್ಲಿ ಮತ್ತು ಪುಷ್ಯ(ಶೂನ್ಯ) ಮಾಸದಲ್ಲಿ ಮ್ಯಾಸ ನಾಯಕರಲ್ಲಿ ಬೇಟೆ ಮಾರಮ್ಮನ ಹಬ್ಬದ ಆಚರಣೆ ಇದೆ. ಪ್ರತಿ ಹಟ್ಟಿ –ಹಳ್ಳಿಯಲ್ಲಿಯೂ ಬೇಡರ ಎಲ್ಲಾ ಮನೆಗಳಲ್ಲಿಯೂ ಕುರಿ, ಮೇಕೆ ಮಾರಮ್ಮನಿಗೆ ಕಡಿದು ಅಡಿಗೆ ಮಾಡಿ ನೆಂಟರಿಷ್ಟರನ್ನು ಕರೆದು ಉಪಚರಿಸಿ ತಾವೂ ತಿಂದು ಸಂಭ್ರಮಿಸುತ್ತಾರೆ. ಇದಕ್ಕೆ 'ಬೇಟೆ ಕಡಿಯುವುದು' ಎಂದೇ ಕರೆಯುತ್ತಾರೆ. ಮೂಲದ ಬೇಟೆಯ ಪ್ರವೃತ್ತಿ ಇಲ್ಲಿ ಆಚರಣೆಯ ಸ್ವರೂಪಕ್ಕೆ ತಿರುಗಿದ್ದರೂ ಇಲ್ಲಿ 'ಬಲಿ' ಎಂಬ ಪದ ಬಳಸದೆ 'ಬೇಟೆ' ಪದ ಬಳಸುವಲ್ಲಿ ಮೂಲದ ಆ ಬೇಟೆಯ ಆಸಕ್ತಿ ಇಲ್ಲಿ ಜೀವಂತಿಕೆ ಪಡೆಯುವುದನ್ನು ಕಾಣಬಹುದು.

**ನಿಷೇಧಗಳು :**

ಪ್ರತಿಯೊಂದು ಬುಡಕಟ್ಟಿಗೂ ತನ್ನದೇ ಆದ ನಂಬಿಕೆಗಳಿದ್ದು ಅವುಗಳಿಗನುಗುಣವಾಗಿ ಆಚರಣೆಗಳಿರುತ್ತವೆ. ಹಾಗೆಯೇ ನಿಷೇಧಗಳೂ ಇರುತ್ತವೆ. ಈಗ ಸಡಿಲವಾಗುತ್ತಿದ್ದರೂ ಹಿಂದೆ ಬುಡಕಟ್ಟು ಈ ವಿಧಿವಿಧಾನಗಳನ್ನು ತುಂಬಾ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿತ್ತು. ವಿಧಿಗಳನ್ನು ಮೀರುವವರನ್ನು ನಿಯಂತ್ರಿಸಲು ಈ ನಿಷೇಧಗಳನ್ನು ಹಾಕಲಾಗುತ್ತಿತ್ತು. ಸಮುದಾಯದ ರಕ್ಷಣೆಯು ಇದರ ಉದ್ದೇಶಗಳಲ್ಲೊಂದಾಗಿತ್ತು. ಒಟ್ಟು ಬುಡಕಟ್ಟಿನ ಸಮಷ್ಟಿಯ ತೀರ್ಮಾನ ಇದರಲ್ಲಿರುತ್ತದೆ. ಸಮುದಾಯವೊಂದರ ಸ್ಥಿರತೆಯನ್ನು ಕಾಪಾಡುವುದರೊಂದಿಗೆ ನೈತಿಕ ಮತ್ತು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಈ ನಿಷೇಧಗಳ ಪಾತ್ರ ಬಹಳ ಮುಖ್ಯವಾದುದು.

ಕೆಲವು ವಸ್ತುಗಳ ಬಳಕೆ, ತಿನ್ನುವ ಆಹಾರ ಪದಾರ್ಥಗಳು ಕೆಲವು ಬುಡಕಟ್ಟುಗಳಲ್ಲಿ ನಿಷೇಧಿಸಲ್ಪಟ್ಟಿರುತ್ತವೆ. ಹಾಗೆಯೇ ನಿರ್ದಿಷ್ಟ ಸ್ಥಳಕ್ಕೆ ತಮ್ಮ ಸಮುದಾಯವರು ಹೋಗಬಾರದು. ನಿರ್ದಿಷ್ಟ ಬೆಡಗಿನೊಂದಿಗೆ ಸಂಬಂಧ ಸಂಪರ್ಕಗಳು ಇರಬಾರದು ಎಂಬ ನಿಷೇಧಗಳೂ ಇರುತ್ತವೆ. ಮ್ಯಾಸಬೇಡರಲ್ಲಿ

ಇಡೀ ಸಮುದಾಯದಾದ್ಯಂತ ಇರುವ ನಿಷೇಧಿತ ಅಂಶಗಳೆಂದರೆ ಕೋಳಿ ತಿನ್ನದಿರುವುದು, ಈಚಲು ಚಾಪೆ, ಪೊರಕೆ ಇತ್ಯಾದಿ ಈಚಲಮರದಿಂದ ತಯಾರಿಸಿದ ಯಾವುದೇ ವಸ್ತುವನ್ನು ಬಳಸಬಾರದು, ಮದ್ಯಸೇವನೆ ಮಾಡಬಾರದು, ಚಪ್ಪಲಿಯಿಂದ ಹೊಡೆದಾಡಬಾರದು. ಹೊಡೆಸಿಕೊಂಡವನು ಮತ್ತು ಹೊಡೆದವನು ಇಬ್ಬರೂ ನಿಷೇಧಕ್ಕೊಳಗಾಗುತ್ತಾರೆ. ಕುಲಕಟ್ಟಳೆಯಂತೆ ದಂಡ ತೆತ್ತು ಪೂಜಾರಿಯಿಂದ ದೇವರ ನೀರು ಹಾಕಿಸಿಕೊಂಡು ಅಂದರೆ ನಿರ್ದಿಷ್ಟ ಶುದ್ಧಿ ಕ್ರಿಯೆಯ ಮೂಲಕ ಕುಲದ ಒಳಗಡೆ ಬರಬೇಕಾಗುತ್ತದೆ.

ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಮದ್ಯಸೇವನೆ ನಿಷೇಧಕ್ಕೊಳಗಾಗಿರುವುದಿಲ್ಲ. ಎಷ್ಟೋ ಸಮುದಾಯಗಳಲ್ಲಿ ಹಿರಿಯರ ಪೂಜೆಗಳಲ್ಲಿ ನೈವೇದ್ಯ ಮಾಡುವಾಗ ಮದ್ಯವನ್ನು ಇಡಲಾಗುತ್ತದೆ. ಶುಭಕಾರ್ಯಗಳಲ್ಲಿ, ಬಂದ ನೆಂಟರಿಷ್ಟರಿಗೆ ಮದ್ಯದ ಸರಬರಾಜು ಆಗಲೇ ಬೇಕು ಎಂಬ ನಿಯಮಗಳೂ ಇವೆ. ವಿಶಿಷ್ಟತೆಯೆಂದರೆ ಈ ಮ್ಯಾಸರ ಸಮುದಾಯ ಇದನ್ನು ನಿಷೇಧಿಸಿರುವುದು ಆರೋಗ್ಯದ ಮೇಲೆ ಉಂಟಾಗುವ ಪ್ರತಿಕೂಲತೆಯ ಅರಿವಿನಿಂದ ಈ ನಂಬಿಕೆ ಬೆಳೆದಿರಬಹುದೇ ಎಂದು ಅನಿಸಿದರೂ ಸ್ಪಷ್ಟ ಕಾರಣಗಳು ಸಿಗುವುದಿಲ್ಲ. ಬಹುಶಃ ಪಶುಪಾಲಕರಾಗಿದ್ದ ಇವರು ಹಗಲಿಡೀ ಎಚ್ಚರ ಸ್ಥಿತಿಯಲ್ಲಿ ದನಕರು ಮೇಯಿಸಬೇಕಾಗಿತ್ತು. ಇನ್ನು ರಾತ್ರಿಯೂ ಅರೆ ಎಚ್ಚರದ ಸ್ಥಿತಿಯಲ್ಲಾದರೂ ಎತ್ತಿನ ಗೂಡುಗಳ ಬಳಿ ಮಲಗಿ ಕಾವಲು ಕಾಯಬೇಕಾಗಿತ್ತು. ಒಂದೆಡೆ ಕಾಡುಪ್ರಾಣಿಗಳ ಕಾಟವಾದರೆ ಮತ್ತೊಂದೆಡೆ ದನಗಳ್ಳರ ಕಾಟ, ನಿಶ್ಚಿಂತೆಯ ನಿದ್ರೆಯೇ ಇವರಿಗಿಲ್ಲ. ಹಾಗಾಗಿ ಮದ್ಯಸೇವನೆಯ ದುಶ್ಚಟಕ್ಕೆ ಬಲಿಯಾದರೆ ತಮ್ಮ ಬದುಕಿಗೇ ಅದು ಮಾರಕ ಎಂಬ ತಿಳುವಳಿಕೆ ಈ ನಿಷೇಧದ ಹಿಂದೆ ಇರಬಹುದೆನಿಸುತ್ತದೆ. ಹಾಗಾಗಿ ಈಚಲುಮರದಿಂದ ತಯಾರಾದ ಯಾವುದನ್ನೂ ಮುಟ್ಟಬಾರದು ಎಂಬ ಕಟ್ಟುನಿಟ್ಟಿನ ನಿಯಮ ಜಾರಿಗೆ ಬಂದಿರಬಹುದು. ಈಗಲೂ ಎಷ್ಟೇ ಮದ್ಯವ್ಯಸನಿಗಳಾಗಿದ್ದರೂ ತಮ್ಮ ಧಾರ್ಮಿಕ ಕೇಂದ್ರಗಳಿಗೆ ಮಾತ್ರ ಅವರು ಮದ್ಯ ಕುಡಿದಾಗ ಪ್ರವೇಶಿಸುವುದಿಲ್ಲ. ಮದ್ಯಪಾನದ ವ್ಯಸನ ಇರುವವರು ದೈವಾರಾಧನೆಯ ಯಾವುದೇ ಚಟುವಟಿಕೆಗಳಲ್ಲೂ ಭಾಗವಹಿಸುವುದಿಲ್ಲ. ಅಷ್ಟರ ಮಟ್ಟಿಗೆ ಈ ನಿಷೇಧ ಉಳಿದು ಬಂದಿದೆ.

**ಕೋಳಿ ತಿನ್ನದಿರುವುದು :**

ಕೋಳಿ ತಿನ್ನುವುದಿಲ್ಲ, ಕೋಳಿ ತಮ್ಮ ಹಟ್ಟಿಯ ಒಳಗೆ ಪ್ರವೇಶ ಮಾಡುವಂತಿಲ್ಲ. ಅಕಸ್ಮಾತ್ ಪ್ರವೇಶಿಸಿದರೆ ಎಲ್ಲರೂ ಗಾಬರಿಯಿಂದ ಓಡಿಸುವ ದೃಶ್ಯ ಹಿಂದೆ ಸಾಮಾನ್ಯವಾಗಿರುತ್ತಿತ್ತು. ಮಾಂಸಾಹಾರಿಗಳಾದ ಇವರಲ್ಲಿ ಇಷ್ಟೊಂದು ಇದರ ಬಗ್ಗೆ ನಿಷೇಧವಿರುವುದು ಆಶ್ಚರ್ಯವೆನಿಸುತ್ತದೆ. ಬುಡಕಟ್ಟಿನಲ್ಲಿ ಕುಲದೇವತಾರಾಧನೆಯ ಅಂಗವಾಗಿ ಯಾವುದಾದರೂ ಪ್ರಾಣಿ ಅಥವಾ ಪಕ್ಷಿಯನ್ನು ಸಾಂಕೇತಿಕವಾಗಿರಿಸಿಕೊಂಡಿದ್ದರೆ ಅದನ್ನು ತಿನ್ನುವುದಿಲ್ಲ. ಹಾಗೆಯೇ ಕೆಲವು ಬುಡಕಟ್ಟಿನವರು ಮನೆಯಲ್ಲಿ ಸಾಕುವ ಯಾವುದೇ ಪ್ರಾಣಿಯನ್ನು ತಿನ್ನುವುದಿಲ್ಲ. ಸೋಲಿಗರು ಸಾಕುವ ದನ ತಿನ್ನುವುದಿಲ್ಲ. ಗೋವಾಕುಡುಬಿಯರೂ ಮನೆಯಲ್ಲಿ ಸಾಕುವ ಪ್ರಾಣಿ ತಿನ್ನುವುದಿಲ್ಲ, ಕಾಡು ಹಂದಿ ತಿನ್ನುತ್ತಾರೆ, ಆದರೆ ಸಾಕಿದ ಊರುಹಂದಿ ತಿನ್ನುವುದಿಲ್ಲ, ಕೋಳಿ ಸಾಕುವುದಿಲ್ಲ, ತಿನ್ನುವುದಿಲ್ಲ. ಮ್ಯಾಸನಾಯಕರಂತೆಯೇ ಇವರೂ ಕೂಡ ಕೋಳಿಯ ಹಿಕ್ಕೆ ಮೆಟ್ಟಿದರೂ ಗೋಮೂತ್ರದಿಂದ ಶುದ್ಧಿ ಮಾಡಿಕೊಂಡು ಒಳಗೆ ಹೋಗಬೇಕು. ಕಾಡಿನ ವಾಸಿಗಳಾದ ಬುಡಕಟ್ಟಿನವರಿಗೆ ಊರು, ಊರಿನವರು ಸಾಕುವ ಪ್ರಾಣಿಗಳು

ನೈರ್ಮಲ್ಯದ ವಾತಾವರಣದಲ್ಲಿ ಬೆಳೆದಿರುವುದಿಲ್ಲ. ಈ ಕಾರಣದಿಂದ ಅವುಗಳನ್ನು ತಾವು ತಿಂದರೆ ತಮ್ಮ ನೈರ್ಮಲ್ಯ ಹಾಳಾಗುತ್ತವೆ ಎಂಬ ಆಲೋಚನೆ ಈ ಬಗೆಯ ನಿಷೇಧಕ್ಕೆ ಕಾರಣವಾಗಿರಬಹುದು. ಮ್ಯಾಸನಾಯಕರು ತಾವು ಕೋಳಿ ತಿನ್ನದಿರುವುದಕ್ಕೆ ಇದೂ ಒಂದು ಕಾರಣ ಇದ್ದಿರಬಹುದು. ಆದರೆ ಸಮುದಾಯದ ಇತಿಹಾಸವನ್ನು ಹೇಳುವ ವಕ್ತೃಗಳು ಕೊಡುವ ವಿವರವೇ ಬೇರೆ ರೀತಿ ಇದೆ.

ಮ್ಯಾಸಗಂಪಳ ಆಂಧ್ರದಿಂದ ಹೊರಟು ಇತ್ತ ಬರುತ್ತಿರುವಾಗ ದಾನಸಾಲಮ್ಮನ, ಸುಕ್ಕಲು ಮಲ್ಲನಾಯಕನ ಕಾಲದಲ್ಲಿ ಒಮ್ಮೆ ಬಂದು ಊರಿನ ಬಳಿ ಗೂಡನ್ನು ಹಾಕಿಕೊಂಡು ಉಳಿದಿರುತ್ತಾರೆ. ಲಂಕಾದ್ರಿ ಮಲೆಯ ಬಳಿಯ ಲಂಕಾದ್ರಿ ಹಟ್ಟಿ ಎಂದು ಹೇಳುತ್ತಾರೆ. ಆಗ ಬೆಳಗಿನ ಜಾವದಲ್ಲಿ ಅಭ್ಯಾಸದಂತೆ ಊರ ಕೋಳಿಗಳು ಕೂಗುತ್ತವೆ. ಅದುವರೆಗೆ ಎಂದೂ ಇಂತಹ ಧ್ವನಿಯನ್ನು ಕೇಳದಿದ್ದ ದನಕರುಗಳು ಗಾಬರಿಗೊಂಡು ರಂಕೆಹೊಡೆದು, ಕೊಂಬುಗಳನ್ನೇ ಬಾಣಗಳನ್ನಾಗಿ ಮಾಡಿಕೊಂಡು ಬಾಲವನ್ನು ಪಟ್ಟೆಯನ್ನಾಗಿ ಮಾಡಿಕೊಂಡು ದಿಕ್ಕಾಪಾಲಾಗಿ ಚೆದುರಿ ಓಡುತ್ತವೆ. ಪಕ್ಕದ ಹಟ್ಟಿಯನ್ನು ಹೊಕ್ಕು ಸಿಕ್ಕ ಸಿಕ್ಕ ಮನೆಗಳನ್ನೆಲ್ಲಾ ತುಳಿದು ನಾಶಮಾಡುತ್ತವೆ. ಎದುರಿಗೆ ಸಿಕ್ಕವರನ್ನು ತುಳಿಯುತ್ತವೆ. ತಮ್ಮ ಈ ದನಗಳ ರೌದ್ರತೆಯನ್ನು ಎಷ್ಟು ನಿಯಂತ್ರಿಸಿದರೂ ಬೇಡಗಂಪಳ ಕೈಚೆಲ್ಲಬೇಕಾಗುತ್ತದೆ. ಇದರಿಂದ ಅಲ್ಲಿದ್ದ ಬ್ರಾಹ್ಮಣರ ಶಾಪಕ್ಕೂ ತುತ್ತಾಗಿ ನಂತರ ದಾನಸಾಲಮ್ಮನ ಭಕ್ತಿ ಕಾರಣವಾಗಿ ಶಾಪದಿಂದ ವಿಮುಕ್ತರಾಗಿ ತಮ್ಮ ಸಂಪತ್ತನ್ನು ಮರಳಿ ಪಡೆಯುತ್ತಾರಾದರೂ ಈ ಕಹಿಘಟನೆ ಅವರ ಮನಸ್ಸಿಗೆ ವ್ಯಥೆಯುಂಟು ಮಾಡಿ ಶಾಶ್ವತವಾಗಿ ಉಳಿದುಬಿಡುತ್ತದೆ. ಅಂದೇ ತೀರ್ಮಾನ ಮಾಡುತ್ತಾರೆ. ತಾವು ಇನ್ನೆಂದೂ ಊರುಗಳ ಪಕ್ಕ ಗೂಡುಗಳನ್ನು ಹಾಕಿಕೊಳ್ಳುವುದಿಲ್ಲ. ತಮ್ಮ ಗೂಡಿನ ಬಳಿ, ತನ್ನ ಹಟ್ಟಿಗಳ ಬಳಿ ಕೋಳಿಯನ್ನು ಬರಗೊಡುವುದಿಲ್ಲ, ಸಾಕುವುದಿಲ್ಲ, ತಿನ್ನುವುದೂ ಇಲ್ಲ ಎಂದು. ಅಂದು ಮಾಡಿದ್ದ ಈ ಪ್ರತಿಜ್ಞೆ ಕಾರಣವಾಗಿ ಇಂದಿಗೂ ತಾವು ಕೋಳಿ ತಿನ್ನುವುದಿಲ್ಲ ಎಂದು ಹೇಳುತ್ತಾರೆ. ಇಂದು ಬದಲಾದ ವರ್ತಮಾನಕ್ಕೆ ತಕ್ಕಂತೆ ತಿನ್ನುವ ಅಭ್ಯಾಸಗಳೂ ಪ್ರಾರಂಭವಾಗಿವೆ. ತೀರಾ ಸಂಪ್ರದಾಯಸ್ಥ, ಧಾರ್ಮಿಕ ವಿಧಿ ವಿಧಾನಗಳಲ್ಲಿ ಪಾಲ್ಗೊಳ್ಳುವವರು, ಜನಸಮೂಹದ ಮಧ್ಯೆ ಅಷ್ಟಾಗಿ ಬೆರೆಯದೆ ದೂರ ಉಳಿದವರು ಕಟ್ಟುನಿಟ್ಟಾಗಿ ಇದನ್ನು ಪಾಲಿಸುತ್ತಾರೆ. ತಿನ್ನುವವರೂ ಮುಚ್ಚು ಮರೆಯಲ್ಲಿಯೇ ತಿನ್ನುತ್ತಾರೆಯೇ ಹೊರತು ನೇರವಾಗಿ ಅಲ್ಲ. ಕೋಳಿ ಸಾಕಾಣಿಕೆ ಇಂದು ಒಂದು ಉದ್ಯಮವಾಗಿದ್ದು ಸರ್ಕಾರ ಕೊಡುತ್ತಿರುವ ಸಾಲಸೌಲಭ್ಯ, ಸಬ್ಸಿಡಿ ಪ್ರಯೋಜನ ಪಡೆದು ಕೆಲವರು ಈ ಉದ್ಯಮ ಪ್ರಾರಂಭಿಸಿದ್ದರೂ ಯಾವುದೋ ಕಾರಣದಿಂದ ನಷ್ಟ ಅನುಭವಿಸಿದರೂ ಕೂಡ ನಮ್ಮ ಸಮುದಾಯಕ್ಕೆ ಇದು ನಿಷೇಧ. ನಮ್ಮ ದೇವರಿಗೆ ಇದು ಆಗಿ ಬರುವುದಿಲ್ಲ. ಮಾಡಬಾರದ್ದನ್ನು ಮಾಡಿದ್ದರಿಂದ ನಷ್ಟ ಅನುಭವಿಸಬೇಕಾಯಿತು ಎಂದು ಹೇಳುವ ಸಂದರ್ಭಗಳೂ ಸಮುದಾಯದಲ್ಲಿವೆ.

**ಮನೆಯ ಮುಂದೆ ರಂಗೋಲಿ ಹಾಕುವುದೂ ನಿಷೇಧಿಸಲ್ಪಟ್ಟಿದೆ :**

ಇದೊಂದು ಅಚ್ಚರಿಯ ಸಂಗತಿಯಾದರೂ ವಾಸ್ತವ. ಗುಡಿಸಲ ನಿವಾಸಿಗಳಾಗಿದ್ದ ಇವರಿಗೆ ಮನೆ, ಮನೆಯಂಗಳದಲ್ಲಿ ರಂಗೋಲಿ ಬಿಡಿಸುವುದು ತಮ್ಮ ಸಂಪ್ರದಾಯವಲ್ಲ ಎಂಬ ಭಾವನೆ ಇದೆ. ಮುಂಜಾನೆ ಹೊಸ್ತಿಲು ಸಾರಿಸಿ ಒಲೆಯ ಬೂದಿಯನ್ನೇ ವಿಭೂತಿಯಂತೆ ಹಚ್ಚಿದರೆ ಆಯಿತು. ಪಶುಪಾಲಕತನ

ಇದರಿಂದಾಗಿ ಅಲೆಮಾರಿತನ ಗೂಡುಗಳ ಪಕ್ಕದ ಗುಡಿಸಲುಗಳಲ್ಲಿ ವಸತಿ ಇವರ ಸಾಮಾನ್ಯವಾದ ಬದುಕಾಗಿದ್ದು ಆಕರ್ಷಕವಾದ ರಂಗೋಲಿಯನ್ನು ಬಿಡಿಸುವ ಅವಕಾಶ, ತಕ್ಕ ಪರಿಸರ ಒದಗಿಬಾರದೇ ಇದು ನಿಷೇಧಕ್ಕೊಳಗಾಗಿರಬಹುದು. ಮತ್ತೊಂದು ಸಂಗತಿಯೆಂದರೆ ಯಾರಾದರೂ ರಂಗೋಲಿ ಹಾಕಿದ್ದರೆ ಬ್ರಾಹ್ಮಣರ ಮನೆಗಳ ಮುಂದೆ ರಂಗೋಲಿ ಹಾಕಿದಂತೆ, ಹಾಕಿದರೆ ಇದು ನಮಗೆ ಆಗಿ ಬರುವುದಿಲ್ಲ ಎಂದು ಹೇಳುವಲ್ಲಿ ವೈದಿಕ ಧರ್ಮದ ಶಿಷ್ಟ ಆಚರಣೆಗಳನ್ನು ನಿರಾಕರಿಸುವ ಮನಸ್ಸು ಇಲ್ಲಿ ಕೆಲಸ ಮಾಡುತ್ತಿವೆಯೆನಿಸುತ್ತದೆ. ಆದರೆ ಇತ್ತೀಚಿಗೆ ರಂಗೋಲಿ ಹಾಕುವುದೇ ಸಾಮಾನ್ಯವಾಗುತ್ತಿದೆ. ನಿಷೇಧಗಳನ್ನು ಕುರಿತು ವಿಚಾರ ಮಾಡಿದಾಗ ಸಮುದಾಯದಲ್ಲೇ ಆಂತರಿಕವಾಗಿ ಕುಲಾಚಾರಗಳನ್ನು ಉಲ್ಲಂಘಿಸಿದವರಿಗೂ ನಿಷೇಧಗಳನ್ನು ಹೇರುವ ಪದ್ಧತಿ ಹಿಂದೆ ಸಮುದಾಯದಲ್ಲಿ ಇತ್ತು. ಇದಕ್ಕೆ ಇಂದಿಗೂ ಈ ನಿಷೇಧವನ್ನು ಪಾಲಿಸಿಕೊಂಡು ಬರುತ್ತಿರುವ ಕೆಲವು ಸಂದರ್ಭಗಳನ್ನು ಉದಾಹರಿಸಬಹುದು.

**ಯರಮಂಚಿನಾಯಕನಿಗೆ ನಿಷೇಧ :**

ಸಮುದಾಯಕ್ಕೆ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದ್ದ ಕೊಳುಗುಳದ ಬೊಮ್ಮನ ಅಂತ್ಯವಾದ ಮೇಲೆ ಅದರ ನಿಮಿತ್ತ ಚಿಂತಗುಟ್ಲ ಬೋರುವನಿಗೆ ಮಾಡಿಕೊಂಡ ಹರಕೆಯನ್ನು ತೀರಿಸಬೇಕಾಗಿತ್ತು. ವಾಸು ಕೊಯ್ಯುವುದೇ ಆ ಹರಕೆ. ನಿಗದಿತ ಸಮಯಕ್ಕೆ ದೊರೆ ಯರಮಂಚಿನಾಯಕ ಬಾರದೇ ಇದ್ದಾಗ ಆತನ ಸಹೋದರನ ಮುಖಂಡತ್ವದಲ್ಲಿ ವಾಸು ಕೊಯ್ಯುತ್ತಾರೆ. ನಂತರ ಬಂದ ಯರಮಂಚಿನಾಯಕನಿಗೂ ಮತ್ತು ಉಳಿದ ಸಮುದಾಯಕ್ಕೂ ಈ ವಿಷಯವಾಗಿ ಘರ್ಷಣೆಯಾಗುತ್ತವೆ. ಒಬ್ಬಂಟಿಯಾದ ಈತ ಪ್ರತಿರೋಧವನ್ನು ತಾಳಲಾರದೆ ಓಡಿ ಹೋಗುತ್ತಾನೆ. ದಾರಿಯ ಪಕ್ಕದ ಹೊಲವೊಂದರಲ್ಲಿ ಮಾದಿಗ ಅಣ್ಣತಮ್ಮಂದಿರು ತಂದೆಯೊಂದಿಗೆ ಕುಳಿತು ಒಂದೇ ಎಲೆಯಲ್ಲಿ ಊಟ ಮಾಡುತ್ತಿರುತ್ತಾರೆ. ತನ್ನ ಹಿಂದೆ ತನ್ನನ್ನು ಸಮುದಾಯವರು ಅಟ್ಟಿಸಿಕೊಂಡು ಬರುತ್ತಿರುವುದನ್ನು ಅರಿತು ಬದುಕಿ ಉಳಿಯಲೋಸುಗ.. ಈತನೂ ಹೋಗಿ ಅವರ ಜೊತೆ ಕುಳಿತು ಆ ಎಲೆಯಲ್ಲಿ ಕೈ ಇಡುತ್ತಾನೆ. ಅಟ್ಟಿಸಿಕೊಂಡು ಬಂದ ಗುಂಪಿಗೆ ಮಾದಿಗರ ಹಿರಿಯ ಇಲ್ಲಿರುವವರೆಲ್ಲಾ ನನ್ನ ಮಕ್ಕಳೇ ಎನ್ನುತ್ತಾನೆ. ಯರಮಂಚಿನಾಯಕನನ್ನು ಗುರುತಿಸಿದರೂ ಕೂಡ ಕೀಳುಕುಲದೊಂದಿಗೆ ಊಟ ಮಾಡಿದ ಈತ ಇನ್ನು ನಮಗೆ ಬೇಡ, ಇನ್ನು ಈತ ತಮ್ಮವನಲ್ಲ ಎಂದು ಅಲ್ಲಿಗೆ ಆತನಿಗೆ ತರಿಮರ ಕಡಿಯುತ್ತಾರೆ.(ತರಿ ಎಂದರೆ ಕತ್ತರಿಸು ಎಂದರ್ಥ. ಮರ ಇಲ್ಲಿ ವಂಶ ಪಾರಂಪರ್ಯವಾದ ಸಂಬಂಧವನ್ನು ಸಂಕೇತಿಸುತ್ತದೆ. ಮರ ಕತ್ತರಿಸು ಎಂದರೆ ಪರಸ್ಪರರ ಮಧ್ಯೆದ ಸಂಬಂಧ ಕತ್ತರಿಸಿ ಹೋಯಿತು ಎಂದರ್ಥ. 'ಕಡಿಯುವುದು' ಇಲ್ಲಿ ದ್ವಿರುಕ್ತಿಯಾಗಿದೆ.) ತಮಗೂ ಈತನಿಗೂ ಇನ್ನು ಎಂದಿಗೂ ಸಂಪರ್ಕವಿಲ್ಲ. ಸಹಭೋಜನವೂ ಇಲ್ಲ ಎಂದು ಈ ನಿಷೇಧ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿದೆ. ಪರಸ್ಪರ ಒಬ್ಬರು ಹೆಣ್ಣು ಕೊಟ್ಟು ತಂದು ಬಾಂಧವ್ಯ ಬೆಳೆಸಿದ ಮನೆಗೆ ಮತ್ತೊಬ್ಬರು ಕೊಡುವುದಿಲ್ಲ. ಇಂದಿಗೂ ಸಹಪಂಕ್ತಿ ಭೋಜನ ಇಲ್ಲ. ಪರಸ್ಪರರ ಮನೆಗಳಿಗೆ ಹೋಗುವುದಿಲ್ಲ. ಹೀಗೆ ನಿಷೇಧ ಹಾಕಿಕೊಂಡು ಅಣ್ಣ ತಮ್ಮಂದಿರು ದೂರವಾಗಿದ್ದಾರೆ. ಪರಸ್ಪರರ ದೇವಾಲಯಗಳಿಗೆ ಪ್ರವೇಶವಿಲ್ಲ. ಆದರೆ ಯರಮಂಚಿನಾಯಕನ ಪರಂಪರೆಯವರು ಯರಮಂಚಿನಾಯಕನ ಆರಾಧನೆಯಲ್ಲಿ ಈ ಒಟ್ಟಿಗೇ ಉಂಡ ಘಟನೆಯನ್ನು ಆರಾಧನಾ

ಸ್ವರೂಪದಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಹಬ್ಬದ ಆಚರಣೆಯಲ್ಲಿ ಮಾದಿಗರಲ್ಲಿ ಒಬ್ಬಾತ ಬಂದು ಬಡಿಸಿದ ಎಲೆಯಲ್ಲಿ ಯರಮಂಚಿನಾಯಕನ ಪರಂಪರೆಯವರೊಂದಿಗೆ ಕುಳಿತು ಕೈ ಇಡುತ್ತಾರೆ. 'ಶಿರ ಕಾದವನನ್ನು ಕೊನೆವರೆಗೂ ಮರೆಯುವುದಿಲ್ಲ' ಎಂಬಂತೆ ಆತನ ಪರಂಪರೆ ಇದನ್ನು ನಡೆಸಿಕೊಂಡು ಬರುತ್ತಿರುವುದು ಪ್ರಶಂಸನೀಯವಾದ ಸಂಗತಿ.

**ದೆಡ್ಡಿಯರಪಾಲನಾಯಕನಿಗೆ ನಿಷೇಧ ವಿಧಿಸಿದ್ದು :**

ಗಾದ್ರಿಪಾಲನಾಯಕನ ತಮ್ಮನೀತ ಎಂದು ಹೇಳುತ್ತಾರೆ. ರೊಪ್ಪಲ ಸೂರಿಯ ಮಗ ಎಂಬ ಅಭಿಪ್ರಾಯವೂ ಇದೆ. ಗಾದ್ರಿಪಾಲನಾಯಕನ ನಂತರ ಮ್ಯಾಸಮಂಡಲದ ಮುಖ್ಯಸ್ಥನೆನಿಸಿ ಪಶುಮಂದೆಗೆ ಒಡೆಯನೆನೆನಿಸಿ ದೊರೆ ಎಂದು ಕರೆಸಿಕೊಳ್ಳುತ್ತಾನೆ. ಈತನನ್ನು ಮೆಚ್ಚಿ ಡೆಲ್ಲಿ ಸುಲ್ತಾನನ ಮಗಳು ನನ್ನಿಯಮ್ಮ ಹಿಂದೆ ಬರುತ್ತಾಳೆ (ದಿಲ್ಲಿಯ ಕಡೆಯಿಂದ ಆಕ್ರಮಣಕಾರರಾಗಿ ಬಂದ ಸುಲ್ತಾನನ ಪಡೆಯವರೆಲ್ಲಾ ಈ ಮುಗ್ಧ ಜನರ ಪಾಲಿಗೆ ಡೆಲ್ಲಿ ಸುಲ್ತಾನರೇ!). ತನ್ನನ್ನೇ ನಂಬಿ ತನ್ನ ಹಿಂದೆ ಬಂದು ಒಂದಿಗೇ ಬಾಳಿದ ಆಕೆಯ ಹೆಸರಿನಲ್ಲಿ ಪಾಲನಾಯಕ ಊರೊಂದನ್ನು ಕಟ್ಟಿ ಅದನ್ನೇ 'ನನ್ನಿವಾಳ 'ಎಂದು ಕರೆಯುತ್ತಾನೆ ಮತ್ತು ಆಕೆಯ ಮಗನಿಗೇ ತನ್ನ ಉತ್ತರಾಧಿಕಾರವನ್ನು ವಹಿಸಿಕೊಡುತ್ತಾನೆ. ಇಂದಿಗೂ ಈ ದೊರೆ ಮ್ಯಾಸಮಂಡಲಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಆಚರಣೆಗಳಲ್ಲಿ ಧರಿಸುವುದು ನವಾಬರ ಮಾದರಿಯ ಪೋಷಾಕನ್ನೇ ಮತ್ತು ದೇವರಿಗೆ ನಮಸ್ಕರಿಸುವುದೂ ಕೂಡಾ ಇಸ್ಲಾಂ ಧರ್ಮದ ಶೈಲಿಯಲ್ಲೇ ಇದನ್ನೇ 'ದೀಟೀ ಸಲಾಮು'[೧೦] ಎಂದು ಕರೆಯುತ್ತಾರೆ. ಹೀಗೆ ತನ್ನ ಪ್ರೇಯಸಿಯೊಂದಿಗೆ ಆಕೆಯ ನಂಬಿಕೆಗಳನ್ನು ದೆಡ್ಡಿಪಾಲನಾಯಕ ಪುರಸ್ಕರಿಸಿದ. ಆದರೆ ಸಮುದಾಯ ಈತನನ್ನು ಬಹಿಷ್ಕರಿಸಿತು. ಅಂದರೆ ಆತನ ಉಳಿದ ಸಹೋದರರು ಈತನನ್ನು ಬಹಿಷ್ಕರಿಸುತ್ತಾರೆ. ಹಾಗಾಗಿ ನನ್ನಿವಾಳದ ಕಟ್ಟೇಮನೆಗೆ ಇಂದಿಗೂ ಆತನ ಸಹೋದರರಾದ ನಲಕುಲಕ್ಕೆ ಸೇರಿದವರು ಕಾಲಿರಿಸುವುದಿಲ್ಲ. ಕೊಡು–ಕೊಳುಗೆ, ಸಹಭೋಜನವೂ ಇಲ್ಲ, ದೊರೆಯ ಸಂತತಿ ಮತ್ತು ಆತನ ಉಳಿದ ಬಂಧುಗಳು ಇವರೊಂದಿಗೆ ಅನ್ಯೋನ್ಯವಾದ ಸಂಪರ್ಕ ಇರಿಸಿಕೊಂಡಿದ್ದಾರೆ. ವರ್ಷಕ್ಕೊಮ್ಮೆ ನನ್ನಿವಾಳದಲ್ಲಿ ನಡೆಯುವ ಜಾತ್ರೆಯಲ್ಲಿ ಸುತ್ತಮುತ್ತಲ ಹಟ್ಟಿಗಳ ಜನರೆಲ್ಲಾ ಭಾಗವಹಿಸುತ್ತಾರೆ. ದೊರೆ ಆಗ ಒಂದು ಕಿರು ಸಭೆ ನಡೆಸುತ್ತಾನೆ. ಆಗ ತಮ್ಮ ಸಮಸ್ಯೆಗಳನ್ನು, ವ್ಯಾಜ್ಯಗಳನ್ನು ಜನ ಹೇಳಿಕೊಂಡಾಗ ದೊರೆ ಪರಿಹಾರ ಕೊಡುತ್ತಾನೆ. ಎಲ್ಲರೂ ಎದ್ದು ನಿಂತು ಕೊನೆಗೆ ಇಸ್ಲಾಂ ಧರ್ಮದ ಸಂಪ್ರದಾಯದಂತೆ ಬಲಗೈ ಮುಂದೆ ಚಾಚಿ ನಂತರ ಹಣೆಗೆ ಮುಟ್ಟಿಸಿಕೊಂಡು ನಮಸ್ಕರಿಸುತ್ತಾರೆ. ನಿಷೇಧಕ್ಕೊಳಗಾದವ ದೊರೆಯಾದ್ದರಿಂದ ಆತನ ಅಧಿಕಾರ ದರ್ಪವೇ ಕಾರಣವಾಗಿ ತನ್ನ ನಂಬಿಕೆಗನುಗುಣವಾಗಿ ತನ್ನ ಅಡಳಿತದ ವ್ಯಾಪ್ತಿಯಲ್ಲಿ ಆತನ ಆಳ್ವಿಕೆ ನಡೆಸುತ್ತಿರುವುದು ಇಲ್ಲಿ ಸ್ಪಷ್ಟವಾಗುವ ಸಂಗತಿಯಾಗಿದೆ.

---

[೧೦] ಇಸ್ಲಾಂ ಧರ್ಮದಲ್ಲಿ 'ದೀನ್ ಸಲಾಮ್' ಎಂಬ ನಮಸ್ಕರಿಸುವ ಕ್ರಮ ಇದೆ. ಈ ದೀನ್ ಸಲಾಮ್ ಬಹುಶಃ ದೀಟೀ ಸಲಾಮ್ ಎಂದು ಬದಲಾಗಿರಬಹುದೆನಿಸುತ್ತದೆ.

**ರೊಪ್ಪಲಸೂರಿಗೆ ನಿಷೇಧ :**

ನಾಯಕನಹಟ್ಟಿಗೆ ಸಮೀಪವಿರುವ ಗೌಡಗೆರೆ ಪ್ರಾಂತ್ಯವನ್ನು ಅಲಿಕಿಸಿರಿ ಎಂಬ ದೊರೆ ಆಳುತ್ತಿದ್ದ. ಈತನೂ ಮ್ಯಾಸಮಂಡಲಕ್ಕೆ ಸೇರಿದವನೇ. ಆಗ ಮ್ಯಾಸರು ದನಕರುಗಳ ಮಂದೆಯೊಂದಿಗೆ ಗೌಡಗೆರೆಗೆ ೪-೫ ಕಿ.ಮೀ.ಗಳ ಅಂತರದಲ್ಲಿರುವ ಇಂದಿನ ದೇವರಹಳ್ಳಿ- ವೇದವತಿ ನದಿಯ ಉಪನದಿಯ ಬಯಲಿನಲ್ಲಿ ರೊಪ್ಪಗಳನ್ನು ಇಟ್ಟುಕೊಂಡು ವಾಸ್ತವ್ಯ ಹೂಡಿದ್ದರು.

ಅಲಕಿಸಿರಿಯ ಪತ್ನಿ ದೊಡ್ಡೇರಿ ಸಂತೆಗೆ ಹೋಗಿ ಅದೇ ಮಾರ್ಗವಾಗಿ ಹಿಂದಿರುಗುತ್ತಿದ್ದಾಗ ಆಕೆಯ ರೂಪಕ್ಕೆ ಮನ ಸೋತಿದ್ದ ರೊಪ್ಪಲಸೂರಿ ಆಕೆಯ ಮೇನೆಯನ್ನು ಹೊರುವ ಬೋಯಿಗಳಿಗೆ ಮಾಂಸದ ಊಟದ ಆಸೆ ಹುಟ್ಟಿಸಿ ಅವರು ಅಲ್ಲಿಯೇ ಮೇನೆಯನ್ನು ಇಳಿಸುವಂತೆ ಮಾಡುತ್ತಾನೆ. ಸಮಯದ ಸದುಪಯೋಗ ಮಾಡಿಕೊಂಡು ಆಕೆಯನ್ನು ಕರೆದುಕೊಂಡು ಅಲ್ಲಿಂದ ಹೊರಟು ಹೋಗುತ್ತಾನೆ. ಆತನು ಪ್ರತಿದಿನ ಸೂರ್ಯನ ಮುಂದೆ ಸೂರ್ಯೋದಯದ ಸಂದರ್ಭದಲ್ಲಿ ಎತ್ತುಗಳನ್ನು ಹರಿಯಿಸುವ ನೇಮವನ್ನಿಟ್ಟುಕೊಂಡಿದ್ದ. ಇದನ್ನು ಮಾಡದೇ ಊಟ ಮಾಡುತ್ತಿರಲಿಲ್ಲ. ಇದು ತಿಳಿದಿದ್ದ ಆತನ ಮಗ ಯಾರಿಗೂ ತಿಳಿಸದಂತೆ ಮಧ್ಯರಾತ್ರಿಯಲ್ಲಿಯೇ ಒಂದಿಷ್ಟು ಎತ್ತು, ಹಸು ಹೊಡೆದುಕೊಂಡು ತಂದೆ ಇರುವ ಬಳಿ ಹೋಗಿ 'ನೇಮ' ಮುಗಿಸಿ ಮರಳಿ ಎತ್ತುಗಳನ್ನು ತಂದು ಗೂಡಿಗೆ ಸೇರಿಸಿ ಯಾರಿಗೂ ತಿಳಿಯದಂತೆ ಇದ್ದು ಬಿಡುತ್ತಾನೆ. ಪ್ರತಿ ದಿನ ಓಡಿ ದಣಿದ ಎತ್ತುಗಳು ಗಂಜಲ, ಸಗಣಿ ಹಾಕಿದಾಗ ಜೊತೆಗೆ ರಕ್ತವೂ ಬರುತ್ತದೆ. ಇದರಿಂದ ಅನುಮಾನಗೊಂಡು ಗಮನಿಸುತ್ತಿದ್ದವರಿಗೆ ವಿಷಯ ನಿಧಾನವಾಗಿ ಸ್ಪಷ್ಟವಾಗುತ್ತದೆ. ನಾಲ್ಕಾರು ದಿನಗಳಲ್ಲಿಯೇ ಈ ಸಂಗತಿ ಹೀಗೆ ಅರಿವಿಗೆ ಬರುತ್ತದೆ. ಆ ವೇಳೆಗಾಗಲೇ ದೊರೆ ಅಲಿಕಸಿರಿ ಬಂದು ಸಮುದಾಯದ ಹಿರಿಯರಿಗೆ (ತನ್ನ ಹೆಂಡತಿಯ ತಂದೆಗೆ) ದೂರು ಕೊಟ್ಟಿರುತ್ತಾನೆ. ಈ ಘಟನೆಯನ್ನು ಸಮುದಾಯ ತಮಗೆ ಅದು ದೊಡ್ಡ ಅಪಮಾನ ಎಂದು ಭಾವಿಸುತ್ತದೆ. ವಿವಾಹಿತಳನ್ನು ಹೀಗೆ ಕರೆದೊಯ್ದುದ್ದು ಅಪರಾಧವಾಗಿದ್ದು, ಅಂತಹ ಅಪರಾಧಿಯ ನೇಮಕ್ಕೆ ಹೀಗೆ ಆತನ ಮಗ ಎತ್ತುಗಳನ್ನು ಕೊಂಡೊಯ್ಯುತ್ತಿದ್ದಾನೆ ಎಂದು ಬೇಸರಿಸಿ ಒಂದು ದಿನ ಕಾದು ಕುಳಿತುಕೊಳ್ಳುತ್ತಾರೆ. ಎತ್ತುಗಳನ್ನು ತಂದೆಯ ನೇಮಕ್ಕೆ ಹರಿಸಿ ಬೆಳಗಾಗುವ ವೇಳೆಗೆ ಮರಳಿ ಗೂಡಿಗೆ ತಲುಪಿಸುತ್ತಿರುವಾಗ ತಡೆದು ನಿಲ್ಲಿಸುತ್ತಾರೆ. ರೊಪ್ಪಲ ಸೂರೆ ಶರಣ, ಶಿವಭಕ್ತ, ನೇಮ ನಡೆಸುವ ನಿಷ್ಠಾವಂತ. ಆದರೆ ವಿವಾಹಿತಳನ್ನು ಕರೆದೊಯ್ದು ಕುಲಕ್ಕೆ ಅಪಮಾನ ಮಾಡಿದ್ದಾನೆ. ಆದ್ದರಿಂದ ಅವನ ನೇಮಕ್ಕೆ ಹರಿದ ಎತ್ತುಗಳನ್ನು ನಮ್ಮ ಮಂದೆಯೊಂದಿಗೆ ಸೇರಿಸಬೇಡ. ಒಡೆಯನ ನೇಮಕ್ಕೆ ಹರಿದ ಎತ್ತುಗಳು ಒಡೆಯನಿಗೇ ಸೇರಲಿ ಎಂದು ದೂರವಿಡುತ್ತಾರೆ. ಇಂದಿಗೂ ವಡೇಲ ಎತ್ತುಗಳು ಎಂಬ ಬೇರೆಯದೇ ಆದ ಮಂದೆ ಇದ್ದು ಅದರ ಮಧ್ಯೆ ಬೇರೆಯ ಗೂಡಿನ ಎತ್ತುಗಳನ್ನು ಬೆರೆಸುವುದಿಲ್ಲ. ರೊಪ್ಪಲ ಸೂರಿಯ ಸಂತತಿಯವರಲ್ಲಿ ಒಬ್ಬರು ಅದನ್ನು ನೋಡಿಕೊಳ್ಳುತ್ತಾರೆ. ಮಲ್ಲೂರಹಳ್ಳಿ ಬಳಿಯ 'ಪಿಲ್ಲಿಗುಂಡ್ಲು' ಎಂಬ ಅರಣ್ಯದಲ್ಲಿ ಈ ಎತ್ತಿನ ಗೂಡಿದೆ.

ಹಿಂದೆ ವಿಧಿಸಿದ್ದ ನಿಷೇಧಗಳನ್ನು ಸಮುದಾಯ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿದೆ. ಕಾರಣ ಅದಕ್ಕೊಂದು ಧಾರ್ಮಿಕ ಆವರಣವಿದೆ. ಈ ಚೌಕಟ್ಟನ್ನು ಮೀರಬಾರದು ಎಂಬ ಭಯ

ಭೀತಿ ಕಾರಣವಾಗಿ ಇದನ್ನು ನಡೆಸಲಾಗುತ್ತಿದೆ. ಆದರೆ ಇಂದಿನ ಸಂದರ್ಭದಲ್ಲಿ ಯಾರಾದರೂ ಇದೇ ಬಗೆಯ ಕಾರ್ಯ ಎಸಗಿದಾಗ ಸಮುದಾಯ ಅವರಿಗೆ ನಿಷೇಧ ಹೇರುತ್ತದೆಯೇ ಎಂದು ವಿಚಾರ ಮಾಡಿದರೆ ಇಲ್ಲ ಎಂಬ ಉತ್ತರವೇ ಸ್ಪಷ್ಟವಾದುದು. ಕಾರಣ ಬದುಕಿನ ವಿಧಾನಗಳಲ್ಲಿ ಬದಲಾವಣೆಯಾದಾಗ ಸಂಪ್ರದಾಯ ನಂಬಿಕೆಗಳೂ ಕ್ರಮೇಣ ಬದಲಾವಣೆಯ ಕಡೆ ಸರಿಯುತ್ತಿರುವುದೂ ಸಹಜವಾಗಿಯೇ ಇದೆ.

**ಮೋಡಿ ಮತ್ತು ಮಾಟ :**

**'ಮೋಡಿ':** ಇದೊಂದು ಇಂದ್ರಜಾಲಿಕವಿದ್ಯೆ ಅಲ್ಲದೆ ಬೇರೆ ಏನೂ ಅಲ್ಲ. ಪ್ರಕೃತಿಯ ತನಗೆ ವೈರುಧ್ಯಗಳಾಗಿ ಕಾಡುವಂತಹ ಶಕ್ತಿಗಳ ವಿರುದ್ಧ ಹೋರಾಟ ಮಾಡಿ ಗೆಲ್ಲುವುದನ್ನು ಇಲ್ಲಿ ಸಾಂಕೇತಿಕವಾಗಿ ಕಾಣಬಹುದು. ಮೋಡಿಯಾಟದಲ್ಲಿ ಭಾಗಿಯಾಗುವ ಎರಡು ಬಣಗಳವರು ಪರಸ್ಪರ ಭಿನ್ನ ಬಣಗಳವರು. ತಮ್ಮ ಬಣದ ಬಲಾಬಲದ ಪ್ರದರ್ಶನವೂ, ಗೆಲುವಿನ ಮೂಲಕ ಪ್ರತಿಷ್ಠೆಯನ್ನು ಪಡೆಯುವುದೂ ಇಲ್ಲಿ ಸಾಮಾನ್ಯ.

'ಮಾಟ' ಎಂದರೆ ಕ್ರಿಯೆ. ಸಾಮಾನ್ಯನಿಗೆ ಸಾಧ್ಯವಾಗದ ಒಂದು ವಿಶಿಷ್ಟ ಕ್ರಿಯೆ ಇದು. 'ಮಾಟ' ಅಂದಿನ ಬುಡಕಟ್ಟಿನ ಸಮುದಾಯಗಳ ತಂತ್ರಗಾರಿಕೆ, ವಿಜ್ಞಾನ ಎಂಬ ಅಭಿಪ್ರಾಯವೂ ಇದೆ. ಇದರ ಮುಂದುವರಿದ ಆಧುನಿಕ ರೂಪವೇ ಇಂದಿನ ವಿಜ್ಞಾನ ಎಂದು ಅಭಿಪ್ರಾಯವೂ ಇದೆ. ನಮ್ಮ ಅನೇಕ ಜನಪದ ಕಥೆಗಳಲ್ಲಿ ಇಂತಹ ವಿವರಗಳು ಬರುತ್ತವೆ. ಮ್ಯಾಸಬೇಡರ ಬುಡಕಟ್ಟಿನಲ್ಲಿಯೂ ಹಿಂದೆ ಈ ಮೋಡಿಯಾಟ, 'ಮಾಟ' ಇದ್ದುದಾಗಿ ವಿವರಗಳು ಸಿಗುತ್ತವೆ ಮತ್ತು ಈ ಕ್ರಿಯೆಗಳಲ್ಲಿ ಮಹಿಳೆಯರೂ ಪಾಲ್ಗೊಳ್ಳುತ್ತಿದ್ದು ವಿಶೇಷ. ಅಕ್ಕರಾಯಮ್ಮ, ಗೌರಸಮುದ್ರದ ಮಾರಮ್ಮ ಹೀಗೆ ಮಾಟದ ತಂತ್ರಗಾರಿಕೆಯನ್ನು ಬಳಸಿಯೇ ಶತ್ರುಗಳನ್ನು ಹಿಮ್ಮೆಟ್ಟಿಸುತ್ತಾರೆ. ಅಂದಿನ ಈ ವಿಜ್ಞಾನವನ್ನು ಮಹಿಳೆ ತನ್ನ ಕೈವಶ ಮಾಡಿಕೊಂಡಿದ್ದು ಗಮನಿಸುವಂತಹುದು. ಆದರೆ ಸಾಕಷ್ಟು ಬದಲಾವಣೆಗೆ ಒಳಗಾಗಿರುವ ಈ ಸಮುದಾಯದಲ್ಲಿ ಇಂದಿಗೂ ಮಾಟದ ಭಯ ಇದ್ದೇ ಇದೆ. ಆದರೆ 'ಮೋಡಿಯಾಟ' ಎಂದರೆ ಇಂದು ಇಲ್ಲವೇ ಇಲ್ಲ ಎಂದು ಹೇಳಬಹುದು. ಹಿಂದೆ ಮೋಡಿ ಹಾಕುತ್ತಿದ್ದರು ಎಂಬ ವಿವರಗಳು ಸಮುದಾಯದಲ್ಲಿವೆಯಷ್ಟೇ.

**ವೈದ್ಯ :**

ಈ ಬುಡಕಟ್ಟಿನಲ್ಲಿ ಮನುಷ್ಯರಿಗೂ ಎತ್ತು ದನಕರುಗಳಿಗೂ ವೈದ್ಯಕೀಯ ಮಾಡುವ ಕೆಲವರು ಪಾರಂಪರಿಕ ವೈದ್ಯರಿದ್ದಾರೆ. ಗಿಡಮೂಲಿಕೆಗಳ ಚೂರ್ಣವನ್ನು ಅವರೇ ತಯಾರಿಸಿ ಅನೇಕ ಕಾಯಿಲೆಗಳನ್ನು ಪರಿಹರಿಸುತ್ತಿದ್ದರೆ, ಈ ಪರಂಪರೆಯ ಜ್ಞಾನವನ್ನು ಇಂದು ಸಂರಕ್ಷಸಬೇಕಾದ ಅಗತ್ಯವಿದೆ.

ದನಕರುಗಳನ್ನು ಕಾಡುವ ಚಪ್ಪೆರೋಗ, ಕಾಲು ಬಾಯಿಜ್ವರ, ಸೆಲೆ ರೋಗಗಳಿಗೆಲ್ಲಾ ಔಷಧಿ ಕೊಡುತ್ತಾರೆ. ಕಾಲು ಮುರಿತಕ್ಕೂ ಕಟ್ಟುಕಟ್ಟಿ ಸರಿಪಡಿಸುವ ವೈದ್ಯರಿದ್ದಾರೆ. ಮನುಷ್ಯರಿಗೆ ಸಂದಿನ ಜ್ವರಕ್ಕೆ ವಿಷಮ ಶೀತಜ್ವರಕ್ಕೆ ಬೇವಿನ ಒಳ್ನಾಲಿನ ಕಷಾಯವನ್ನು, ಸಾಮಾನ್ಯಜ್ವರಕ್ಕೆ ಕಾಡುಜೀರಿಗೆ ಕಷಾಯವನ್ನು,

ಹಾವು ಮತ್ತು ಚೇಳಿನ ಕಡಿತಕ್ಕೆ, ಬಂಜೆತನ ನಿವಾರಣೆಗೆ, ಮಾನಸಿಕ ಅಸ್ವಸ್ಥತೆ ಸರಿಹೋಗುವಂತಹ ಔಷಧ ಕೊಡುವ ಘನ ಪಂಡಿತರು ಈ ಸಮುದಾಯದಲ್ಲಿ ಇಂದಿಗೂ ಇದ್ದಾರೆ.

ಸಮುದಾಯದ ಸಂಸ್ಕೃತಿಯ ಎಲ್ಲಾ ವಿವರಗಳನ್ನು ನಾನು ಇಲ್ಲಿ ಕೊಡುತ್ತಿಲ್ಲ. ವಿಶೇಷವೆನಿಸಿದ ಅಂಶಗಳ ಬಗ್ಗೆ ಮಾತ್ರ ಪ್ರಸ್ತಾಪ ಮಾಡಿದ್ದೇನೆ. ಮ್ಯಾಸಬೇಡರಿಗೆ ಸಂಬಂಧಿಸಿದ ಈ ಸಾಂಸ್ಕೃತಿಕ ವಿಶಿಷ್ಟತೆಗಳು ಇಂದು ಪೂರ್ಣ ಪ್ರಮಾಣದಲ್ಲಿ ಉಳಿದಿಲ್ಲ. ತೀರಾ ಸಂಪ್ರದಾಯಕವಾಗಿ ಬುಡಕಟ್ಟಿನ ನಿಯಮಗಳನ್ನು ಪಾಲಿಸುತ್ತಿರುವ ಮೂಲೆಗಾಡಿನ ಹಟ್ಟಿಗಳಲ್ಲಿ ಈ ನಡವಳಿಕೆಗಳು ಇಂದಿಗೂ ಉಳಿದಿವೆ. ಉಳಿದಂತೆ ಊರು, ನಗರ ವಾಸಿಗಳಾಗಿರುವ ಜನರಲ್ಲಿ ಒಂದು ಆಚರಣೆ ಸ್ವರೂಪದಲ್ಲಿಯೋ, ಸಾಂಕೇತಿಕವಾಗಿಯೋ ಉಳಿದು ಬಂದಿರುವುದನ್ನು ಗಮನಿಸಬಹುದಾಗಿದೆ. ಕಾಲದ ಮರೆಗೆ ಸರಿಯುತ್ತಿರುವ ಇಂತಹ ಸಂಗತಿಗಳ ಮೂಲಕವೇ ಆದಿಮ ಸಂಸ್ಕೃತಿಯ ವಿವರಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಇಲ್ಲಿರುವ ಸೂಕ್ಷ್ಮವಾದ ಎಳೆಗಳನ್ನೇ ಹಿಡಿದು ವರ್ತಮಾನ ಮಾದರಿಯೊಂದನ್ನು ಕಟ್ಟಿಕೊಳ್ಳಬಹುದಾದ ಸಾಧ್ಯತೆಗಳೂ ಇರುತ್ತವೆ.

ಇಡೀ ಭಾರತಕ್ಕೆ ಒಂದೇ ಎನ್ನುವ ಸಂಸ್ಕೃತಿ ಇಲ್ಲ. ಅನೇಕ ಸಂಸ್ಕೃತಿಗಳೇ ನಮ್ಮ ದೇಶದ ವಿಶಿಷ್ಟತೆ. ಹಾಗೆಯೇ ಈ ಅನೇಕ ಸಂಸ್ಕೃತಿಗಳಲ್ಲೂ ಸಹ ಭಿನ್ನವಾದ ಸಾಂಸ್ಕೃತಿಕ ಲಕ್ಷಣಗಳಿರುವುದೂ ಅಷ್ಟೇ ವಿಶೇಷವಾದುದು. ಮ್ಯಾಸಬೇಡರ ಸಂಸ್ಕೃತಿಯಂತೂ ಒಂದು ಬಗೆಯ ಸಂಕೀರ್ಣತೆಯಿಂದ ಕೂಡಿದ ಸಂಸ್ಕೃತಿ ಎನಿಸುತ್ತದೆ. ಮೂಲ ಬೇಟೆ ನಂತರ ಪಶುಪಾಲಕತನ, ಪಾಳೆಯಗಾರಿಕೆ ಇದೆಲ್ಲವನ್ನೂ ಕಳೆದುಕೊಂಡ ಇಂದಿನ ಅತಂತ್ರ ಸ್ಥಿತಿಯಲ್ಲಿ ತನ್ನ ಮೂಲದ ಎಲ್ಲಾ ನಡಾವಳಿಗಳನ್ನೂ ಆಚರಣೆಯ ಸ್ವರೂಪದಲ್ಲಿ ಉಳಿಸಿಕೊಂಡು ಬರುತ್ತಿರುವ ಪ್ರಯತ್ನ ಇಲ್ಲಿದೆ ಮತ್ತು ವಿಧಿ, ನಿಷೇಧಗಳ ಮಧ್ಯೆಯೂ ಪರಧರ್ಮದೊಂದಿಗೆ ಸಂಕರವಾಗುವ ಸ್ಥಿತಿ ಶಾಪ, ಭಯ, ತಲ್ಲಣಗಳನ್ನು ಸಾಂಕೇತಿಕ ಸಂಘರ್ಷ, ಬಲಿಯ ಮೂಲಕ ನಿವಾರಿಸಿಕೊಳ್ಳುವ ಪ್ರಯತ್ನ ಇದಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಆಚರಣೆಗಳು ಕಂಡುಬರುತ್ತವೆ. ಮೂಲತಃ ಮಾತೃಪ್ರಧಾನವಾಗಿದ್ದ ಸಂಸ್ಕೃತಿ ಇದಾಗಿದ್ದು ಅದಕ್ಕೆ ಸಂಬಂಧಿಸಿದ ಲಕ್ಷಣಗಳನ್ನು ಇಂದಿನ ಆಚರಣೆಗಳ ಮೂಲಕ ಗುರುತಿಸುವಲ್ಲಿ ಸಾಧ್ಯವಾಗುತ್ತದೆ. ಒಟ್ಟಾರೆ ಈ ಸಮುದಾಯದ ವಿವೇಕ, ಬದುಕಿನ ಬಗೆಗಿನ ಅವರ ನಿಲುವುಗಳು, ಬದಲಾವಣೆಯ ಕಡೆ ಸರಿಯುತ್ತಿರುವ ಸಂದರ್ಭದಲ್ಲಿ ಇಂತಹ ಸಾಂಕೇತಿಕ ಆಚರಣೆಗಳ ಮೂಲಕವಾದರೂ ಇವನ್ನು ಉಳಿಸಿಕೊಂಡು ಬರಬೇಕೆಂಬ ಪ್ರಜ್ಞೆ ಇಲ್ಲಿರುವುದು ಕಂಡುಬರುತ್ತದೆ. ಈ ಸಾಂಸ್ಕೃತಿಕ ವಿಶೇಷಗಳು ಒಟ್ಟಾರೆ ಈ ಸಮುದಾಯದ ಜೀವಾಳ ಎಂದು ಕರೆದರೆ ತಪ್ಪಾಗಲಾರದು. ಈ ಮೂಲಕವಾಗಿಯೇ ತಮ್ಮನ್ನು ತಾವು ಗುರುತಿಸಿಕೊಳ್ಳುವ ಮತ್ತು ಒಂದು ಏಕಸೂತ್ರತೆಗೆ ಒಳಗಾಗುವ ಸಾಧ್ಯತೆಗಳನ್ನು ಉಳಿಸಿಕೊಂಡು ಬಂದಿದೆ ಈ ಜನ ಸಮುದಾಯ. ಇಂಥ ಸಮುದಾಯವನ್ನು ಅದರ ಸಾಂಸ್ಕೃತಿಕ ನಾಯಕಿಯರ ನೆಲೆಯಿಂದ ಅಧ್ಯಯನ ಮಾಡಿ ಆ ಮೂಲಕ ಪುರುಷಕೇಂದ್ರಿತ ಕಥನಕ್ಕಿಂತ ಭಿನ್ನವಾದ ಸಾಧ್ಯತೆಗಳನ್ನು ಹುಡುಕುವುದು ನನ್ನ ಉದ್ದೇಶ. ಇಂಥ ಪ್ರಯತ್ನವು ಇತರ ಸಮುದಾಯಗಳನ್ನೂ ಇದೇ ಬಗೆಯಲ್ಲಿ ನೋಡುವ ಸಾಧ್ಯತೆಗಳನ್ನು ಅನಾವರಣ ಮಾಡಬಹುದೆಂಬ ನಿರೀಕ್ಷೆಯೂ ನನ್ನಲ್ಲಿದೆ.

## ೨.೨ ಮೂಲ ನೆಲೆಗಳು :

ಭಾರತದ ಎಲ್ಲೆಡೆ ಬೇಟೆಯ ಮೂಲದಿಂದ ಬಂದ ಸಮುದಾಯಗಳು ನೆಲೆಸಿದ್ದು ಇವರನ್ನು ಬೇಡ, ವೇಡನ್, ವೇಡರ್, ವೇಳರ್, ಬಿಲ್ಲ, ಬೆಂಟಿಯವರ್, ಕಿರಾತ, ಪುಳಿಂದ, ಶಬರ, ನಿಷಾದ, ನಾಯ್ಕರ್, ನಾಯರ್, ಜಾಟ್ ಮುಂತಾಗಿ ಕರೆಯಲಾಗುತ್ತಿದೆ. ಕರ್ನಾಟಕದಾದ್ಯಂತ ನೆಲೆಸಿದ್ದು ಬೇಡ, ನಾಯಕ, ತಳವಾರ, ಬ್ಯಾಡರು, ವಾಲ್ಮೀಕಿ ಎಂದು. ಪರಿವಾರದವರು ಎಂದು ಮುಂತಾಗಿ ಕರೆಲ್ಪಡುತ್ತಿರುವ ಈ ಸಮುದಾಯದಲ್ಲಿ ಪ್ರಮುಖವಾಗಿ ಎರಡು ಪ್ರಕಾರಗಳನ್ನು ಗುರುತಿಸಲಾಗುತ್ತಿದೆ. ಊರು ಬೇಡರು ಮತ್ತು ಮ್ಯಾಸಬೇಡರು ಎಂದು ಇವರನ್ನು ಕರೆಯಲಾಗುತ್ತಿದೆ. ಬೇಟೆಯ ಹಂತದಿಂದ ಪಶುಪಾಲನೆಯ ಕಡೆ ಸರಿದ ಕೆಲವು ಮಂದಿ ಬೇಡರು ಇತ್ತೀಚಿನವರೆಗೂ ಈ ವೃತ್ತಿಯಲ್ಲೇ ಬದುಕನ್ನು ನಡೆಸುತ್ತಾ ಬಂದವರು ಮ್ಯಾಸಬೇಡರು ಎಂದು ಕರೆಸಿಕೊಳ್ಳುತ್ತಿದ್ದಾರೆ. ಇದರಿಂದ ಬಹು ಹಿಂದೆಯೇ ಪ್ರತ್ಯೇಕಗೊಂಡು ನಾಡಿನ ಜೀವನಕ್ರಮವನ್ನು ತಮ್ಮದಾಗಿಸಿಕೊಂಡವರು ಊರು ಬೇಡರು ಎಂದು ಕರೆಸಿಕೊಳ್ಳುತ್ತಿದ್ದಾರೆ.

ಸಾಮಾನ್ಯವಾಗಿ ಸಮುದಾಯವೊಂದರ ಜೀವನ ಕ್ರಮಕ್ಕೂ ಅದು ನೆಲೆಸಿರುವ ಪರಿಸರಕ್ಕೂ ಪರಸ್ಪರ ಸಂಬಂಧವಿರುತ್ತದೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯ ಕಾಡಿನಿಂದ ಆವೃತವಾದ ಬೆಟ್ಟಗುಡ್ಡದ ತಪ್ಪಲುಗಳು ಮತ್ತು ನದಿ ಬಯಲುಗಳಲ್ಲಿ ನೆಲೆಸಿರುತ್ತದೆ. ಬೇಟೆಯೇ ಮೂಲತಃ ಆಹಾರ ಸಂಪಾದನೆಯ ಮಾರ್ಗವಾಗಿದ್ದ ಹಂತದಲ್ಲಿ ಮ್ಯಾಸಬೇಡರು ಇಂತಹ ನೆಲೆಗಳಲ್ಲಿಯೇ ವಾಸಿಸುತ್ತಿದ್ದರು. ಕ್ರಮೇಣ ಪಶುಪಾಲನೆಯ ಕಡೆ ಗಮನ ಹರಿಸಿದರು. ಪಶುಪಾಲನೆ ಎಂದಾಗಲೂ ಕಾಡಿನ ವಾಸ ಅನಿವಾರ್ಯ. ಆದರೆ, ದುರ್ಗಮವಾದ ಕಾಡುಗಳಲ್ಲಿ ವಾಸಿಸುವುದು ಇವರ ಪಶುಸಂಪತ್ತಿಗೆ ಪ್ರತಿಬಂಧಕವೇ. ಕ್ರೂರ ಮೃಗಗಳ ಹಾವಳಿ ಹೆಚ್ಚು. ಊರಂಚಿನ ವಿರಳ ಕಾಡುಗಳಾದರೆ ಅಪಾಯವೂ ಕಡಿಮೆ. ಅಲ್ಲದೆ ತಮ್ಮ ಉತ್ಪನ್ನಗಳಾದ ಹಾಲು, ಮೊಸರು ಇತ್ಯಾದಿಗಳನ್ನು ಊರಿನ ಜನರಿಗೆ ಕೊಟ್ಟು ಬದಲಾಗಿ ತಮಗೆ ಬೇಕಾದ ಧಾನ್ಯ, ಹಿಟ್ಟು ಇತ್ಯಾದಿಗಳನ್ನು ವಿಕ್ರಯಿಸಿಕೊಳ್ಳುವುದು ಸುಲಭ. ಹಾಗಾಗಿ ಇವರು ಅಷ್ಟು ದುರ್ಗಮವಲ್ಲದ, ಹುಲ್ಲುಗಾವಲುಗಳಿಂದ ಕೂಡಿದ ಬೆಟ್ಟದ ತಪ್ಪಲು ನದಿ ಕಣಿವೆಗಳ ಆಸುಪಾಸಿನಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿರುವುದು ಸಹಜವೇ.



ಒಂದು ಬುಡಕಟ್ಟಿನ ವಿಶಿಷ್ಟತೆಯ ಅಧ್ಯಯನ ಮಾಡುವಾಗ ಆ ಬುಡಕಟ್ಟಿನ ಮೂಲ ನೆಲೆ ಮತ್ತು ಇಂದಿನ ನೆಲೆಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಮ್ಯಾಸಬೇಡರನ್ನು ಕುರಿತು ಅಧ್ಯಯನ ಮಾಡಲು ತೊಡಗಿದಾಗ ಅವರ ನೆಲೆಗಳ ಬಗೆಗಿನ ಚರ್ಚೆ ಅಗತ್ಯವಾದುದು. ಇದುವರೆಗೆ ಈ ಸಮುದಾಯದ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಕ್ರಿ.ಶ. ೧೯೦೦ರಲ್ಲಿಯೇ ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರಿಯವರ 'Castes and Tribes of Southern India' ಎಂಬ ಕೃತಿ ಪ್ರಕಟಿಸಲ್ಪಟ್ಟಿತು. ಏಳು ಸಂಪುಟಗಳ ಈ ಕೃತಿ ದಕ್ಷಿಣ ಭಾರತದ ಅನೇಕ ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ಕೆಲವು ವಿವರಗಳನ್ನು ಕೊಡುತ್ತದೆ. ಎರಡನೇ ಸಂಪುಟದ ೧೮೪ನೆ ಪುಟದಲ್ಲಿ ತೆಲುಗು ಮಾತನಾಡುವ ಆಂಧ್ರದಲ್ಲಿ ನೆಲೆಸಿರುವ ಬೋಯಿಗಳು ಮತ್ತು ಕನ್ನಡ ಮಾತನಾಡುವ ಕರ್ನಾಟಕದ ಬೇಡರು ಎರಡು ಮುಖ್ಯ

ಭಾಗಗಳಾಗಿ ವಿಭಜನೆಗೊಂಡಿದ್ದು ಊರು ಅಥವಾ ಹಳ್ಳಿಯ ಮನುಷ್ಯರು ಮತ್ತು ವ್ಯಾಸ ಅಥವಾ ಹುಲ್ಲುಗಾವಲಿನ ಮನುಷ್ಯರು ಎಂದು ಹೇಳುತ್ತಾರೆ. ಕರ್ನಾಟಕದಲ್ಲಿ ಬೇಡ, ನಾಯಕ ಎಂದು ಕರೆಸಿಕೊಳ್ಳುವವರೇ ತೆಲುಗಿನಲ್ಲಿ ಬೋಯಿ, ಬಾಯೊಳ್ಳ ಎಂದು ಕರೆಯಲ್ಪಡುತ್ತಾರೆ. ಹೀಗೆ ಹೇಳುವ ಥರ್‌ಸ್ಟನ್‌ರವರು ಅವರ ಮೂಲನೆಲೆಯ ಬಗ್ಗೆ ಪ್ರಸ್ತಾಪ ಮಾಡುವುದಿಲ್ಲ. ನಂತರ ಬಂದ ಕನ್ನಡ ಭಾಷಿಕ ಕೃತಿಗಳಲ್ಲಿ ಒಂದಾದ 'ಮ್ಯಾಸಬೇಡರು' ಎಂಬ ಕಿರುಪುಸ್ತಕದಲ್ಲಿ ಎಂ.ಜಿ. ಈಶ್ವರಪ್ಪನವರು ಮ್ಯಾಸಬೇಡರ ಜೀವನ ಕ್ರಮ, ನಂಬಿಕೆಗಳನ್ನು ಪರಿಚಯಿಸುತ್ತಾ ಅವರ ಭಾಷೆ ತೆಲುಗು ಆಗಿರುವುದರಿಂದ ಆಂಧ್ರಪ್ರದೇಶದ ಕಡೆಯಿಂದ ಬಂದವರಿರಬೇಕೆಂದು ಅಭಿಪ್ರಾಯ ಪಡುತ್ತಾರೆ. ಅವರ ನೆಲೆಯ ಬಗ್ಗೆ ವಿಸ್ತೃತವಾದ ಚರ್ಚೆ ಅವರ ಈ ಕೃತಿಯಲ್ಲಿ ಆಗಿಲ್ಲ. ಇಂದು ಮ್ಯಾಸಬೇಡರು ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ ಎನ್ನುತ್ತಾರೆ. ಅದೇ ವರ್ಷ ಪ್ರಕಟವಾದ 'ನಾಯಕ ಜನಾಂಗದ ಇತಿಹಾಸ' ಎಂಬ ಪುಸ್ತಕದಲ್ಲಿ ಚಳ್ಳಕೆರೆಯ ಆರ್. ರಾಜಣ್ಣ ಇವರು ನಾಯಕರ ಚಹರೆ, ಧಾರ್ಮಿಕ ಆಚರಣೆ, ನಂಬಿಕೆ, ಪರಂಪರೆಗಳ ಬಗ್ಗೆ ತಿಳಿಸುತ್ತಾರೆ. ಮೂಲ ನೆಲೆಯ ಪ್ರಸ್ತಾಪ ಈ ಕೃತಿಯಲ್ಲಿಯೂ ಆಗಿಲ್ಲ. ಶ್ರೀಯುತರಾದ ಎಂ. ರಂಗಪ್ಪನವರು 'ನುಂಕೆಮಲೆ ಪರಮಾರ್ಥ' ಎಂಬ ತಮ್ಮ ಕೃತಿಯಲ್ಲಿ ಮ್ಯಾಸಬೇಡರ ಇಂದಿನ ನೆಲೆಯ ಬಗ್ಗೆ, ಮೊಳಕಾಲ್ಮೂರು ತಾಲ್ಲೂಕಿನ ಕುಗ್ರಾಮಗಳಲ್ಲಿ, ಹಟ್ಟಿಗಳಲ್ಲಿ ನೆಲೆಸಿರುವ, ಅತಂತ್ರ ಸ್ಥಿತಿಯಲ್ಲಿರುವ ಇವರ ಬದುಕಿನ ವಿವರಗಳನ್ನು ಪ್ರಾಸಂಗಿಕವಾಗಿ ತಿಳಿಸುತ್ತಾರೆ. ಅವರ ಮೂಲ ನೆಲೆಯ ಬಗ್ಗೆ ಚರ್ಚೆ ಕೃತಿಯಲ್ಲಿಯೂ ಆಗಿಲ್ಲ. ಈ ಸಮುದಾಯವನ್ನು ಕುರಿತು ಮೊದಲ ಬಾರಿಗೆ ವಿಸ್ತೃತವಾದ ಅಧ್ಯಯನವನ್ನು ಮಾಡಿದವರು ಡಾ. ಕೃಷ್ಣಮೂರ್ತಿ ಹನೂರರು. ತಮ್ಮ 'ಬೇಡನಾಯಕರು ಒಂದು ಜಾನಪದ ಅಧ್ಯಯನ' ಎಂಬ ಸಂಶೋಧನಾ ಕೃತಿಯಲ್ಲಿ, ಅಕಾಡೆಮಿ ಪ್ರಕಟಿಸಿದ 'ಮ್ಯಾಸಬೇಡರ ಸಂಸ್ಕೃತಿ' ಮತ್ತು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಿಸಿದ 'ಕರ್ನಾಟಕದ ಬುಡಕಟ್ಟುಗಳು' ಇದರಲ್ಲಿರುವ ತಮ್ಮ ಲೇಖನದಲ್ಲಿ (ಮ್ಯಾಸಬೇಡರು) ಈ ನಾಯಕರು ಮೂಲತಃ ಆಂಧ್ರದ ಶ್ರೀ ಶೈಲದ ಕಡೆಯಿಂದ ಬಂದವರು ಎಂದು ಅಭಿಪ್ರಾಯಪಡುತ್ತಾ ಉತ್ತರದಿಂದ ಬಂದವರು ಎಂಬ ಹೇಳಿಕೆಯನ್ನು ಸ್ಪಷ್ಟವಾಗಿ ನಿರಾಕರಿಸುತ್ತಾರೆ. ಇಂದು ಈ ಸಮುದಾಯ ಹರಡಿರುವ ನೆಲೆಗಳ ವಿವರ ಕೊಡುತ್ತಾರಾದರೂ ಹಿಂದಿನ ನೆಲೆಗಳ ವಿವರಗಳ ಸ್ಪಷ್ಟನೆ ಇಲ್ಲ.

ಚಿತ್ರದುರ್ಗ ಜಿಲ್ಲೆಯ ಗೆಜೆಟಿಯರ್ ಆಧರಿಸಿ 'ನಾಯಕ ಜನಾಂಗ ಒಂದು ನೋಟ' ಎಂಬ ತಮ್ಮ ಲೇಖನದಲ್ಲಿ ಡಾ. ಮೀರಾ ಸಾಬಿಹಳ್ಳಿ ಶಿವಣ್ಣನವರು ಮೂಲತಃ ಆಂಧ್ರಪ್ರದೇಶದ ಶ್ರೀಶೈಲದ ಬಳಿಯ ಕರಿಮಲೆ, ಕೊಮ್ಮಮಲೆಗಳ ಕಡೆಯಿಂದ ಮತ್ತು ತಿರುಪತಿಯ ಬಳಿಯ ಜಡೇಕಲ್ಲು ದುರ್ಗದ ಕಡೆಯಿಂದ ವಲಸೆ ಬಂದ ಜನ ಎಂದು ಹೇಳುತ್ತಾರೆ.

ಇಲ್ಲಿಯೂ ಇದಕ್ಕೂ ಮುಂಚಿನ ನೆಲೆಗಳ ಪ್ರಸ್ತಾಪ ಆಗಿಲ್ಲ. ಮೈಸೂರು ರಾಜ್ಯ ಗೆಜೆಟಿಯರ್‌ನ ಚಿತ್ರದುರ್ಗ ಜಿಲ್ಲೆ ಕುರಿತ ವಿವರದಲ್ಲಿ Hatti Family' ಎಂಬ ವಿಷಯ ಪ್ರಸ್ತಾಪಿಸಲ್ಪಟ್ಟಿದ್ದು, ಪುಟಸಂಖ್ಯೆ ೧೦. ಕಾಟಮಲ್ಲ ನಾಯಕ ತನ್ನ ಸುಮಾರು ೧೨೦೦ ಪಶುಸಂಪತ್ತಿನೊಂದಿಗೆ ಶ್ರೀ ಶೈಲ ಪ್ರಾಂತ್ಯದಿಂದ

ದಕ್ಷಿಣದ ಕಡೆ ಬಂದು ಕೊನೆಗೆ ಇಂದು 'ನಾಯಕನಹಟ್ಟಿ' ಎಂದು ಕರೆಯಲ್ಪಡುತ್ತಿರುವ ಪ್ರಾಂತ್ಯದಲ್ಲಿ ನೆಲೆಸಿದ ಎಂಬ ವಿವರ ಲಭ್ಯವಾಗುತ್ತದೆ. ಇಲ್ಲಿಯೂ ಮೂಲ ನೆಲೆ ಮತ್ತು ಇಂದಿನ ನೆಲೆಗಳಾದ ಕರ್ನಾಟಕದ ಇತರ ಜಿಲ್ಲೆಗಳ ಪ್ರಸ್ತಾಪ ಆಗಿಲ್ಲ. ಯಾವುದೇ ಒಂದು ಅಧ್ಯಯನವು ಅಧ್ಯಯನಕಾರನಿಗೆ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಮಾಹಿತಿ ಮತ್ತು ಅದುವರೆಗೆ ಬಂದಿರುವ ಸಮುದಾಯಕ್ಕೆ ಸಂಬಂಧಿಸಿದ ಅಲ್ಲದೆ ಸೋದರ ಸಮುದಾಯಗಳಿಗೆ ಸಂಬಂಧಿಸಿದ ಅಧ್ಯಯನಗಳಲ್ಲಿ ದೊರಕುವ ಮಾಹಿತಿಯನ್ನಾಧರಿಸಿರುತ್ತದೆ. ಹೀಗಾಗಿ ಈ ಮಿತಿಯಲ್ಲಿ ತನ್ನ ನಿಲುವನ್ನು ಸಂಶೋಧಕ ಪ್ರಕಟ ಮಾಡುತ್ತಾನೆ. ಹಾಗಾಗಿ ನಿರ್ದಿಷ್ಟ ಮಾಹಿತಿ ಇಲ್ಲದಿದ್ದರೆ ಅದನ್ನೊಂದು ಕೊರತೆ ಎಂದು ಭಾವಿಸುವುದಕ್ಕಿಂತಲೂ ಅವರಿಗೆ ದೊರಕಿದ ವಿವರಗಳ ಕೊರತೆಯ ಮಿತಿ ಎಂದು ಅರ್ಥೈಸಿಕೊಳ್ಳುವುದು ಹೆಚ್ಚು ಸಮಂಜಸ. ಈ ವಿನಯದೊಂದಿಗೆ ನಾನು ಗ್ರಹಿಸಿರುವ ಈ ಮೂಲ ನೆಲೆಗಳನ್ನು ಕುರಿತಾದ ವಿವರಗಳನ್ನು ಈ ಮುಂದೆ ಕೊಡುತ್ತಿದ್ದೇನೆ.

ತಮ್ಮ 'ಪ್ರಾಚೀನ ಭಾರತದ ಚರಿತ್ರೆ'ಯಲ್ಲಿ ಕೊಸಂಬಿ[೧೧]ಯವರು ಹೇಳುವಂತೆ, ಮಾನವನ ಬದುಕಿನ ಆರ್ಥಿಕ ಕ್ರಮದಲ್ಲಿ ಮೂರು ಹಂತಗಳಿದ್ದು ಮೊದಲ ಹಂತ ಆಹಾರ ಸಂಗ್ರಹಣೆಯ ಹಂತ. ಕೊನೆಯದು ಆಹಾರ ಉತ್ಪಾದನೆಯ ಹಂತ. ಇವೆರಡರ ಮಧ್ಯೆ ಪಶುಪಾಲನೆಯ ಹಂತ ಬರುತ್ತದೆ. ಪಶುಪಾಲಕ ಸಂಸ್ಕೃತಿ ಆರ್ಯರ ಮೂಲಕ ಭಾರತಕ್ಕೆ ಕಾಲಿರಿಸಿತು ಎಂಬ ಸಂಗತಿಯ ಹಿನ್ನೆಲೆಯಲ್ಲಿ ಗಮನಿಸಿದಾಗ ಪಶುಪಾಲಕರಾಗಿರುವ ಈ 'ಮ್ಯಾಸಬೇಡರು' ಆರ್ಯ ಮೂಲದವರೇನೋ ಎಂಬ ಆಲೋಚನೆ ಬರುತ್ತದೆ. ಆದರೆ ಅವರ ದೈಹಿಕ ಲಕ್ಷಣಗಳನ್ನು ಗಮನಿಸಿದಾಗ ಕಪ್ಪುವರ್ಣೀಯರಾದ ಇವರು ಆರ್ಯರಿಗಿಂತ ಭಿನ್ನವಾಗುತ್ತಾರೆ. ಕೊಸಂಬಿಯವರು ಋಗ್ವೇದದಲ್ಲಿ ಹೇಳಲಾದ ಪಂಚಗಣಗಳಲ್ಲಿ ಯಾದವರೂ ಇದ್ದಾರೆ. ಇವರು ಆರ್ಯರಲ್ಲದೆ ಇರಬಹುದು ಆದರೆ ವೇದಕಾಲದ ಆರ್ಯರಂತೆಯೇ ಪಶುಪಾಲಕರು. ಇವರ ದೇವರಾದ ಕೃಷ್ಣನಿಗೂ, ಆರ್ಯರ ದೇವನಾದ ಇಂದ್ರನಿಗೂ ಮುಂಚಿನಿಂದಲೂ ಶತ್ರುತ್ವವೇ. ದಾಸರು ಆರ್ಯರ ಶತ್ರುಗಳೆಂದು ಋಗ್ವೇದದಲ್ಲಿ ಕರೆಯಲ್ಪಡುತ್ತಾರೆ. ಇವರನ್ನು ರಾಕ್ಷಸರೆಂದೇ ವರ್ಣಿಸುತ್ತಾರೆ. ಬಹುಶಃ 'ದಾಸರು' ಎಂಬ ಪದ ಒಂದು ಸಮುದಾಯದ ಹೆಸರಾಗಿರದೆ ಆರ್ಯರಿಗೆ ಪಂಜಾಬಿನಲ್ಲಿ ಎದುರು ನಿಂತ ಎಲ್ಲಾ ಆರ್ಯೇತರ ಸಮುದಾಯಗಳಿಗೂ ಒಟ್ಟಾಗಿ ಪ್ರಯೋಗಿಸಿದ ಪದವಾಗಿರಬಹುದು. ಇವರಲ್ಲಿ ಕೆಲವರು ಆಹಾರ ಸಂಗ್ರಹಣಾ ಜೀವನ ಪದ್ಧತಿಯ ಅರಣ್ಯವಾಸಿಗಳು. ಕೆಲವರು ಪಶುಪಾಲಕರು. ಆರ್ಯರ ಪ್ರಾಬಲ್ಯ ಹೆಚ್ಚಾದಾಗ ಒತ್ತಡಕ್ಕೆ ಸಿಲುಕಿದ ಇವರು ಕ್ರಮೇಣ ದಕ್ಷಿಣಕ್ಕೆ ಅದರಲ್ಲೂ ದಕ್ಷಿಣದ ಪಶ್ಚಿಮದ ಕಡೆ ಚಲಿಸಿರಬಹುದು ಎಂದು ಅಭಿಪ್ರಾಯ ಪಡುತ್ತಾರೆ. ಈ ಆಧಾರದ ಮೇಲೆ ಈ ಮೂಲದಿಂದ ಬಂದವರೇ ಈ 'ಮ್ಯಾಸಬೇಡರು' ಎಂಬುದು ನನ್ನ ಗ್ರಹಿಕೆಯಾಗಿದೆ. ಈಗಿನ ಆಂಧ್ರದ ಗುಡ್ಡಗಾಡುಗಳಲ್ಲಿ ಪಶು ಸಂಗೋಪನೆ ಮಾಡುತ್ತಾ ಕಾಲ ಕಳೆದು ಇಂದಿನ ಕರ್ನಾಟಕದ ಕಡೆ ಚಲಿಸಿರಬಹುದು. ರಾಹುಲ ಸಾಂಕೃತ್ಯಾಯನ ಅವರು ತಮ್ಮ 'ವೋಲ್ಗ ಗಂಗಾ' ಕೃತಿಯಲ್ಲಿ ಗಂಗಾ ನದಿಯ ಬಯಲಿನಲ್ಲಿ ಆರ್ಯರಿಗೂ ಮತ್ತು ಕಿರಾತರಿಗೂ, ನಿಷಾಧರಿಗೂ ಯುದ್ಧಗಳು ನಡೆದು ಇವರ ಪರಾಕ್ರಮಕ್ಕೆ

---

[೧೧] ಮೂಲ, ಬಾಲಗೋಪಾಲ್, ಅನುವಾದ : ಎಚ್.ಎಸ್. ಶ್ರೀಮತಿ, ಕನ್ನಡ ವಿಶ್ವವಿದ್ಯಾಲಯ ಪ್ರಕಟಿತ ಪು.೧೧೧, ೧೯೯೮.

ಆರ್ಯರ ಪಡೆಗಳು ತತ್ತರಿಸಿ ಹೋದವು ಎನ್ನುತ್ತಾರೆ. ಈ ಆಧಾರಗಳಿಂದ ಆರ್ಯರಿಗಿಂತಲೂ ಮೊದಲು ದ್ರಾವಿಡ ಮಾದರಿಯ ಸಮುದಾಯಗಳು ಭಾರತದ ಉತ್ತರಭಾಗದಲ್ಲಿದ್ದವು ಎಂಬ ವಿಷಯ ಸ್ಪಷ್ಟವಾಗುತ್ತದೆ.

ಮೇಲಿನ ಸಂಗತಿಯನ್ನು ದೃಢಪಡಿಸುವಂತೆ ನಾಡಿನ ಪ್ರಸಿದ್ಧ ಸಂಶೋಧಕರಾದ ಶಂ.ಭಾ. ಜೋಷಿಯವರ ಕರ್ಣಾಟ ಸಂಸ್ಕೃತಿ - ಶಂಭಾ ಕೃತಿ ಸಂಪುಟ-೨ ಕೃತಿಯೂ ಕೆಲವು ವಿವರಗಳನ್ನು ನೀಡುತ್ತದೆ.

೧. ಆರ್ಯರು ಬರುವ ಮೊದಲು ಕಂದಮಿಳರು ಸಿಂಧೂ ನದಿ ಬಯಲಿನಲ್ಲಿ ಇದ್ದರು. ಆರ್ಯರೊಂದಿಗೆ ಘರ್ಷಣೆಯಾಗಿ ಸ್ಥಾನ ಬದಲಾವಣೆಗಾಗಿ ಕೆಲವರು ಪೂರ್ವಕ್ಕೆ ಸರಿದರು. ಕೆಲವರು ಪಶ್ಚಿಮದ ಕರಾವಳಿ ಗುಂಟ ಸರಿದರು, ಪು.೧೮೫, ೧೮೬.

೨. ಕುಡಿ-ಕೊಡಿ-ಪರ್ಣೆ -ಗುಡಿ (ಗುಡಿಸಲು) ತಳಿರ್ ಜೋಂಪಡಿಗಳಲ್ಲಿ ವಾಸಿಸುತ್ತಿದ್ದ ಕಂದಮಿಳ ಸೊಲ್ಲಿನ ಜನವು ದನಗಾರಿಕೆಯನ್ನು ಕೈಕೊಂಡ ಹಾಗೆ ಹಟ್ಟಿಗಳಲ್ಲಿ ಇರತೊಡಗಿತು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಬೇಡರ ಇಂದಿನ ಬಹುಪಾಲು ನೆಲೆಗಳು ಹಟ್ಟಿಗಳು, ಗುಡಿಸಲವಾಸ ಇವರದಾಗಿದ್ದು ತಾವು ಆ ಹಟ್ಟಿಯನ್ನು ಬಿಟ್ಟು ಮತ್ತೊಂದೆಡೆಗೆ ಹಟ್ಟಿ ಕಟ್ಟಿಕೊಂಡು ಇರಲು ಹೊರಟಾಗ ತಮ್ಮ ಗುಡಿಸಲನ್ನೂ ತಲೆಯ ಮೇಲೆ ಹೊತ್ತು ಸಾಗಿಸುತ್ತಿದ್ದರು. ಇಂದು ಗುಡಿಸಲ ವಾಸ ಕಡಿಮೆಯಾಗುತ್ತಿದ್ದು ಮನೆಗಳಲ್ಲಿ ವಾಸಿಸುತ್ತಿರುವರಾದರೂ ಅವರ ವೀರನಾಯಕರು ಮತ್ತು ಪೆಟ್ಟಿಗೆ ದೇವರುಗಳನ್ನು ಪೂಜಿಸುತ್ತಿರುವುದು ಸೊಪ್ಪು-ಹುಲ್ಲಿನ ಗುಡಿಸಲುಗಳಲ್ಲಿಯೇ. ಕಂಪಳದೇವರ ಜಾತ್ರೆಯಲ್ಲಿ ಮತ್ತು ಬೋಸೇದೇವರ ಜಾತ್ರೆಯಲ್ಲಿ ಪೆಟ್ಟಿಗೆ ದೇವರೊಂದಿಗೆ ಗುಡಿಸಲನ್ನು ಹೊತ್ತೊಯ್ಯುವ ಸಂಪ್ರದಾಯವಿದೆ. ಈಗಿರುವ ಹಟ್ಟಿಯಿಂದ ಹೊರಗೆ ಅಂದರೆ ಹಟ್ಟಿಯ ಹೊರವಲಯದಲ್ಲಿ ಜಾತ್ರೆಯನ್ನು ಏರ್ಪಡಿಸುತ್ತಾರೆ. ಅಲ್ಲಿ ಹೊಸ ಗುಡಿಸಲನ್ನು ಹಾಕಿ ಪೆಟ್ಟಿಗೆ ದೇವರನ್ನು ಕೊಂಡೊಯ್ದು ಜಾತ್ರೆ ನಡೆಸುತ್ತಾರೆ. ಜಾತ್ರೆ ಮುಗಿದ ನಂತರ ಮೂಲ ಹಟ್ಟಿಗೆ ದೇವರನ್ನು ತರುವಾಗ ಆ ಗುಡಿಸಲನ್ನು ಹೊತ್ತು ತಂದು ಅದರಲ್ಲಿ ದೇವರನ್ನು ಇರಿಸುತ್ತಾರೆ. ಮೊದಲು ಇಡೀ ಹಟ್ಟಿಯೇ ಸ್ಥಳಾಂತರ ವಾಗುತ್ತಿದ್ದುದಾಗಿಯೂ ಈಗ ಬದಲಾವಣೆಯ ಕಡೆ ಚಲಿಸುತ್ತಿರುವ ಈ ಸಮುದಾಯದಲ್ಲಿ ಸ್ಥಿರ ನೆಲೆಗಳು ಅಂದರೆ ಕಲ್ಲು, ಇಟ್ಟಿಗೆ ಬಳಸಿ ಮನೆಗಳನ್ನು ಕಟ್ಟಿಕೊಳ್ಳುವ ಪರಿಪಾಠ ಬಂದಿರುವುದು ಕಾರಣವಾಗಿ ಕೇವಲ ದೇವರನ್ನು ಮಾತ್ರ ಕೊಂಡೊಯ್ದು ಮತ್ತೆ ಹಟ್ಟಿಯೊಳಿಗೆ ತರುವ ಸಂಪ್ರದಾಯವಿದೆ.

೩. ಮೂಲ ಕಂದಮಿಳಿನಿಂದ ಕವಲೊಡೆದು ಕಂನುಡಿ, ತೆಲುಗು, ತಮಿಳು ಮೊದಲಾಗಿ ಒಡೆದವು ಎನ್ನುತ್ತಾರೆ ಶಂ.ಭಾ. ಜೋಷಿಯವರು. ಮ್ಯಾಸಬೇಡರ ಭಾಷೆಯೇ ತೆಲುಗು ಆಗಿರುವುದರಿಂದ ಈ ಮೂಲದಿಂದ ಬಂದವರು ಎಂದು ನಿರ್ಧರಿಸಲು ಈ ಅಂಶವೂ ಕಾರಣವಾಗುತ್ತದೆ.

೪. ಪ್ರಾಣಿಗಳಿಂದ ಬಂದ ಎಡೆಯ ಹೆಸರುಗಳಲ್ಲಿ ಅವಿನಹಳ್ಳಿ, ಹಿರೆಅವಳ್ಳಿ, ಚಿಕ್ಕ ಅವಳ್ಳಿ, ಆವಿನಮಡು, ತುರುವನೂರು ಎಂಬ ಚೊಕ್ಕ ಕಂದಮಿಳ ತಳಪಾಯದ ನಾಮ ಸಂಕೇತಗಳು ದೊರೆಯುತ್ತವೆ.

ಧನಗಾರಂತೆ 'ಎಮ್ಮಿಗರು' ಎಂಬ ಜನವೂ ಇದ್ದಿತು (ಪು.೩೯೫). ಮ್ಯಾಸಬೇಡರು ಇಂದು ನೆಲೆಸಿರುವ ಪ್ರಾಂತ್ಯದಲ್ಲಿ ಈ ಹೆಸರಿನ ಹಳ್ಳಿಗಳಿವೆ. ಚಿತ್ರದುರ್ಗ ಜಿಲ್ಲೆಯ ತುರುವನೂರು, ಆವಲೇನಹಳ್ಳಿ, ಆವಿನ ಮಡು, ಹಿರೇಹಳ್ಳಿ, ಚಿಕ್ಕಳ್ಳಿ ಇತ್ಯಾದಿ. 'ಎನುಮಲವರು' ಎಂಬ ಪ್ರಧಾನ ಬೆಡಗೂ ಈ ಬುಡಕಟ್ಟಿನಲ್ಲಿದೆ. ಎದ್ದು, ಆವು, ಮಲೆ, 'ಮಲ್ಯೆ' ಕಂದಮಿಳ ಪದಗಳು ಮ್ಯಾಸರಲ್ಲಿಯೂ ಈ ಪದಗಳ ಬಳಕೆ ಇದೆ. ಇದನ್ನು

೫. ಗೋದ, ನರ್ಮದಾ ಬದಿಗಳ ನಡುವಣ ನಾಡಿನಲ್ಲಿ ದ್ರಾವಿಡ ಇತ್ತು. ಪ್ರಸಿದ್ಧ ಭಾಷಾಶಾಸ್ತ್ರಜ್ಞ ಫ್ರಾನ್ಸಿಸ್ ಬ್ಲೋಕ್ ತೆಲುಗು ಮತ್ತು ಕನ್ನಡ ಇವೆರಡಕ್ಕೂ ಮೂಲ ಕಂದಮಿಳಾಗಿದ್ದು ತೆಲುಗು ಪೂರ್ವಕ್ಕೆ ಶ್ರೀಶೈಲ, ನಾಗಾರ್ಜುನ ಕೊಂಡದ ಆಚೆ ಇದ್ದುದಾಗಿ ಕಂಡುಬಂದಿದೆ ಎಂದಿದ್ದಾರೆ. ಪಶುಪತಿ, ಲಿಂಗಾರಾಧನೆ, ಜಲಪೂಜೆ, ಅಮ್ಮನ ಪೂಜೆ, ಆರ್ಯೇತರರದು. ಕಂದಮಿಳರ ಪೂಜಾ ವಿಧಾನವದು ಎಂದಿದ್ದಾರೆ. ಉತ್ತರದಿಂದ ಸ್ಥಾನಪಲ್ಲಟವಾದಾಗ ತಮ್ಮ ಪಶುಸಂಪತ್ತಿನೊಂದಿಗೆ ನೆಲೆಯನ್ನು ಅರಸುತ್ತಾ ಬಂದ ಆರ್ಯೇತರರು ಈ ಗೋದಾ, ನರ್ಮದಾ ನದಿಗಳ ನಡುವೆ ನೆಲೆಸಿದ್ದಿರಬಹುದು. ಧನಗಾರರು ಎಂದೂ ಇವರು ಕರೆಯಲ್ಪಟ್ಟರು. ಈ ಮೂಲದಿಂದ ಬಂದವರೇ ಮ್ಯಾಸಬೇಡರು, ಕಾಡುಗೊಲ್ಲರು, ಕುರುಬರು, ಮ್ಯಾಸಬೇಡರಲ್ಲೂ ಪಶುಪತಿ-ಶಿವನ ಆರಾಧನೆ, ಲಿಂಗಾರಾಧನೆ, ಅಮ್ಮನ ಆರಾಧನೆ, ಗಂಗೆ ಮಾಳಮ್ಮನ ಪೂಜೆ (ಕುರುಬ ಧನಗಾರರೂ ಮಾಳಮ್ಮನ ಪೂಜೆ ಮಾಡುತ್ತಾರೆ) ಇರುವುದರಿಂದ ಇವರೂ ಅದೇ ಮೂಲದಿಂದ ಬಂದವರು ಎಂದು ಹೇಳಬಹುದು. ಈ ಮೂಲಕ ಆರ್ಯೇತರರು ಎಂಬ ಅಂಶ ಇನ್ನಷ್ಟು ಸ್ಪಷ್ಟವಾಗುತ್ತದೆ.

ಶಂ.ಭಾ. ಜೋಷಿಯವರು ನೀಡುವ ವಿವರಗಳನ್ನು ಆಧರಿಸಿ ಮೂಲತಃ ಭಾರತದ ಉತ್ತರಭಾಗದಲ್ಲಿದ್ದು ಕಂದಮಿಳ ಭಾಷಿಕರಾಗಿದ್ದು ಈ ಆರ್ಯೇತರರು ಘರ್ಷಣೆಯೇ ಕಾರಣವಾಗಿ ದಕ್ಷಿಣಕ್ಕೆ ಚಲಿಸಿ ನರ್ಮದೆಯ ತೀರದಲ್ಲಿ ಕೆಲವು ಕಾಲ ನೆಲೆ ನಿಂತು ಗುಜರಾತ್, ಮಹಾರಾಷ್ಟ್ರ ನಂತರ ಆಂಧ್ರದ ಕಡೆ ಕ್ರಮೇಣ ಈ ಗುಂಪುಗಳು ಚಲಿಸಿ ನಂತರ ಮಧ್ಯ ಕರ್ನಾಟಕದ ಕಡೆ ಚಲಿಸಿವೆ ಎಂದು ಹೇಳಲು ಶಕ್ಯವಾಗುತ್ತದೆ. ಕಾಡುಗೊಲ್ಲರಲ್ಲಿ ಪ್ರಚಲಿತವಿರುವ ನಂಬಿಕೆ ಪ್ರಕಾರ ಚಿತ್ತಮುತ್ತಿ ಮತ್ತು ಚಂದಮುತ್ತಿ ನೇತೃತ್ವದಲ್ಲಿ ಕಾಡುಗೊಲ್ಲರು ತಮ್ಮ ದನಕರುಗಳೊಂದಿಗೆ ದೆಹಲಿಯ ನವಾಬನ ಕಾಟ ತಡೆಯಲಾರದೆ ದಕ್ಷಿಣಕ್ಕೆ ಬಂದರು ಎಂದು ಹೇಳಲಾಗುತ್ತದೆ.[೧೨] ಕರ್ನಾಟಕದಲ್ಲಿ ನೆಲೆಸಿರುವ ಮ್ಯಾಸಬೇಡರ ಭಾಷೆ ಕನ್ನಡ ಮಿಶ್ರಿತ ತೆಲುಗು. ಪರಿಸರದ ಭಾಷೆ ಇಲ್ಲಿ ಸಾಕಷ್ಟು ಪ್ರಭಾವ ಬೀರಿದೆ. ತಮಿಳು ನಾಡಿನ ಕಡೆ ಚಲಿಸಿದ ಈ ಪಶುಪಾಲಕರ ಗುಂಪುಗಳ ಭಾಷೆ ಇಂದಿಗೂ ತೆಲುಗಾದರೂ ತಮಿಳು ಮಿಶ್ರಿತ ತೆಲುಗಾಗಿದೆ. "ಭಾಷೆಯನ್ನು ಕೇವಲ ಸಂವಹನ ಮಾಧ್ಯಮವನ್ನಾಗಿ ಮಾತ್ರ ಗುರುತಿಸದೆ ಭಾಷೆ ಹಾಗು ಪರಿಕಲ್ಪನೆಗಳ ಒಳಗೆ ಹುದುಗಿರುವ ಆಳವಾದ ರಚನೆ ಯಾವುದೇ ಒಂದು ಸಮುದಾಯದ ಗಾಢ ಅಧ್ಯಯನಕ್ಕೆ ವಿಶೇಷತಃ ಸಹಾಯ ಮಾಡಬಲ್ಲುದು" ಎನ್ನುತ್ತಾರೆ ಭಾಷಾ ವಿಜ್ಞಾನಿಯಾದ ನೋಮ್ ಚೋಮ್‌ಸ್ಕಿ. 'ಭಾಷೆಯ

---

[೧೨] ಡಾ. ತೀ.ನಂ.ಶಂಕರನಾರಾಯಣ. ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಪು.೧೨೧. ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ.

ಮೂಲಕ ಸಂಸ್ಕೃತಿಯ ಅಧ್ಯಯನ ಸಾಧ್ಯ' ಎಂಬ ಅಭಿಪ್ರಾಯ ಶಂ.ಭಾ. ಜೋಷಿಯವರದು. ಹೀಗಾಗಿ ಭಾಷಿಕ ಹಿನ್ನೆಲೆಯಲ್ಲಿ ಮ್ಯಾಸಬೇಡರ ಸಂಸ್ಕೃತಿ, ಅವರ ಮೂಲನೆಲೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಮೇಲಿನ ಎಲ್ಲಾ ಆಧಾರಗಳ ಮೂಲಕ ಈ ಬುಡಕಟ್ಟಿನ ಮೂಲ ನೆಲೆ ಭಾರತದ ಉತ್ತರ ಭಾಗ ಎಂದು ಖಚಿತವಾಗಿ ಹೇಳಬಹುದು. ಉಳಿದಂತೆ ಆರ್ಯರದು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ. ಮ್ಯಾಸಬೇಡರದು ಮೂಲತಃ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಾಗಿದ್ದು ಕಾಲಾಂತರದಲ್ಲಿ ಪಿತೃಪ್ರಧಾನ್ಯತೆಯ ಕಡೆ ತಿರುಗಿದೆ.

ಆರ್ಯರಲ್ಲಿ ಸೋಮರಸದ ಆರಾಧನೆ, ಬಳಕೆ ಇದ್ದರೆ, ಮ್ಯಾಸಬೇಡರಲ್ಲಿ ಮದ್ಯಪಾನ ಇಂದಿಗೂ ನಿಷಿದ್ಧವೇ. ಮಧ್ಯ ತಯಾರಿಸುವ ಮೂಲಗಳಲ್ಲೊಂದಾದ ಈಚಲುಮರದ ಯಾವುದೇ ಉತ್ಪನ್ನವನ್ನು ಇವರು ಬಳಸುವುದಿಲ್ಲ. ಈಚಲ ಮರದ ಕೆಳಗೆ ಕೂಡುವುದೂ ಕೂಡ ನಿಷಿದ್ಧವೇ. ಅಷ್ಟರಮಟ್ಟಿಗೆ ಈ ಸಮುದಾಯ ಮಧ್ಯದಿಂದ ದೂರ. ಈಗ ಕುಡಿತದ ಚಟ ಮೈಗೂಡಿಸಿಕೊಂಡಿದ್ದರೂ ದೈವಾರಾಧನೆಗಳಲ್ಲಿ ಇವರು ಪಾಲ್ಗೊಳ್ಳುವುದಿಲ್ಲ. ಆರ್ಯರಲ್ಲಿ ಅಗ್ನಿಯ ಆರಾಧನೆ ಇದೆ. ಆದರೆ ಮ್ಯಾಸಬೇಡರಲ್ಲಿ ಅಗ್ನಿಯ ಆರಾಧನೆ ಇಲ್ಲ. ಶವಸಂಸ್ಕಾರದ ವಿಧಿಗಳೂ ಪರಸ್ಪರ ಭಿನ್ನ. ಈ ಕಾರಣಗಳಿಂದಲೂ ಇವರು ಆರ್ಯೇತರ ಸಮುದಾಯ ಎಂದು ಹೇಳಲು ಸಾಧ್ಯವಾಗುತ್ತದೆ.

ಮ್ಯಾಸಬೇಡರು ಪೂಜಿಸುವ ಪೆಟ್ಟಿಗಳಲ್ಲಿ ಸಾಮಾನ್ಯವಾಗಿ ಸಾಲಿಗ್ರಾಮಗಳಿರುತ್ತವೆ. ಇದು ನೈಸರ್ಗಿಕವಾಗಿ ದೊರೆಕುವ ಶಿಲೆ. ನೇಪಾಳದಲ್ಲಿ ಗಂಡಕಿ ನದಿ ಪ್ರಾಂತ್ಯದಲ್ಲಿ ಸಿಗುವ ಶಿಲೆ ಇದು. ಭಾರತದ ಮೂಲನಿವಾಸಿ ಬುಡಕಟ್ಟುಗಳಾದ ಕಿರಾತರು, ಬಿಲ್ಲರು, ಬೇಡರು, ಶಬರರು ಈ ಸಾಲಿಗ್ರಾಮ ಶಿಲೆಯ ಆರಾಧಕರಾಗಿದ್ದು, ಮಧ್ಯ ಕರ್ನಾಟಕದಲ್ಲಿರುವ ಈ ಮ್ಯಾಸಬೇಡರು ಆರಾಧಿಸುವುದು ಸಾಲಿಗ್ರಾಮಗಳಾಗಿರುವುದರಿಂದ ಇವರು ಭಾರತದ ಉತ್ತರ ಭಾಗದಲ್ಲಿ ಇದ್ದಿರಬಹುದಾದ ಸಾಧ್ಯತೆಯನ್ನು ಈ ಅಂಶ ಪುಷ್ಠೀಕರಿಸುತ್ತದೆ.

ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್.ವಿ. ನಂಜುಂಡಯ್ಯನವರು ಕರ್ನಾಟಕಕ್ಕೆ ಸಂಬಂಧಿಸಿದಂತೆ, 'The Mysore Castes and Tribes' ಕೃತಿಯನ್ನು ಮೈಸೂರು ವಿಶ್ವವಿದ್ಯಾಲಯದ ಮೂಲಕ ಪ್ರಕಟಿಸಿದ್ದು ಅದರಲ್ಲಿ ಮ್ಯಾಸಬೇಡರ ಬಗೆಗಿನ ವಿವರಗಳು ಲಭ್ಯವಾಗುತ್ತವೆ. ಲೇಖಕರು ನಾಯಕರನ್ನು 'The Bedar are an aboriginal tribe of the Telugu and Canarese districts' ಎಂದು ಹೇಳುತ್ತಾ ಇವರು ಆರ್ಯೇತರರೂ ದಕ್ಷಿಣ ದ್ರಾವಿಡ ಜನಾಂಗದ ಪೂರ್ವಜರೂ ಆಗಿರುವಂತೆ ತೋರುತ್ತದೆ ಎಂದಿದ್ದು ಇವರು ಆರ್ಯೇತರರು ಎಂಬ ವಿಷಯವನ್ನು ಸ್ಪಷ್ಟೀಕರಿಸುತ್ತದೆ. ಎಂ.ಎಸ್. ಪುಟ್ಟಣ್ಣವರು 'ಚಿತ್ರದುರ್ಗದ ಪಾಳೆಯಗಾರರು' ಎಂಬ ತಮ್ಮ ಕೃತಿಯಲ್ಲಿ ಪಾಳೆಯಗಾರರ ಮೂಲ ಪುರುಷರು ದಿಲ್ಲಿಯಿಂದ ಬಂದವರೆಂದು ಹೇಳುತ್ತಾರೆ. ಮ್ಯಾಸಬೇಡರಲ್ಲಿ ಒಂದಿಬ್ಬರು ಪಾಳೆಯಗಾರರಾಗಿದ್ದು ನಿಜ. ಹಟ್ಟಿ ಮಲ್ಲಪ್ಪನಾಯಕ ಮತ್ತು ಮದಕರಿನಾಯಕ. ಮೇಲಿನವರ ಅಭಿಪ್ರಾಯಕ್ಕೆ ಇದೂ ಸಮರ್ಥನೆಯಾಗುತ್ತದೆ. ವಸಾಹತುಶಾಹಿ ಆಕ್ರಮಣವೊಂದು ಮೂಲನಿವಾಸಿಗಳನ್ನು ಬದಿಗೊತ್ತಿ ಎಲ್ಲಿಂದಲೋ ಆಸರೆಗಾಗಿ, ಸಿರಿಸಂಪತ್ತುಗಳಿಗಾಗಿ ಬಂದ ಜನಗಳು ಈ ನೆಲದ ಶ್ರೀಮಂತ ಸಮೃದ್ಧತೆಯಲ್ಲಿ

ಬೇರೂರಿ ಬಲವಾಗಿ ಬೆಳೆದು ನಿಂತ ಬಹುಮುಖ್ಯ ಉದಾಹರಣೆಗಳು ನಮಗೆ ಪ್ರಪಂಚದಾದ್ಯಂತ ಅಲ್ಲಲ್ಲಿ ಸಿಗುತ್ತವೆ. ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನ ಕತೆಯೂ ಇದೇ ಆಗಿದೆ. ಸಂಖ್ಯಾಬಲದಲ್ಲಿ ಮೂಲನಿವಾಸಿಗಳನ್ನು ಮೀರಿ ಬೆಳೆದ ವಸಾಹತುಗಾರರು ನೆಲೆ ನಿಂತ ನೆಲವನ್ನೇ ತಮ್ಮದಾಗಿಸಿಕೊಂಡ ಘಟನೆ ಇತಿಹಾಸಕ್ಕೆ ಸೇರಿ ಹೋಗಿದೆ. ಯಾವುದೇ ಒಂದು ಸಮುದಾಯ ತನಗಿರುವ ಕೊರತೆಗಳನ್ನು ನಿವಾರಿಸಿಕೊಳ್ಳುವ ಸಲುವಾಗಿ ಅಥವಾ ಅಧಿಕಾರ ಸ್ಥಾಪಿಸಿ ತನ್ಮೂಲಕ ಪ್ರತಿಷ್ಠೆಯನ್ನು ಮೆರೆಸಲು ಆಕ್ರಮಣಶೀಲ ಮನೋಭಾವ ಬೆಳೆಸಿಕೊಂಡು ಆಕ್ರಮಣ ಮಾಡುತ್ತದೆ. ತನ್ನ ಧರ್ಮ ಪ್ರಸಾರ ಮಾಡಲೋ, ಕೀರ್ತಿ ಮೆರೆಸಲೋ ಅಥವಾ ಆರ್ಥಿಕ ಸ್ಥಿತಿಗತಿ ಸುಧಾರಿಸಿಕೊಳ್ಳುವುದೋ ಇಲ್ಲಿ ಮುಖ್ಯವಾಗುತ್ತದೆ. ಹಿಂದೆ ಸಮುದಾಯಗಳ ಮಧ್ಯೆ ಹೋರಾಟ ನಡೆದದ್ದು ಜೀವನ ನಿರ್ವಹಿಸಲು ಅಗತ್ಯವಾಗಿದ್ದ ಅವಶ್ಯಕತೆಗಳ ಕೊರತೆ ಉಂಟಾಗಿದ್ದ ಕಾರಣಕ್ಕಾಗಿ. ಹೀಗೆ ಆದಾಗ ತಮ್ಮ ವಸತಿಯನ್ನು ನೆಲೆಗೊಳಿಸಿಕೊಳ್ಳಲು ಈ ಮೊದಲೇ ಅಲ್ಲಿದ್ದ ಸಮುದಾಯಗಳೊಂದಿಗೆ ಘರ್ಷಣೆಗಿಳಿಯುವುದೂ ಅನಿವಾರ್ಯವಾಗುತ್ತಿತ್ತು. ಇಂತಹ ಘರ್ಷಣೆಗಳು ಪರಾಕಾಷ್ಠ ಸ್ಥಿತಿಯನ್ನು ತಲುಪಿದಾಗ ಯಾರಾದರೊಬ್ಬರು ತಮ್ಮ ಈ ನೆಲೆಯನ್ನು ಕಳೆದುಕೊಳ್ಳಬೇಕಾಗುತ್ತಿತ್ತು. ಆಕ್ರಮಣಕಾರರೇ ಪ್ರಬಲರಾಗಿದ್ದಾಗ ಮೂಲತಃ ಅಲ್ಲಿದ್ದವರು ತಮ್ಮ ನೆಲೆಯನ್ನು ಕಳೆದುಕೊಂಡು ಮತ್ತೊಂದೆಡೆ ನೆಲೆಯನ್ನು ಹುಡುಕಿ ಗುಳೆ ಹೋಗಬೇಕಾದ ಪರಿಸ್ಥಿತಿ ಅನಿವಾರ್ಯವಾಗುತ್ತಿತ್ತು. ಹೀಗೆ ತಮ್ಮ ಅವಶ್ಯಕತೆ, ಪ್ರತಿಷ್ಠೆಯೇ ಕಾರಣವಾಗಿ ಬಂದು ನೆಲೆ ಊರಿದ ಆರ್ಯರು ಮೂಲಿಗರ ಬದುಕನ್ನೇ ಅಲ್ಲಾಡಿಸಿ ಅಲ್ಲಿಂದ ಸ್ಥಳಾಂತರ ಹೊಂದುವ ಹಾಗೆ ಮಾಡಿದರು. ಭಾರತದ ದಕ್ಷಿಣ ಭಾಗದ ಪಶ್ಚಿಮ ಭಾಗದ ಕಡೆ, ಪೂರ್ವದ ಕಡೆ, ಕೆಲವು ಗುಂಪುಗಳು ಚಲಿಸಿದವು. ಆಂಧ್ರದ ಗುಡ್ಡಗಾಡುಗಳಲ್ಲಿ ನೆಲೆಯೂರಿದವು. ಅಲ್ಲಿಂದ ಅಂದರೆ ಶ್ರೀಶೈಲ ಪ್ರಾಂತ್ಯದಿಂದ ಕ್ಷಾಮಧಾಮರಗಳ ನಿಮಿತ್ತ ಕಾಟಮಲ್ಲಪ್ಪನಾಯಕನ ನೇತೃತ್ವದಲ್ಲಿ ಬೇಡಗಂಪಳವು ಕರ್ನಾಟಕ ಸೀಮೆ ಪ್ರವೇಶಿಸಿತು. ಈತನ ಪರಂಪರೆಯವರೇ ೧೪ನೆಯ ಶತಮಾನದ ಮಧ್ಯಭಾಗದಲ್ಲಿ ನಾಯಕನಹಟ್ಟಿ ಪ್ರಾಂತ್ಯವನ್ನು ಆಳಿ ಪಾಳೆಯಗಾರರೆನಿಸಿಕೊಂಡರು ಎಂಬ ವಿವರ ಶ್ರೀಯುತ ಎಂ.ಎನ್. ಪ್ರಭಾಕರ್‌ರವರು ಸಂಪಾದಿಸಿರುವ ನಾಯಕಯನಹಟ್ಟಿ ಬಖೈರುವಿನಲ್ಲಿ ಪ್ರಸ್ತಾಪಿತವಾಗಿದೆ.

ಆಂಧ್ರದಲ್ಲಿ ಪ್ರಚಲಿತವಿರುವ ತೆಲುಗು ಜನಪದ ಮಹಾಕಾವ್ಯ 'ಕಾಟಮ ರಾಜನ ಕಥೆ' (ಕನ್ನಡಕ್ಕೆ: ಅರ್ವಿಯಸ್ ಸುಂದರಂ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ) ಕಾಟಮರಾಜ ಎಂಬ ಪಶುಪಾಲಕ ತಾನು ದೊರೆಯಾದ ಮೇಲೆ ಶ್ರೀಶೈಲ ಪರ್ವತದ ಕಡೆ ಹಸು ಮೇಯಿಸಲು ಹೋಗುತ್ತಾನೆ. ಆಗ ತನಗೆ ಮತ್ತು ತನ್ನ ಹಿರಿಯರಿಗೆ ಪ್ರತಿರೋಧ ಒಡ್ಡುತ್ತಿದ್ದ ಯಾದವರೊಂದಿಗೆ ಘರ್ಷಣೆಗಿಳಿಯುತ್ತಾನೆ. ಈ ಕಾವ್ಯದಲ್ಲಿ ಒಂಟಿಕೊಂಬಿನ ಬಲ್ಲಾವಿನ ಮತ್ತು ಪಂಪಾದ್ರಿ ಬಸವನ ಪ್ರಸ್ತಾಪವೂ ಬರುತ್ತದೆ. ಮ್ಯಾಸಬೇಡರ ಸೃಷ್ಟಿ ಪುರಾಣದಲ್ಲೂ ಇದರ ಪ್ರಸ್ತಾಪವಿದೆ. ಪ್ರಬಲವಾದ ಪ್ರತಿರೋಧ ಒಡ್ಡಿಯೂ ಕೊನೆಗೆ ಸಫಲನಾಗದೆ ಸೋತು ಅಂತ್ಯವನ್ನು ಕಾಣುತ್ತಾನೆ. ಈತನೊಂದಿಗೆ ಇದ್ದು ಅಳಿದುಳಿದ ಸಮುದಾಯ ಈತನ ನಂತರ ನೆಲೆಯನ್ನರಸಿ ಬೇರೆಡೆ ಚಲಿಸರಬಹುದು. ಅಂತಹ ಆತನ ಹಿಂಬಾಲಕರ ಒಂದು ಸಮುದಾಯವೇ ಮ್ಯಾಸಬೇಡರಾಗಿರಬಹುದೆನಿಸುತ್ತದೆ. ಇಂದಿಗೂ ಮ್ಯಾಸಬೇಡರಲ್ಲಿ ಕಾಟಪ್ಪನ ಆರಾಧನೆ ಇದೆ. 'ಕಾಟ್ರಾಯ' ದನಕರುಗಳನ್ನು ಕಾಪಾಡುವ ದೇವತೆ, ವರಕೊಡುವ ದೇವತೆ. ಈ ದೇವರ ವರದಿಂದಲೇ ಕಾಟಮ

ರಾಜನೂ ಜನಿಸಿದ್ದು, ಮ್ಯಾಸರಲ್ಲೂ ಕಾಟಪ್ಪ, ಕಾಟಮ್ಮ ಎಂಬ ಹೆಸರಿನ್ನಿಟ್ಟುಕೊಳ್ಳುವ ಸಂಪ್ರದಾಯವಿದೆ. ಇಂದಿಗೂ ಮ್ಯಾಸನಾಯಕರ ಕುಲದ ಬಳಿಗಳನ್ನು ಹೇಳುವ, ಉರುಮೆ ಎಂಬ ವಾದ್ಯವನ್ನು ಮ್ಯಾಸಬೇಡರ ದೈವಾರಾಧನೆಯಲ್ಲಿ ಬಾರಿಸುವ ಚಲವಾದಿಗಳು ತಮ್ಮನ್ನು ಅವರು 'ಕೊಲುವಲು' ಎಂದು ಕರೆದುಕೊಳ್ಳುತ್ತಾರೆ. ಇವರು ದೇವರನ್ನು ಕೊಂಡಾಟ ಮಾಡಿ ಕೊನೆಗೆ 'ಕಾಟಮ ರಾಜನ ಸೂರೆ ಪಚ್ಚಪದಿ ಕೊಲುವಲು' ಎಂದು ಹೇಳಿ ನಿಲ್ಲಿಸುತ್ತಾರೆ. ಅದನ್ನು ಗಮನಿಸಿದಾಗ ಬಹುಶಃ ಈ ಕಾಟಮರಾಜನೊಂದಿಗೆ ಇದ್ದ ಅವನ ನಂತರ ಅಲ್ಲಿಯ ನೆಲೆಯನ್ನು ಕಳೆದುಕೊಂಡು ಇವರು ಇಂದಿನ ಕರ್ನಾಟಕದ ಕಡೆ ಚಲಿಸಿರಬಹುದೆನಿಸುತ್ತದೆ. ಈಗಾಗಲೇ ಈ ಸಮುದಾಯವನ್ನು ಕುರಿತು ಮಾಡಿರುವ ಅಧ್ಯಯನಗಳಲ್ಲಿ ಬಖೈರುವಿನ ವಿವರವನ್ನು ಆಧರಿಸಿದ ಕಾಟಮಲ್ಲಪ್ಪನಾಯಕನ ಪ್ರಸ್ತಾಪ ಮಾಡಿಯೇ ಇದ್ದಾರೆ. ಬಖೈರುವಿನಲ್ಲಿ ಮೂಲನೆಲೆಯ ಪ್ರಸ್ತಾಪವಿಲ್ಲದಿದ್ದರೂ ಮಧ್ಯದ ನೆಲೆಯಾದ ಆಂಧ್ರದಿಂದ ಮಧ್ಯಕರ್ನಾಟಕದ ಕಡೆ ಮ್ಯಾಸಬೇಡರು ಚಲಿಸಿದ್ದಾರೆ ಎಂಬುದು ನಿರ್ವಿವಾದ. ಮೊದಲು ಈತನ ಈ ಪ್ರವೇಶವನ್ನು ವಿಜಯನಗರದ ಅರಸರು ವಿರೋಧಿಸಿದ್ದಾಗಿಯೂ ನಂತರ ಈತನ ಸಾಮರ್ಥ್ಯ ತಿಳಿದು ಸ್ನೇಹ ಹಸ್ತ ನೀಡಿದ್ದಾಗಿ ವಿವರಗಳನ್ನು ಬಖೈರುವಿನಲ್ಲಿ ಕೊಡಲಾಗಿದೆ.

'ದೊಕ್ಕಲಬರ –ಬಕ್ಕಲಬರ' (ದೊಕ್ಕಲ ಬರ –ದೊಕ್ಕೆ ಅಂದರೆ ಹೊಟ್ಟೆ ಬೆನ್ನಿಗೆ ಅಂಟಿರುವಂತಹುದು. ಹಸಿವೇ ಕಾರಣವಾಗಿ ಈ ಸ್ಥಿತಿ ತಲುಪಿರುತ್ತದೆ. ಹಸಿವಿಗೆ ಕಾರಣ ಭೀಕರ ಬರಗಾಲ) ಬಕ್ಕೆ ಅಂದರೆ ಬಿಲ. ಇವನ್ನು ಅಗೆದು ಅಲ್ಲಿ ಇರುವೆಗಳು ಸಂಗ್ರಹಿಸಿದ್ದ ಹಿಡಿಧಾನ್ಯವನ್ನೇ ತೆಗೆದುಕೊಂಡು ಹಸಿವನ್ನು ನೀಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರಂತೆ. ಇಂತಹ ಭೀಕರ ಬರಗಾಲವನ್ನು ಎದುರಿಸಲಾಗದೆ ತತ್ತರಿಸಿದ ಈ ಕಂಪಳ ಗುಳೇ ಹೊರಟು ಆನೆಗೊಂದಿ ಕಿರುಕಿಂಡಿಯ ಮೂಲಕ ಮಧ್ಯ ಕರ್ನಾಟಕ ಪ್ರವೇಶ ಮಾಡಿತು. ವಿಜಯನಗರದ ಅರಸ ವಿರೋಧಿಸಿದಾಗ ಎತ್ತುಗಳೇ ಡಿರಕಿ ಹೊಡೆದು ಸೈನ್ಯವನ್ನು ಹಿಮ್ಮೆಟ್ಟಿಸಿದವು ಎನ್ನುತ್ತಾರೇ ಹೆಳವರ ನಾಗಪ್ಪ, ಗೋಪನಹಳ್ಳಿ. ಮ್ಯಾಸಬೇಡರ ವಂಶಾವಳಿಯನ್ನು ಇವರು ಹೇಳುತ್ತಾರೆ. ಪಶುಪಾಲಕ ಸಮುದಾಯವಾದ ಮ್ಯಾಸಬೇಡರಿಗೆ ಮತ್ತು ಕಾಡುಗೊಲ್ಲರಿಗೆ ತಮ್ಮ ಪಶುಸಂಪತ್ತು ದೇವರ ಸಮಾನ. ಬಖೈರಿನ ಮಾಹಿತಿ ಮತ್ತು ಹೆಳವರು ಕೊಡುವ ಮಾಹಿತಿ ಒಂದೇ ಆಗಿರುವುದನ್ನು ಇಲ್ಲಿ ಗಮನಿಸಬಹುದು. ಮೂಲ ನೆಲೆಯ ಪ್ರಸ್ತಾಪ ಹೆಳವರ ಹೇಳಿಕೆಯಲ್ಲೂ ಇಲ್ಲವಾದರೂ ಶ್ರೀಶೈಲ ಪ್ರಾಂತ್ಯದಿಂದ ಬಂದು ಮಧ್ಯಕರ್ನಾಟಕದಲ್ಲಿ ಇವರು ನೆಲೆಸಿದರೆಂಬುದು ಇಲ್ಲಿ ಖಚಿತವಾಗುತ್ತದೆ. ಮುಂದುವರಿದು ಬಖೈರುವಿನಲ್ಲಿ ಈ ಕಾಟಮಲ್ಲಪ್ಪನಾಯಕನ ವಂಶದವರೇ ಒಂದು ಪಾಳೆಯಪಟ್ಟನ್ನು ಕಟ್ಟಿ ಅದಕ್ಕೆ ನಾಯಕಹಟ್ಟಿ ಎಂಬ ಹೆಸರು ಬಂದಿತು ಎಂದು ಹೇಳಿ ಆ ವಂಶಾವಳಿಯ ವಿವರ ಕೊಡುತ್ತಾರೆ. ಕ್ರಿ.ಶ. ೧೫ನೇ ಶತಮಾನದ ಮಧ್ಯಭಾಗದಲ್ಲಿ ಬೋಡಿ ಮಲ್ಲಪ್ಪನಾಯಕನೆಂಬುವನು ಈ ಹಟ್ಟಿಯನ್ನು ಆಳಿದನು ಎಂಬ ಉಲ್ಲೇಖವಿರುವುದರಿಂದ ಅದಕ್ಕಿಂತ ಹಿಂದೆಯೇ ಈತನಿಂದ ಸುಮಾರು ೪–೫ ನೇ ತಲೆಮಾರಿನ ಹಿರಿಯನಾದ ಕಾಟಮಲ್ಲನಾಯಕನ ಪ್ರಸ್ತಾಪ ಬರುವುದರಿಂದ ೧೩ನೇ ಶತಮಾನದ ಕೊನೆ, ೧೪ನೇ ಶತಮಾನದ ಅರಂಭದ ಕಾಲ ಘಟ್ಟದಲ್ಲಿ ಈತ ಇಲ್ಲಿಗೆ ಬಂದಿರಬಹುದು ಎಂದು ಅಂದಾಜು ಮಾಡಬಹುದು.

## ೨.೩ ಇಂದಿನ ನೆಲೆಗಳು :

ಕಾಟನಾಯಕನ ಮಲ್ಲಯ್ಯ ತನ್ನ ೧೨೦೦ ಪಶುಸಂಪತ್ತು ಮತ್ತು ಅಪಾರವಾದ ಬೇಡಗಂಪಳದೊಂದಿಗೆ ಮಧ್ಯಕರ್ನಾಟಕಕ್ಕೆ ಬಂದನು ಎಂಬುದು ಐತಿಹಾಸಿಕ ಸತ್ಯ. ಇದನ್ನು ಜನಪದರ ಹೇಳಿಕೆಗಳೂ ಬೆಂಬಲಿಸುತ್ತವೆ. ಸಹಜವಾಗಿಯೇ ಪಶುಪಾಲಕ ಸಮುದಾಯ ತನ್ನ ನೆಲೆಯನ್ನು ಅರಸುವುದು ಕಾಡು, ಬೆಟ್ಟದ ತಪ್ಪಲು, ಹುಲ್ಲುಗಾವಲು ಮತ್ತು ನದೀ ಬಯಲುಗಳಲ್ಲಿ. ಈತನ ಕಂಪಳ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿಗೆ ಸೇರಿದ ನಾಯಕನಹಟ್ಟಿಗೆ ಹತ್ತಿರದಲ್ಲಿರುವ 'ಗರಣಿ' ಎಂದು ಕರೆಯಲ್ಪಡುವ ವೇದವತಿ ನದಿಗೆ ಉಪನದಿಯಾಗಿರುವ ಈ ಕಿರುನದಿಯ ಆಸುಪಾಸಿನಲ್ಲಿ ಬಹಳಷ್ಟು ವರ್ಷ ನೆಲೆ ನಿಂತಿತು. ನೀರು ಗಿರಗಿರನೆ ಚಕ್ರವ್ಯೂಹದಂತೆ ಹಿಂದೊಮ್ಮೆ ತಿರುಗುತ್ತಲಿದ್ದ ಸ್ಥಳವೇ ಗರಣಿ. ಆ ಹೆಸರೇ ಅಲ್ಲಿದ್ದ ನೀರಿನ ಸಮೃದ್ಧಿಯನ್ನು ಸೂಚಿಸುತ್ತದೆ. ಈ ಗರಣಿಯಿಂದ ಮುಂದುವರೆದ ನೀರೇ ಮುಂದೆ ವೇದವತೀ ನದಿಗೆ ಸೇರುತ್ತಿತ್ತು ಎಂಬುದು ಅನುಭವಿಗಳ ನುಡಿ. ಆದರೆ ಇಂದು ಇಲ್ಲಿ ಉಳಿದಿರುವುದು ಖಾಲಿ ಕೊಳ್ಳ, ನದಿ ಹರಿಯುತ್ತಿದ್ದ ಗುರುತು ಮಾತ್ರ. ಒಂದೆರಡು ದಶಕಗಳ ಹಿಂದೆ ಇಲ್ಲಿ ಸಾಕಷ್ಟು ಈಚಲು ಮರಗಳು ಬೆಳೆದು ನಿಂತಿದ್ದ ದೃಶ್ಯ ಸಾಮಾನ್ಯವಾಗಿತ್ತು. ಆದರೆ ಮಳೆರಾಯನ ಮುನಿಸೇ ಕಾರಣವಾಗಿ ಅಲ್ಲಿ ಇಂದು ಕಾಣುವುದು ಬರೀ ಸೀಮೇ ಜಾಲಿಯ ಗಿಡಗಳೇ. ಈ ಮುಳ್ಳು ಕಂಟಿಗಳ ಮಧ್ಯೆ ತಡವರಿಸುತ್ತಾ ಆಸೆಗಣ್ಣಿನಿಂದ ಗಮನಿಸುತ್ತ ನಡೆದರೆ ಅಲ್ಲಲ್ಲಿ ಕಾಣುತ್ತವೆ. ಕುತೂಹಲಕ್ಕೆ ಕಾರಣವಾಗಿದ್ದ ಮ್ಯಾಸಬೇಡರು ದನಗಳ ರೊಪ್ಪಗಳನ್ನು ಹಾಕಿಕೊಂಡಿದ್ದ ಗುರುತುಗಳು. ಆಶ್ಚರ್ಯವೆಂದರೆ ರೊಪ್ಪಗಳನ್ನು ಹಾಕಿಕೊಂಡಿದ್ದು ರಾಶಿರಾಶಿಯಾಗಿ ಬಿದ್ದ ಸಗಣಿಯನ್ನು ತಾವು ಆ ನೆಲೆಯಿಂದ ಮತ್ತೊಂದೆಡೆಗೆ ಹೋಗುವಾಗ ಸುಟ್ಟು ಹೋಗಲಾಗಿದ್ದು ಅದೇ ಬೂದಿಯ ಗುಡ್ಡೆಗಳಾಗಿರುವುದು. ಈ ಸಮುದಾಯದ ಹಿರಿಯರು ವಾಸಿಸುತ್ತಿದ್ದ ಈ ಸ್ಥಳವನ್ನು ದೈವೀಕ ಸ್ಥಳವೆಂಬಂತೆ ಮ್ಯಾಸರು ನಂಬಿದ್ದು ಇದು ಮೈಲಿಗೆಯಾಗಬಾರದು ಎಂದು ಪೂಜ್ಯಭಾವನೆಯಿಂದ ನೋಡುತ್ತಾರೆ. 'ಮುತ್ತಿಗಾರರ ಬೊಟ್ಟು' (ನೆಲಧೇನು ಭಸ್ಮ) ಎಂದು ಈ ಬೂದಿಯನ್ನು ಹೆಸರಿಸಿ ತಾವು ಇಂದಿಗೂ ಅದನ್ನು ವಿಭೂತಿಯಂತೆ ಬಳಸುತ್ತಾರೆ (ಮುತ್ತಿ-ಹಿರಿಯ) ಪಶುಪಾಲಕರಲ್ಲಿ ಗೋವು, ಎತ್ತುಗಳಿರುವ ಅನನ್ಯ ಸ್ಥಾನವನ್ನು ಇದು ಸೂಚಿಸುತ್ತದೆ. ಮ್ಯಾಸಮಂಡಲಕ್ಕೆ ಸಂಬಂಧಿಸಿದ ಹಲವು ನಿರ್ಣಾಯಕ ಘಟನೆಗಳು ನಡೆದದ್ದು ಈ ಪರಿಸರದಲ್ಲಿಯೇ ಇಂದಿನ 'ಖುದಾಪುರ' (ಇದು ಚಿತ್ರದುರ್ಗ ಪ್ರಾಂತ್ಯಕ್ಕೆ ಹೈದರಾಲಿ ಬಂದಾಗ ಕೊಟ್ಟ ಹೆಸರು ಎಂಬ ಪ್ರತೀತಿ ಇದೆ) ಹಿಂದೆ ಬೋರೇದೇವರ ಹಟ್ಟಿ' ಎಂದು ಕರೆಯಲಾಗುತ್ತಿದ್ದು ಬೋರೇದೇವರ ದೇವಸ್ಥಾನದ ಬಳಿ ಮ್ಯಾಸಮಂಡಲ ಎರಡು ಪಂಗಡವಾಗಿ ಒಡೆಯಿತು. ನಲಕುಲ ಮತ್ತು ಯರಕುಲ ಎಂದು. ಇದೇ ಕಾಲಾವಧಿಯಲ್ಲಿಯೇ ಮ್ಯಾಸಬೇಡರ ಪಶುಸಂಪತ್ತನ್ನು ಅಪಹರಿಸಲೆಂದು ನಿಡುಗಲ್ಲಿನ ಪಾಳೆಯಗಾರನಾದ 'ಹೊಟ್ಟಣ್ಣ'[೧೩] ನಾಯಕನೆಂಬುವನು ಬಂದು ಈ ಬೇಡರ ಮೇಲೆ ಆಕ್ರಮಣ ಮಾಡುತ್ತಾರೆ. ೧೪ ದಿನಗಳ ಕಾಲ ದನಕರು

---

[೧೩] ೧೬೫೩ರ ನಿಡುಗಲ್ಲಿನ ಶಾಸನವೊಂದರಲ್ಲಿ ಹೊಟ್ಟಣ್ಣನಾಯಕನ ವಂಶಾವಳಿಯ ವಿವರ ಬರುತ್ತದೆ. ಆ ಪ್ರಕಾರ ಹೊಟ್ಟಣ್ಣನಾಯಕನ ಹೆಸರಿನ ಐದು ಮಂದಿ ಬರುತ್ತಾರೆ. ಇವರಲ್ಲಿ ಮೊದಲನೆಯವನೊಂದಿಗೆ ಈ ಮೇಲೆ ಕಾಣಿಸಿದ ಹೋರಾಟ ನಡೆದಿರಬಹುದು, ನಿಡುಗಲ್ಲು ಒಂದು ಸಾಂಸ್ಕೃತಿಕ ಅಧ್ಯಯನ, ಡಿ.ಕೆ. ಚಿತ್ರಯ್ಯ, ಪು. ೧೧೦

ಮೇಯಲು ಹೊರಗೆ ಹೋಗದಂತೆ ತಡೆಯುತ್ತಾನೆ. ಆಗ ಪರಸ್ಪರರಲ್ಲಿ ಸಂಘರ್ಷ ನಡೆದು ಅದರ ಸ್ಮಾರಕವಾಗಿ ಗೌರೀಪುರದ ಬಳಿ ಇರುವ ಬೂದಿಗುಡ್ಡದ ಬಳಿಯೇ ಕಲ್ಲುಗಳನ್ನು ನೆಟ್ಟಿದ್ದು ಅವುಗಳನ್ನು 'ರಣಗಂಬಗಳು' ಎಂದು ಕರೆಯಲಾಗುತ್ತದೆ.



ರಣಗಂಬಗಳು : ಅಕ್ಕರಾಯಮ್ಮ ತನ್ನ ಮ್ಯಾಸಕಂಪಳದೊಂದಿಗೆ ಹೊಟ್ಟೆಣ್ಣನಾಯಕನ ವಿರುದ್ಧ ಹೋರಾಟ ಮಾಡಿ ಜಯಗಳಿಸಿದ ನೆನಪಿಗಾಗಿ ಹೂಳಿರುವ ರಣಗಂಬಗಳು



ಪಾಪಮುಕ್ತಿ ರೇವು. ದನಗಳನ್ನು ಹೋರಾಟದ ಸಂದರ್ಭದಲ್ಲಿ ಹೊಟ್ಟೆಣ್ಣನಾಯಕ ತರುಬಿದ್ದ ಸ್ಥಳ

ಈ ರಣಗಂಬಗಳಿಗೆ ಈಗಲೂ ಮ್ಯಾಸಮಂಡಲದವರು ಆಗಾಗ್ಗೆ ಪೂಜೆ ಸಲ್ಲಿಸಿ ವಾಸು ಕೊಯ್ದು (ಕುರಿ) ವೀರರ ಸ್ಮರಣೆ ಮಾಡುತ್ತಾರೆ. ೨೦೦೬, ಮಾರ್ಚ್ ೬ನೇ ದಿನಾಂಕದಂದು ಈ ಆಚರಣೆ ನಡೆಯಿತು. ಈ ರಣಗಂಬಗಳ ಬಳಿಯೇ 'ಪಾಪ ಮುತ್ತಿರೇವು'ಎಂಬ ತಮ್ಮ ದನಕರುಗಳಿಗೆ ನೀರುಣಿಸುತ್ತಿದ್ದ ಒಂದು ಅಗಲವಾದ ನೀರು ನಿಲ್ಲುವ ಹೊಂಡದಂತಹ ಜಾಗವಿದೆ. ಜಗಲೂರು ಪಾಪನಾಯಕನ ಕುರುಹಾಗಿ ಇದನ್ನು ಪಾಪಮುತ್ತಿರೇವು ಎಂದು ಕರೆಯಲಾಗುತ್ತದೆ ಎಂದು ಹೇಳಲಾಗುತ್ತದೆ. ಇಲ್ಲಿಂದ ಸುಮಾರು ಒಂದರ್ಧ ಕಿ.ಮೀ. ದೂರದಲ್ಲಿ 'ಮೂಗುಮಾಳಿಗೆ' ಎಂಬ ಪ್ರದೇಶವಿದೆ. ಇಲ್ಲೆಲ್ಲಾ ಹೀಗೆ ಈ ಸಮುದಾಯ ಬಹುಕಾಲ ನೆಲೆ ನಿಂತಿದ್ದ ಕುರುಹುಗಳಿವೆ. ಇಲ್ಲಿಂದ ಮತ್ತೆ ಮೇವು ನೀರಿಗಾಗಿ ಇತರ ಕಡೆ ಚಲಿಸಿವೆ. ನಿಡುಗಲ್ಲಿನ ಕಡೆ ಕೆಲವು ಗುಂಪುಗಳೂ ಹೊಳಲ್ಕೆರೆ ತಾಲ್ಲೂಕಿನ ಮಿಂಚೇರಿಯ ಕಡೆಗೆ ಕೆಲವು ಗುಂಪುಗಳೂ, ಚಿನ್ನಹಗರಿ ನದಿಗೆ ಹತ್ತಿರದಲ್ಲಿರುವ 'ಗೋವಸಿರಪ್ಪನ' ಗುಡ್ಡ ಎಂದು ಕರೆಯಲಾಗುವ ಎಡೆಗೂ ಚಲಿಸಿ ನೆಲೆ ಊರಿ

ಅಲೆದಾಡಿದ ಕುರುಹುಗಳಿವೆ. ಯರಮಂಚಿನಾಯಕನ ಗುಂಪು ಇಂದಿನ ಆಂಧ್ರದ ಗಡಿ ಪ್ರದೇಶಗಳ ಕಡೆಯವರೆಗೂ ಚಲಿಸಿ ನೆಲೆಸಿದೆ.

ಪಶುಪಾಲಕತನವನ್ನು ಕೈಗೊಂಡಿದ್ದ ಇವರು ನಿರ್ದಿಷ್ಟ ಸ್ಥಳದಲ್ಲಿ ನಿಲ್ಲಲು ಸಾಧ್ಯವಾಗದೆ ದನಕರುಗಳಿಗೆ ಮೇವು ಅರಸುತ್ತ ಒಂದೆಡೆಯಿಂದ ಮತ್ತೊಂದೆಡೆಗೆ ಹೀಗೆ ಹುಲ್ಲು ನೀರನ್ನು ಅರಸುತ್ತಾ ತಿರುಗಾಡುವುದು ಅನಿವಾರ್ಯವಾಗಿತ್ತು. ಕಾಟಮಲ್ಲನಾಯಕನ ನೇತೃತ್ವದಲ್ಲಿ ಮ್ಯಾಸಬೇಡರು ಮಧ್ಯ ಕರ್ನಾಟಕದ ಕಡೆ ಬಂದರು ಎಂಬ ವಿಚಾರ ನಿಜವಾದರೂ ಇಡೀ ಮ್ಯಾಸರ ಸಮುದಾಯವೆಲ್ಲ ಒಟ್ಟಿಗೇ ಬರಲಿಲ್ಲ. ಬಹುಶಃ ಅನೇಕ ತಂಡಗಳಾಗಿ ಅಲೆಯುತ್ತಿದ್ದ ಇವರು ಹೀಗೆ ಬರುವ ಸಾಧ್ಯತೆಗಳೂ ಕಡಿಮೆಯೇ. ಸಮುದಾಯದ ಜನಪದರ ಪ್ರಕಾರ ಕೆಲವು ಗುಂಪುಗಳಾಗಿ ಈ ಮ್ಯಾಸರು ಬಂದರು. ಬಂದವರಲ್ಲಿ ಒಂದು ಗುಂಪು ಕಾಟಮಲ್ಲನಾಯಕನ ನೇತೃತ್ವದಲ್ಲಿ ಬಂದರೆ, ಮತ್ತೊಂದು ಗುಂಪು ನಂತರ ಇತ್ತ ಚಲಿಸುತ್ತಾ ಬಂದು ಮುತ್ತಿಗಾರರಹಳ್ಳಿ ಎಂದು ಈಗ ಕರೆಯಲ್ಪಡುತ್ತಿರುವ ಕಮರದ ಕಾನಿನಲ್ಲಿ ನೆಲೆ ನಿಂತು 'ಗೂಡು'ಗಳನ್ನು ಕಟ್ಟಿಕೊಂಡಿತು. ಇವರಿಗೂ ಮೊದಲು ಬಂದ ಕಾಟಮಲ್ಲನಾಯಕನ ಗುಂಪಿಗೂ ಸಂಪರ್ಕಗಳಿದ್ದುದೂ ನಿಜ. ಮ್ಯಾಸನಾಯಕರ ಹಿರಿಯರಿಗೆ 'ಮುತ್ತಿಗಾರರು' (ತೆಲುಗುಪದ – ಹಿರಿಯ ಎಂದರ್ಥ) ಎಂದು ಕರೆಯುತ್ತಾರೆ. ವಿಶೇಷವೆಂದರೆ ಈ ಗುಂಪಿನ ಮ್ಯಾಸರು ಇಂದಿಗೂ ಬಹುಪಾಲು ಶ್ರೀಶೈಲದ ಮಲ್ಲಿಕಾರ್ಜುನನೇ ತಮ್ಮ ಮನೆದೈವ ಎನ್ನುತ್ತಾರೆ. ಇವರಲ್ಲಿ ವೀರನಾಯಕರ ಆರಾಧನೆ ಕಡಿಮೆ. ಅಂದರೆ ಆದಷ್ಟೂ ಮೂಲ ಸ್ವರೂಪವನ್ನೇ ಇಂದಿಗೂ ಆಚರಣೆಗಳಲ್ಲಿ ಉಳಿಸಿಕೊಂಡು ಬಂದಿರುವ ಗುಂಪಿದು. ಈ ಮೂಲದ ಹಿರಿಯರು ನೆಲೆಯನ್ನು ಕಂಡುಕೊಂಡ ತಾಣವೇ ಇಂದು 'ಮುತ್ತಿಗಾರರಹಳ್ಳಿ'ಯಾಗಿದೆ. ಈ ಕಮರದ ಕಾನಿನಲ್ಲಿ ಎತ್ತಿನ ಗೂಡುಗಳನ್ನಿಟ್ಟುಕೊಂಡಿದ್ದು ಇಂದಿಗೂ ಆ ಪರಂಪರೆಯ 'ಎತ್ತಿನ ಗೂಡು' ಅವುಗಳ ರಕ್ಷಣೆಯ ಹೊಣೆ ಹೊತ್ತ 'ಕಿಲಾರಿ'ಗಳನ್ನು[೧೪] ಅಲ್ಲಿ ಕಾಣಬಹುದು. ಮೊಳಕಾಲ್ಮೂರು ತಾಲ್ಲೂಕಿನ ಇತರ ರಕ್ಷಿತ ಅರಣ್ಯಗಳಲ್ಲಿ, ಗುಡೇಕೋಟೆ ಬಳಿಯ ಬೆಟ್ಟದ ತಪ್ಪಲುಗಳಲ್ಲಿ, ಚಿನ್ನಹಗರಿ ನದಿಯ ಆಸುಪಾಸಿನಲ್ಲಿ, ಚಿತ್ರದುರ್ಗಕ್ಕೆ ಸಮೀಪದ ನಲಗೇತನಹಟ್ಟಿಯ ಬಳಿಯ ಎತ್ತರವಾದ ಮಟ್ಟಿಯ ಆಸುಪಾಸಿನಲ್ಲಿ, ಗೌರಸಮುದ್ರದ ಬಳಿ, ಎತ್ತಿನ ಗೂಡುಗಳನ್ನು ಕಾಣಬಹುದು. ಇಂದು ಆಂಧ್ರಕ್ಕೆ ಸೇರಿರುವ ಗಲಗಲ್ಲು (ರಾಯದುರ್ಗದ ಸಮೀಪ) ಪ್ರಾಂತ್ಯದಲ್ಲಿ ಮ್ಯಾಸಬೇಡರಿಗೆ ಸಂಬಂಧಿಸಿದ ವೀರಗಲ್ಲುಗಳು, ಸಮಾಧಿಗಳು, ದೇವಾಲಯಗಳಿವೆ. ಈ ಪ್ರಾಂತ್ಯದಲ್ಲಿಯೇ ಯನ್ನಮುದ್ದಲಪಲ್ಲಿ, ಮಾಪಲ್ಲಿ, ರೇಪಲ್ಲಿ ಎಂಬ ಇಂದು ಹಾಳಾಗಿರುವ ಊರುಗಳಿವೆ. ಇದೇ ಪ್ರದೇಶದಲ್ಲಿ 'ರಾಜಲು ದೇವರು' ಎಂಬ ಹೆಸರಿನಲ್ಲಿ ಮ್ಯಾಸಬೇಡರು ಪೂಜಿಸುತ್ತಿರುವ ಒಂದು ಪುಟ್ಟ ಸಿಂಹಾಸನವಿದೆ. ಅದನ್ನು ಗುಡಿಸಿಲಿನಲ್ಲಿಟ್ಟು, ಆವರಣ ಕಟ್ಟಿದ್ದಾರೆ. ಪಕ್ಕದ ಹಟ್ಟಿಗಳಲ್ಲಿ ಸಾಕಷ್ಟು ಮಂದಿ ಮ್ಯಾಸಬೇಡರು ನೆಲೆಸಿದ್ದಾರೆ. ಎತ್ತಿನ ಗೂಡುಗಳ ರಕ್ಷಕರಾಗಿರುವ ಕಿಲಾರಿಗಳು ಮಾತ್ರ ಕಾಡಿನಲ್ಲಿ ಗೂಡುಗಳ ಬಳಿ

---

[೧೪] ಪರಂಪರೆಯಿಂದ ಬಂದ ಪಶುಸಂಪತ್ತನ್ನು ಇಂದು ದೇವರೆತ್ತುಗಳು ಎಂಬ ಹೆಸರಿನಲ್ಲಿ ಸಂರಕ್ಷಣೆ ಮಾಡುತ್ತಿದ್ದು, ಇದರ ರಕ್ಷಣೆ ಮಾಡುವವರನ್ನು 'ಕಿಲಾರಿ'ಗಳು ಎಂದು ಕರೆಯಲಾಗುತ್ತದೆ.

ಇರುತ್ತಾರೆ. ಕಾಡಿನ ಆಸರೆ ಕಳೆದುಕೊಂಡು, ಪಶು ಸಂಗೋಪನಾ ಮೂಲದಿಂದ ಬದುಕು ಸಾಗಿಸುವುದು ಕೈತಪ್ಪಿದಾಗ ಊರುಗಳಿಗೆ ಸ್ಥಳಾಂತರಗೊಂಡು ಕಂಪಳವೆಲ್ಲಾ ಚೆದುರಿ ಚಿತ್ರದುರ್ಗ ಜಿಲ್ಲೆಯಾದ್ಯಂತ, ಬಳ್ಳಾರಿ, ದಾವಣಗೆರೆ, ತುಮಕೂರು ಜಿಲ್ಲೆಯ ನಿಡುಗಲ್ಲಿನ ಕಡೆ, ಈಗ ಮ್ಯಾಸನಾಯಕರು ವ್ಯಾಪಕವಾಗಿ ನೆಲೆಸಿದ್ದಾರೆ. ಹೀಗೆ ಭಾರತದ ಉತ್ತರ ಭಾಗ ಮೂಲನೆಲೆಯಾಗಿದ್ದು ನಂತರ ದಕ್ಷಣದ ಕಡೆ ಚಲಿಸಿದ ಮ್ಯಾಸಬೇಡರು ಅಲ್ಲಲ್ಲಿ ನಿಂತು ನಂತರ ಮಧ್ಯಕರ್ನಾಟಕದ ಕಡೆ ಬಂದಿರುವುದು ನಿರ್ವಿವಾದಿತ ಸಂಗತಿ. ಹೀಗೆ ಮೂಲನೆಲೆ, ಇಂದಿನ ನೆಲೆಗಳು ಎಂದು ಮೇಲೆ ಸೂಚಿಸಿದ ಪ್ರದೇಶಗಳನ್ನು ಗುರುತಿಸಬಹುದು. ಬದುಕಿನ ಅನಿವಾರ್ಯ ಕಾರಣವಾಗಿ ಇಂದು ಕರ್ನಾಟಕದ ಎಲ್ಲೆಡೆ ಈ ಸಮುದಾಯದ ಜನರನ್ನು ಕಾಣಬಹುದಾಗಿದೆ.

## ೨.೫ ಮ್ಯಾಸಬೇಡರ ಸಾಮಾಜಿಕ ಸ್ಥಿತಿಗತಿಗಳು :

ಬುಡಕಟ್ಟುಗಳದು ಮೂಲತಃ ಅರಣ್ಯ ಸಂಸ್ಕೃತಿ. ಈ ಸಂಸ್ಕೃತಿಯಲ್ಲಿ ಬೇಟೆ ಅವರ ಆಹಾರ ಸಂಗ್ರಹಣೆಯ ಒಂದು ಮೂಲವಾಗಿದ್ದಸ್‌ದ್ದು ಅಷ್ಟೇ ಸಹಜ. ಬುಡಕಟ್ಟು ಸಮುದಾಯಗಳಲ್ಲಿ ಒಂದಾಗಿದ್ದ ಮ್ಯಾಸಬೇಡರೂ ಇವರಿಂದ ಹೊರತಲ್ಲ. 'ಬೇಡ' ಎನ್ನುವ ಪದ ನಿಷ್ಪನ್ನವಾಗುವುದೇ ಬೇಟೆಗಾರ ಎಂಬ ಪದ ಮೂಲದಿಂದ. ವ್ಯಾಧರು ಎಂದರು ಬೇಟೆಗಾರರು ಎಂದೇ ಅರ್ಥ. ಮೌಖಿಕವಾಗಿ ಇವರ ಬಳಿಯನ್ನು ಹೇಳುವ ಹೆಳವರು ಗೆಡೆಗಣಸು, ಬಿದಿರಕ್ಕಿ, ಸೊಪ್ಪು ಇವರ ಆಹಾರವಾಗಿತ್ತು. ಹೊದೆಯುವುದು ತ್ಯಾಗದೆಲೆ, ಹಾಸುವುದು ತ್ಯಾಗದೆಲೆ ಎಂದು ಇವರ ಮೂಲ ಸ್ಥಿತಿಯನ್ನು ವಿವರಿಸುತ್ತಾರೆ. ಒಟ್ಟಾರೆ ಆಹಾರ ಸಂಪಾದನೆಯ ಹಂತದಲ್ಲಿದ್ದಾಗ ಬೇಟೆಯಿಂದ ಮಾಂಸವನ್ನು ಪಡೆದು ತಿನ್ನುವುದು. ಜೊತೆಗೆ ಕಾಡಿನ ಉತ್ಪನ್ನಗಳಾದ ಗೆಡ್ಡೆ, ಗೆಣಸು, ಬಿದಿರಕ್ಕಿ, ಜೇನು ಇತ್ಯಾದಿಗಳನ್ನು ಸಂಗ್ರಹಿಸಿ ತಿನ್ನುವುದು ಸಾಮಾನ್ಯವಾಗಿತ್ತು.

ಎರಡನೆಯ ಹಂತವಾದ ಪಶುಪಾಲನೆಯ ಕಡೆ ಈ ಮ್ಯಾಸಬೇಡರು ಕ್ರಮೇಣ ಗಮನವನ್ನು ಹರಿಸಿದ್ದಾರೆ. ಆಗ ಹಾಲು ಮೊಸರುಗಳ ಬಳಕೆ, ಅದನ್ನು ಹತ್ತಿರದ ಊರುಗಳಲ್ಲಿ ವಿಕ್ರಯಿಸಿ ತಮಗೆ ಬೇಕಾದ ಧಾನ್ಯ ಇತ್ಯಾದಿಗಳನ್ನು ಕೊಂಡು ತರುವುದು ಕ್ರಮೇಣ ಪ್ರಾರಂಭವಾಗಿರಲು ಸಾಧ್ಯ. ಕಾಡಿನಂಚಿನ ಊರುಗಳಿಗೆ ಮಹಿಳೆಯರು ಹಾಲು, ಮೊಸಲು ಮಾರಲು ಹೋಗುತ್ತಿದ್ದರು ಎಂಬ ಪ್ರಸ್ತಾಪ ಈ ಸಮುದಾಯದ ಕಥನಗೀತೆಗಳಲ್ಲೊಂದಾದ 'ಗಾದ್ರಿಪಾಲ ನಾಯಕನ ಕಾವ್ಯದಲ್ಲಿ ಬರುತ್ತದೆ. ವಿಶೇಷವೆಂದರೆ ಭಾರತದ ಪ್ರಾಚೀನ ಕಾವ್ಯಗಳಾದ ರಾಮಾಯಣ, ಮಹಾಭಾರತದಿಂದ ಮೊದಲುಗೊಂಡು ಪಂಪನ ಭಾರತ, ಕುಮಾರವ್ಯಾಸನ ಭಾರತ, ಹರಿಹರನ ರಗಳೆ, ರಾಜಶೇಖರನ 'ಶಬರ ಶಂಕರ ವಿಳಾಸ, ನಾಗವರ್ಮನ ಕಾದಂಬರಿ ಹೀಗೆ ಅನೇಕ ಕೃತಿಗಳಲ್ಲಿ ಬೇಡವಟ್ಟುಗಳ, ಬೇಡರ ವಿವರಗಳು ಬರುತ್ತವೆ. ಇಂತಹ ಸಮುದಾಯದಲ್ಲಿಯೇ ಪಶುಪಾಲನೆಯನ್ನು ರೂಢಿಸಿಕೊಂಡಿದ್ದವರೇ ಈ ಮ್ಯಾಸಬೇಡರು. ರಾಮಾಯಣದ ಬೇಡ ದೊರೆ ಗುಹ, ಮಹಾಭಾರತದ ಏಕಲವ್ಯ ಇವರೆಲ್ಲಾ ಅಸರನ ಪಡೆಯಲ್ಲಿ ಸೇವೆ ಸಲ್ಲಿಸಿದವರೇ. ಅಂದರೆ ಸಾಹಸಿಗಳಾಗಿದ್ದ ಈ ಕಾಡಿನ ಪಡೆಯಲ್ಲಿ ಅರಸರು ತಮ್ಮ ಬಲಹೆಚ್ಚಿಸಿಕೊಳ್ಳಲು ಬಳಸಿಕೊಳ್ಳುತ್ತಿದ್ದ

ಉದಾಹರಣೆಗಳು ಸಿಗುತ್ತವೆ. ಮ್ಯಾಸಬೇಡರೂ ಇದರಿಂದ ಹೊರತಲ್ಲ. ಮುಮ್ಮಡಿಸಿಂಗನಾಯಕ, ಕಂಪಿಲರಾಯ ಇವರೂ ಬೇಡರೇ ಆಗಿದ್ದು ಇವರ ವಂಶಜರೇ ಹಕ್ಕ-ಬುಕ್ಕ -ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದರು ಎಂದು ಹೇಳಲಾಗುತ್ತದೆ. ಈತನ ಪಡೆಯಲ್ಲಿದ್ದ ಅನೇಕ ಸೈನಿಕರು ಮ್ಯಾಸಬೇಡರೇ ಆಗಿದ್ದರು. ವಿಜಯನಗರ ಸಂಸ್ಥಾನವನ್ನು ಪ್ರವೇಶ ಮಾಡಿದ ಬಳಿಕ ಮೊದಲು ರಾಜನ ವಿರೋಧಕ್ಕೆ ಗುರಿಯಾದರೂ ಕ್ರಮೇಣ ಇವರ ಶೌರ್ಯ ಸಾಹಸಗಳೇ ಕಾರಣವಾಗಿ ರಾಜನೇ ತಮ್ಮೊಂದಿಗೆ ಸ್ನೇಹ ಬೆಳೆಸುವಂತೆ ಮಾಡಿಕೊಂಡರು. ಕಂಪಳ ದೇವರ ಕೊಂಡಾಟದಲ್ಲಿ ದಿಲ್ಲ ಸುಲ್ತಾನನನ್ನು ಬಗ್ಗು ಹಿಡಿದ ಸ್ವಾಮಿ ಎಂದು ಹೇಳಲಾಗುತ್ತದೆ. ವೀರಯೋಧರಾದ ಇವರನ್ನು ತನ್ನ 'ಮೀಸಲು ಪಡೆಯನ್ನಾಗಿ ಬಳಸಿಕೊಳ್ಳುತ್ತಿದ್ದ. ಮಧ್ಯಕರ್ನಾಟಕದಲ್ಲಿ ನೆಲೆಯನ್ನು ಕಂಡುಕೊಂಡ ಜನರು ಹೀಗೆ ಬೇಟೆ, ಪಶುಪಾಲನೆ, ಸೈನಿಕ ವೃತ್ತಿ ಮಾಡುತ್ತಾ ಕಾಲ ಕಳೆದ ವಿವರಗಳು ದೊರಕುತ್ತವೆ. ಈ ಸೈನಿಕರಿಗೆ ಬಹುಮಾನಗಳನ್ನು ಕೊಟ್ಟು ಅರಸರು ತಮ್ಮ ಪ್ರೀತಿಯ ವಿಶ್ವಾಸದ ಬಂಧನದಲ್ಲಿ ಇವರನ್ನು ಇಟ್ಟುಕೊಳ್ಳುತ್ತಿದ್ದರು. 'ಈರಗಾರರ ತಾಳಿ' ಎಂದು ಅಂದು ತಮ್ಮ ಪೂರ್ವಿಕರು ರಾಜರಿಂದ ಬಹುಮಾನವಾಗಿ ಪಡೆದಿದ್ದ ಬೆಳ್ಳಿಯ ಪದಕಗಳನ್ನು ಇಂದಿಗೂ ಹೆಮ್ಮೆಯಿಂದ ಇವರು ಧರಿಸುತ್ತಾರೆ.



*ಈರಗಾರರ ತಾಳಿ ಧರಿಸಿ ಸಾಂಪ್ರದಾಯಿಕ ಉಡುಗೆಯಲ್ಲಿರುವ ನಲಬಾಪುಲು ನಾಯಕ*

ತಾಳೀಕೋಟೆಯ ಕದನದಲ್ಲಿ ಇವರು ಭಾಗವಹಿಸಿರಬಹುದಾದ ವಿವರಗಳು ನಾಯಕನಹಟ್ಟಿ ಬಖೈರುವಿನಲ್ಲಿ ಸಿಗುತ್ತವೆ. 'ಕಂಪಲಿ ದೇವರು' ಎಂದು ಪೂಜಿಸುವ ಮ್ಯಾಸರ ಬಹುಮುಖ್ಯ ಪೆಟ್ಟಿಗೆ ದೇವರುಗಳಲ್ಲಿ ಒಂದು ಮುತ್ತಿನ ಕಾಲುಪೆಂಡೆಯವಿದ್ದು ಅದನ್ನು ಪ್ರದರ್ಶಿಸುವುದೇ ಒಂದು ವಿಶೇಷ ಹಬ್ಬದಲ್ಲಿ. 'ಹೆಡೆಕಟ್ಟಿದ ಹಬ್ಬ' ಎಂದು ಆ ಹಬ್ಬವನ್ನು ಕರೆಯಲಾಗುತ್ತದೆ. ಬಹುಶಃ ವೀರನೊಬ್ಬನಿಗೆ ರಾಜ ಕೊಟ್ಟ ಬೆಲೆಬಾಳುವ ಪೆಂಡೆಯ ಇದಾಗಿರಬಹುದು. ಹೀಗೆ ರಾಜರ ಕರೆ ಬಂದಾಗ ಯುದ್ಧದಲ್ಲಿ

ಪಾಲ್ಗೊಳ್ಳುತ್ತಿದ್ದ ಬೇಡ ಪಡೆಗಳ ಮುಖಂಡರಿಗೆ ಮೊದಲು 'ನಾಯಕ' ಎಂದು ಕರೆಯಲಾಗುತ್ತಿದ್ದು ಅದೇ ಹೆಸರಿನ ಮೂಲಕ ಈಗ ತಮ್ಮನ್ನು ಗುರುತಿಸಿಕೊಳ್ಳುವುದೂ ಸಾಮಾನ್ಯವಾಗಿದೆ. ಹಾಗೆಯೇ ಬೇಡ ಪಟ್ಟಿಗಳ ಮುಖ್ಯಸ್ಥರ 'ನಾಯಕ' ಎಂದು ಕರೆಯಲ್ಪಟ್ಟು ಬೇಡನಾಯಕ ಎಂಬ ಹೆಸರು ಈ ಸಮುದಾಯಕ್ಕೆ ಬಂದಿರುವ ಸಾಧ್ಯತೆಗಳಿವೆ.

ತಮ್ಮಲ್ಲಿದ್ದ ಸಾಕಷ್ಟು ಪಶುಸಂಪತ್ತೇ ಕಾರಣವಾಗಿ ಈ ಮೂಲಕ ತಾವಿರುವ ಪರಿಸರವನ್ನು ತಮ್ಮದೇ ಅಧಿಪತ್ಯಕ್ಕೆ ಒಳಪಡಿಸಿಕೊಂಡು ದೊರೆ, ನಾಯಕ ಎಂದು ಕರೆಯಲ್ಪಟ್ಟರು. ನಾಯಕನಹಟ್ಟಿ ಪಾಳೆಯಗಾರರು ಇದಕ್ಕೆ ಉದಾಹರಣೆಯಾಗುತ್ತಾರೆ. ಕಾಮಗೇತಿ ಬೆಡಗಿನವರಾದ ಚಿತ್ರದುರ್ಗದ ಪಾಳೆಯಗಾರರೂ ಇದೇ ಮೂಲಕ್ಕೆ ಸೇರಿದವರಾಗುತ್ತಾರೆ.

ದಂಡಿನೊಡನೆ ಪಾಳಯವನ್ನು ಹಾಕಿ ಕದನಕ್ಕೆ ಸಿದ್ಧವಾಗಿರುವವರೇ ಪಾಳೆಯಗಾರರು ಎಂದೂ ಕರೆಯಲ್ಪಟ್ಟರು. ದನಕರುಗಳನ್ನು ಕಾಪಾಡುವ, ಸಮರ್ಥವಾಗಿ ರಕ್ಷಿಸುವ ಸಾಮರ್ಥ್ಯವೇ ಮುಂದೆ ರಾಜವಂಶಗಳ ಉಗಮಕ್ಕೆ ಕಾರಣವಾಯಿತು ಎಂದು ಜಿ. ಸಾಂತಮಯರು ಅಭಿಪ್ರಾಯ ಪಡುತ್ತಾರೆ.[೧೫] ಹೀಗೆಯೇ ಪಶುಪಾಲಕ ಮೂಲದ ಈ ಸಮುದಾಯದಲ್ಲಿಯೂ ಕೆಲವರು ಪಾಳೆಯಗಾರರೆನಿಸಿದರು.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿಯೇ ಭಾರತದಲ್ಲಿ ಅರಣ್ಯನಾಶ ಪ್ರಾರಂಭವಾಯಿತು. ವಸಾಹತುಶಾಹೀ ಆಕ್ರಮಣ ನಾಡಿನ ಮೂಲನೆಲೆ, ಮೂಲಿಸ್‌ಗರನ್ನು ಅನೇಕ ತಲ್ಲಣಗಳಿಗೆ ಈಡುಮಾಡುತ್ತದೆ. ಆಡಳಿತ ವ್ಯವಸ್ಥೆ, ರೈಲು ಇತರೆ ರಸ್ತೆಗಳ ನಿರ್ಮಾಣ, ಅಣೆಕಟ್ಟುಗಳ, ಕೈಗಾರಿಕೆಗಳ ನಿರ್ಮಾಣಕ್ಕಾಗಿ ಕಾಡನ್ನು ಕಡಿಯಲು ಆರಂಭಿಸಿದರು. ಮತ್ತೊಂದೆಡೆ ಗ್ರಾಮಸ್ಥರು ಸಾಗುವಳಿ ಭೂಮಿಗಾಗಿ ಅರಣ್ಯ ಕಡಿಯುತ್ತಾ ಬಂದರು. ಅನೇಕ ಬುಡಕಟ್ಟುಗಳ ಬದುಕು ಇದರಿಂದ ಆತಂಕಕ್ಕೆ ಒಳಗಾಯಿತು. ಮ್ಯಾಸಬೇಡರೂ ಇದರಿಂದ ಹೊರತಾಗಲಿಲ್ಲ. ಬೇಟೆ, ಪಶುಸಂಗೋಪನೆ ಅನುಕೂಲಕರವಾಗಿದ್ದ ಕಾಡಿನ ನೆಲೆ ತಪ್ಪಿದಾಗ ಇವರು ಕಾಡಿನ ಅಂಚಿಗೆ ಸರಿದರು. ತಮ್ಮ ಪಶುಸಂಪತ್ತನ್ನು ರಕ್ಷಿಸಲು ತಮ್ಮಲ್ಲಿಯೇ ಕೆಲವರನ್ನು ನಿಯಮಿಸಿ ತಾವು ಕಾಡಿನ ಪಕ್ಕದ ಊರುಗಳ ಬಳಿ ಹಟ್ಟಿ ಕಟ್ಟಿಕೊಂಡು ಕ್ರಮೇಣ ಊರೊಳಗೂ ಜೀವನ ಮಾಡಲು ಪ್ರಾರಂಭಿಸಿದರು. ಅರಣ್ಯ ನಾಶದಿಂದ ಹೀಗೆ ಕಾಡಿನ ನಿವಾಸಿಗಳು ಅನಾಥರಾಗುವುದು ಸಹಜ. ಚಿತ್ರದುರ್ಗ ಜಿಲ್ಲೆಯ ಕಾಡುಗೊಲ್ಲರು ಮತ್ತು ಮ್ಯಾಸಬೇಡರಿಗೆ ತಾವು ಯಾವ ಉದ್ಯೋಗ ಮಾಡಬೇಕೆಂಬುದೇ ಇಂದಿಗೂ ಒಂದು ಪ್ರಶ್ನೆಯಾಗಿದೆ. ಮೂಲವೃತ್ತಿ ಪಶುಪಾಲನೆ, ಕುರಿಸಾಕಾಣಿಕೆಯಾಗಿದ್ದು ಅದು ಇಂದು ಸಾಧ್ಯವಾಗದೆ ಹೋದಾಗ ಸ್ವಂತಕ್ಕೆ ಭೂಮಿಯನ್ನು ಹೊಂದಿರದ, ಬೇರೆ ವೃತ್ತಿ ತಿಳಿಯದ ಇವರಿಗೆ ಬದುಕು ಸಾಗಿಸುವುದೇ ಒಂದು ದೊಡ್ಡ ಸಮಸ್ಯೆಯಾಯಿತು. ಅನ್ಯಮಾರ್ಗವಿಲ್ಲದೆ ಊರಿನ ಶ್ರೀಮಂತರ, ಜಮಿನ್ದಾರರ ಹೊಲಗದ್ದೆಗಳಲ್ಲಿ ದುಡಿಯುವ ಕಾಯಕಕ್ಕೆ ತಮ್ಮನ್ನು ಹೆಂಗಸರು ಮಕ್ಕಳಾದಿಯಾಗಿ ಒಪ್ಪಿಸಿಕೊಂಡರು. ಪರಿಶಿಷ್ಟ ಜಾತಿಯವರನ್ನು ಬಿಟ್ಟರೆ ಇಂದು ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಜಿಲ್ಲೆಗಳಲ್ಲಿ ತಮ್ಮ ದೇಹದ ಶ್ರಮವನ್ನೇ ಬಂಡವಾಳವನ್ನಾಗಿ ಹೂಡಿ

---

೧೫ Gunter- Diet, Santhamer-Partoral Deitis in Western India, p.೧೦೧, ೧೯೯೩.

ಪರರ ಹೊಲಗದ್ದೆಗಳಲ್ಲಿ ದುಡಿಯುವ ಬಹುಸಂಖ್ಯಾತರು ವ್ಯಾಸಬೇಡರಾಗಿದ್ದಾರೆ. ಇವರ ದೈಹಿಕ ಸಾಮರ್ಥ್ಯವನ್ನು ಶ್ರೀಮಂತ ಜಮಿನ್ದಾರರು ತಮ್ಮನ್ನು, ತಮ್ಮ ಊಳಿಗ ಮಾನ್ಯ ಪದ್ಧತಿಯನ್ನು ಕಾಪಾಡುವ ಅಂಗ ರಕ್ಷಣೆಗಾಗಿ ಬಳಸಿಕೊಂಡದ್ದು ಉಂಟು. ಬದುಕಿನ ಅನಿವಾರ್ಯಕ್ಕೆ ಹೀಗೆ ಬಲಿಯಾದ ಸಮುದಾಯವಿದು.

ಮೇಲ್ವರ್ಗದ ಸಮಾಜವೇ ಈ ಸಮುದಾಯವನ್ನು ಕ್ರಿಮಿನಲ್ ಟ್ರೈಬ್ಸ್ ಎಂದು ಗುಮಾನಿಯಿಂದ ನೋಡುತ್ತಿತ್ತು. ತಮ್ಮ ಮೂಲ ನೆಲೆಯನ್ನು ಪ್ರಾಕೃತಿಕ ಪರಿಸರದ ಮೇಲೆ ತಮಗಿದ್ದ ಪರಂಪರಾಗತ ಹಕ್ಕುಗಳನ್ನು ಕಳೆದುಕೊಂಡ ಇವರು ಬದುಕಿನ ಅನಿವಾರ್ಯಕ್ಕೂ ಪರದಾಡುವಂತಾದುದು ಸಹಜ. ವಡೋದರ ಜಿಲ್ಲೆಯ ಪಾನವಾಡ ಬುಡಕಟ್ಟು ಜನಾಂಗವಾದ ಬಿಲ್ ಸಮುದಾಯವನ್ನು ಬ್ರಿಟಿಷರ ಕಾಲದಲ್ಲಿ ಕ್ರಿಮಿನಲ್ ಬುಡಕಟ್ಟು ಕಾಯ್ದೆಯನ್ವಯ ಪಟ್ಟಿ ಮಾಡಲಾಗಿತ್ತು 1871ರಲ್ಲಿ. ಈ ಸಮುದಾಯ ಹಿಂದೆ ಇಂದೋರ್ ಮತ್ತು ಧಾರ್ ರಾಜರಿಗೆ ಸೈನಿಕರಾಗಿ ಕೆಲಸ ಮಾಡಿದ್ದರು. 1952ರಲ್ಲಿ ಇಲ್ಲಿಂದ ಹೊರಬಂದಾಗ ಬೇರೆ ದಾರಿ ಕಾಣದೆ ಆಗಾಗ ಸಣ್ಣಪುಟ್ಟ ಅಪರಾಧಗಳನ್ನು ಪಾಲ್ಗೊಳ್ಳುವಂತಾಯಿತು.[೧೬]

ಮೂಲವೃತ್ತಿ ಕಳೆದುಕೊಂಡಾಗ ಬೇರೆ ವೃತ್ತಿ ಗೊತ್ತಿಲ್ಲದೇ ಇದ್ದಾಗ ಅನ್ನದ ಅವಶ್ಯಕತೆ ಕಾರಣವಾಗಿ ದಾರಿಹೋಕರನ್ನು ದೋಚಿರಬಹುದು. ಹಾಗೆಯೇ ಮತ್ತೊಂದು ನೆಲೆಯಿಂದ ಯೋಚಿಸಿದರೆ ಇದೊಂದು ಬಗೆಯ ಪ್ರತಿಭಟನೆ ಎನಿಸುತ್ತದೆ. ಇವರ ಕಳ್ಳತನ ಪ್ರಕೃತಿ ಸಹಜವಾದುದಲ್ಲ. ತಮ್ಮ ಬದುಕನ್ನು ಕಸಿದವರ ವಿರುದ್ಧವಾಗಿ ತಮ್ಮ ಬದುಕಿನ ಅಸಹಜ ಸ್ಥಿತಿಯಿಂದ ನಿರ್ಮಾಣವಾದದ್ದು. ಮೂಲಭೂತ ಅವಶ್ಯಕತೆಗಳಾದ ಅನ್ನ, ವಸತಿ, ಶಿಕ್ಷಣ ಇತ್ಯಾದಿಗಳು ಸಮಾಜದ ಪ್ರತಿಯೊಬ್ಬರಿಗೂ ಸಮಾನವಾಗಿ ಸಲ್ಲಬೇಕೆಂಬುದನ್ನು ಮಾರ್ಕ್ಸ್‌ವಾದ ಹೇಳುತ್ತದೆ. ಮಾರ್ಕ್ಸ್‌ಗಿಂತ ಮೊದಲೇ ಈ ತತ್ವವನ್ನು ತಮ್ಮ ಸಾಮುದಾಯಿಕ ಜೀವನ ವ್ಯವಸ್ಥೆಯಲ್ಲಿ ಅಳವಡಿಸಿಕೊಂಡು, ಖಾಸಗೀ ಆಸ್ತಿಯ ಪರಿಕಲ್ಪನೆಯೇ ಇಲ್ಲದೆ ಬಾಳುತ್ತಿದ್ದ ಸಮುದಾಯ ತನ್ನ ಮೇಲೆ ಆದ ಪ್ರಹಾರದಿಂದ ತತ್ತರಿಸಿದಾಗ ಅವರಿಗೆ ಆಳುವ ವ್ಯವಸ್ಥೆ ಕಟ್ಟಿದ ಪಟ್ಟ ಕ್ರಿಮಿನಲ್ಸ್ ಎಂದು. ಆದರೆ ಸುತ್ತಣ ಸುಶಿಕ್ಷಿತ ಸಮಾಜ ಕೊಟ್ಟ ಬಿರುದು 'ಬೇಡಕಳ್ಳ-ಮಾದಿಗಸುಳ್ಳ' ಎಂದು. ನಿಶ್ಚಿತ ನೆಲೆ ಇಲ್ಲದ ಇವರು ಪರಸ್ಪರ ಕಿತ್ತಾಟ, ಬಡಿದಾಟ ಅಪನಂಬಿಕೆಗಳಿಂದ ಅಸ್ತವ್ಯಸ್ತ ಸ್ಥಿತಿಯಲ್ಲಿ ಬಾಳುವ ರೀತಿಯನ್ನು ಕಂಡು 'ಕಂಕರಾಟ- ಕಲ್ಲಾಬಿಲ್ಲಿ' ಎಂದು ಹೀಯಾಳಿಸಿಸಿತು. 'ಜಾಲಿಯನ್ನು ಸಾಕಿದರೆ ಕಾಲಿಗೆ ಮೂಲ, ಬೇಡನನ್ನು ಸಾಕಿದರೆ ಜೀವಕ್ಕೆ ಮೂಲ' ಎಂದಿತು'. ಬೇವಿನ ನ್ಯಾಯ ಮಾವಿಗೆ ಎಂದೂ ಸಲ್ಲದು. ಎಲ್ಲಾ ಬೇವಿನ ಮರದ ಹಣ್ಣು ವಿಷವೇ. ಆದರೆ ಎಲ್ಲಾ ಮಾವಿನ ಮರದ ಹಣ್ಣುಗಳೂ ಹುಳಿಯಲ್ಲ. ಹಾಗೆಯೇ ಘಟಿಸಿದ ಒಂದು ಘಟನೆಯನ್ನು ಇಡೀ ಸಮುದಾಯಕ್ಕೇ ಅನ್ವಯಿಸುವ ರೀತಿ ನಾಗರೀಕ ಸಮಾಜ ಈ ಮೂಲಕ ತನ್ನ ಶಿಷ್ಟತೆಗೆ ತಾನು ಮಾಡಿಕೊಳ್ಳುವ ಅವಮಾನ ಎನಿಸುತ್ತದೆ. ಒಮ್ಮೆ ನಾಯಕ, ಒಮ್ಮೆ ಪಾಳೆಯಗಾರ ಎಂದು ಕರೆದ ವ್ಯವಸ್ಥೆಯೇ ಈ ಸಮುದಾಯವನ್ನು

---

೧೬ ಅನು: ಟಿ.ಎಸ್. ರಾಘವೇಂದ್ರ, ಮೂಲ ಗಣೇಶ ದೇವಿ, ಲೇಖನ: ಆದಿವಾಸಿ ವ್ಯಾಖ್ಯಾನ, ಕೃತಿ-ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಹಂಪಿ. ಪು.೨೪.

ಹೀಗೆ ಕಂಡಿದ್ದು ವಿಷಾದದ ಸಂಗತಿ. ಹಾಗೆಯೇ ಎತ್ತಪ್ಪನ ಸಾವಿಗೆ ಕಾರಣಳಾದ ಗುಡ್ಡದ ಬೋರಿಯ ಪ್ರಸಂಗವನ್ನಾಧರಿಸಿ ರೂಪಿತವಾದ ಎಲ್ಲಾ ಕಾಡುಗೊಲ್ಲರ ಸಾವಿಗೂ ಕಾರಣ ಬೇಡನಾಯಕರು ಮತ್ತು ಅವರ ಹೆಂಡತಿಯರು ಅಥವಾ ಸಹೋದರಿಯರು. ಒಂದೇ ಮೂಲದಿಂದ ಬಂದವರಿರಬಹುದು ಎಂದು ಹೇಳಲಾಗುವ ಈ ಎರಡು ಸಮುದಾಯಗಳಲ್ಲಿ ಕಾಡುಗೊಲ್ಲ ಮಹಿಳೆಯರು ಸತ್ಯ,ಶೀಲ, ಶೌಚಕ್ಕೆ ಹೆಸರಾದವರು. ಮ್ಯಾಸಬೇಡರ ಮಹಿಳೆಯರು ಹಾದರವನ್ನೇ ಬದುಕನ್ನಾಗಿಸಿಕೊಂಡವರು.[೧೭] ಇಂತಹ ವಿಪರ್ಯಾಸದ ಹೇಳಿಕೆಗಳು ಉತ್ಪ್ರೇಕ್ಷೆಯಲ್ಲದೆ ಬೇರೆ ಅಲ್ಲ ಎನಿಸುತ್ತದೆ. ಕಾಡಿನ ಅಂಚುಗಳಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದ ಮ್ಯಾಸನಾಯಕರು ಇಂದು ಊರಿಗೂ ಸರಿದಿದ್ದಾರೆ. ಮೂಲತಃ ಸೊಪ್ಪಿನ ಗುಡಿಸಲುಗಳಲ್ಲಿಯೇ ವಾಸಿಸುತ್ತಿದ್ದರು. ಹಟ್ಟಿಯನ್ನು ಎರಡು ವರ್ಷಗಳಿಗೊಮ್ಮೆ ಬದಲಾಯಿಸುವ ಸಂಪ್ರದಾಯವಿತ್ತು. ದೇವರ ಪೆಟ್ಟಿಗೆಯೊಂದಿಗೆ ತಮ್ಮ ಗುಡಿಸಲುಗಳನ್ನು ಹೊತ್ತುಕೊಂಡು ಚಲಿಸುತ್ತಿದ್ದ ಸಮುದಾಯವಿದು. ಆದರೆ ಇಂದು ಬದುಕು ಸ್ಥಿತ್ಯಂತರಗೊಳ್ಳುತ್ತಿದ್ದು ಹಟ್ಟಿಗಳ ಗುಡಿಸಲ ಜಾಗದಲ್ಲಿ ಕ್ರಮೇಣ ಮನೆಗಳು ಬರುತ್ತಿವೆ. ಆದರೆ ತಮ್ಮ ದೇವರಿಗೆ ಮನೆ ಆಗಿಬರುವುದಿಲ್ಲ ಎಂದು ಗುಡಿಸಿಲಿನಲ್ಲಿಯೇ ಉಳಿಸಿದ್ದಾರೆ. ಕಪ್ಪುವರ್ಣದವರಾದ, ಕ್ರೂರಿಗಳಾದ ಇವರು ಬೇಟೆಯ ಆಯುಧಗಳನ್ನು ಕೈಯಲ್ಲಿ ಹಿಡಿದಿರುತ್ತಾರೆ ಎಂಬ ವರ್ಣನೆ ಕಾವ್ಯಗಳಲ್ಲಿ ಬರುತ್ತದೆ. ಎತ್ತಿನ ಗೂಡುಗಳ ಬಳಿ ವಾಸಿಸುವ 'ಕಿಲಾರಿ'ಗಳ ಕೈಯಲ್ಲಿ ಮಾತ್ರ ಇಂದು ಚಿಪ್ಪುಗೊಡಲಿ, ಕೋಲು ಉಳಿದಿದೆ. ಜಾತ್ರೆ ಇತ್ಯಾದಿ ವೀರನಾಯಕನ ಆಚರಣೆಯ ವಿಧಿಗಳಲ್ಲಿ ಉಳಿದ ಬೇಡರೂ ಕೋಲುಗಳನ್ನು ಹಿಡಿದಿರುತ್ತಾರೆ. ಸಂಪ್ರದಾಯವಾಗಿ ಇದು ಉಳಿದುಬಂದಿದೆ. ವೇಷಭೂಷಣಗಳು ಅಷ್ಟೆ. ಬಿಳಿಯ ಚಲ್ಲಣ, ಮೈಮೇಲೆ ಹೊದ್ದಿರುವ ಬಿಳಿಯ ಬಟ್ಟೆ, ಅಥವಾ ಕಂಬಳಿ ತಲೆಗೆ ಪೇಟ, ಈಗ ಇದು ಕಿಲಾರಿಗಳಿಗೆ ಮಾತ್ರ ದಿರಿಸಾಗಿದೆ. ಕಿಲಾರಿಗಳ ಪತ್ನಿಯರು ಮಾತ್ರ ರವಿಕೆ ಧರಿಸುವುದಿಲ್ಲ. ಬಿಳಿಯ ಸೀರೆ ಉಟ್ಟು ಮೈತುಂಬಾ ಸೆರಗು ಹೊದ್ದಿರುತ್ತಾರೆ. ಹಿಂದೆ ಎಲ್ಲಾ ಮ್ಯಾಸಬೇಡರ ಮಹಿಳೆಯರಿಗೆ ಇದೇ ಉಡುಪೇ ಕಡ್ಡಾಯವಾಗಿತ್ತು. ಭಿನ್ನ ಸಮುದಾಯಗಳ ಮಧ್ಯೆ ಬದುಕುವ ಅನಿವಾರ್ಯ ಬದಲಾವಣೆಯ ಕಡೆ ಕೊಂಡೊಯ್ಯುವುದು ಸಹಜವೇ. ಆದರೆ ಮೂಲದ ಸಹಜತೆ ಇಂದು ಸಂಪ್ರದಾಯವಾಗುವುದೂ ನಿಜ. ಲೇ. ರಾಜಣ್ಣ ಚಳ್ಳಕೆರೆ, ತಮ್ಮ 'ನಾಯಕ ಜನಾಂಗದ ಇತಿಹಾಸ' ಎಂಬ ಕೃತಿಯಲ್ಲಿ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಲಕ್ಷೋಪಲಕ್ಷ ಮಂದಿ ಬ್ರಿಟಿಷರ, ಮುಸಲ್ಮಾನರ ದಾಳಿಗಳಲ್ಲಿ ಸ್ಥಳೀಯ ರಾಜರ ಪರವಾಗಿ ಹೋರಾಡಿ ಮಡಿದಾಗ ಅವರ ಮಡದಿಯರು ಅನಾಥರಾದರು, ಆಶ್ರಯರಹಿತರಾದರು. ಅನೇಕ ಮಹಿಳೆಯರು ಅನ್ಯಮಾರ್ಗವಿಲ್ಲದೆ ಬಲಿಷ್ಟರ ಭೋಗ ಜೀವನಕ್ಕೆ ಬಲಿಯಾದರು ಎನ್ನುತ್ತಾರೆ.[೧೮] ಇದು ನಿಜವೂ ಹೌದು. ಬಳ್ಳಾರಿ ಜಿಲ್ಲೆಯ ಕುಟುಂಬಗಳು ಮುಖ್ಯವಾಗಿ ನಾಯಕರು 'ದೇವದಾಸಿ' ಯಂತಹ ಕ್ರೂರ ಕೂಪಕ್ಕೆ ಬಿದ್ದು ಬದುಕನ್ನು ಸವೆಸುತ್ತಿದ್ದಾರೆ. ಬುಡಕಟ್ಟುಗಳಲ್ಲಿ ಇದು ಅಪರೂಪ. ಆದರೆ ಈ ಬುಡಕಟ್ಟಿನ ಅನಿವಾರ್ಯ ಇವರನ್ನು ಇಲ್ಲಿಗೆ ತಳ್ಳಿತು ಎಂದು ಹೇಳಬಹುದು. ಮೂಲತಃ ಮಾತೃ ಪ್ರಧಾನವಾಗಿದ್ದದ್ದು ಈ ಬುಡಕಟ್ಟು. ಅಮ್ಮನ

---

೧೭ ಡಾ ಮೀರ ಸಾಬಿಹಳ್ಳಿ ಶಿವಣ್ಣನವರು, ಕೃತಿ ಕಾಡುಗೊಲ್ಲರ ಬುಡಕಟ್ಟುವೀರರು, ಪು.೧೮೬-೧೮೭,೨೦೦೫.

೧೮ ಆರ್. ರಾಜಣ್ಣ, ನಾಯಕ ಜನಾಂಗದ ಇತಿಹಾಸ, ೧೯೮೨, ಪು.೭.

ಆರಾಧನೆ, ಹುತ್ತದ ಪೂಜೆ, ಬೇವಿನ ಮರದ ಪೂಜೆ, ಮಲೆಯಮ್ಮನ ಪೂಜೆಗಳು ಇಲ್ಲಿ ಸಾಮಾನ್ಯ. ಅಲ್ಲದೆ ಈ ಬುಡಕಟ್ಟಿನ ಮೌಖಿಕ ಕಥನದಲ್ಲಿ ಸ್ತ್ರೀಪ್ರಧಾನ್ಯತೆಯ ಎಳೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ನಲಟಬ್ಬನವರು, ಅರವಬ್ಬನವರು, ಗೌಡರಜ್ಜಿಯವರು, ಅಬ್ಬನಡು, ಪಾಲಬ್ಬನಡು, ಇತ್ಯಾದಿ ಸ್ತ್ರೀ ಮೂಲದ ಬೆಡಗುಗಳೂ ಈ ಬುಡಕಟ್ಟಿನಲ್ಲಿವೆ.

ಈ ಮೂಲಕ ದೃಢಪಡುವ ಸಂಗತಿಯೆಂದರೆ ಇದು ಹಿಂದೊಮ್ಮೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿಂದ ಕೂಡಿತ್ತು ಎಂಬುದು. ಒಂದು ವ್ಯವಸ್ಥೆ ಎಂದಾಗ ಯಾರೂ ಪ್ರಧಾನರಾಗುವ ಅವಶ್ಯಕತೆ ಇಲ್ಲ. ಸಮಬಾಳು, ಸಹಚರ್ಯೆ, ಪರಸ್ಪರರಲ್ಲಿ ಗೌರವಿಸುವ ವಿಧಾನಗಳನ್ನು ನಿರೀಕ್ಷಿಸುವುದು ಅಪರಾಧವಲ್ಲ. ಅದು ಮಾನವ ಹಕ್ಕುಗಳಲ್ಲೊಂದು. ಆದರೆ ಈ ಸಮುದಾಯದಲ್ಲಿ ಉಳಿದ ಅನೇಕ ಶಿಷ್ಟ ಸಮುದಾಯಗಳಲ್ಲಿರುವಂತೆಯೇ ಸ್ತ್ರೀ ಶೋಷಣೆ ಅಡಿಯಿರಿಸುತ್ತಿದೆ. ಸಮಾನ ಸೌಲಭ್ಯಗಳು ಸಿಗದೆ ಮಹಿಳೆ ವಂಚಿಸಲ್ಪಡುತ್ತಿದ್ದಾಳೆ. ಬುಡಕಟ್ಟು ವೀರರ ಆರಾಧನೆಯಲ್ಲಿಯೂ ಪುರುಷರದೇ ಓಡಾಟ. ಅಕ್ಷರ ಜ್ಞಾನದ ಅರಿವನ್ನು ಪಡೆಯಲು ಸಾಧ್ಯವಾಗದೆ ಅಜ್ಞಾನಕ್ಕೆ ಬಲಿಪಶುಗಳಾಗಿದ್ದವರು ಬೇಕಾದಷ್ಟು ಮಂದಿ. ನಾಗರೀಕ ಜಗತ್ತಿನ ಅಕ್ಷರಲೋಕದ ಸಂಪರ್ಕ ಸಾಧ್ಯವಾದಾಗ ಅಪರೂಪಕ್ಕೆ ಬೆರಳೆಣಿಕೆಯಷ್ಟು ಮಂದಿ ಅಕ್ಷರಾಭ್ಯಾಸ ಮಾಡಿ ಈ ಜ್ಞಾನಶಿಸ್ತನ್ನು ಪ್ರವೇಶ ಮಾಡಿದರು. ಬುಡಕಟ್ಟು ಸಮುದಾಯವಾಗಿರುವ ನೀವು ಪರಿಶಿಷ್ಟ ವರ್ಗದ ಪಟ್ಟಿಗೆ ಸೇರಲು ಸರ್ಕಾರದ ಮೇಲೆ ಹಕ್ಕೊತ್ತಾಯಗಳನ್ನು ತನ್ನಿ ಎಂದು ಹಿಂದೆ ಹಲವರು ಸಲಹೆ ನೀಡಿದಾಗ ಹಿಂದೆ ಸ್ವಾಯತ್ತವಾಗಿ ಬದುಕಿದ್ದ ಸ್ವಾಭಿಮಾನೀ ಸಮುದಾಯದವರಾದ ಇವರು ಸರ್ಕಾರದ ಈ 'ಕೊಡುವಿಕೆ' ಯನ್ನು ಸ್ವೀಕರಿಸಲು ಹಿಂದೆಗೆದದ್ದೂ ಉಂಟು. ಕ್ರಮೇಣ ಇಲ್ಲಿಯ ಅಸಹಾಯಕತೆ, ಬಡತನ, ಇದಕ್ಕೆ ಕಾರಣವಾಗಿದ್ದ ಸಂದರ್ಭಗಳು ಮತ್ತು ಸೌಲಭ್ಯಗಳನ್ನು ಪಡೆಯಬೇಕಾದುದು ತಮ್ಮ ಹಕ್ಕು ಎಂಬ ವಿಚಾರಗಳು ಸ್ಪಷ್ಟವಾದಾಗ ಸರ್ಕಾರದ ಮೇಲೆ ಒತ್ತಾಯಗಳನ್ನು ತಂದರು. ದೇವರಾಜು ಅರಸು ಅವರ ಕಾಲದಲ್ಲಿ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿ ಹಾವನೂರು ಕರ್ನಾಟಕದ ಜಾತಿ-ಬುಡಕಟ್ಟುಗಳ ಸಮೀಕ್ಷೆ ನಡೆಸಿದಾಗ ಈ ಬೇಡರ ಅತಂತ್ರಸ್ಥಿತಿಯನ್ನು ಗುರುತಿಸಿ ಪರಿಶಿಷ್ಟ ವರ್ಗದ ಪಟ್ಟಿಗೆ ಸೇರಿಸಿದರು. 1991ರಲ್ಲಿ ಕೇಂದ್ರ ಸರ್ಕಾರ ಒಂದು ಹೊಸ ಅಮೆಂಡ್‌ಮೆಂಟ್ ಮಾಡಿ ನಾಯಕ, ಬೇಡ, ವಾಲ್ಮೀಕಿ, ಬೇಡರ್ ಹೀಗೆ ಕೇವಲ ಹೆಸರಿನ ಭಿನ್ನತೆ ಹೊಂದಿದ್ದ ಈ ಎಲ್ಲರನ್ನು ಪರಿಶಿಷ್ಟ ವರ್ಗದ ಪಟ್ಟಿಗೆ ಸೇರಿಸಿತು. ಅಂದಿನಿಂದ ಅಲ್ಲಲ್ಲಿ ಕೆಲವು ಮಂದಿಯಾದರೂ ಅಕ್ಷರಲೋಕದ ಜ್ಞಾನಶಿಸ್ತಿನ ಪರಿಧಿಯ ಒಳಗೆ ಬರುವಂತಾಯಿತು. ಮತ್ತು ಸರ್ಕಾರೀ ಕಛೇರಿಗಳಲ್ಲಿ ದುಡಿಯುವ ಅವಕಾಶ ಪಡೆದಿದ್ದಾರೆ. ಬೆರಳಣಿಕೆಯಷ್ಟು ಮಹಿಳೆಯರೂ ಈ ದಾರಿಯಲ್ಲಿದ್ದಾರೆ.

ಸರ್ಕಾರ ಮೀಸಲು ಕ್ಷೇತ್ರ ಎಂದು ಕೆಲವು ಕ್ಷೇತ್ರಗಳನ್ನು ಹೆಸರಿಸಿದ್ದು ಅದರಲ್ಲಿ ರಾಜಕೀಯ ಪ್ರವೇಶ ಪಡೆಯುವಾಗಲೂ ಈಗಾಗಲೇ ಶಿಷ್ಟ ವಲಯದಲ್ಲಿರುವ ನಾಯಕರೇ ಅವಕಾಶ ಪಡೆಯುತ್ತಿರುವುದು ಆತಂಕದ ಸ್ಥಿತಿಯಾಗಿದೆ. ಈ ಆತಂಕ ನಿವಾರಣೆಯಾಗಬೇಕೆಂದರೆ ಹೀಗೆ ಸಮುದಾಯದ ಮೂಲಕ ತಮ್ಮನ್ನು ಗುರುತಿಸಿಕೊಂಡು ಅಧಿಕಾರದ ಗಾದಿಗೇರುವ 'ನಾಯಕರು' ತಮ್ಮ ಸಮುದಾಯದ ಕನಿಷ್ಟ ಸ್ಥಿತಿಯಲ್ಲಿರುವವರ ಬಗ್ಗೆಯೂ ಕಳಕಳಿಯಿಂದ ಆಲೋಚಿಸುವ ಸಹೃದಯತೆಯನ್ನು ಬೆಳೆಸಿಕೊಳ್ಳಬೇಕು.

ವರ್ತಮಾನದಲ್ಲಿ ಇತರ ಜಾತಿಗಳಲ್ಲಿ ಮಠಗಳ ಸ್ಥಾಪನೆ ಮೂಲಕ ಸಂಘಟಿತರಾಗುವ ವಿಧಾನಗಳನ್ನು ಕಂಡು ಇಲ್ಲಿಯೂ 'ಮಠ' ಸ್ಥಾಪನೆ ಯಾಗಿದ್ದು ಈ ಮಠ ಕೇವಲ ರಾಜಕೀಯ ಶಕ್ತಿಗಳನ್ನು ಬೆಳೆಸುವ ಈ ಒಂದೇ ಕಾರಣಕ್ಕಾಗಿ ಸಮುದಾಯವನ್ನು ಬೆಸೆಯುವ ಪ್ರಯತ್ನವನ್ನೇ ಮುಖ್ಯವಾಗಿಸಿಕೊಳ್ಳದೆ ಸಮುದಾಯದ ಮೂಲ ಮಾದರಿಯನ್ನು ಉಳಿಸುತ್ತ ಅಕ್ಷರ, ಅನ್ನ ಪಡೆದು ನಿರಾತಂಕ ಸ್ಥಿತಿಯಲ್ಲಿ ಇಲ್ಲಿಯ ಜನ ಬಾಳುವಂತಹ ಅವಕಾಶಗಳನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ಪ್ರಯತ್ನಗಳನ್ನು ನಡೆಸುವುದು ಸಮಂಜಸವೆನಿಸುತ್ತದೆ.

ರಾಮಾಯಣದಂತಹ ಮಹಾಕಾವ್ಯ ಬರೆದ ಅಕ್ಷರರೂಪಿ ಜ್ಞಾನದ ಪ್ರತೀಕ ವಾಲ್ಮೀಕಿ, ರಾಮನಿಗೆ ಸಹಾಯಕನಾಗಿ ನಿಂತ ಕಾಡಿನ ಬೇಡ ದೊರೆ ಗುಹ, ಆಳುವ ಶಕ್ತಿ, ಮತ್ತು ಕಲಿಸುವ ಶಕ್ತಿಗಳ ನಿರ್ಲಕ್ಷ್ಯಕ್ಕೆ ಗುರಿಯಾದರೂ ಕಲಿಯಲೇ ಬೇಕೆಂಬ ಬದ್ಧತೆಯಿಂದ ಕಲಿತು ಅರ್ಜುನನನ್ನು ಮೀರಿಸುವಂತಹ ಸಾಮರ್ಥ್ಯ ಪಡೆದ ಏಕಲವ್ಯ, ಧ್ಯಾನ, ಭಕ್ತಿ, ಪ್ರಾಮಾಣಿಕತೆಗೆ ಮತ್ತೊಂದು ಹೆಸರಾದ ಶಬರಿ - ಮುಗ್ಧಭಕ್ತಿಯ ಪ್ರತೀಕವಾದ ಕಣ್ಣಪ್ಪ ಈ ಪೌರಾಣಿಕ ಪಾತ್ರಗಳ ಮೂಲಕ ತಮ್ಮ ಕುಲಮೂಲವನ್ನು ಗುರುತಿಸಿಕೊಂಡು ಹೆಮ್ಮೆಯನ್ನು ತಳೆಯುವುದು ಈ ಸಮುದಾಯದಲ್ಲಿ ಸಾಮಾನ್ಯವಾಗಿ ಕಂಡುಬರುವ ಸಂಗತಿ. ಇದು ಹೆಮ್ಮೆಯ ಸಂಗತಿಯೇ. ಆದರೆ ಇದು ಕೇವಲ 'ಇತ್ತುಗಳ ಧ್ವಜ' ಎಂಬತ್ತಾಗಬಾರದು. ಇರುವಂತಹ ವ್ಯವಸ್ಥೆಯಾಗಬೇಕಾಗಿದೆ. ವ್ಯವಸ್ಥೆಯನ್ನು ಒದಗಿಸಿಕೊಡುವವರ ಅಲಕ್ಷ್ಯ ತಮ್ಮ ಹೀನಸ್ಥಿತಿಗೆ ಕಾರಣ ಎಂದು ಕೊರಗುವುದೋ, ಅಥವಾ ಪಲಾಯನವಾದಿಯಾಗುವುದೋ ಆಗಬಾರದು. ಬದಲಾಗಿ ಪುರಾಣ ಪುರುಷರು ಬದುಕಿನ ಬಗೆಗಿನ ತಮ್ಮ ಬದ್ಧತೆ, ಶ್ರದ್ಧೆ ಕಾರಣವಾಗಿ ಗುರುತಿಸಲ್ಪಟ್ಟವರು. ಐತಿಹಾಸಿಕ ನಾಯಕ/ನಾಯಕಿಯರು ತಮ್ಮ ದಕ್ಷತೆ, ಕಾರ್ಯ ಕ್ಷಮತೆಯ ಮೂಲಕ ಸಮುದಾಯದ ನಾಯಕರೆನಿಸಿದ್ದಾರೆ. ಇದರಿಂದಲೇ ಇಂದು ಸಮುದಾಯದ ಸ್ಮರಣೆಯಲ್ಲಿ ಉಳಿದುಬಂದಿದ್ದಾರೆ. ಇದೇ ಬದ್ಧತೆ, ಕಾರ್ಯತತ್ಪರತೆಯನ್ನು ತಮ್ಮದಾಗಿಸಿಕೊಂಡು ಸ್ವಾಭಿಮಾನದಿಂದ ಸಮುದಾಯ ಮುನ್ನಡೆಯುವ ಪ್ರಯತ್ನ ಮಾಡಬೇಕಾಗಿದೆ. ಇದು ಆಗುತ್ತಲೇ ಇಲ್ಲ ಎಂದಲ್ಲ. ಎಲ್ಲರ ನಡಿಗೆ ಈ ಕಡೆಗೆಯೇ ಎಂದಾಗ ಅಭಿವೃದ್ಧಿ ಸಾಧ್ಯವಾಗುತ್ತದೆ. ಶ್ರದ್ಧೆ, ಬದ್ಧತೆಗಳು ಆಗ್ರಹ, ಹಕ್ಕೊತ್ತಾಯಗಳ ಮೂಲಕ ಪಡೆಯುವಿಕೆ-ತನ್ಮೂಲಕ ಬದುಕನ್ನು ಕಟ್ಟಿಕೊಳ್ಳುವಿಕೆಯನ್ನು ಸಾಧ್ಯಮಾಡುತ್ತವೆ.

ಅಧ್ಯಾಯ-೩

# ಸಾಂಸ್ಕೃತಿಕ ನಾಯಕಿಯರು-ಅರ್ಥ ಮತ್ತು ವ್ಯಾಪ್ತಿ

೩.೧ ಅರ್ಥ ಮತ್ತು ವ್ಯಾಪ್ತಿ

೩.೨ ಸಾಂಸ್ಕೃತಿಕ ನಾಯಕಿಯರ ಪರಿಚಯ

ಅ) ದಾನಸಾಲಿಯಮ್ಮ, ಆ) ಅಕ್ಕರಾಯಮ್ಮ, ಇ) ಮಲೆಯಮ್ಮ

ಈ) ಮುಂಗಲ ದೇವಮ್ಮ

ಉ) ಗೌರಸಮುದ್ರದ ಮಾರಮ್ಮ ಊ) ಕಂಚವ್ವ, ಕಾಮವ್ವ

೩.೩ ಮ್ಯಾಸಬೇಡರ ಸೃಷ್ಟಿ ಪುರಾಣ

ಅ) ಪುರಾಣಗಳು –ಅರ್ಥ ವಿವರಣೆ

ಆ) ಮ್ಯಾಸಬೇಡರ ಸೃಷ್ಟಿ ಪುರಾಣ –೧. ಮತ್ತು ೨

ಇ) ದೇವರ ಸೃಷ್ಟಿ ಪುರಾಣ

೩.೪ ಸಾಂಸ್ಕೃತಿಕ ನಾಯಕಿಯರನ್ನು ಕುರಿತ ಪುರಾಣಗಳು

ಅ) ಅಕ್ಕರಾಯಮ್ಮ ಪುರಾಣ –೧ ಮತ್ತು ೨

ಆ) ಮಲೆಯಮ್ಮ ಪುರಾಣ – ೧, ೨, ೩

ಇ) ಮುಂಗಲು ದೇವಮ್ಮ ಪುರಾಣ –೧, ೨, ೩

ಈ) ಕಂಚವ್ವ – ಕಾಮವ್ವ

ಉ) ದಾನಸಾಲಮ್ಮ ಪುರಾಣ –೧, ೨, ೩ ಮತ್ತು ವಿಶ್ಲೇಷಣೆ

ಊ) ಗೌರಸಮುದ್ರದ ಮಾರಮ್ಮ

೩.೫ ಸಮುದಾಯದ ಸ್ಮರಣೆಯಲ್ಲಿ ಉಳಿದಿರುವ ಮಹಿಳೆಯರು

ಅ) ತಮ್ಮಟಕಲ್ಲಿನ ಓಬವ್ವ ಆ) ಅರವಜ್ಜಿ ಇ) ನಲ್ಲಟಬ್ಬ

ಈ) ಹಿಡಾಲಗಂಗಿ –ಗಡಾಲಗಂಗಿ

೩.೬ ಆರಾಧನೆ – ಆಚರಣೆಗಳು

ಅ) ಅಕ್ಕರಾಯಮ್ಮನ ಆರಾಧನೆ

೧) ಚಿನಮುಜ್ಜನಹಳ್ಳಿ ೨) ಅವಳೇನ ಹಳ್ಳಿ ೩) ದೇವರಹಳ್ಳಿ ೪) ಹುಣಿಸೇಕಟ್ಟಿ

೫) ರುದ್ರಮ್ಮನಹಳ್ಳಿ ೬) ಗಡಿಮಾಕುಂಟೆ

ಆ) ಮಲೆಯಮ್ಮನ ಆರಾಧನೆ

೧) ಮುತ್ತಿಗಾರರ ಹಳ್ಳಿ ಕಮರದ ಕಾವಲಿನಲ್ಲಿ

೨) ಜುಮೋಬನಹಳ್ಳಿ –ಕೂಡ್ಲಿಗಿ ತಾಲ್ಲೂಕು

೩) ಮರ್ಲಹಳ್ಳಿ – ಮೊಳಕಾಲ್ಮೂರು (ತಾ)

ಇ) ಮುಂಗಲು ದೇವಮ್ಮನ ಆರಾಧನೆ

ಈ) ಗೌರಸಮುದ್ರದ ಮಾರಮ್ಮ

೩.೭ ಅವಸ್ಥಾಂತರಗಳು

ಅ)ಸಾಂಸ್ಕೃತಿಕ ನಾಯಕಿಯರ ಅವಸ್ಥಾಂತರಗಳು

ಅಕ್ಕರಾಯಮ್ಮ, ಮಲೆಯಮ್ಮ, ಗೌರಸಮುದ್ರದ ಮಾರಮ್ಮ

ಆ) ದೇವಾಲಯಗಳ ಅವಸ್ಥಾಂತರ

ಇ) ರೂಪದ ಅವಸ್ಥಾಂತರ

ಈ) ಕಥನಗಳ ಮತ್ತು ಆರಾಧನೆಯ ಅವಸ್ಥಾಂತರ

ಉ) ಅವಸ್ಥಾಂತರದ ಪರಿಣಾಮಗಳು

೩.೮ ಸಮುದಾಯದ ಮಹಿಳೆಯರ ಸಾಂಸ್ಕೃತಿಕ ನಾಯಕಿಯರ ಪ್ರಭಾವ

ಅಧ್ಯಾಯ-೩

# ಸಾಂಸ್ಕೃತಿಕ ನಾಯಕಿಯರು – ಅರ್ಥ ಮತ್ತು ವ್ಯಾಪ್ತಿ

## ೩.೧ ಅರ್ಥ ಮತ್ತು ವ್ಯಾಪ್ತಿ:

ಜಗತ್ತಿನಲ್ಲಿರುವ ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಸಾಂಸ್ಕೃತಿಕ ವ್ಯವಸ್ಥೆಯೊಂದು ಇರುವುದು ಸಹಜ. ಈ ವ್ಯವಸ್ಥೆಯನ್ನೇ ಒಟ್ಟಾರೆ ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಇದೊಂದು ಸಮೂಹಸಮ್ಮತ ಜೀವನ ಪದ್ಧತಿ. ನಿರ್ದಿಷ್ಟವಾದ ಸಮುದಾಯವೊಂದು ಪರಸ್ಪರ ಒಪ್ಪಿತವಾದ ಒಂದೇ ಬಗೆಯ ಜೀವನ ವಿಧಾನವನ್ನು ರೂಢಿಸಿಕೊಂಡು ಬಾಳುತ್ತಿದ್ದರೆ ಒಟ್ಟಾರೆ ಅವರ ಸಮಗ್ರವಾದ ಜೀವನ ಪದ್ಧತಿಯನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ತನ್ನ ಬದುಕಿನ ಬಗ್ಗೆ ತನಗಿರುವ ಬದ್ಧತೆ, ಆಸಕ್ತಿಗಳೇ ಕಾರಣವಾಗಿ ತನ್ನದೇ ಆದ ಪರಿಸರದಲ್ಲಿ ಬದುಕುವ ರೀತಿಯೊಂದು ರೂಪುಗೊಳ್ಳುತ್ತದೆ. "ಪೂರ್ಣ ಪರಿಸರದಲ್ಲಿ ಮನುಷ್ಯ ನಿರ್ಮಿತ ಭಾಗವೇ ಸಂಸ್ಕೃತಿ"[೧೯] ಎನ್ನುವುದು ಹರ್ಸ್‌ಕೊವಿಟ್ಸ್‌ನ ಅಭಿಪ್ರಾಯ. "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯ ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ"[೨೦] ಎಂದು ವ್ಯಾಖ್ಯಾನಿಸುವ ಟೈಲರ್ ಸಹ ಸಂಸ್ಕೃತಿಯನ್ನು ಒಂದು ಸಾಮೂಹಿಕ ಪ್ರಕ್ರಿಯೆಯನ್ನಾಗಿಯೇ ಗ್ರಹಿಸಿದ್ದಾನೆ. ಹೀಗೆ ನಿರ್ದಿಷ್ಟವಾದ ಸಂಸ್ಕೃತಿಯನ್ನು ಹೊಂದಿರುವ, ಈ ಮೂಲಕ ಭಿನ್ನ ಸಮುದಾಯಗಳಿಂದ ಪ್ರತ್ಯೇಕತೆಯನ್ನು ಕಾಯ್ದುಕೊಂಡಿರುವ ಮತ್ತು ನಾಡಿನ ಸಂಸ್ಕೃತಿಯಿಂದ ಈ ಕಾರಣದಿಂದಾಗಿ ದೂರವಾಗಿಯೇ ಉಳಿದಿರುವ ಸಮುದಾಯವನ್ನು 'ಬುಡಕಟ್ಟು' ಎಂದು ಕರೆಯಲಾಗುತ್ತದೆ. ಇಂತಹ ಬುಡಕಟ್ಟಿಗೆ ಮಾರ್ಗದರ್ಶಿಯಾಗಿ ಕಾರ್ಯ ನಿರ್ವಹಿಸಿದವರು, ಸಮಸ್ಯೆಗಳು ಎದುರಾದಾಗ ಮುಂದಾಳತ್ವ ವಹಿಸಿ ಹೋರಾಡಿ ತನ್ನ ಸಮುದಾಯ ನಿರಾಳವಾಗಿ ಮುನ್ನಡೆಯುವಂತೆ ಮಾಡಿದವರು, ಶೌರ್ಯ ಪ್ರದರ್ಶನ, ತ್ಯಾಗ, ಬಲಿದಾನಗಳನ್ನು ಮಾಡಿದವರನ್ನು ಆ ಸಂಸ್ಕೃತಿಯ ರಕ್ಷಕರು ಎಂದು ಭಾವಿಸಿ 'ನಾಯಕ' ಸ್ಥಾನದಲ್ಲಿಡಲಾಗುತ್ತದೆ. ಇವರು ಯಾವುದಾದರೂ ಘಟನೆ ಅಥವಾ ಘಟನೆಗಳು ತಮ್ಮ ಸಮುದಾಯದ ನೆಮ್ಮದಿಯನ್ನು ಕಲಕಿದಾಗ ತಮ್ಮ ಸಕ್ರಿಯವಾದ ಶಕ್ತಿಯಿಂದ ಹೋರಾಟ ನಡೆಸಿ ಪ್ರವಾಹದ ಗತಿಯನ್ನು ಬದಲಾಯಿಸಬಲ್ಲವರಾಗಿರುತ್ತಾರೆ. ಹೀಗೆ ತಮ್ಮಿಂದ ನಿರ್ವಹಿಸಲ್ಪಟ್ಟ ವಿಶೇಷವಾದ ಘಟನೆಗಳೇ ಕಾರಣವಾಗಿ ಅವರು ನಾಯಕ ಅಥವಾ ವೀರನ ಸ್ಥಾನವನ್ನು ಪಡೆಯುತ್ತಾರೆ. ಯಾವುದೇ ರೀತಿಯಲ್ಲಿ ನೆಮ್ಮದಿ ಕಳೆದುಕೊಂಡ ಸಮುದಾಯ ಮತ್ತೆ ಅದನ್ನು ಪಡೆಯಲು ಆಶಿಸುವುದು ಸಹಜ. ಇಡೀ ಸಮುದಾಯ ಇದಕ್ಕಾಗಿ ಪ್ರಯತ್ನ ಪಡಬಹುದು. ಇವರ ನಡುವೆಯೇ ಇವರೆಲ್ಲರ ಅಂತಃಸತ್ವಗಳ ಪ್ರತಿರೂಪವಾಗಿ ಒಬ್ಬ

---

[೧೯] Herskovits, Cultral Anthropology, Delhi Oxford and IBA Publications, ೧೯೭೪, P.೩೦೩

[೨೦] Taylor, A Study of Archeology.

ಮುಂದಾಳತ್ವವಹಿಸಿ ತನ್ನವರ ಅಗತ್ಯವನ್ನು ಈಡೇರಿಸಿದಾಗ ಆತ ಅಲ್ಲಿ ನಾಯಕನೆನ್ನಿಸುತ್ತಾನೆ, ಸಾಂಸ್ಕೃತಿಕ ವೀರ ಎಂದು ಪರಿಗಣಿಸಲ್ಪಡುತ್ತಾನೆ. ಹೀಗೆ ವೈಚಾರಿಕ ಆವರಣ ಸೃಷ್ಟಿಸಿರುವ ಈ ನಾಯಕ ಆ ಸಮುದಾಯದ ಒಟ್ಟು ಆಶೋತ್ತರಗಳ ಪ್ರತಿರೂಪವಾಗುತ್ತಾನೆ. ಯಾವುದು ಆ ವಿಶೇಷವಾದ ಕಾರ್ಯ ಎಂದು ನಿರ್ದಿಷ್ಟವಾಗಿ ಅದು ಇಂತಹುದೇ ಆಗಿರಬೇಕು ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪ್ರತಿಯೊಂದು ಸಮುದಾಯದ ಸಾಮಾಜಿಕ ಸಂದರ್ಭ, ಅದು ಬದುಕುತ್ತಿರುವ ರೀತಿ, ಅಲ್ಲಿ ನಡೆದ ಕ್ಷೋಭೆ ಇದಕ್ಕೆ ಸಂಬಂಧಿಸಿದುದಾಗಿರುತ್ತದೆ. ರಾಜ್ಯದ ರಕ್ಷಣೆ ಮಾಡುವ ವ್ಯಕ್ತಿ ತನ್ನ ಈ ಕಾರ್ಯದ ಮೂಲಕ ರಾಜ/ನಾಯಕ ಎಂಬ ಪಟ್ಟವನ್ನು ಪಡೆದಿರಬಹುದು. ಆದರೆ ಒಂದು ಪುಟ್ಟ ಘಟಕವೊಂದರ ಮಟ್ಟಿಗೆ ಆ ಘಟಕವನ್ನು ಮುನ್ನಡೆಸಿದವ, ಕಾಪಾಡಿದವ ಸಹ 'ನಾಯಕ'ನೆನಿಸಿಕೊಳ್ಳಲು ಅರ್ಹನಾಗುತ್ತಾನೆ.

ಮನುಕುಲದ ಆರಂಭದ ಹಂತದಲ್ಲಿ ಪ್ರಕೃತಿಯ ಅಗಾಧವಾದ ಶಕ್ತಿಯನ್ನೇ ಪ್ರಮುಖ ಸ್ಥಾನದಲ್ಲಿರಿಸಿ ಪೂಜಿಸುವ ವಿಧಾನಗಳಿದ್ದು ನಂತರ ಇದರೊಂದಿಗೆ ತಮ್ಮ ಬಳಕೆಯ ವಸ್ತುಗಳಿಗೂ ಪ್ರಾಧಾನ್ಯ ಕೊಟ್ಟು ಆರಾಧಿಸುವ ಕ್ರಮ ರೂಢಿಗೆ ಬಂದಿತು. ಕಾಲಕ್ರಮೇಣ ಸಮುದಾಯದ ಮುಖ್ಯಸ್ಥನನ್ನೇ ಕುಲದೈವ, ಸಂಸ್ಕೃತಿಯ ನಾಯಕ ಎಂದು ಪರಿಗಣಿಸಿ ಆರಾಧಿಸುವ ಪದ್ಧತಿ ಆರಂಭವಾಯಿತು. ಆತನಿಗೆ ಸಾಂಕೇತಿಕವಾಗಿ ಆತ ಬಳಸುತ್ತಿದ್ದ ವಸ್ತುವನ್ನೋ ಅಥವಾ ಆತನ ಸಮಾಧಿಯನ್ನೋ ಆರಾಧಿಸುವ ಪದ್ಧತಿ ಬಂದಿತು. ಇಂತಹ ನಾಯಕರನ್ನು ನಾವು ಅರಿಯಬೇಕೆಂದರೆ ಆಯಾ ಬುಡಕಟ್ಟಿನಲ್ಲಿ ಕಟ್ಟಲ್ಪಟ್ಟಿರುವ ಕಥನಗಳ ಮೂಲಕ ಮತ್ತು ಅವರಿಗೆ ಸಂಬಂಧಿಸಿದ ಆಚರಣೆಗಳ ಮೂಲಕ ಸಾಧ್ಯವಾಗುತ್ತದೆ.

ಕರ್ನಾಟಕದಲ್ಲಿ ಪ್ರಚಲಿತವಿರುವ ಹಾಗೂ ತುಂಬಾ ವ್ಯಾಪಕವಾಗಿ ಚರ್ಚೆಯಲ್ಲಿರುವ ದೇಶೀ ಕಥನಗಳೆಂದರೆ ಮಲೆ ಮಾದೇಶ್ವರನ ಕಾವ್ಯ, ಮಂಟೇಸ್ವಾಮಿ ಕಾವ್ಯ, ಎತ್ತಪ್ಪ, ಜುಂಜಪ್ಪನ ಕಾವ್ಯ, ಕುಮಾರರಾಮ, ಗಾದ್ರಿ ಪಾಲನಾಯಕ, ಜಗಳೂರು ಪಾಪನಾಯಕನನ್ನು ಕುರಿತ ಕಥನಗಳು. ಇವರೆಲ್ಲಾ ಸಾಂಸ್ಕೃತಿಕ ನಾಯಕ ಎಂದು ಪರಿಗಣಿಸಲ್ಪಟ್ಟಿರುವವರೇ. ಮೂಲತಃ ಚಾರಿತ್ರಿಕ ವ್ಯಕ್ತಿಗಳಾಗಿದ್ದ ಈ ಸಾಂಸ್ಕೃತಿಕ ವೀರರು ಧಾರ್ಮಿಕ ಮಹಾಪುರುಷರಾಗಿ ಸಮುದಾಯದಲ್ಲಿ ಪರಿಗಣಿಸಲ್ಪಟ್ಟಿದ್ದಾರೆ. ಇವರಲ್ಲಿ ಮಾದೇಶ್ವರ ಮತ್ತು ಮಂಟೇಸ್ವಾಮಿ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಸುಹೊಕ್ಕಾಗಿದ್ದ ವರ್ಣ ವ್ಯವಸ್ಥೆ, ಅದು ನಿರ್ಮಿಸಿದ ಜಾತಿ ವ್ಯವಸ್ಥೆಯ ವಿರುದ್ಧ ಬಂಡೆದ್ದು ಹೋರಾಟವನ್ನು ನಡೆಸಿದವರು. ಇವರು ತಮ್ಮದೇ ಆದ ರೀತಿಯಲ್ಲಿ ಪ್ರತಿರೋಧವನ್ನು ಒಡ್ಡಿ, ಶಿಷ್ಟವಾದ ಯಾವುದನ್ನು ಅಂದಿನ ವ್ಯವಸ್ಥೆಯ ವಿರುದ್ಧದ ಬಂಡಾಯ ಎಂದು ವೈಭವೀಕರಿಸುತ್ತೇವೆಯೋ, ಅಂತಹ ವಚನ ಚಳುವಳಿಯ ತಾತ್ವಿಕತೆಯೊಂದಿಗೆ ಹೋರಾಟಕ್ಕಿಳಿದು ತಮ್ಮದೇ ಆದ ಅಸ್ತಿತ್ವವನ್ನು ನಾಶಗೊಳಿಸುತ್ತಿದ್ದ ಆ ವ್ಯವಸ್ಥೆಯ ವಿರುದ್ಧ ಘರ್ಷಣೆಗಿಳಿಯುತ್ತಾರೆ. ಶರಣಧರ್ಮದ ಆಚರಣೆಗಳನ್ನು ನಿರಾಕರಿಸುತ್ತಾ ತಮ್ಮದೇ ಆದ ಅವೈದಿಕ ವಿಧಾನಗಳ ಮೂಲಕ ಜಾತ್ಯತೀತವಾದಿತನವನ್ನು ಪ್ರತಿಷ್ಠಾಪಿಸುವ ಪ್ರಯತ್ನ ಮಾಡಿದವರಿವರು. ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಳ್ಳದೆ, ತಮ್ಮ ವೈಚಾರಿಕತೆಯ ಮೂಲಕ ತಮ್ಮದೇ ಆದ ಒಕ್ಕಲುಗಳನ್ನು ಮಾಡಿಕೊಳ್ಳುತ್ತಾ ಒಂದು ಪ್ರಬಲವಾದ ಸ್ವತಂತ್ರ ಅಸ್ತಿತ್ವವುಳ್ಳ ಸಮುದಾಯದ ಸಂಸ್ಕೃತಿಯನ್ನು ಉಳಿಸಿ ಕಾಪಾಡಿದರು. ಹೊರಗಡೆಯಿಂದ ಬಂದ ಪ್ರತಿರೋಧಗಳನ್ನು ನಿವಾರಿಸುತ್ತಲೇ ಜೊತೆಗೆ ತನ್ನ ಸಮುದಾಯದ

ಒಳಗೇ ತನ್ನವರೇ ತನಗೆ ಒಡ್ಡುತ್ತಿದ್ದ ತಡೆಗಳನ್ನು ನಿವಾರಿಸಿಕೊಳ್ಳುತ್ತಾ, ಪಶುಪಾಲನೆಯನ್ನೂ ಮಾಡುತ್ತ ತನ್ನ ಸಮುದಾಯವನ್ನು ರಕ್ಷಿಸಿದ ಜುಂಜಪ್ಪ, ಎತ್ತಪ್ಪ ಕಾಡುಗೊಲ್ಲರಲ್ಲಿ ಸಾಂಸ್ಕೃತಿಕ ನಾಯಕರೆನಿಸಿಕೊಳ್ಳುತ್ತಾರೆ. ತುಳುಪಾಡ್ದನದಲ್ಲಿ ಬರುವ 'ಸಿರಿ' ತನ್ನ ಗಂಡನಿಂದ ಕಡೆಗಣಿಸಲ್ಪಟ್ಟಾಗ ಮರುವಿವಾಹವಾಗಿ ವೈರುಧ್ಯಗಳ ಮಧ್ಯೆಯೇ ಬದುಕನ್ನು ಕಟ್ಟಿಕೊಂಡು ನಂತರದ ಸಮುದಾಯಕ್ಕೆ ಮಾದರಿಯಾಗಿ ಹಲವರಲ್ಲಿ ಆವಾಹನೆಗೊಳ್ಳುತ್ತಾ ಮಹಿಳೆಯ ಮನದ ಒಳದನಿಯನ್ನು ಪ್ರಕಟ ಮಾಡುವ ಸಾಧ್ಯತೆಯನ್ನು ಉಂಟು ಮಾಡಿದ್ದಾಳೆ. ಗೊಂಡರ ಸಾಂಸ್ಕೃತಿಕ ವೀರರನ್ನು ಜಟ್ಟಿಗರು ಎಂದು ಕರೆಯಲಾಗುತ್ತದೆ. ನೇತ್ರಾಣಿ ಜಟ್ಟಿಗ, ಕುಂಟ ಜಟ್ಟಿಗ, ಗುಡಿ ಜಟ್ಟಿಗ, ಮೋಟ ಜಟ್ಟಿಗ ಮುಂತಾಗಿ ಆರಾಧಿಸಲ್ಪಡುತ್ತಿದ್ದಾರೆ.[೨೧]

ಮ್ಯಾಸಬೇಡರಲ್ಲಿ ಈಗಾಗಲೇ ಗಾದ್ರಿಪಾಲನಾಯಕ, ಜಗಲೂರು ಪಾಪನಾಯಕ, ಆ ಸಮುದಾಯದ ಸಾಂಸ್ಕೃತಿಕ ನಾಯಕರೆನಿಸಿಕೊಂಡಿದ್ದಾರೆ. ಗಾದ್ರಿಪಾಲನಾಯಕನು ತನ್ನ ಪಶುಸಂಪತ್ತನ್ನು ರಕ್ಷಣೆ ಮಾಡುತ್ತ ಸಮುದಾಯದ ಬದುಕಿನ ನಿರ್ವಹಣೆಯ ಮೂಲಶಕ್ತಿಯಾಗಿ ಅದನ್ನು ಮುನ್ನಡೆಸುತ್ತಾನೆ. ಹುಲಿಯೊಂದಿಗೆ ಹೋರಾಡಿ, ಸಮುದಾಯದ ಜೀವನ ನಿರ್ವಹಣೆಯ ಮೂಲವಾಗಿದ್ದ ಪಶುಸಂಪತ್ತನ್ನು ರಕ್ಷಿಸಲು ಹೆಣಗಾಡಿ ಕೊನೆಗೆ ಸಾವನ್ನಪ್ಪುವ ಈತ ಸಮುದಾಯದ ಸಾಂಸ್ಕೃತಿಕ ಶಕ್ತಿಯೆಂದು ಪರಿಗಣಿಸಲ್ಪಟ್ಟು ಸಮುದಾಯದಾದ್ಯಂತ ಆರಾಧಿಸಲ್ಪಡುತ್ತಿದ್ದಾನೆ.

ಜಗಲೂರು ಪಾಪನಾಯಕನ ಹೋರಾಟದ ಸ್ವರೂಪವೇ ಬೇರೆ. ರಾಜಪ್ರಭುತ್ವವು ಹೇರಿದ ಅಧಿಕ ತೆರಿಗೆಯಿಂದ ಜನ ಕಂಗಾಲಾಗಿದ್ದಾಗ ರಾಜನನ್ನು ತನ್ನ ಜಾಣ್ಮೆಯಿಂದ ಮಣಿಸಿ ತೆರಿಗೆಯನ್ನು ರದ್ದುಪಡಿಸುವಂತೆ ಮಾಡುತ್ತಾನೆ. ಹಾಗೆಯೇ ವರ್ಣವ್ಯವಸ್ಥೆ ಉಂಟುಮಾಡಿದ ಜಾತಿವ್ಯವಸ್ಥೆ. ಅದರಿಂದಾದ ವರ್ಗವೈರುಧ್ಯ ಇದರ ವಿರುದ್ಧ ಆತ ಬಂಡೆದ್ದು ತಿರುಪತಿಯ ಯಾತ್ರೆಮಾಡಿ, ಅಲ್ಲಿ ತಿರಸ್ಕಾರಕ್ಕೊಳಗಾಗಿ ನಂತರ ದೇವರ ಆದರಕ್ಕೆ ಪಾತ್ರನಾಗುವುದರ ಮೂಲಕ ಗೆಲುವನ್ನು ಸಾಧಿಸುತ್ತಾನೆ. ಧೂರ್ತನಾದ ಕ್ಯಾಸಯ್ಯ ತನ್ನ ಪತ್ನಿಯನ್ನು ಅಂದರೆ ಜಗಲೂರು ಪಾಪನಾಯಕನ ಸೋದರತ್ತೆಯನ್ನು ಕ್ಷುಲ್ಲಕ ಕಾರಣದಿಂದ ತ್ಯಜಿಸಿರುತ್ತಾನೆ. ಈತನಿಗೆ ಪಾಠ ಕಲಿಸಿ ತವರು ಸೇರಿದ್ದ ತನ್ನ ಅತ್ತೆ ತನ್ನ ಗಂಡನೊಂದಿಗೆ ಕೂಡಿ ಬಾಳುವಂತೆ ಮಾಡುತ್ತಾನೆ. ಈ ಸ್ತ್ರೀಪರ ಕಾಳಜಿಯ ಮೂಲಕವಾಗಿಯೂ ಈತ ಸ್ತುತ್ಯಾರ್ಹನಾಗುತ್ತಾನೆ.

ತನ್ನ ಶುದ್ಧ ಚಾರಿತ್ರ್ಯದಿಂದ ಪಶುಸಂಪತ್ತಿನ ರಕ್ಷಣೆ ಮಾಡುವುದಲ್ಲದೆ, ಪರಕೀಯರಿಂದ ನಾಡನ್ನು ರಕ್ಷಿಸಿದ ಕುಮಾರರಾಮ, ಕೆರೆ ಕಟ್ಟಿಸುವುದರ ಮೂಲಕ ರೈತರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿದ. ಶ್ರಮ ಸಂಸ್ಕೃತಿಗೆ ಮನ್ನಣೆ ನೀಡಿ, ದಲಿತರ ಮನೆಯಲ್ಲಿ ಊಟ ಮಾಡುವುದರ ಮೂಲಕ ಜಾತೀಯ ವ್ಯವಸ್ಥೆಯನ್ನು ಛಿದ್ರಗೊಳಿಸುವ ಪ್ರಯತ್ನ ಮಾಡಿ, ನಾಯಕನಹಟ್ಟಿಯ ತಿಪ್ಪೇಸ್ವಾಮಿ ಇವರೆಲ್ಲಾ ಸಾಂಸ್ಕೃತಿಕ ನಾಯಕರೆನಿಸಿ ಆರಾಧನೆಗೆ, ಮನ್ನಣೆಗೆ ಪಾತ್ರರಾಗಿದ್ದಾರೆ. ಹೀಗೆ ಬುಡಕಟ್ಟು ಜನರ ಯಾವುದೇ ಹೋರಾಟವಾಗಲಿ, ಅದು ವ್ಯವಸ್ಥೆ ನಿರ್ಮಾಣ ಮಾಡಿರುವ ಕ್ರೌರ್ಯವೇ ಕಾರಣವಾಗಿ ಅನಿವಾರ್ಯವಾಗಿ

---

[೨೧] ಬುಡಕಟ್ಟು ದೈವಾರಾಧನೆ – ಡಾ.ಹಿ.ಚಿ.ಬೋರಲಿಂಗಯ್ಯ. ಕನ್ನಡ ವಿ.ವಿ., ಪು.೩೨.

ರೂಪುಗೊಳ್ಳುತ್ತದೆ. ಹೀಗೆ ಹೋರಾಟಕ್ಕೆ ಕಾರಣವಾಗಿರುವ ಕ್ರೌರ್ಯವನ್ನು ಹೊರಗಿನ ವ್ಯವಸ್ಥೆಯೊಂದು ನಿರ್ಮಾಣ ಮಾಡಿರಬಹುದು. ಕೆಲವೊಮ್ಮೆ ತನ್ನದೆ ವ್ಯವಸ್ಥೆಯ ಒಳನೆಲೆಗಳೂ ನಿರ್ಮಿಸಿರಬಹುದು. ಒಟ್ಟಾರೆ ತಮ್ಮ ಸಮುದಾಯಕ್ಕೆ ಬದುಕುವ ವಿಧಾನವನ್ನು ತೋರಿಸಿಕೊಟ್ಟರೆ, ರಕ್ಷಿಸಿದರೆ 'ವೀರ', 'ನಾಯಕ' ಎಂದು ಸಾಮಾನ್ಯವಾಗಿ ಪರಿಗಣಿಸಲ್ಪಡುತ್ತಾರೆ. ಸಮುದಾಯದಲ್ಲಿ ವೈಚಾರಿಕ ಪ್ರಜ್ಞೆಯನ್ನು ಹುಟ್ಟು ಹಾಕಿದವರೂ ತಮ್ಮ ಈ ಹೊಸ ಆಲೋಚನಾ ವಿಧಾನಗಳ ಮೂಲಕ ಸಮುದಾಯದ ಗೌರವಕ್ಕೆ ಪಾತ್ರವಾಗಿ ಆರಾಧಿಸಲ್ಪಡುತ್ತಾರೆ. ಕೇವಲ ಕತ್ತಿ, ಖಡ್ಗ ಹಿಡಿದು ಹೋರಾಟ ಮಾಡಿದವರು ಮಾತ್ರವೇ ನಾಯಕರಲ್ಲ. ಅವಿಲ್ಲದೆಯೇ ಸಂದರ್ಭವನ್ನು ಮೆಟ್ಟಿ ನಿಲ್ಲುವ ಸಾಧ್ಯತೆಗಳೂ ಉಂಟು.

'ಸಾಂಸ್ಕೃತಿಕ ನಾಯಕ' ಎಂಬುದು ಅಧ್ಯಯನಗಳು ಕಟ್ಟಿದ ಪದ. ಸಮುದಾಯ ಈ ಪದವನ್ನು ಬಳಸುವುದಿಲ್ಲ. ಇಡೀ ಸಮುದಾಯದ ಸ್ಮರಣೆಯಲ್ಲೋ, ಆರಾಧನೆಯ ಸ್ವರೂಪದಲ್ಲೋ ಉಳಿದುಬಂದಿದ್ದು, ಆ ಮೂಲಕ ಅವರು ಆ ಸಂಸ್ಕೃತಿಯ ನಾಯಕ/ಸಾಂಸ್ಕೃತಿಕ ನಾಯಕಿಯೆಂದು ಸಮುದಾಯದಲ್ಲಿ ಪರಿಗಣಿಸಲ್ಪಟ್ಟಿರುವುದೇ ಅವರ ಅಂತಃಸತ್ವವನ್ನು ಸ್ಪಷ್ಟಪಡಿಸುತ್ತದೆ. ಜಗತ್ತಿನಾದ್ಯಂತ ಸುಮಾರು ೨೦ ಕೋಟಿಗೂ ಹೆಚ್ಚು ಜನ ಬುಡಕಟ್ಟಿಗೆ ಸೇರಿದವರಾಗಿದ್ದಾರೆ. ಈ ಎಲ್ಲಾ ಬುಡಕಟ್ಟುಗಳಲ್ಲಿಯೂ ಪುರುಷರಿಗೆ ಮೇಲ್‌ಸ್ತರದ ಸ್ಥಾನಮಾನ ಲಭ್ಯವಾಗಿದೆ. ಸಾಕಷ್ಟು ಮಂದಿ ಸಾಂಸ್ಕೃತಿಕ ನಾಯಕರು ಇಲ್ಲಿ ಗುರುತಿಸಲ್ಪಟ್ಟಿದ್ದಾರೆ. ಆದರೆ ನಾಯಕಿ ಪ್ರಧಾನವಾದ ಬುಡಕಟ್ಟುಗಳ ಸಂಖ್ಯೆ ಕಡಿಮೆಯೆಂದೇ ಹೇಳಬಹುದು. ಸಮುದಾಯದಲ್ಲಿ ಮಹತ್ವಪೂರ್ವವಾದ ಕಾರ್ಯನಿರ್ವಹಿಸಿದ ಮಹಿಳೆಯರೆಲ್ಲರಿಗೂ ಎಲ್ಲಾ ಸಮುದಾಯದಲ್ಲಿ ಪ್ರಾತಿನಿಧ್ಯ ದೊರಕಿಲ್ಲದಿರುವುದೂ ಉಂಟು.

'ಮಾತೆ' ಎಲ್ಲಕ್ಕೂ ಮೊದಲಿಗಳು. ಭೂಮಿಯಂತೆಯೇ ಫಲವಂತಿಕೆಯನ್ನು ಪಡೆದಿರುವವಳು. ಸಮೃದ್ಧಿಯ ಸಂಕೇತವಾದ ಇವಳನ್ನು ಭೂಮಿಯನ್ನು ಪೂಜಿಸುವಂತೆಯೇ ನಮ್ಮ ಆದಿಮ ಸಂಸ್ಕೃತಿ ಪೂಜಿಸುತ್ತಾ ಬಂದಿದೆ. ಇದೇ ಪರಿಕಲ್ಪನೆಯು ಶಿಷ್ಟರಲ್ಲಿ 'ಶಕ್ತಿ ಸ್ವರೂಪಿಣಿ' ಎಂಬರ್ಥದಲ್ಲಿ ಮಾನ್ಯವಾಗುತ್ತಾ ಬಂದಿದೆ. ಒಟ್ಟಾರೆ 'ಮಾತೆ'ಯು ದೇವತೆಯಾಗಿ ಆರಾಧನೆಗೆ ಒಳಗಾದವಳು. ಪೆತ್ತ, ಪೊರೆವ ಮಾತೆಯಾದ ಇವಳ ಸ್ಥಾನ ಕುಟುಂಬದಲ್ಲಿ ಸಹಜವಾಗಿಯೇ ಮುಖ್ಯವಾಗುತ್ತದೆ. ಆದಿಮ ಸಂಸ್ಕೃತಿಯಲ್ಲಿ ಪ್ರಧಾನಸ್ಥಾನದಲ್ಲಿದ್ದ ಹೆಣ್ಣು ಸಹಜವಾಗಿಯೇ ನಾಯಕಿಯ ಸ್ಥಾನವನ್ನು ಪಡೆದಿದ್ದಳು. ಭಾರತದ ಮಟ್ಟಿಗೆ ಹೇಳಬೇಕೆಂದರೆ ಮೂಲತಃ ಸ್ತ್ರೀ ಪುರುಷ ಸಮಾನತೆ ಇದ್ದು, ಇದೊಂದು ಮೌಲ್ಯವಾಗಿತ್ತು. ಹಾಗಾಗಿಯೇ ಇಂದಿಗೂ ಇಲ್ಲಿ ಪ್ರತಿಯೊಂದು ಸಮುದಾಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ 'ಸ್ತ್ರೀ' ಅಂದರೆ 'ಅಮ್ಮ'ನ ಆರಾಧನೆ ರೂಢಿಯಲ್ಲಿದೆ. ಆರ್ಯರು ಬಂದ ನಂತರ ಅವರ ಧರ್ಮ ಇಲ್ಲಿ ವಿಸ್ತರಿಸುತ್ತಲೇ ಅವರ ಪುರುಷ ಯಜಮಾನ್ಯ ಸಂಸ್ಕೃತಿ ಇಲ್ಲಿಯ ಸ್ಥಳೀಯ ಸಂಸ್ಕೃತಿಗಳಿಗೆ ಆದರ್ಶವಾಯಿತು. ಮಹಿಳೆಯ ಸ್ಥಾನ ಗೌಣವಾಯಿತು. ವರ್ಣವ್ಯವಸ್ಥೆ ಜಾತಿವ್ಯವಸ್ಥೆಯಾಗಿ ಇದರ ಪರಿಣಾಮದಿಂದ ಅನೇಕರು ಶೋಷಿತರಾಗಿ ಸಾಮಾಜಿಕ ಅಪಮಾನಗಳನ್ನು ಅನುಭವಿಸುತ್ತಾ ಬದುಕಿದ್ದು, ಬದುಕುತ್ತಿರುವುದು ನಮಗೆಲ್ಲಾ ತಿಳಿದಿರುವ ಸಂಗತಿ. ಆದರೆ ಇದೇ ರೀತಿಯಲ್ಲಿಯೇ ಮಹಿಳೆ ಮನುಷ್ಯ ಜಾತಿಯಲ್ಲಿಯೇ ಪುರುಷನಿಗೆ ಸಮಾನ ಘಟಕ ಎಂದು ಪರಿಗಣಿಸಲ್ಪಡದೆ ವಸ್ತುವಿನಂತೆ ಇತಿಹಾಸದ

ಉದ್ದಕ್ಕೂ ಪರಿಗಣಿತವಾಗುತ್ತಾ ಬಂದಿರುವುದೂ ಅಷ್ಟೇ ನಿಜ. ಇಂತಹ ಸಂದರ್ಭದಲ್ಲಿ ಕಳೆದುಕೊಂಡ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಟ ಮಾಡಿದ, ಅಷ್ಟಲ್ಲದೆ ವ್ಯವಸ್ಥೆಯೊಂದರಿಂದ ತಿರಸ್ಕೃತರಾದ ಪುರುಷನ ಪರವಾಗಿಯೂ ಹೋರಾಟ ಮಾಡಿದ ಸ್ತ್ರೀ ಇಲ್ಲಿ ಸಹಜವಾಗಿಯೇ ನಾಯಕಿಯ ಸ್ಥಾನವನ್ನು ಪಡೆಯುತ್ತಾಳೆ. ಬುಡಕಟ್ಟು ಸಮುದಾಯದ ಮಹಿಳೆಯರು ಸಾಮಾನ್ಯವಾಗಿ ದುರ್ಬಲರಲ್ಲ. ಮ್ಯಾಸಬೇಡರ ಬುಡಕಟ್ಟಿನಲ್ಲಿಯೇ ಸಬಲತೆಯಿಂದ ಸಮುದಾಯವನ್ನು ರಕ್ಷಿಸಿದ ಮಹಿಳೆಯರಿರುವುದು ವಿಶೇಷವಾದುದಾಗಿದೆ. ನಮ್ಮ ಶಿಷ್ಟ ಪುರಾಣಗಳಲ್ಲಿ ಪುರುಷನಿಗೆ ಅನುವರ್ತಿಯಾಗಿ ಬಾಳಿದ ಮಹಿಳೆಯರು ಮಾತ್ರ ಸ್ತುತ್ಯರ್ಹರಾಗಿದ್ದಾರೆ. ಆದರೆ ಬುಡಕಟ್ಟು ಕಾವ್ಯಗಳಲ್ಲಿ ತಮ್ಮ ಸ್ವಂತಿಕೆಯನ್ನೂ ಉಳಿಸಿಕೊಂಡು, ವ್ಯಕ್ತಿ ಸಹಜವಾದ ಗೌರವವನ್ನು ಪಡೆಯುತ್ತಾ ಬಾಳಿದ, ಮಹಿಳೆಯರಿದ್ದಾರೆ. ಇಲ್ಲಿ ದುರ್ಬಲ ಮಹಿಳೆಯರು ಇಲ್ಲವೇ ಇಲ್ಲ ಎಂದಲ್ಲ. ಆದರೆ, ಕೆಲವರಾದರೂ ಸಬಲತೆಯ ಕಾರಣಕ್ಕಾಗಿ ಸಮುದಾಯದ ಸ್ಮೃತಿಯಲ್ಲಿ ಉಳಿದುಬಂದಿರುವುದೇ ವಿಶೇಷ.

ಮ್ಯಾಸಬೇಡರ ಬುಡಕಟ್ಟಿನ ಮೂಲ ಆರಂಭಗೊಳ್ಳುವುದೇ ಮಹಿಳೆಯ ಮೂಲಕ. ಈ ಮಹಿಳೆಯರೇ ತಮ್ಮ ವಿಶಿಷ್ಟವಾದ ಕೆಚ್ಚು ಜಾಣ್ಮೆಗಳ ಮೂಲಕ ಸಮುದಾಯವನ್ನು ಮುನ್ನಡೆಸುತ್ತಾ ಬಂದಿದ್ದು ಈ ಮೂಲಕವಾಗಿಯೇ ಪುರುಷರು ಸಮುದಾಯದಲ್ಲಿ ನಿರ್ದಿಷ್ಟವಾದ ನೆಲೆಗಳನ್ನು ಪಡೆದುಕೊಂಡರು ಮತ್ತು ನಾಯಕರೆನಿಕೊಂಡರು. ಇವರಿಗೆ ಸಂಬಂಧಿಸಿದ ಆರಾಧನೆಗಳು ಸಮುದಾಯದಲ್ಲಿ ವ್ಯಾಪಕವಾಗಿ ಕಂಡುಬರುತ್ತವೆ. ಇಂತಹ ಅನೇಕ ವೀರನಾಯಕರ ಬಗ್ಗೆ ಡಾ. ವಿರೂಪಾಕ್ಷಿ ಪೂಜಾರಿ ಹಳ್ಳಿಯವರು ತಮ್ಮ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಕೃತಿಯಲ್ಲಿ ಉಲ್ಲೇಖಮಾಡಿದ್ದಾರೆ. ಡಾ. ಕೃಷ್ಣಮೂರ್ತಿ ಹನೂರರು[೨೨] ಮ್ಯಾಸನಾಯಕ ಬುಡಕಟ್ಟಿನಲ್ಲಿ ಈ ಕೆಲವರನ್ನೇ 'ಬೇಡ ಶರಣರು' ಎಂದು ಗುರುತಿಸುತ್ತಾರೆ. ಈ ಕೆಲವರಿಗೆ ಸಂಬಂಧಿಸಿದ ಆರಾಧನೆಗಳೇ ಸಮುದಾಯದ ಪ್ರಮುಖ ಸಾಂಸ್ಕೃತಿಕ ಆಚರಣೆಗಳೆನಿಸಿಕೊಂಡಿವೆ. ಆದರೆ ಈ ಪುರುಷರು 'ನಾಯಕ' ಸ್ಥಾನವನ್ನು ಪಡೆಯಲು ಕಾರಣಕರ್ತರಾದ ಮಹಿಳೆಯರನ್ನು ನಿರ್ವಿವಾದವಾಗಿ ಸಂಬಂಧಿಸಿದ ಬುಡಕಟ್ಟಿನ 'ಸಾಂಸ್ಕೃತಿಕ ನಾಯಕಿಯರು' ಎಂದು ಕರೆಯಬಹುದಾಗಿದೆ. ಒಂದು ಬುಡಕಟ್ಟಿನ ಸಂಸ್ಕೃತಿಯನ್ನು ರಚಿಸುವಲ್ಲಿ ಆ ಗುಂಪಿನ ಪುರುಷನಷ್ಟೇ ಹೊಣೆಗಾರಿಕೆಯನ್ನು ಮಹಿಳೆಯೂ ಹೊಂದಿರುತ್ತಾಳೆ. "ಕಾರ್ಯ ಸಾಧನೆ ಮಾಡುವವನು ಗಂಡು. ಆದರೆ ಗಂಡಿನ ಈ ಸಾಹಸದ ಕಾರ್ಯ ತಂತ್ರಗಳನ್ನು ರೂಪಿಸುವವಳು ಹೆಣ್ಣು. ಇಡಿಯ ಕಥಾಚೌಕಟ್ಟಿನಿಂದ ಈ ಹೆಣ್ಣುಗಳನ್ನು ಹೊರಗಿಟ್ಟರೆ ನಾಯಕ ನಿಸ್ಸಾಹಾಯಕನಾಗುತ್ತಾನೆ."[೨೩] (ಭಾರತೀಯ ಸ್ತ್ರೀವಾದ ಒಂದು ಸಂಕಥನ ಲೇ. ಗಾಯತ್ರೀ ನಾವಡ.) ಲೇಖಕಿಯ ಈ ಮಾತು ಬಹಳ ಅರ್ಥಪೂರ್ಣವಾದುದು. ಕಾರ್ಯತಂತ್ರ ರೂಪಿಸಿ ಹೋರಾಟಕ್ಕೆ ಅಣಿಗೊಳಿಸಿದ, ಸ್ವತಃ ಕಾರ್ಯಸಾಧನೆ ಮಾಡಿದ ಮಹಿಳೆಯರು ಸಾಂಸ್ಕೃತಿಕ ನಾಯಕಿಯ ಸ್ಥಾನವನ್ನು ನಿರ್ವಿವಾದವಾಗಿ ಪಡೆಯಲೇಬೇಕಾಗುತ್ತದೆ. ತನ್ನ ಕಾರ್ಯಸಾಧನೆಯ

---

[೨೨] ಚಿತ್ರದುರ್ಗ ಜಿಲ್ಲೆಯ ಬೇಡ ನಾಯಕರು ಮಹಾಪ್ರಬಂಧ, ಬೆಂಗಳೂರು, ವಿಶ್ವವಿದ್ಯಾಲಯ.

[೨೩] ಡಾ. ಗಾಯತ್ರಿ ನಾವಡ, ಸ್ತ್ರೀವಾದ : ಒಂದು ಸಂಕಥನ, ಪು.೧೦, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೂಲಕ ಈ ಸ್ಥಾನವನ್ನು ಸಮುದಾಯದಲ್ಲಿ ಪಡೆದಿರುವ, ಅವಸ್ಥಾಂತರವಾಗಿದ್ದರೂ ಮೂಲವನ್ನು ಕೆದಕಿದಾಗ ಸಮುದಾಯದಾದ್ಯಂತ ಸ್ಮರಣೆಯಲ್ಲಿ ಉಳಿದು ಬಂದಿರುವ ಮಹಿಳೆಯರನ್ನು ಸಾಂಸ್ಕೃತಿಕ ನಾಯಕಿಯ ಸ್ಥಾನದಲ್ಲಿರಿಸಬಹುದು. ಈ ಶಿಷ್ಟ ಪದವನ್ನು ಬಳಸದಿದ್ದರೂ ಅವರ ಬಗೆಗೆ ನಡೆಸಿಕೊಂಡು ಬರುತ್ತಿರುವ ಆರಾಧನೆಗಳನ್ನು ಸಮೀಕ್ಷೆ ಮಾಡಿದಾಗ ಅವರ ಸ್ಥಾನದ ಸ್ಪಷ್ಟ ಚಿತ್ರಣ ದೊರಕುತ್ತದೆ.

ಬುಡಕಟ್ಟು ಜೀವನ ವಿಧಾನವನ್ನು ಕಂಡುಕೊಳ್ಳಲು ತನ್ನದೇ ಆದ ಸಂಪನ್ಮೂಲ ಹೊಂದಿರಬೇಕಾಗುತ್ತದೆ. ವ್ಯಾಸಬೇಡ ಬುಡಕಟ್ಟಿನ ಜೀವನ ನಿರ್ವಹಣೆಯ ಮೂಲವೇ ಅವರ ಪಶುಸಂಪತ್ತು. ಈ ಸಂಪತ್ತು ಇವರಿಗೆ ದೊರಕಿದ್ದೇ ಮಾತೃಮೂಲದಿಂದ. ಸಂಪನ್ಮೂಲವನ್ನು ಪಡೆದ ತಮಗೆ ಜನ್ಮ ಕೊಟ್ಟ ತಮ್ಮ ಅಸ್ತಿತ್ವಕ್ಕೆ ಕಾರಣಳಾದ 'ತಾಯಿ'ಯನ್ನು ಆರಾಧನಾ ಸ್ವರೂಪದಲ್ಲಿ ಅಲ್ಲವಾದರೂ ಸ್ಮರಣೆಯ ರೂಪದಲ್ಲಿ ಸಮುದಾಯ ಇರಿಸಿಕೊಂಡು ಬಂದಿದೆ. 'ಬುಡಕಟ್ಟಿನ ತಾಯಿ'ಯ ಸ್ಥಾನದಲ್ಲಿಟ್ಟು ಆಕೆಯನ್ನು ಸಾಂಸ್ಕೃತಿಕ ನಾಯಕಿ ಎಂದು ಕರೆಯಲು ಸಾಧ್ಯವಾಗುತ್ತದೆ. ಆಕೆಯ ಮೂಲದಿಂದ ಬಂದವರು ತಾವು ಎಂದು ಸಂಬಂಧಿಸಿದ ಕತೆಯೊಂದನ್ನು ಹೇಳುವ ಮೂಲಕ ತಮ್ಮನ್ನು ಶ್ರೇಷ್ಠವಾಗಿಸಿಕೊಳ್ಳುವ ರೀತಿ ಈ ಸಮುದಾಯದಲ್ಲಿರುವುದೇ ಆಕೆಯ ವಿಶಿಷ್ಟತೆಗೆ ಸಾಕ್ಷಿ.

ಪಶುಪಾಲಕರಲ್ಲಿ ಪುರುಷನಿಗೆ ಸರಿದೊರೆಯಾಗಿ ನಿಂತು ದುಡಿದ. ಹೈನುಗಾರಿಕೆಯನ್ನು ಮಾಡಿ ಸಮುದಾಯವನ್ನು ಪೋಷಿಸಿದ, ಹಾಗೆಯೇ ಬಲಿದಾನ ಮಾಡಿದ ಸ್ತ್ರೀಯರೂ ಸಾಂಸ್ಕೃತಿಕ ನಾಯಕಿಯ ಸ್ಥಾನದಲ್ಲಿರಬೇಕಾದದ್ದು ಯೋಗ್ಯವಾದುದಾಗಿದೆ. ಮುಕ್ತವಾಗಿದ್ದ ಸಾಮಾಜಿಕ ವ್ಯವಸ್ಥೆಯು ಪುರುಷ ಪ್ರಾಧಾನ್ಯತೆಯ ಕಡೆಗೆ ಹೊರಳುತ್ತಿದ್ದಾಗ, ತಾವೆಷ್ಟೇ ಸಮುದಾಯದ ಪ್ರಗತಿಯನ್ನು ಬಯಸುವ ಮಹಿಳೆಯಾಗಿದ್ದರೂ ಕೂಡ ಪುರುಷನ ಕ್ರೌರ್ಯಕ್ಕೆ ಬಲಿಯಾದ ಮಹಿಳೆಯರೂ ಈ ಸಮುದಾಯದಲ್ಲಿದ್ದಾರೆ. ಸಾಂಸ್ಕೃತಿಕ ನಾಯಕಿಯಾಗುವ ಅರ್ಹತೆ ಹೊಂದಿದ್ದೂ ಸಮುದಾಯದಲ್ಲಿ ಒಂದೆಡೆ ಗೌರವಯುತ ಸ್ಮರಣೆ, ಮತ್ತೊಂದೆಡೆ ಕೆಟ್ಟ ಸ್ಮರಣೆಯಲ್ಲಿ ಉಳಿದಿರುವ ಮಹಿಳೆಯನ್ನೂ ಇಲ್ಲಿ ಕಾಣಬಹುದಾಗಿದೆ. ಸರ್ವಾಧಿಕಾರೀ ಧೋರಣೆಯ ಆಳುವ ಪರಕೀಯ ಶಕ್ತಿಗಳು ತಮ್ಮ ಸಮುದಾಯದ ಮೇಲೆ ಆಕ್ರಮಣ ಮಾಡಿದಾಗ ದಿಟ್ಟತನದಿಂದ ಹೋರಾಡಿದ, ಸಮುದಾಯವನ್ನು ರಕ್ಷಿಸಿದ ಮಹಿಳೆಯರನ್ನು ಇಲ್ಲಿ ಕಾಣಬಹುದಾಗಿದೆ. ಹೀಗೆ ದಿಟ್ಟತನ, ಕೆಚ್ಚು, ಹೋರಾಟ, ಕಾರ್ಯತಂತ್ರ ರೂಪಿಸುವಿಕೆ, ವೈಚಾರಿಕ ಹೋರಾಟ ಮಾಡುವುದರ ಮೂಲಕ ಆಕ್ರಮಣಕಾರೀ ಪುರುಷಶಕ್ತಿಯನ್ನು ದಮನ ಮಾಡುವ ಮೂಲಕ ಸಮುದಾಯವನ್ನು ಮುನ್ನಡೆಸಿದ ಶಕ್ತಿಗಳನ್ನು ಸಾಂಸ್ಕೃತಿಕ ನಾಯಕಿಯರೆಂದು ಗುರುತಿಸಿ ಗೌರವಿಸುವ ಅವಶ್ಯಕತೆ ಇದೆ. ವ್ಯಾಸಬೇಡ ಬುಡಕಟ್ಟನ್ನು ಕುರಿತು ಈಗಾಗಲೇ ಸಾಕಷ್ಟು ಅಧ್ಯಯನಗಳು ನಡೆದಿದ್ದರೂ ಮಹಿಳೆಯರ ಬಗ್ಗೆ ಅಲ್ಲಿ ವ್ಯಾಪಕವಾದ ಚರ್ಚೆ ಆಗಿಲ್ಲ. ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಶೈವ ಮತ್ತು ವೈಷ್ಣವ ಪಂಥಗಳಲ್ಲಿ ಮೇಲ್ಮೆಗಾಗಿ ನಡೆಯುತ್ತಿದ್ದ ಹೋರಾಟಗಳು ಪ್ರಧಾನ ಸ್ಥಿತಿಯಲ್ಲಿದ್ದವು. ಅನೇಕ ಐತಿಹಾಸಿಕ ವೀರರ ಕಥನಗಳೂ ಆಗ ಸೃಷ್ಟಿಯಾದವು. ಜೊತೆಯಲ್ಲಿಯೇ ಸಮುದಾಯದ ಒಳಪದರಗಳಲ್ಲಿ ಮಹಿಳಾ ಪ್ರಧಾನವಾದ ಕಥನಗಳೂ ಸೃಷ್ಟಿಯಾದವು. ಇಂತಹ ದೇಶೀಯ ಕಥನಗಳೇ ದೇಶೀ ಸಂಸ್ಕೃತಿಯ ಸುಪ್ತ ಮನಸ್ಸನ್ನು ಅನಾವರಣಗೊಳಿಸುತ್ತವೆ. ಒಟ್ಟು ಸಂಸ್ಕೃತಿಯ ಹೃದಯಭಾಗವಾಗಿರುವ ಈ ಕಥನಗಳನ್ನು ಕಟ್ಟಿ

ಹಾಡಿರುವವರೂ ಮಹಿಳೆಯರೇ. ಮ್ಯಾಸಬೇಡರ ಸಂಸ್ಕೃತಿಯಲ್ಲಿ ಕೆಲವು ನಾಯಕಿಯರನ್ನು ಕುರಿತಾದ ಕಾವ್ಯ ರೂಪದ ಕಥನಗಳಿವೆ. ಕೆಲವರು ಗದ್ಯದ ರೂಪದಲ್ಲಿ ಸ್ಮರಣೆಯಲ್ಲಿ ಉಳಿದುಬಂದಿದ್ದಾರೆ. ಕೆಲವರು ಸಾಂಸ್ಕೃತಿಕ ನಾಯಕರ ಕಥನಗಳಲ್ಲಿ ಪ್ರಾಸಂಗಿಕವಾಗಿ ಬಂದು ಹೋಗುತ್ತಾರೆ. ಕೆಲವರು ಆಚರಣೆ, ಆರಾಧನೆಯ ಮೂಲಕ ಉಳಿದು ಬಂದಿದ್ದಾರೆ. ಈ ಎಲ್ಲಾ ಮೂಲಗಳ ಮೂಲಕ ಸ್ಮೃತಿಯಲ್ಲಿ ಉಳಿದಿರುವ, ವಿಸ್ಮೃತಿಯ ಕಡೆ ಸರಿಯುತ್ತಿರುವ ಈ ಎಲ್ಲರನ್ನೂ ಸಮಗ್ರವಾಗಿ ಗ್ರಹಿಸುತ್ತಾ ಅವರ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದು ಅಗತ್ಯದ ಕೆಲಸವಾಗಿದೆ.

## ೩.೨ ಸಾಂಸ್ಕೃತಿಕ ನಾಯಕಿಯರ ಪರಿಚಯ :

ಸಂಸ್ಕೃತಿಯೊಂದು ವ್ಯವಸ್ಥಿತವಾದ ಜೀವನಕ್ರಮವಾಗಿದ್ದು ನಿರ್ದಿಷ್ಟವಾದ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕೆಂದರೆ ಅದು ಅನೇಕ ವೈರುಧ್ಯಗಳನ್ನು ಎದುರಿಸುತ್ತ ಅಡೆತಡೆಗಳನ್ನು ನಿವಾರಿಸಿಕೊಳ್ಳುತ್ತಾ ಸ್ಥಿರತೆಯನ್ನು ಕಾಪಾಡಿಕೊಳ್ಳುವ, ತನ್ನ ಅಸ್ತಿತ್ವ ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಲೇ ಇರುತ್ತದೆ. ಇಂತಹ ಅಡಚಣೆಗಳು ಸಾಮಾನ್ಯ. ಈ ಅಡಚಣೆ ಹೊರಗಿನಿಂದ ಉಂಟಾಗುವುದು ಒಂದು ಬಗೆಯದಾದರೆ ಆಂತರಿಕವಾಗಿಯೇ ಉದ್ಭವಿಸುವ ಬಿಕ್ಕಟ್ಟು ಮತ್ತೊಂದು ಬಗೆಯದು. ಬಿಕ್ಕಟ್ಟು ಯಾವ ನೆಲೆಯಿಂದಲೇ ಬಂದಿರಲಿ ಅದನ್ನು ಪರಿಹರಿಸಿ ಕೊಳ್ಳುವುದರಲ್ಲಿ ಆ ಸಂಸ್ಕೃತಿಯ ಜನರ ಪರಿಶ್ರಮ ಕಾರ್ಯಕುಶಲತೆಯ ಬಳಕೆ ಅನಿವಾರ್ಯವಾಗುತ್ತದೆ. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಪಾತ್ರ ವಹಿಸುವವನು ಸಾಮಾನ್ಯವಾಗಿ ಪುರುಷನಾಗಿರುತ್ತಾನೆ. ತನ್ನ ವಿಶಿಷ್ಟವಾದ ಕಾರ್ಯ ಸಾಧನೆಯ ಮೂಲಕ ಜನಮನದಲ್ಲಿ ಉಳಿದು ಬಂದಿರುತ್ತಾನೆ. ಪ್ರತಿ ಬುಡಕಟ್ಟಿನಲ್ಲಿಯೂ ಸಾಮಾನ್ಯವಾಗಿ ಇಂತಹ ಪುರುಷರು ಕಂಡು ಬರುತ್ತಿದ್ದು ಅವರ ಈ ಅನನ್ಯತೆಯೇ ಕಾರಣವಾಗಿ ಅವರನ್ನು ಆಯಾ ಸಮುದಾಯದ ನಾಯಕರೆಂದೋ/ಸಾಂಸ್ಕೃತಿಕ ನಾಯಕರೆಂದೋ ಪರಿಗಣಿಸುತ್ತಾ ಬರಲಾಗಿದೆ. ಸಂಖ್ಯೆಯ ದೃಷ್ಟಿಯಿಂದ ಗಮನಿಸಿದಾಗ ಹೀಗೆ ಸಾಂಸ್ಕೃತಿಕ ನಾಯಕಿಯರು ಎಂದು ಪರಿಗಣಿಸಲ್ಪಟ್ಟ ಮಹಿಳೆಯರು ಕಡಿಮೆಯೇ. ಜಗತ್ತಿನ ನಾಗರಿಕ ಸಮಾಜಗಳಲ್ಲಿಯೂ ಕೂಡ ಈ ವೈರುಧ್ಯವಿದೆ. ಪ್ರಪಂಚದ ಬೇರೆ ಬೇರೆ ಭೂಭಾಗದಲ್ಲಿ ಅನೇಕ ರಾಷ್ಟ್ರನಾಯಕರು ವಿಜೃಂಭಿಸಿದರೂ ಅಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯೇ. ಅದರರ್ಥ ಮಹಿಳೆಯರಲ್ಲಿ ಹೋರಾಟದ ಕೆಚ್ಚು, ಕ್ಷಾತ್ರ ಇಲ್ಲವೆಂದಲ್ಲ. ಅದರ ಅಭಿವ್ಯಕ್ತಿಗೆ ಸೂಕ್ತವಾದ ಸಂದರ್ಭಗಳೇ ಇಲ್ಲದಿದ್ದಾಗ ಅದು ಹೊರಬರುವುದಾದರೂ ಹೇಗೆ? ಆದರೆ, ಅನಿವಾರ್ಯ ಸಂದರ್ಭ ಒದಗಿದಾಗ ತನ್ನ ಆ ಸತ್ವವನ್ನು, ಜಾಣ್ಮೆಯನ್ನು ಬಳಿಸಿಕೊಂಡು ಪ್ರಧಾನ ನೆಲೆಯನ್ನು ಮಹಿಳೆ ಪಡೆದುಕೊಳ್ಳುವಲ್ಲಿ ಹಿಂದೆ ಉಳಿದಿಲ್ಲ. ಕರ್ನಾಟಕದಲ್ಲಿ ಇರುವ ಅನೇಕ ಬುಡಕಟ್ಟುಗಳನ್ನು ಗಮನಿಸಿದಾಗ ಮಹಿಳಾ ಪ್ರಧಾನವಾದ ಬುಡಕಟ್ಟುಗಳು ಕಡಿಮೆ. ಈ ನಿಯಮಕ್ಕೆ ಹೊರತಾದದ್ದು ಮ್ಯಾಸನಾಯಕ /ಅಥವಾ ಮ್ಯಾಸಬೇಡ ಬುಡಕಟ್ಟು. ಈ ಸಂಸ್ಕೃತಿಯ ಒಳಪದರುಗಳನ್ನು ಬಿಡಿಸಿ ಒಳಹೊಕ್ಕು ನೋಡಿದಾಗ ಒಬ್ಬರಲ್ಲದೆ ಹಲವು ನಾಯಕಿಯರು

ಕಾಣಿಸಿಕೊಳ್ಳುತ್ತಾರೆ. ಇದು ಅಚ್ಚರಿಯ ಸಂಗತಿಯೇ. ಹೀಗೆ ಕಾಣಿಸಿಕೊಳ್ಳುವ ಸಾಂಸ್ಕೃತಿಕ ನಾಯಕಿ ಸ್ಥಾನವನ್ನು ಪಡೆದವರ ಪಟ್ಟಿಯನ್ನು ಹೀಗೆ ಕೊಡಬಹುದು.

**ದಾನಸಾಲಿಯಮ್ಮ :**

ಮ್ಯಾಸಬೇಡ ಸಮುದಾಯದ ಆರಂಭದ ಘಟ್ಟದಲ್ಲಿ ಕಾಣಿಸಿಕೊಳ್ಳುವ ಸಾವಿರಾರು ಪಶು ಸಂಪತ್ತಿಗೆ ಒಡೆಯನಾದ ಮಂದರಾಜನ ಮೊಮ್ಮಗಳೀಕೆ. ಹಾಗೆಯೇ ಸಂಚಿ ಶಿಖಾನಾಯಕನ ಪತ್ನಿ ಈಕೆ. ಈಕೆಯ ಮಕ್ಕಳೇ ಅಕ್ಕರಾಯಮ್ಮ, ಭಾನುಗೊಂಡರಾಜ, ಸೂರಗೊಂಡರಾಜ, ಕಲುಪಗೊಂಡರಾಜ, ತಿಪ್ಪಗೊಂಡರಾಜ ಮತ್ತು ಬೈಗೊಂಡರಾಜ. ಸೋಲಿಗರ ಸಂಕಮ್ಮನನ್ನು ಈಕೆಗೆ ಹೋಲಿಸಬಹುದಾದರೂ ಆಕೆಯಂತೆ ದಿಟ್ಟೆ ಇವಳಲ್ಲ. ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡು ಮೌನಕ್ಕೆ ಸರಿದ, ಹಾಗೆಯೇ ಅದೃಶ್ಯಳಾಗುವ ಹೆಣ್ಣೀಕೆ. ಆದರೆ ಆಕೆಯ ಮೌನವು ಇಲ್ಲಿ ಅರ್ಥಪೂರ್ಣವಾಗಿರುವುದೇ ವಿಶೇಷ. ಈ ತಾಯಿಯ ಮೂಲದಿಂದ ಬಂದ ಪಶು ಸಂಪತ್ತೇ ಮುಂದೆ ಮ್ಯಾಸಬೇಡರ ಬಹು ಮುಖ್ಯ ಮೂಲ ಸಂಪತ್ತಾಯಿತು. ಹೀಗಾಗಿ ಸಮುದಾಯದ ತಾಯಿ ಸ್ಥಾನಕ್ಕೇರಬಲ್ಲವಳೀಕೆ. ತನ್ಮೂಲಕ ಸಂಸ್ಕೃತಿ ನಿರ್ಮಾಣದ ಹಿಂದೆ ನಿಂತಿರುವ ಶಕ್ತಿಯಾಗಿ ಸಾಂಸ್ಕೃತಿಕ ನಾಯಕಿ ಎನಿಸಿಕೊಳ್ಳುತ್ತಾಳೆ.

**ಅಕ್ಕರಾಯಮ್ಮ :**

ಪ್ರಮುಖ ಸಾಂಸ್ಕೃತಿಕ ನಾಯಕಿ ಈಕೆ. ಸಮುದಾಯದಾದ್ಯಂತ ಒಂದಲ್ಲ ಒಂದು ರೀತಿಯಲ್ಲಿ ಆರಾಧಿಸಲ್ಪಡುತ್ತಿರುವ ಮಹಿಳೆ ಈಕೆ. ಪರುಶುರಾಂಪುರ ತಾಲ್ಲೂಕಿನ ಚಿನ್ನಮಜ್ಜನಹಳ್ಳಿ, ಜಗಳೂರು ತಾಲ್ಲೂಕಿನ ಅವಳೇನಹಳ್ಳಿ, ಚಿತ್ರದುರ್ಗ ತಾಲ್ಲೂಕಿನ ಹುಣಸೇಕಟ್ಟೆ. ಚಳ್ಳಕೆರೆ ತಾಲ್ಲೂಕಿನ ದೇವರೆಡ್ಡಿಹಳ್ಳಿ, ಮಾದಯ್ಯನಹಟ್ಟಿ,ಮಲಬೋರಯ್ಯನಹಟ್ಟಿ, ಮಲ್ಲೂರಹಳ್ಳಿ ಸಮೀಪದ ಮ್ಯಾಸರಹಟ್ಟಿ, ದೇವರಹಳ್ಳಿ, ಗಡಿಮಾಕುಂಟೆ ಮಾತ್ರವಲ್ಲದೆ ಈ ಬುಡಕಟ್ಟಿನ ಪ್ರತಿ ಕಟ್ಟೆಮನೆಯಲ್ಲಿಯೂ ಸ್ಥಾನಮಾನ ಪಡೆದು ಆರಾಧಿಸಲ್ಪಡುತ್ತಿದ್ದಾಳೆ ಈಕೆ. ಶಕ್ತಿಯೆಂದು ಮಾರಿಯೆಂದು ಆಗಾಧವಾಗಿ ಈಕೆಯನ್ನು ಈ ಸಮುದಾಯ ಸ್ಮರಣೆಯಲ್ಲಿರಿಸಿಕೊಂಡು ಬಂದಿರುವುದೇ ಈಕೆಯ ಅನನ್ಯತೆಯನ್ನು ಅನಾವರಣಗೊಳಿಸುತ್ತದೆ. ದಾನಸಾಲಿಯಮ್ಮ ಮತ್ತು ಸಂಚು ಶಿಖಾನಾಯಕನ ಹಿರಿಯ ಮಗಳೇ ಈಕೆ. ತನ್ನ ಐದೂ ಮಂದಿ ತಮ್ಮಂದಿರನ್ನು ತಂದೆ ತಾಯಿ ತಿರಸ್ಕರಿಸಿ ಹೊರಟಾಗ, ತಾನೇ ತಾಯಿ ತಂದೆಯ ಸ್ಥಾನದಲ್ಲಿ ನಿಂತು ಪೋಷಿಸಿ ಬೆಳೆಸಿ ತಂದೆಯ ವಿರುದ್ಧ ಹೋರಾಟಕ್ಕೆ ಅಣಿಗೊಳಿಸಿ, ಅವರಿಗೂ ಮತ್ತು ತನಗೂ ಅಸ್ತಿತ್ವ ತಂದು ಕೊಂಡವಳೀಕೆ. ಇಷ್ಟಲ್ಲದೆ ಸಮುದಾಯವು ಕಷ್ಟನಷ್ಟ ಆತಂಕಗಳಿಗೆ ಗುರಿಯಾದಾಗ ಮುನ್ನುಗ್ಗಿ ತನ್ನ ಕಾರ್ಯತಂತ್ರದಿಂದ ಆ ಬಿಕ್ಕಟ್ಟನ್ನು ನಿವಾರಿಸಿ ಮುನ್ನಡೆಸಿದವಳೀಕೆ. ಹೀಗಾಗಿಯೇ ಈಕೆ ಪ್ರತಿ ಇಲ್ಲದೆ ಸಾಂಸ್ಕೃತಿಕ ನಾಯಕಿ ಎನಿಸಿಕೊಳ್ಳುತ್ತಾಳೆ.

**ಮಲೆಯಮ್ಮ :**

ಅಕ್ಕರಾಯಮ್ಮನಂತೆಯೇ ಮ್ಯಾಸಬೇಡರ ಸಮುದಾಯದಲ್ಲಿ ಇದ್ದವಳೀಕೆ. ಎರಡನೆಯ ತಂಡವಾಗಿ ಆಂಧ್ರದ ಕಡೆಯಿಂದ ಕರ್ನಾಟಕದ ಕಡೆ ಬಂದ ಮ್ಯಾಸಬೇಡರ ತಂಡದಲ್ಲಿದ್ದ ಮಹಿಳೆ ಈಕೆ. ಮಾರ್ಗ

ಮಧ್ಯೆ ತಮ್ಮ ಸಮುದಾಯಕ್ಕೆ ಉಂಟಾದ ಬಿಕ್ಕಟ್ಟನ್ನು ನಿವಾರಿಸಿದವಳು ಇವಳು. ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಜುಮ್ಮೋಬನಹಳ್ಳಿ, ಅದೇ ತಾಲ್ಲೂಕಿನ ಮುತ್ತಿಗಾರರ ಹಳ್ಳಿ, ಮರ್ಲಹಳ್ಳಿ ಕೂಡ್ಲಿಗೆ ತಾಲ್ಲೂಕಿಗೆ ಸೇರಿದ ಗುಡೇಕೋಟೆಯ ಬೆಟ್ಟದಲ್ಲಿ ಈಕೆಯನ್ನು ಆರಾಧಿಸುವ ನೆಲೆಗಳಿವೆ. ವರ್ಷಕೊಮ್ಮೆ ವಿಜೃಂಭಣೆಯಿಂದ ಜಾತ್ರೆಯನ್ನು ಈಕೆಯ ಹೆಸರಿನಲ್ಲಿ ಮಾಡುತ್ತಾರೆ. ಇವಳು ಸಮುದಾಯಕ್ಕೆ ನೀಡಿದ ಕೊಡುಗೆ ಕಾರಣವಾಗಿ ಇವಳಿಗೆ ಈ ಸ್ಥಾನ ಲಭ್ಯವಾಗಿದೆ ಹಾಗೂ ಸಮುದಾಯದ ಸ್ಮರಣೆಯಲ್ಲಿ ಉಳಿದು ಬಂದಿದ್ದಾಳೆ.

**ಮುಂಗಲ ದೇವಮ್ಮ :**

ಗಲಗಲ್ಲಿನಲ್ಲಿ ಈಕೆಯ ಒಂದು ಪುಟ್ಟ ದೇವಾಲಯವಿದೆ. ಮ್ಯಾಸಬೇಡರಲ್ಲಿ ದೇವಾಲಯ ಎಂದರೆ ಗುಡಿಸಲು. ಅತೀ ಚಿಕ್ಕದಾದ ಸಂದಿಯೊಂದರಲ್ಲಿನ ಅತೀ ಪುಟ್ಟ ಗುಡಿಸಲೇ ಇವಳ ನೆಲೆ. ಇಲ್ಲಿ ಆಕೆಗೆ ಸಂಬಂಧಿಸಿದ ಕೆಲವು ವಸ್ತುಗಳನ್ನಿಟ್ಟು ಆಕೆಯ ತವರಿನ ಕಡೆಯ ಒಂದು ಮನೆಯವರು ಪೂಜೆ ಮಾಡುತ್ತಾ ಬರುತ್ತಿದ್ದಾರೆ. ಈಕೆ ಕೊಡಗಲು ಬೊಮ್ಮನ ಅಕ್ಕನೂ ಹೌದು, ತನ್ನ ಇಚ್ಛೆಗನುಗುಣವಾಗಿ ನಡೆದಿದ್ದೇ ಕಾರಣವಾಗಿ ಗಂಡನ ಕ್ರೌರ್ಯಕ್ಕೆ ಬಲಿಯಾಗಿ ಮರಣಹೊಂದುತ್ತಾಳೆ. ಆಕೆ ಓಡಾಡಿದ ಸ್ಥಳವನ್ನು 'ಲಂಜಿಗುಂಟ ಕಣಿವೆ' ಎಂದು ಕರೆಯಲಾಗುತ್ತದೆ. ರಾಯದುರ್ಗ ಬೆಟ್ಟ ಸಾಲಿನ ಹಿಂಭಾಗದ ತಪ್ಪಲಿನಲ್ಲಿ ಆ ಪ್ರದೇಶ ಬರುತ್ತದೆ. ಅವಳು ಓಡಾಡಿದ ಕಣಿವೆ ಮತ್ತು ಆರಾಧನಾ ನೆಲೆಯಾದ ಗುಡಿಸಲು ನೋಡಿದಾಗ ಆಕೆ ಮೌನವಾಗಿ ಮೂಲೆ ಸೇರಿ, ಮೂಕರೋದನ ಮಾಡುವಂತೆ ಕಾಣುತ್ತದೆ.

**ಗೌರಸಮುದ್ರದ ಮಾರಮ್ಮ :**

ಗೌರಸಮುದ್ರ ಚಿತ್ರದುರ್ಗ ಜಿಲ್ಲೆಯಲ್ಲಿ ಬರುವ ಒಂದು ಗ್ರಾಮ. ಅಲ್ಲಿರುವ ಮಾರಮ್ಮನ ದೇವಸ್ಥಾನ. ಆಕೆಯ ಪ್ರಭಾವವೇ ಕಾರಣವಾಗಿ ತುಂಬಾ ಪ್ರಸಿದ್ಧಿಯನ್ನು ಪಡೆದಿರುವ ಸ್ಥಳವಿದು. ಪ್ರತಿ ಹಳ್ಳಿಯಲ್ಲೂ ಸಾಮಾನ್ಯವಾಗಿ ಊರು ಮಾರಮ್ಮನ ದೇವಾಲಯವಿರುತ್ತದೆ. ಈ ಹಳ್ಳಿಯಲ್ಲಿಯೂ ಊರು ಮಾರಮ್ಮನ ದೇವಾಲಯವಿದೆ. ಇದನ್ನು ಹೊರತುಪಡಿಸಿ ಮತ್ತೊಂದು ಮಾರಮ್ಮನ ದೇವಸ್ಥಾನವಿದ್ದು ಈಕೆ ಗೌರಸಮುದ್ರದ ಮಾರಮ್ಮ ಎಂದು ಪ್ರಸಿದ್ಧಳಾಗಿದ್ದಾಳೆ. ಈಕೆಗೆ ಮಾಡುವ ಆರಾಧನೆ, ಆಚರಣೆಗಳೇ ವಿಶಿಷ್ಟವಾಗಿದೆ. ಈಕೆಯ ಬಗ್ಗೆ ಪ್ರಚಲಿತವಿರುವ ಕತೆಗಳು, ಪವಾಡಗಳು ಮತ್ತು ಆಚರಣೆಗಳ ಮೂಲಕ ಮೂಲತಃ ಈಕೆ ಮ್ಯಾಸಬೇಡ ಸಮುದಾಯಕ್ಕೆ ಸೇರಿದ ಮಹಿಳೆ ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಮ್ಯಾಸಬೇಡರ ತಂಡವೊಂದರಲ್ಲಿದ್ದು ಈ ಪ್ರಾಂತ್ಯದಲ್ಲಿ ನೆಲೆ ನಿಂತವಳೀಕೆ. ತನ್ನನ್ನು ನಂಬಿದ್ದ ಸಮುದಾಯಕ್ಕೆ ಹೊರಗಿನಿಂದ ಬಂದ ಬಿಕ್ಕಟ್ಟನ್ನು ನಿವಾರಿಸಿ ಆ ಮೂಲಕ ಸ್ಮರಣೆಯಲ್ಲಿ ಉಳಿದುಬಂದಿರುವ ಈಕೆ ತನ್ನ ಸಮುದಾಯದವರಿಂದ ಮಾತ್ರವಲ್ಲದೆ ಇತರೆ ಸಮುದಾಯಗಳಿಂದಲೂ ಪೂಜೆಗೊಳ್ಳುತ್ತಿದ್ದಾಳೆ ಮತ್ತು ಕೋಣ, ಕುರಿ, ಬಲಿ ಪಡೆಯುತ್ತಿರುವ ಅಮ್ಮನಾಗಿ ಅವಸ್ಥಾಂತರಗೊಂಡಿದ್ದಾಳೆ.

**ಕಂಚವ್ವ – ಕಾಮವ್ವ :**

ಗಾದ್ರಿಪಾಲನಾಯಕನ ಪತ್ನಿಯರಾದ ಇವರು ಸೆಟ್ಟೂರಿನ ಪಾಳೆಯಗಾರನ ಮಕ್ಕಳೆಂದು ಕಥನದಲ್ಲಿ ವಿವರಿಸಲಾಗುತ್ತದೆ. ತಮ್ಮ ಪತಿ ಗಾದ್ರಿಪಾಲನಾಯಕ ಪಶುಪಾಲಕನಾಗಿದ್ದು ಆತನ ಸಹವರ್ತಿಯರಾದ ಇವರು ಹೈನುಗಾರಿಕೆಯಲ್ಲಿ ಅವಿರತವಾಗಿ ತಮ್ಮನ್ನು ತೊಡಗಿಸಿಕೊಂಡು ಸಮುದಾಯವನ್ನು ಪೋಷಿಸಿಕೊಂಡು ಬಂದವರು. ಹುಲಿಯೊಂದಿಗೆ ಹೋರಾಡಿ ಗಾದ್ರಿಪಾಲನಾಯಕ ಮಡಿದಾಗ ಇವರೂ ಸಹಗಮನ ಮಾಡುತ್ತಾರೆ. ಹೊಳಲ್ಕೆರೆ ತಾಲ್ಲೂಕಿನ 'ಮಿಂಚೇರಿ' ಎಂಬ ಕಾವಲಿನ ಹತ್ತಿರ ಇರುವ ಗಂಜಿಗಟ್ಟೆಯಲ್ಲಿ ಇವರು ಕೊಂಡವನ್ನು ಹಾರಿ ಬಲಿದಾನ ಮಾಡಿದ ಸ್ಥಳವಿದೆ. ಇದೇ ಗಂಜಿಗಟ್ಟೆಯಲ್ಲಿ ಗಾದ್ರಿಪಾಲನಾಯಕನ ದೇವಸ್ಥಾನವಿದೆ. ಹಾಗೆಯೇ ಈ ಮಹಿಳೆಯರ ಸತೀಕಲ್ಲುಗಳಿದ್ದು ಅವಕ್ಕೊಂದು ದೇವಾಲಯವಿದೆ.  ಇವರು ಸತಿಯಾದ ಕಾರಣಕ್ಕಾಗಿ ನಿಲ್ಲಿಸಿದ ಮಹಾಸತಿ ಕಲ್ಲುಗಳು.  ಅವುಗಳಿಗೇ ಗಾದ್ರಿಪಾಲನಾಯಕನ ಹೆಸರಿನಲ್ಲಿ ಇಂದು ಆರಾಧನೆ ನಡೆಯುತ್ತಿದೆ.

**೩.೩ ವ್ಯಾಸಬೇಡರ ಸೃಷ್ಟಿ ಪುರಾಣ :**

**ಅ. ಪುರಾಣಗಳು : ಅರ್ಥ ವಿವರಣೆ :**

ಸಮುದಾಯವೊಂದರ ಸಂಸ್ಕೃತಿಯನ್ನು ಸಮಗ್ರವಾಗಿ ಅರಿಯಬೇಕಾದರೆ ಆ ಸಮುದಾಯದಲ್ಲಿ ನೆಲೆಗೊಂಡಿರುವ ಪುರಾಣಗಳ ಮೂಲಕ ಮಾತ್ರ ಸಾಧ್ಯ.

'ಸಾಂಪ್ರದಾಯಿಕವಾಗಿ ಸಾಗಿಬಂದಿರುವ ಪುರಾತನವಾದ ಕಥೆಗಳು'[೨೪] ಎಂಬ ಅರ್ಥದಲ್ಲಿ 'ಪುರಾಣ' ಎಂಬ ಪದವನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ. ಅಮರ ಕೋಶದ ಪ್ರಕಾರ ಐದು ಅಂಶಗಳಿಂದ ಕೂಡಿದುದೇ ಪುರಾಣ.

೧. ಸರ್ಗ – ಪ್ರಥಮ ಸೃಷ್ಟಿ.

೨. ಪ್ರತಿಸರ್ಗ – ಪುನರ್ ಸೃಷ್ಟಿ.

೩. ವಂಶಪಿ – ಋಷಿಗಳ ಮತ್ತು ಅವರ ಪೂರ್ವಿಕರ ಕತೆಗಳು.

೪. ಮನ್ವಂತರ – ವಿವಿಧ ಮನುಗಳ ಕಾಲಾವಧಿ

೫. ವಂಶಾನುಚರಿತ – ರಾಜರುಗಳ ವಂಶಾವಳಿ

ಇವೆಲ್ಲವುಗಳನ್ನು ಹೇಳುವುದೇ ಪುರಾಣ. ಸಂಪೂರ್ಣವಾಗಿ ವೈದಿಕ ವಿವರಗಳನ್ನು ಕೊಡುವ, ವೈದಿಕ ಮನಸ್ಸು ಕಟ್ಟಿದ ಅರ್ಥ ವ್ಯಾಖ್ಯಾನ ಇದಾಗಿದೆ. ಇದನ್ನೇ ದೇಸೀಯ ಸಂಸ್ಕೃತಿಗಳಿಗೆ ಅನ್ವಯ

---

[೨೪] ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ, ಪುರಾಣ, ಪು.೧, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮಾಡಿಕೊಂಡಾಗ ಈ ಎಲ್ಲಾ ಅಂಶಗಳನ್ನೂ ಸಾಮಾನ್ಯವಾಗಿ ದೇಸೀಯ ಕಥನಗಳೂ ಹೊಂದಿರುತ್ತವೆ. ಆಯಾ ಬುಡಕಟ್ಟಿನಲ್ಲಿ ಪ್ರಚಲಿತವಿರುವ ಪುರಾಣಗಳಲ್ಲಿ ಆಯಾ ಬುಡಕಟ್ಟಿನ ಜನರ ಲೋಕದೃಷ್ಟಿ ಸೃಷ್ಟಿಯ ಬಗೆಗಿನ ಅವರ ಬೆರಗು, ಅದನ್ನು ಅವರು ಅರ್ಥೈಸುವ ಬಗೆ ವಿಶಿಷ್ಟವಾದುದಾಗಿರುತ್ತದೆ. ತಮ್ಮ ಪೂರ್ವಿಕರ ವಿವರಗಳನ್ನು, ಅವರ ಕಾಲವನ್ನೂ, ವಂಶಾನುಚರಿತೆಯನ್ನು ಇದು ಸಹಜವಾಗಿಯೇ ಒಳಗೊಂಡಿರುತ್ತದೆ.

ವ್ಯಾಸಮಹರ್ಷಿಗಳು ರಚಿಸಿದರೆಂದು ಹೇಳಲಾಗುವ ಹದಿನೆಂಟು ಪುರಾಣಗಳು ಮತ್ತು ಅವುಗಳೊಂದಿಗೆ ಉಪಪುರಾಣಗಳೂ ಇದ್ದು ಅವುಗಳಲ್ಲಿ ಕೆಲವನ್ನು ಪ್ರತ್ಯೇಕಿಸಿ 'ಮಹಾಪುರಾಣಗಳು' ಎಂದು ಕರೆಯಲಾಗುತ್ತದೆ.

ಮ್ಯಾಲಿನೋವ್‌ಸ್ಕಿ "ಪುರಾಣಗಳು ಏನನ್ನು ಹೇಳುತ್ತವೆಯೋ ಅದೇ ಅವುಗಳ ನಿಜವಾದ ಅರ್ಥ ಮತ್ತು ವಾಸ್ತವವಾಗಿ ಪುರಾಣವು ಆದಿಮರ ನಂಬಿಕೆ ಹಾಗೂ ನೈತಿಕ ಪ್ರಜ್ಞೆ ಸಂಹಿತೆ"[೨೫] ಎಂದು ಹೇಳುತ್ತಾನೆ. ಪುರಾಣವೆಂಬ ಅರ್ಥವನ್ನು ಸೂಚಿಸಲು ಶಾಸ್ತ್ರಕಾರರು ಬಳಸುವ ಪಾರಿಭಾಷಿಕ ಪದ 'ಮಿಥ್' (Myth) ಎಂಬುದು. ಗ್ರೀಕ್ ಭಾಷೆಯ 'muthos' ಎಂಬುದರಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಮೂಲತಃ ಹೇಳಿಕೆ ಎಂಬಷ್ಟೇ ಅರ್ಥವಿದ್ದು ಕಾಲಕ್ರಮದಲ್ಲಿ ಕಥಾರೂಪದಲ್ಲಿ ಹೇಳಿದ್ದು ಎಂಬ ಅರ್ಥ ಪ್ರಾಪ್ತವಾಗಿದೆ.[೨೬]

'ಪುರಾಣವೆಂಬುದು ಕಟ್ಟು ಕತೆಯಲ್ಲ. ಅಲೌಕಿಕ ಅತಿಮಾನುಷ ವ್ಯಕ್ತಿಗಳ ಸಾಹಸವನ್ನೋ, ನೈಸರ್ಗಿಕ ಘಟನೆಗಳ ಅಸಾಧಾರಣ ವಿಚಿತ್ರ ಪ್ರವೃತ್ತಿಯನ್ನೋ, ಐತಿಹಾಸಿಕ ಘಟನೆಗಳನ್ನೋ ಇದು ವರ್ಣಿಸುವುದಿಲ್ಲ. ಪುರಾಣಗಳ ಪ್ರಧಾನ ಉದ್ದೇಶವೆಂದರೆ ಪ್ರಕೃತಿಯಲ್ಲೂ, ಸಮಾಜದಲ್ಲೂ ಸ್ಥಾಪಿತವಾದ ಕಟ್ಟುಕಟ್ಟಲೆಗಳನ್ನು ಸ್ಥಿರಗೊಳಿಸುವುದು, ನಂಬಿಕೆಯನ್ನೂ ದೃಢಪಡಿಸುವುದು, ದೇವದೇವತೆಗಳ ಉಪಾಸನೆಯ ಸಮರ್ಪಕತೆ, ಸಾರ್ಥಕತೆಗಳನ್ನು ಸಮರ್ಥಿಸುವುದು ಹಾಗೂ ಸಾಂಪ್ರದಾಯಿಕ ವ್ಯವಸ್ಥೆ, ವರ್ತನೆಗಳನ್ನು ಅಲೌಕಿಕ ಆದರ್ಶ ಮತ್ತು ದಂಡನೆಗಳ ಮೂಲಕ ಸುಗಮವಾಗಿ ಕಾಪಾಡುವುದು'[೨೭] ಎನ್ನುತ್ತಾನೆ. E.D. James. ಈ ಹೇಳಿಕೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಯಾವುದೇ ಬುಡಕಟ್ಟಿನ ಕಥನಗಳೂ ಕಟ್ಟುಕತೆಗಳಲ್ಲ, ಕಥನಗಳ ಮೂಲಕ ಕೇವಲ ಆ ಸಮುದಾಯಕ್ಕೆ ಮಾತ್ರವಲ್ಲದೆ ವರ್ತಮಾನದಲ್ಲಿ ಇತರೆ ಸಮುದಾಯಗಳಿಗೂ ಮಾದರಿಯಾಗುವಂತಹ ಆಕೃತಿಗಳು ನಮಗೆ ಅಲ್ಲಿ ಸಿಗುತ್ತವೆ. ಮ್ಯಾಸಬೇಡರ ಸಮುದಾಯದ ಕಥನಗಳೂ ಸಹ ಇದರಿಂದ ಹೊರತಾಗಿಲ್ಲ.

'ಫ್ರಾಯ್ಡ್'ನ ಪ್ರಕಾರ 'ಪುರಾಣಗಳು ಸುಪ್ತಚಿತ್ತ ವ್ಯವಹಾರದ ಅವಶೇಷಗಳು' ಈತನ ಸಹಚರನಾಗಿದ್ದ 'ಯೂಂಗ್' ಇದನ್ನು ಸ್ವಲ್ಪ ಮಾರ್ಪಡಿಸಿ "ಪ್ರತಿಯೊಬ್ಬನಲ್ಲಿಯೂ ನೆಲೆಗೊಂಡಿರುವ ವ್ಯಕ್ತ್ಯತೀತ ಸ್ವರೂಪದ ಒಂದು ಸಾರ್ವತ್ರಿಕ ಮನಸ್ಸಿನ ಅತ್ಯಂತ ಕೆಳಸ್ತರವು ಸಮಷ್ಟಿ ಸುಪ್ತಚಿತ್ತವಾಗಿದೆ,

---

[೨೫] Malinowski, Bronislaw (೧೯೨೬), Myth in Printive Psychology, Kegan Paul, London.

[೨೬] Kirk G.S. (೧೯೭೪), The Nature of Greek myths Penguin, Harmonds Worth.

[೨೭] ಉಲ್ಲೇಖ: ಡಾ. ಹಿ.ಚಿ. ಬೋರಲಿಂಗಯ್ಯ, ವಿಸ್ಮೃತಿ ಮತ್ತು ಸಂಸ್ಕೃತಿ, ಪು.೪೪, ೨೦೦೧, ಸಿವಿಜಿ ಪಬ್ಲಿಕೇಷನ್ಸ್.

ಇದರ ಘಟಕಾಂಶಗಳನ್ನೇ ಈತ 'ಆರ್ಷ ಮಾದರಿಗಳು' ಎಂದು ಕರೆದು ಅನಾದಿ ಕಾಲದಿಂದ ಅಸ್ತಿತ್ವದಲ್ಲಿರುವಂಥ ಮತ್ತು ಪುರಾಣ, ಕನಸು, ಕಲೆ ಸಾಹಿತ್ಯಗಳ ಮೂಲಕ ಪರಿಚಿತವಾಗಿರುವಂಥ 'ಆರ್ಷ ಪ್ರತೀಕಗಳು' ಉತ್ಪಾದನೆಯಾಗುವುದು ಸಮಷ್ಟಿ ಚಿತ್ತದ ಭಂಡಾರದಿಂದಲೇ" ಎಂದು ತೀರ್ಮಾನಿಸಿದ. ಒಟ್ಟಾರೆ ಇವರೀರ್ವರ ಪ್ರಕಾರ ಪುರಾಣವೆಂಬುದು ಇಡೀ ಮನುಷ್ಯಕುಲದ ಸಮಷ್ಟಿಯ (ಆಯಾ ಸಮುದಾಯವೊಂದರ ಸಮಷ್ಟಿಯ ಮನಸ್ಸು) ಸುಪ್ತಪ್ರಜ್ಞೆಯ ಮೂಲಕ ರೂಪುಗೊಳ್ಳುತ್ತದೆ. ಇವು ಕೇವಲ ವೈಯುಕ್ತಿಕ ಸುಪ್ತಚೇತನದಿಂದ ನಿರ್ಮಾಣವಾಗುವುದಿಲ್ಲ.[೨೮]

ಪುರಾಣಗಳ ಬಗ್ಗೆ ವ್ಯಾಪಕವಾದ ಚರ್ಚೆಯನ್ನು ನಡೆಸಿದ ಈ ಲೇಖಕರು ತಮ್ಮ ಆಲೋಚನೆಗಳ ಮೂಲಕ ಪುರಾಣಗಳನ್ನು ಈ ಕೆಳಕಂಡ ಅಂಶಗಳ ಹಿನ್ನೆಲೆಯಲ್ಲಿ ಅರ್ಥೈಸಬಹುದು ಎಂದು ಹೇಳುತ್ತಾರೆ.

೧. ಮತಧರ್ಮಾಚರಣೆಯ ಸಿದ್ಧಾಂತ

೨. ಚಾರಿತ್ರಿಕ ಪುರುಷರ ದೈವೀಕರಣ ಸಿದ್ಧಾಂತ

೩. ಪ್ರಕೃತಿ ವಿಜ್ಞಾನ ಸಿದ್ಧಾಂತ,

೪. ಮನಶ್ಯಾಸ್ತ್ರೀಯ ಸಿದ್ಧಾಂತ

೫. ನೀತಿಬೋಧೆ ಸಿದ್ಧಾಂತ

೬. ಭಾಷಾಚಮತ್ಕಾರ ಸಿದ್ಧಾಂತ

೭. ರಾಚನಿಕ ಸಿದ್ಧಾಂತ.

ಆದರೆ ಈ ಯಾವುದೇ ಸಿದ್ಧಾಂತವನ್ನು ಅತ್ಯಂತ ಖಚಿತವಾದುದು ಎಂದು ಹೇಳಲಾಗದು. ಆದರೆ ಮೇಲ್ಕಾಣಿಸಿದ ಎಲ್ಲಾ ಸಿದ್ಧಾಂತಗಳ ಅಂಶಗಳೂ ಪುರಾಣವೊಂದರ ಸೃಷ್ಟಿಯ ಹಿಂದೆ ಕಾರ್ಯನಿರ್ವಹಿಸುತ್ತವೆ ಮತ್ತು ಈ ಎಲ್ಲಾ ಅಂಶಗಳನ್ನು ಪುರಾಣ ಒಳಗೊಂಡಿರುವುದೇ ಅದರ ವ್ಯಾಪ್ತಿ ಮತ್ತು ವೈಶಾಲ್ಯತೆಯನ್ನು ಸ್ಪಷ್ಟಪಡಿಸುತ್ತದೆ. ತಮ್ಮ 'ವಿಸ್ಮೃತಿ-ಸಂಸ್ಕೃತಿ' ಕೃತಿಯಲ್ಲಿ ಡಾ. ಹಿ.ಚಿ. ಬೋರಲಿಂಗಯ್ಯನವರು 'ಪುರಾಣ'ದ ಬಗೆ ವ್ಯಾಪಕವಾದ ಚರ್ಚೆಯನ್ನು ಮಾಡಿದ್ದಾರೆ.[೨೯]

೧. ಹಿಂದೂ ಪುರಾಣಗಳು, ೨. ಜನಪದ ಪುರಾಣಗಳು, ೩. ಬುಡಕಟ್ಟು ಪುರಾಣಗಳು, ಎಂದು ಪುರಾಣಗಳನ್ನು ಮೂರು ಬಗೆಯಲ್ಲಿ ವರ್ಗೀಕರಣ ಮಾಡುತ್ತಾರೆ.

೧. ಹಿಂದೂ ಪುರಾಣಗಳು: ಧರ್ಮರಕ್ಷಣೆಗಾಗಿ, ಧರ್ಮಪ್ರಸಾರಕ್ಕಾಗಿ ಅಲೌಕಿಕ ಜಗತ್ತಿನ ನಿರ್ವಹಣೆ ಇತ್ಯಾದಿ ಅವಾಸ್ತವಿಕ ಘಟನೆಗಳನ್ನು ಪ್ರಚಾರ ಪಡಿಸುವ, ಸಾಮಾನ್ಯ ಬದುಕಿನಿಂದ ದೂರ ಇರುವ ಭಾರತದಲ್ಲಿ ಪ್ರಚಲಿತವಿರುವ ಅನೇಕ ಹಿಂದೂ ಪುರಾಣಗಳು ಭ್ರಮಾತ್ಮೀಕರಣದಿಂದ ರಚಿಸಲ್ಪಟ್ಟಿರುವವು

---

[೨೮] ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ, ಪುರಾಣ, ಪು೩೯, ೧೯೯೦. ಕರ್ನಾಟಕ ಸಾಹಿತ್ಯ ಅಕಾಡೆಮಿ.

[೨೯] ಪು.೬೩-೬೮, ೨೦೦೧, ಸಿವಿಜಿ ಪಬ್ಲಿಕೇಷನ್.

ಮತ್ತು ಓದುಗರನ್ನು/ಕೇಳುಗರನ್ನು ಭ್ರಮಾತ್ಮೀಕರಣಗೊಳಿಸುವಂತಹವು ಎಂದು ಹೇಳುತ್ತಾ ಅದರ ಬಗ್ಗೆ ವಿವರಗಳನ್ನು ಕೊಟ್ಟು ಈ ಪುರಾಣಗಳ ಸೃಷ್ಟಿಯ ಹಿಂದಿರುವ ವೈದಿಕ ಮನಸ್ಸುಗಳನ್ನು ವಿಶ್ಲೇಷಿಸುತ್ತಾರೆ.

೨. ಜಾನಪದ ಪುರಾಣಗಳು: ಎರಡನೆಯದಾಗಿ ಜನಪದ ಪುರಾಣಗಳು ಎಂದು ವಿಭಾಗಿಸಿ ಎಲ್ಲಾ ಶಿಷ್ಟ ಪುರಾಣಗಳ ಹಿಂದೆ ಜನಪದ ಪುರಾಣಗಳೇ ಹಿನ್ನೆಲೆಯಾಗಿರುವುದು ಸಹಜ. ಈ ಜನಪದರಲ್ಲಿ ಸಾಗಿ ಬಂದ ಕತೆಗಳನ್ನೇ ತಮಗೆ ಬೇಕಾದಂತೆ ಶಿಷ್ಟ ಅಥವಾ ಪುರೋಹಿತಶಾಹೀ ಮನಸ್ಸುಗಳು ರಚಿಸಿದಾಗ ಅವು ಶಿಷ್ಟಪುರಾಣಗಳೆನಿಸಿಕೊಳ್ಳುತ್ತವೆ. ಜನಸಾಮಾನ್ಯರ ಬದುಕು, ಅವರ ಆಶಯ, ಅಭೀಪ್ಸೆಗಳನ್ನು ಒಳಗೊಂಡು ರಚನೆಯಾಗಿರುವವೇ ಜನಪದ ಪುರಾಣಗಳು ಎಂದು ಹೇಳುತ್ತಾ ಇಲ್ಲಿ ಸಾಮಾನ್ಯ ವಿಶೇಷ ವ್ಯಕ್ತಿಯಾಗುವ, ವಿಶೇಷ ವ್ಯಕ್ತಿ ಸಾಮಾನ್ಯತೆಗೆ ಸಲ್ಲುವ ವಿಚಾರಗಳನ್ನು ಕೊಡುತ್ತಾರೆ ಮತ್ತು ಸ್ಥಳೀಯರಾದ ಸಾಮಾನ್ಯರ ಬದುಕಿನ ಮೇಲೆ ಊಳಿಗಮಾನ್ಯ ಪದ್ಧತಿ ನಡೆಸಿದ ಕ್ರೌರ್ಯ, ಶೋಷಣೆಗಳು, ಅದರಿಂದ ನೊಂದ ಸಮುದಾಯದ ಆಲೋಚನೆ, ನಲುಗಿದ ಬದುಕೇ ಈ ಜನಪದ ಪುರಾಣಗಳ ವಸ್ತು ಎಂದು ವಿಶ್ಲೇಷಿಸುತ್ತಾರೆ. ಇವರ ಪ್ರಕಾರ ಜನಪದ ಸಂಸ್ಕೃತಿಗೆ ಸಂಬಂಧಿಸಿದ್ದು ಜನಪದ ಪುರಾಣ. ಜನಪದ ಸಂಸ್ಕೃತಿಯೆಂದರೆ ಕಾಡಿನ ಅಂಚಿನಿಂದ ನಾಡಿನವರೆಗೂ ವ್ಯಾಪಿಸಿರುವಂತಹದು. ಅಂದರೆ ಈ ಪರಿಧಿಯಲ್ಲಿ ಬರುವ ಅನೇಕ ವೃತ್ತಿಗಳನ್ನು ಅವಲಂಬಿಸಿರುವ, ನಾಡಿನ ಬದುಕಿನೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಿರುವ ಜನ ಸಮುದಾಯವಿರುತ್ತದೆ. ಸಂಬಂಧಿಸಿದ ಸಂಗತಿಯನ್ನು ಕಥನ ಮಾಡಿದಾಗ ಅದು ಜನಪದ ಪುರಾಣವೆನ್ನಿಸುತ್ತದೆ. ಇದಕ್ಕೆ ನಿರ್ದಿಷ್ಟವಾದ ಪರಿಧಿ ಇರುವುದಿಲ್ಲ. ಲೇಖಕರೇ ವಿವರಿಸುವಂತೆ 'ಕೆರೆಗೆ ಹಾರ'ದಂತಹ ಕತೆಗಳು ನಾಡಿನಾದ್ಯಂತ ಇವೆ. ಇವೆಲ್ಲಾ ಜನಪದವೇ. ಪ್ರೊ. ಎ.ಕೆ. ರಾಮಾನುಜನ್ ಅವರು ಸಹ, ಡಾ. ತೀ.ನಂ. ಶಂಕರನಾರಾಯಣ ಅವರಿಗೆ ನೀಡಿದ ಸಂದರ್ಶನವೊಂದರಲ್ಲಿ ಜಾನಪದವು ಕೇವಲ ನಿರ್ದಿಷ್ಟ ಪರಿಧಿಗೆ ಸಂಬಂಧಿಸಿದುದಲ್ಲ. ಹಳ್ಳಿಗಳಿಗೆ, ರೈತಾಪಿ ಜನರಿಗೆ ಸಂಬಂಧಿಸಿದುದು ಮಾತ್ರವಲ್ಲ. ಅಲೆನ್ ಡೆಂಡಸ್ ಮತ್ತಿತರರು ಸರಿಯಾಗಿಯೇ ಗುರುತಿಸಿರುವಂತೆ ಎಲ್ಲಿಲ್ಲಿ ಜನರಿದ್ದಾರೋ ಅಲ್ಲೆಲ್ಲಾ ಜನಪದ ಇದ್ದೇ ಇರುತ್ತದೆ. ಪ್ರತಿಯೊಂದು ಸಮುದಾಯದಲ್ಲಿಯೂ ಕಂಠಸ್ಥ ಹಾಗೆಯೇ ಶಿಷ್ಟ ಸಂಪ್ರದಾಯಗಳೂ ಇರುತ್ತವೆ ಎಂದು ಮುಂತಾಗಿ ವಿವರಿಸುತ್ತಾರೆ.[೩೦] ಈ ಹಿನ್ನೆಲೆಯಲ್ಲಿಯೂ ವಿಚಾರ ಮಾಡಿದಾಗ ಜನಪದ ಪುರಾಣ ಮತ್ತು ಬುಡಕಟ್ಟು ಪುರಾಣವನ್ನು ಡಾ. ಹಿ.ಚಿ. ಬೋರಲಿಂಗಯ್ಯನವರು ಪ್ರತ್ಯೇಕವಾಗಿಯೇ ನೋಡಿರುವುದು ಸಮಂಜಸವೆನಿಸುತ್ತದೆ.

೩. ಬುಡಕಟ್ಟು ಪುರಾಣ : ಸಾಮಾನ್ಯವಾಗಿ ಕಾಡಿನ ಗರ್ಭದಲ್ಲಿ ನಿರ್ದಿಷ್ಟ ಪರಿಧಿಯೊಂದರಲ್ಲಿ ಬದುಕುವ, ಈ ಮೂಲಕ ತಮ್ಮದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಪಡೆದಿರುವ ಸಮುದಾಯಗಳೇ ಬುಡಕಟ್ಟುಗಳಾಗಿದ್ದು ತನ್ನದೇ ಆದ ಲೋಕದೃಷ್ಟಿಯನ್ನು ಹೊಂದಿದ್ದು ತನ್ನ ಅನನ್ಯತೆಯನ್ನು ತನ್ನ

---

೩೦ ತೀ.ನಂ.ಶಂಕರನಾರಾಯಣ, ಜಾನಪದ ಸಮೀಕ್ಷೆ, ವಿಶ್ಲೇಷಣೆ, ಪು.೧೧೭, ೧೯೯೯, ಪ್ರಿಯದರ್ಶಿನಿ ಪ್ರಕಾಶನ.

ಸಮುದಾಯಕ್ಕಾಗಿ ದುಡಿದ, ತ್ಯಾಗ, ಬಲಿದಾನ ಮಾಡಿದ ವ್ಯಕ್ತಿಗಳ ಅನನ್ಯತೆಯನ್ನು ಕುರಿತು ಕಟ್ಟಿದ ಕಥೆಯೇ ಆ ಬುಡಕಟ್ಟಿನ ಪುರಾಣವಾಗಿರುತ್ತದೆ ಎಂದು ವಿವರಿಸುತ್ತಾರೆ.[೩೧]

ಈ ಹಿನ್ನೆಲೆಯಲ್ಲಿ ನಾವು ಬುಡಕಟ್ಟಿನ ಪುರಾಣವೆಂದು ಪ್ರತ್ಯೇಕವಾಗಿಯೇ ಗ್ರಹಿಸಬೇಕಾಗುತ್ತದೆ. ನಿರ್ದಿಷ್ಟವಾದ ಬುಡಕಟ್ಟಿಗೆ ಸೇರಿದ ವ್ಯಕ್ತಿ, ವೈಯುಕ್ತಿಕವಾಗಿ ಆಲೋಚಿಸುವುದಕ್ಕಿಂತ ಸಾಮೂಹಿಕವಾದ ಆಲೋಚನೆಗೆ ಹೆಚ್ಚು ಬೆಲೆ ಕೊಡುತ್ತಾನೆ. ಹಾಗೆಂದಾಕ್ಷಣ ವ್ಯಕ್ತಿಯೊಬ್ಬನ ವೈಯುಕ್ತಿಕ ಆಲೋಚನೆ, ತಿಳುವಳಿಕೆಗೆ ಮಾನ್ಯತೆ ಇಲ್ಲ ಎಂದರ್ಥವಲ್ಲ. ವ್ಯಕ್ತಿಯೊಬ್ಬರ ನಿರ್ಧಾರ ಇಡೀ ಸಮುದಾಯಕ್ಕೆ ಒಪ್ಪಿತವಾಗುವ ದಾರಿಯಲ್ಲಿ ಇರುತ್ತದೆ. ಅದು ಒಬ್ಬರ ಚಿಂತನೆಯಾಗಿದ್ದರೂ ಇಡೀ ಸಮುದಾಯದಿಂದ ಒಪ್ಪಿತಗೊಂಡಾಗ ಮಾತ್ರ ಅದು ಸಮಷ್ಟಿಯ ಚಿಂತನೆ ಎನಿಸುತ್ತದೆ. ಆ ಒಬ್ಬನ ಚಿಂತನೆಯೂ ಆತ ತನ್ನ ಪರಂಪರೆಯಿಂದ ಪಡೆದ ತಿಳುವಳಿಕೆಯ ಆಧಾರದ ಮೇಲೆ ರೂಪುಗೊಂಡಿರುತ್ತದೆ. ಹೀಗಾಗಿ ಒಟ್ಟು ಆ ಪರಂಪರೆಯ ಜ್ಞಾನ ಇಲ್ಲಿ ಕೆಲಸ ಮಾಡುವುದರಿಂದ ಅದು ಆ ಬುಡಕಟ್ಟಿನ ಚಿಂತನೆಯೆನಿಸುತ್ತದೆ. ಇಂತಹ ಚಿಂತನೆಯ ಮೂಸೆಯಲ್ಲಿ ನಿರ್ಮಾಣವಾಗುವುದೇ ಬುಡಕಟ್ಟು ಪುರಾಣ. ಕರ್ನಾಟಕದ ಬುಡಕಟ್ಟುಗಳಲ್ಲಿ ಒಂದಾದ ಮ್ಯಾಸಬೇಡರಲ್ಲೂ ಹಲವಾರು ಕಥನಗಳಿವೆ. ಆದರೆ ನಾನು ಇಲ್ಲಿ ಗಮನಿಸ ಹೊರಟಿರುವುದು ಆ ಸಂಸ್ಕೃತಿಯ ನಾಯಕಿಯ ಸ್ಥಾನದಲ್ಲಿರುವ ಮಹಿಳೆಯರನ್ನು ಕುರಿತ ಪುರಾಣಗಳನ್ನು. ಸಾಂಸ್ಕೃತಿಕ ನಾಯಕಿಯರನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳಬೇಕೆಂದರೆ, ಅವರ ಬಗೆಗೆ ಸಮುದಾಯದಲ್ಲಿ ಪ್ರಚಲಿತವಾಗಿರುವ ಪುರಾಣಗಳನ್ನು ಅರ್ಥೈಸಿಕೊಳ್ಳುವುದು ಬಹಳ ಮುಖ್ಯವಾಗುತ್ತದೆ. ಬುಡಕಟ್ಟಿನಲ್ಲಿ ನೆಲೆಗೊಂಡಿರುವ ಮೌಖಿಕ ಸಾಹಿತ್ಯದ ಮೂಲಕ ಆ ಸಮುದಾಯದ ಪುರಾತನ ಜಗತ್ತಿನ ವಿವರಣೆ ಲಭ್ಯವಾಗುತ್ತದೆ. ವರ್ತಮಾನದಲ್ಲಿ ಇದಕ್ಕೆ ಸಂಬಂಧಿಸಿದ ಆಚರಣೆಗಳಿದ್ದರೆ ಆ ಮೂಲಕ ಮತ್ತು ಆಚರಣೆಗಳಿಲ್ಲದಿದ್ದರೆ ಮೌಖಿಕ ವಿವರಗಳ ಮೂಲಕವೇ ಗ್ರಹಿಸಿ ಕೆಲಮಾದರಿಗಳನ್ನು ರೂಪಿಸಿಕೊಳ್ಳುವ ಅಗತ್ಯವೂ ಇರುತ್ತದೆ. ಪ್ರೊ. ಎ.ಕೆ. ರಾಮಾನುಜನ್ ಅವರು "ಯಾರಾದರೂ ಭಾರತೀಯ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಬೇಕೆಂದಿದ್ದರೆ ಅವರ ದನಿಗಳನ್ನು ಕೇಳಬೇಕೆಂದಿದ್ದರೆ, ಅವರ ಹೆಂಗಸರು ಹೇಳುವ ಕಥೆಗಳು, ಹಾಡುವ ಹಸೆಗಳು, ಒಡಪುಗಳು ಮತ್ತು ತೋಂಡಿ ಸಂಪ್ರದಾಯದಲ್ಲಿ ಜೀವಂತವಾಗಿ ಉಳಿದಿರುವ ಜಾಣ್ನುಡಿ, ಆಟಗಳು ಮತ್ತು ಜನಪದ ಪರಂಪರೆಯ ದೇವತೆಗಳ ಪೌರಾಣಿಕತೆ ಇವೆಲ್ಲವುಗಳತ್ತ ತಮ್ಮ ಗಮನ ಕೇಂದ್ರೀಕರಿಸಬೇಕಾಗುತ್ತದೆ"[೩೨] ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಪ್ರತಿಯೊಂದು ಬುಡಕಟ್ಟಿಗೂ ಮೌಖಿಕವಾದ ಸಾಹಿತ್ಯ ಇದ್ದೇ ಇರುತ್ತದೆ. ಅದು ಪದ್ಯರೂಪದಲ್ಲಿರಬಹುದು, ಇಲ್ಲವೇ ಗದ್ಯದ ನಿರೂಪಣೆಯಾಗಿರಬಹುದು. ಯಾವ ರೂಪದಲ್ಲಿದ್ದರೂ ನಮಗೆ ಆ ಸಮುದಾಯವನ್ನು ಅರಿಯಲು, ಅದರ ಸೂಕ್ಷ್ಮಗಳನ್ನು ಗುರುತಿಸಲು ಇದು ಅನುವು ಮಾಡಿಕೊಡುತ್ತದೆ. ಬುಡಕಟ್ಟು ಸಮುದಾಯದಲ್ಲಿ ಬಹುಮಟ್ಟಿಗೆ ಅಲ್ಲಿ ಜೀವಂತವಾಗಿರುವ ಮೌಖಿಕ ರೂಪಗಳು ಮತ್ತು ಆಚರಣೆಗಳು ಈ ಸಂಸ್ಕೃತಿಯನ್ನು ಅರಿಯಲು ಬಲವಾದ ಆಕರಗಳಾಗಿವೆ. ಮ್ಯಾಸಬೇಡರು ಅಥವಾ ಮ್ಯಾಸನಾಯಕರು ಎಂದು

---

೩೧ ಡಾ. ಹಿ.ಚಿ. ಬೋರಲಿಂಗಯ್ಯ, ವಿಸ್ಮೃತಿ ಸಂಸ್ಕೃತಿ, ಪು.೬೩-೬೮, ೨೦೦೧, ಸಿವಿಜಿ ಪಬ್ಲಿಕೇಷನ್ಸ್.

೩೨ ಉಲ್ಲೇಖ: ಡಾ. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ: ಒಂದು ಸಂಕಥನ, ಪು.೧೮,೧೯,೧೯೬೩.

ಕರೆಯಲ್ಪಡುತ್ತಿರುವ ಈ ವಿಶಿಷ್ಟವಾದ ಬುಡಕಟ್ಟಿನಲ್ಲಿ ವಿಶಿಷ್ಟವಾದ ಮಹಿಳೆಯರು ಕಂಡುಬರುತ್ತಿದ್ದು ಅವರ ಬಗ್ಗೆ ಸಾಕಷ್ಟು ಕಥನಗಳು ಗದ್ಯ ಮತ್ತು ಪದ್ಯರೂಪದಲ್ಲಿ ಕಂಡುಬರುತ್ತಿವೆ. ಈ ಮಹಿಳೆಯರನ್ನು ಆ ಸಂಸ್ಕೃತಿಯ ನಾಯಕಿಯರು ಎಂದು ಪರಿಗಣಿಸಿರುವಾಗ- ಪರಿಗಣಿಸಬೇಕಾದಾಗ ಅವರ ಬಗೆಗೆ ಪ್ರಚಲಿತವಿರುವ ಈ ಸಂಪೂರ್ಣ ವಿವರಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾದ ಅಂಶವಾಗಿದೆ. ಹಾಗಾಗಿ ಈ ನಾಯಕಿಯರ ಬಗ್ಗೆ ಸಮುದಾಯದಾದ್ಯಂತ ಪ್ರಚಲಿತವಾಗಿರುವ ಪುರಾಣಗಳನ್ನು ಗ್ರಹಿಸಿದಾಗ ಮಾತ್ರ ಸಮಗ್ರವಾಗಿ ಅವರ ಚಿತ್ರಣವೊಂದನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ. ಒಬ್ಬ ವ್ಯಕ್ತಿಯ ಬಗ್ಗೆಯೇ ಹಲವು ಬಗೆಯ ಕಥನಗಳಿದ್ದು ಹೀಗೆ ಪ್ರತ್ಯೇಕವಾಗುತ್ತಲೇ ಕೊನೆಗೆ ಏಕವ್ಯಕ್ತಿ ಕೇಂದ್ರಿತವಾಗಿ ಆಕೆಗೊಂದು ಸ್ಥಾನ ನಿರ್ದೇಶನವನ್ನು ಮಾಡುತ್ತವೆ ಎಂಬುದನ್ನು ಅರಿಯುವುದೇ ಇಲ್ಲಿನ ಉದ್ದೇಶ.

ಮೊದಲು ಮ್ಯಾಸಬೇಡ ಬುಡಕಟ್ಟಿನಲ್ಲಿ ಪ್ರಚಲಿತವಾಗಿರುವ ಸೃಷ್ಟಿ ಪುರಾಣವನ್ನು ಗಮನಿಸಿ ಆ ಮೂಲಕ ಅವರ ಲೋಕದೃಷ್ಟಿಯನ್ನು ಗ್ರಹಿಸಿ ಮುಂದುವರೆಯುವುದು ಅಗತ್ಯವೆನಿಸುತ್ತದೆ.

**೩. ಮ್ಯಾಸಬೇಡರ ಸೃಷ್ಟಿ ಪುರಾಣ-೧**

ಪುರಾಣಗಳು ವ್ಯಕ್ತಿಯೊಬ್ಬರ ಸೃಷ್ಟಿಯಲ್ಲ. ಸಮಷ್ಟಿಯ ಸೃಷ್ಟಿ ಎಂದು ಈಗಾಗಲೇ ನಮಗೆ ತಿಳಿದಿರುವ ಸಂಗತಿಯೇ ಆಗಿದೆ. ಜಗತ್ತಿನಾದ್ಯಂತ ಅನೇಕ ಬಗೆಯ ಸೃಷ್ಟಿ ಪುರಾಣಗಳಿವೆ. ಸಾಮಾನ್ಯವಾಗಿ ಪ್ರಕೃತಿಯ ವಿವಿಧ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವಿವಿಧ ಬಗೆಯ ಸೃಷ್ಟಿಪುರಾಣಗಳ ಸೃಷ್ಟಿಯಾಗಿದೆ. ತಾನು ಬದುಕುತ್ತಿರುವ ಪರಿಸರ, ಜೀವನ ವಿಧಾನ ಆ ಮೂಲಕ ತನ್ನ ಗ್ರಹಿಕೆಗೆ ಸಾಧ್ಯವಾಗುವ ರೀತಿಯಲ್ಲಿ ಸಮುದಾಯವೊಂದು ತನ್ನ ಸೃಜನಶೀಲ ಗುಣವನ್ನು ಬಳಸಿಕೊಂಡು ಸೃಷ್ಟಿಯ ಬಗ್ಗೆ ತನ್ನದೇ ಆದ ತೀರ್ಮಾನಕ್ಕೆ ಬರಲು ಸಾಧ್ಯವಾಗುತ್ತದೆ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ತಾನಿರುವ ಬ್ರಹ್ಮಾಂಡದ ಸೃಷ್ಟಿ ಜಗತ್ತಿನಲ್ಲಿ ಸಾಮಾನ್ಯವಾದುದಲ್ಲ, ಅಸಹಜವಾದುದೂ ಅಲ್ಲ, ಬದಲಾಗಿ ಅನನ್ಯವಾದುದು, ದೈವೀಕ ಶಕ್ತಿಯಿಂದ ಜನಿಸಿದುದು. ಇದರ ಬಗ್ಗೆ ತನ್ನದೇ ಆದ ತಿಳುವಳಿಕೆಯನ್ನು ಕಟ್ಟಿಕೊಂಡು ಅದನ್ನು ಪರಂಪರೆಯಿಂದ ಪರಂಪರೆಗೆ ಸ್ಮರಣೆಯ ಮೂಲಕ ಉಳಿಸಿಕೊಂಡು ಬಂದಿರುತ್ತದೆ.

ಮ್ಯಾಸಬೇಡರಲ್ಲಿಯೂ ಅನನ್ಯವಾದ ಸೃಷ್ಟಿ ಪುರಾಣವಿದ್ದು, ಅದಕ್ಕೂ ಮೊದಲು ಸಮುದಾಯದ ಇಷ್ಟದೈವದ ಸ್ಮರಣೆ ನಾನು ಸಂಗ್ರಹಿಸಿರುವ 'ರಾಯಮ್ಮನ ಕಾವ್ಯ'ದಲ್ಲಿ ಬರುತ್ತದೆ.

"ಸುಕ್ಕೇ ಸೂರಿದುನೇ ಪಾರ್ವತಿ ಪರಮೇಶನ ಪಾಡುತಾಳೇ ಬಂಗಾರ ಭಾನಾಗೋಟೆ ಲಿಂಗಾನ ನೆನೆದೇನೆ ಕುಂಬಳ ಹೂವಿನಾಗೆ ಉದಿಯೋರೆ ॥ ಸುಕ್ಕೇ ॥"

ತನಗೆ ಸಮಸ್ತವನ್ನು ಒದಗಿಸಿಕೊಡುವ ಮೂಲ ಆಕರವಾದ ಪ್ರಕೃತಿಯ ಬಗೆಗೆ ಪ್ರಾಚೀನ ಕಾಲದಿಂದಲೂ ಮಾನವನಿಗೆ ಋಣದ ಭಾವನೆ ಇದೆ. ಪೂಜ್ಯ ಮನೋಭಾವದಿಂದ ಈ ಪ್ರಾಕೃತಿಕ ಶಕ್ತಿಯನ್ನು ದೈವವೆಂದು ತಿಳಿದು ಆರಾಧಿಸುತ್ತಾ ಬಂದಿರುವುದು ತಿಳಿದ ಸಂಗತಿಯೇ ಆಗಿದೆ. ಪ್ರಕೃತಿಯ ಎಲ್ಲಾ ವ್ಯಾಪಾರಗಳಿಗೂ ಕಾರಣಕರ್ತರಾದ ಸೂರ್ಯಚಂದ್ರರನ್ನಂತೂ ಭಾಗಶಃ ಎಲ್ಲಾ ಸಮುದಾಯಗಳೂ ಶ್ರೇಷ್ಟಸ್ಥಾನದಲ್ಲಿರಿಸಿ ತನ್ನ ನಮನಗಳನ್ನು ಸಲ್ಲಿಸುತ್ತಲೇ ಬಂದಿವೆ. ನಮ್ಮ ಮುಗ್ಧ ಮಾನವನಿಗೆ ಪ್ರತ್ಯಕ್ಷವಾಗಿ

ಕಣ್ಣಿಗೆ ಕಾಣುವ ದೇವರೆಂದರೆ ಸೂರ್ಯಚಂದ್ರರೇ. ಆಗಸದ ತುಂಬಾ ಹರಡಿರುವ ಅಸಂಖ್ಯಾತ ಚುಕ್ಕೆಗಳೆಲ್ಲಾ ಒಂದು ಕಡೆ ಸೇರಿ ಒಂದು ದೊಡ್ಡ ಚುಕ್ಕೆಯಾದವನೇ 'ಸೂರಿದ'. ಅಂದರೆ ಸೂರ್ಯ ಎಂಬ ಅನುಪಮವಾದ ನಂಬಿಕೆ ಇವರದು. ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಜನರದು ನಿಸರ್ಗಾರಾಧನೆಯಾಗಿದ್ದು ಮ್ಯಾಸಬೇಡರೂ ಇದರಿಂದ ಹೊರತಾಗಿಲ್ಲ. ಮಾತೃದೇವತೆಗಳನ್ನು ಮತ್ತು ಶಿವನನ್ನು ಆರ್ಯರಲ್ಲದ ಅನೇಕ ಭಾರತೀಯ ಸಮುದಾಯಗಳೂ ಆರಾಧಿಸುತ್ತಾ ಬಂದಿದ್ದು ಶಿವ-ಪಾರ್ವತಿಯ ಸ್ಮರಣೆಯೂ ಇಲ್ಲಿ ಮುಖ್ಯವಾಗುತ್ತದೆ. ಹೀಗೆ ಪ್ರಕೃತಿಯ ಬಗೆಗಿನ ಬೆರಗು, ತಮ್ಮದೇ ಆದ ಕಲ್ಪನೆ, ಆ ಮೂಲಕವಾಗಿಯೇ ಆರಾಧಿಸುವ ಇವರ ಆಲೋಚನೆ ವಿಸ್ಮಯ ಮೂಡಿಸುತ್ತದೆ. ಮೂಗನಾಯಕ ಎಂಬ ಪಶುಪಾಲಕ ಶ್ರೀಕೃಷ್ಣನಿಂದ ಕೊಳಲನ್ನು ಪಶುಸಂಪತ್ತನ್ನೂ ಪಡೆದಿದ್ದ. ಈತನ ಮಗನೇ ಮಂದರಾಜ. ಈ ಪಶುಪಾಲಕ ಸಮುದಾಯ ನೆಲೆಸಿದ್ದು ಬಹುಕಾಲ ಬಂಗಾರು ಭಾನುಗೋಟೆಯಲ್ಲಿ.[೩೩] ಹೀಗಾಗಿ ಇಲ್ಲಿರುವ ಲಿಂಗವನ್ನು ನೆನೆದು ನಂತರ ಕುಂಬಳ ಹೂವಿನಲ್ಲಿ ಉದಿಸಿದ ವೀರಶರಣರನ್ನು ನೆನೆಯುತ್ತಾ ಕಥನವನ್ನು ಆರಂಭ ಮಾಡುತ್ತಾರೆ. ಇವರ ದೈವದ ಬಗೆಗಿನ ನಂಬಿಕೆಗಳು ಮತ್ತು ಅನನ್ಯವಾದ ಅವರ ಸೌಜನ್ಯವನ್ನು ಇದು ಪರಿಚಯಿಸುತ್ತದೆ. ನಂತರ ಅವರ ಸೃಜನಶೀಲ ಮನಸ್ಸು ಭೂಮಿ ಮತ್ತು ಜೀವ ಸಂಕುಲ ಜನಿಸಿದ ಬಗೆಯನ್ನು ಗ್ರಹಿಸಿದ್ದು ಹೀಗೆ.

"ಭೂಮಿ ಹುಟ್ಟಾದಕಿನ್ನ ಭೂಲೋಕ ಹುಟ್ಟಾದಕಿನ್ನ, ಪಂಪಾದ್ರಿ ಬಸವ ಮೊದಲುಟ್ಟಿ ॥ ಪಾರ್ವತಿ ಪರಮೇಶನ ಪಾಡುತಾರೇ ॥ ಕಲ್ಲು ಹುಟ್ಟದಕಿನ್ನ ಕಲ್ಯಾಣ ಹುಟ್ಟದಕಿನ್ನ, ಬಲ್ಲಾವೆಂಬ ಆಕಳೆ ಮೊದಲುಟ್ಟಿ ॥ ಪಾರ್ವತಿ ಪರಮೇಶನ ಪಾಡುತಾರೆ ॥"

ಮೊದಲು ಬ್ರಹ್ಮಾಂಡದ ಸೃಷ್ಟಿ. ನಂತರ ಜೀವ ಸಂಕುಲದ ಸೃಷ್ಟಿಯಾಗುವುದು ಸಾಮಾನ್ಯ. ಆದರೆ ಇಲ್ಲಿ ಇನ್ನೂ ಭೂಮಿ ಹುಟ್ಟಿರುವುದಿಲ್ಲ. ಭೂಲೋಕವೆಂಬುದೇ ಇಲ್ಲ. ಆ ಸಂದರ್ಭದಲ್ಲಿ ಕೈಲಾಸದಲ್ಲಿ ಪಂಪಾದ್ರಿ ಬಸವ ಮತ್ತು ಬಲ್ಲಾವು ಜನಿಸಿದವು. ಆಂಧ್ರದ ಕಾಟಮ ರಾಜನ ಕಾವ್ಯದಲ್ಲಿಯೂ (ಕನ್ನಡಕ್ಕೆ:ಆರ್ವಿಯಸ್ ಸುಂದರಂ) ಇವೆರಡರ ಪ್ರಸ್ತಾಪ ಬರುತ್ತದೆ. ಪಂಪಾದ್ರಿ ಎಂಬ ಸ್ಥಳ. ಅಲ್ಲಿಯ ಬಸವ ವರವೀಯುವ ದೇವತೆ. ಬಲ್ಲಾವು (ಬಿಳಿಯ ಮಚ್ಚೆಗಳಿಂದ ಕೂಡಿದ್ದು ಒಂಟಿಕೊಂಬನ್ನು ಹೊಂದಿದ್ದು ವ್ಯಕ್ತಿ ಸದೃಶ್ಯವಾಗಿ ಹೋರಾಟದಲ್ಲಿ ಪಾಲ್ಗೊಂಡಿತ್ತು). ಬಹುಶಃ ಅದೇ ಮೂಲದಿಂದಲೇ ಚೆದುರಿ ಬಂದ ಸಮುದಾಯ ಮ್ಯಾಸಬೇಡರಿರಬಹುದು. ಕಲ್ಲು, ಕಲ್ಯಾಣ ಹುಟ್ಟುವುದಕ್ಕಿಂತ ಮೊದಲು ಇವು ಜನಿಸಿದವು. ಮ್ಯಾಸಬೇಡರು ಮೂಲತಃ ಪಶುಪಾಲಕರು. ಅವರಿಗೆ ಬದುಕನ್ನು ಕೊಡುತ್ತಿರುವುದೇ ಅವರ ಪಶುಸಂಪತ್ತು. ಹೀಗಾಗಿ ಅವರ ಈ ಪಶುಸಂಪತ್ತು ಮತ್ತು ದೇವರು ಇವರಿಗೆ ಬೇರೆ ಬೇರೆಯಲ್ಲ. ಹಾಗಾಗಿ ಮೊದಲು ಇವು ಹುಟ್ಟಿದ್ದು ಅವರ ಪ್ರಕಾರ ಸಹಜವೇ. ಸಮುದಾಯದ ಜೀವನ ವಿಧಾನಕ್ಕೂ ಮತ್ತು ಅವರಲ್ಲಿ ಪ್ರಚಲಿತವಿರುವ ಸೃಷ್ಟಿ ಸಂಬಂಧೀ ಕತೆಗೂ ಸಾಮಾನ್ಯವಾಗಿ ಸಂಬಂಧವಿರುತ್ತದೆ. ಅವರ ಕಲ್ಪನೆ, ಗ್ರಹಿಕೆ,

---

[೩೩] ಇಂದಿನ ಆಂಧ್ರದಲ್ಲಿರುವ ಚಂದ್ರಗಿರಿ ಕೋಟೆಯೇ ಬಂಗಾರಭಾನುಕೋಟೆ ಆಗಿರಬಹುದು. ಕಾಟಮರಾಜನ ಕಥೆಯಲ್ಲೂ ಚಂದ್ರಗಿರಿ ಕೋಟೆಯ ಉಲ್ಲೇಖ ಬರುತ್ತದೆ.

ಚಿಂತನಾ ವಿಧಾನದಲ್ಲಿ ಆಯಾ ಸಮುದಾಯದ ಸಂಸ್ಕೃತಿ ಬಹಳ ಮುಖ್ಯವಾದ ಪ್ರಭಾವವನ್ನು ಬೀರುತ್ತದೆ. "ಯಾವ ಸಂಸ್ಕೃತಿ ಪ್ರಬಲವಾಗಿರುತ್ತದೆಯೋ, ಯಾವ ಧೋರಣೆಗಳು ಬದುಕನ್ನು ಮುಖ್ಯವಾಗಿ ರೂಪಿಸುತ್ತವೆಯೋ ಅದು ಪುರಾಣಗಳ ತಿರುಳನ್ನು ನಿರ್ಧರಿಸುತ್ತದೆ. ಬೇಟೆ ಅಥವಾ ಆಹಾರ ಸಂಗ್ರಹಣೆ ಬದುಕಿನ ಮುಖ್ಯ ವಿಧಾನವಾಗಿದ್ದ ಸಮಾಜಗಳಲ್ಲಿ ಪ್ರಪಂಚ ಹೇಗೆ ಹುಟ್ಟಿತು ಎಂಬ ಪುರಾಣ ಪ್ರಾಣಿಗಳ ಹುಟ್ಟಿಗೆ ಪ್ರಾಮುಖ್ಯತೆ ನೀಡುತ್ತದೆ. ವ್ಯವಸಾಯ ಬದುಕಿನ ವಿಧಾನವಾಗಿರುವ ಸಮಾಜದಲ್ಲಿನ ಪುರಾಣಗಳಲ್ಲಿ ಬೇಸಾಯದ ಕೆಲಸಗಳಿಗೆ ಪ್ರಾಮುಖ್ಯತೆ ಸಲ್ಲುತ್ತದೆ. ಅಷ್ಟೇ ಅಲ್ಲ. ಈ ಸಂಗತಿಯನ್ನು ಅತ್ಯಂತ ಪ್ರಾಚೀನಕಾಲದ ಆರಂಭದಿಂದ ಅಥವಾ ಅನಾದಿಯಿಂದ ಬೆಳೆದು ಬಂದಂತೆ ಚಿತ್ರಿಸುತ್ತದೆ."[೩೪]

ಸ್ವಾಮಿ ಹುಟ್ಟಾಕಿನ್ನ ಮೊದಲಿಯೇ ಭೂಮಿ ಹುಟ್ಟಾಕಿನ ಮೊದಲಿಯೇ ಸ್ವಾಮಿ ಮಾದೇವರಾಯ ಹುಟ್ಟಿ ಬಂದಾನೋ ..." ಎಂಬ ವಿವರ ಹಾಲಕ್ಕಿ ಒಕ್ಕಲಿಗರ ಸೃಷ್ಟಿ ಪುರಾಣದಲ್ಲಿ ಬರುತ್ತದೆ.[೩೫]

ಮೊದಲು ಮಹದೇವರಾಯ ಜನಿಸಿದ. ಈ ಮೊದಲು ಪಾರಿವಾಳವನ್ನು ಭೂಶೋಧಕ್ಕೆಂದು ಕಳಿಸಿದಾಗ ಅದು ಸುತ್ತಿ ಬಂದು ಹೊಲತಿಯ ಸಂಗತಿ ತಿಳಿಸಿ ಮಾದೇವರಾಯನ ಆದೇಶದಂತೆ ಗೂಡು ಕಟ್ಟಿ ಮೊಟ್ಟೆ ಇಟ್ಟಿತ್ತು. ಆ ಮೊಟ್ಟೆ ಬಿದ್ದು ಒಡೆದು ಹೋಗಿ ಮೊಟ್ಟೆಯ ಮೇಲಿನ ಓಡು ಬಾನಾಗಿ, ಬಿಳಿಯು ನೀರಾಗಿ, ನಡುವಿನ ಕೆಂಗರ್ಕಿ ಭೂಮಿಯಾಯಿತು. ಭೂಮಿ ಆಗ ಗಟ್ಟಿಯಾಗಿರಲಿಲ್ಲ, ಹಸುಮಕ್ಕಳ ನೆತ್ತಿಯಂತೆ ಮೆತ್ತಗಿತ್ತಂತೆ.

"ಹಶೀಮಕ್ಕೆ ನೆತ್ತಿಯೇ ಅಳಿದಂಗೇ ಅಳದಾವಲೋ ಈ ವಾಲೇ ಭೂಮಿ ಈ ಭೂಮಿ ಯಾಕಾಗೇ ಬಲೆನೆಲೋ"[೩೬]

ಎಂದು ಚಿಂತಿಸಿ ಬಸವೇಶನನ್ನು ಲೋಕ ಸುತ್ತಿಬರಲು ಕಳಿಸಲು ಭೂಮಿ ಗಟ್ಟಿಯಾಗದಿರಲು ಹೊಲತಿಯ ತಪಸ್ಸು ಕಾರಣವೆಂದು ಹೇಳಲು ಅವಳನ್ನು ಕೊಚ್ಚಿಕೊಂಡು ಒಂದೊಂದು ಭಾಗದಿಂದ ಒಂದೊಂದು ಜಾತಿಯನ್ನು ಪಡೆಯುತ್ತಾನೆ. ಹಾಲಕ್ಕಿ ಒಕ್ಕಲಿಗರು ಈಗ ವೈಷ್ಣವ ಪಂಥದವರಾದರೂ ಅವರ ಮೂಲ ಶಿವಸಂಬಂಧಿಯಾಗಿದೆ. ಅಂದರೆ ಮೂಲತಃ ಇವರು ಶೈವಾರಾಧಕರು. ಬಸವ ಇವರು ಬೇಸಾಯಕ್ಕೆ ಬಳಸುವ ಪ್ರಾಣಿ. ಹಾಗಾಗಿ ಈ ಮೂಲದಿಂದ ಸೃಷ್ಟಿಪುರಾಣ ಇವರಲ್ಲಿ ರಚನೆಯಾಗಿದೆ. ಹಾಗೆಯೇ ಮ್ಯಾಸಬೇಡರಲ್ಲಿಯೂ ಭೂಮಿ ಹುಟ್ಟುವುದಕ್ಕಿಂತ ಮೊದಲು ಪಂಪಾದ್ರಿಯ ಬಸವ ನಂತರ ಇದಕ್ಕೆ ಜೊತೆಯಾದದ್ದು ಬಲ್ಲಾವು. ಈ ಬಸವ ಭೂಮಿಯ ಮೇಲೆ ಕಾಲಿಡುವ ಮೊದಲು ಭೂಮಿ ಗಿರಗಿರನೆ ತಿರುಗುತ್ತಿತ್ತು. ಬಸವ ತನ್ನ ಪಾದವನ್ನು ಭೂಮಿಯ ಮೇಲೆ ಇಟ್ಟ ಕ್ಷಣವೇ ಗಟ್ಟಿಯಾಗಿ ಸ್ಥಿರತೆಯನ್ನು ಪಡೆಯಿತು. ಇಲ್ಲಿ ಭೂಮಿ ಹೇಗೆ ಹುಟ್ಟಿತು – ದೇವರಿಂದಲೇ? ಎಂಬ ದೈವ ಮೂಲ ವಿವರಣೆ ಇಲ್ಲ. ಅದು ತಾನಾಗಿಯೇ ಹುಟ್ಟಿತಷ್ಟೇ. ಇದನ್ನೇ ದೇವೀಪ್ರಸಾದ ಚಟ್ಟೋಪಾಧ್ಯಾಯರು – ಭೌತವಾದ ಎಂದು

---

[೩೪] ಕೃತಿ, ಪುರಾಣ, ಓ.ಎಲ್. ನಾಗಭೂಷಣಸ್ವಾಮಿ, ಪ್ರ–ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ..

[೩೫] ಕೃತಿ–ವಿಸ್ಮೃತಿ ಸಂಸ್ಕೃತಿ, ಲೇ. ಡಾ. ಹಿ.ಚಿ. ಬೋರಲಿಂಗಯ್ಯ, ಪು.೧೩೦.

[೩೬] ಡಾ. ಹಿ.ಚಿ.ಬೋರಲಿಂಗಯ್ಯ, ವಿಸ್ಮೃತಿ ಸಂಸ್ಕೃತಿ, ಪು.೧೩೦,೧೩೧, ೨೦೦೧, ಸಿವಿಜಿ ಪಬ್ಲಿಕೇಷನ್ಸ್.

ಕರೆದು 'ಸ್ವಭಾವವಾದ' ಎಂದು ಕರೆಯುತ್ತಾರೆ.[೩೭] ವಿಶ್ವದ ವಿಕಾಸ ಆಯಾವಸ್ತುಗಳ ಸ್ವಭಾವ ಧರ್ಮದಿಂದಲೇ ಆಗಿರುತ್ತದೆ. ಹೊರಗಿನ ಶಕ್ತಿಯ ಹಸ್ತಕ್ಷೇಪದ ಪ್ರಶ್ನೆಯೇ ಇಲ್ಲ. ಬಸವನ ಪ್ರಸ್ತಾಪ ಇಲ್ಲಿ ಬರುವುದರ ಮೂಲಕ ಇವರು ಶೈವಾರಾಧಕರು ಹೌದೆಂಬುದು ಪ್ರಸ್ತಾಪಿತವಾಗುತ್ತದೆ. ಹೀಗೆ ಹಾಲಕ್ಕಿ ಒಕ್ಕಲಿಗರು ಮತ್ತು ಮ್ಯಾಸಬೇಡರ ಸೃಷ್ಟಿ ಪುರಾಣಗಳಲ್ಲಿ ಕೃಷಿ ಮತ್ತು ಪಶುಪಾಲಕತನ ಈ ಎರಡರಲ್ಲಿ ಹಸು-ನಂದಿ ಬಳಕೆಯಾಗುವುದು ಸಹಜವಾಗಿದ್ದು ಈ ಮೂಲಕ ಪೂಜ್ಯ ಸ್ಥಾನವನ್ನು ಪಡೆದಿವೆ.

ಹೀಗೆ ಇವರ ಸೃಷ್ಟಿ ಪುರಾಣಗಳಲ್ಲಿ ಅತಿಶಯೋಕ್ತಿ ಇದ್ದರೂ ಅವರ ಅಂದಿನ ಸಂದರ್ಭದ ಆಲೋಚನೆಗೆ ಅಷ್ಟೇ ಸಹಜವಾದುದಾಗಿದೆ. ಹೀಗೆ ದೇವಲೋಕದಲ್ಲಿ ಜನಿಸಿದ ಪಂಪಾದ್ರಿ ಬಸವ ಮತ್ತು ಬಲ್ಲಾವು ಎಂಬ ಆಕಳು ಜೊತೆಯಾಗಿ ಭೂಮಿಗೆ ಬಂದವು. ಎರಡೂ ತಿರುಗಾಡುತ್ತಾ ಕಾಲ ಕಳೆಯುತ್ತಿವೆ. ಒಮ್ಮೆ ದೇವಲೋಕದಿಂದ ಮುನಿಗಳು ಈ ಭೂಲೋಕಕ್ಕೆ ಬರುತ್ತಾರೆ. ಬಂದು ಅರಣ್ಯದಲ್ಲಿ ತಮ್ಮ ಸ್ನಾನ, ಪೂಜೆ ನಿರ್ವಹಿಸಲು ಒಂದು ನೀರಿನ ನೆಲೆಯ ಬಳಿಗೆ ಬರುತ್ತಾರೆ. ಸರೋವರದ ಬಳಿ ಬಂದು ಅಲ್ಲಿ ಇಳಿದು ಸ್ನಾನ ಮುಗಿಸಿ ಶಿವಪೂಜೆ ಮಾಡುತ್ತಿರುವಾಗ ವಿಭೂತಿ ಧರಿಸಿದ ಮುನಿಗಳು ಮರೆತು ವಿಭೂತಿ ಉಂಡೆಯನ್ನು ಅಲ್ಲಿಯೇ ಬಿಡುತ್ತಾರೆ. ಮತ್ತೊಂದು ಮೂಲದ ಪ್ರಕಾರ ಬಂದವರು ಶಿವನ ಗಣಂಗಳಲ್ಲ. ಬದಲಾಗಿ ಸ್ವತಃ ಬ್ರಹ್ಮ, ವಿಷ್ಣು, ಮಹೇಶ್ವರರೇ. ಬಹುಶಃ ಹೀಗೆ ಹೇಳುವ ಉದ್ದೇಶದ ಹಿಂದೆ ತಮ್ಮ ಸೃಷ್ಟಿ ಪುರಾಣ ದೈವ ಮೂಲವಾದುದು ಎಂದು ಹೇಳಿಕೊಂಡು ತನ್ಮೂಲಕ ತನ್ನ ಸುತ್ತಣ ಜಗತ್ತಿನಲ್ಲಿ ಶ್ರೇಷ್ಠತೆಯನ್ನು ಪಡೆಯುವ ಮನೋಭಾವವಿದೆ ಎನಿಸುತ್ತದೆ. ಒಟ್ಟು ಇವರು ವಿಭೂತಿಯನ್ನು ಮರೆತದ್ದು ನಿಜ. ನರಲೋಕದಲ್ಲಿ ಸುತ್ತಾಡುತ್ತಿದ್ದ ಪಂಪಾದ್ರಿ ಬಸವ ಬಾಯಾರಿಕೆಯಿಂದ ಬಳಲಿ ಅದೇ ಸರೋವರಕ್ಕೆ ನೀರು ಕುಡಿಯಲು ಬರುತ್ತದೆ. ನೀರು ಕುಡಿದು ಅಲ್ಲಿಯೇ ಇದ್ದ ವಿಭೂತಿ ಉಂಡೆಯನ್ನು ತುಳಿದು ನಿಲ್ಲುತ್ತದೆ. ವಿಭೂತಿಯ ತುಣುಕೊಂದು ಪಂಪಾದ್ರಿ ಬಸವನ ಕಾಲ ಗೊರಸಿನಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಇದ್ಯಾವುದನ್ನೂ ಅರಿಯದೆ ಅದು ಭೂಲೋಕದಲ್ಲಿ ತನ್ನ ಸುತ್ತಾಟವನ್ನು ಮುಂದುವರಿಸುತ್ತದೆ. ಗೊರಸಿನಲ್ಲಿ ಹುಣ್ಣಾಗಿ, ದೊಡ್ಡದಾಗುತ್ತಾ ಹೋಯಿತು. ಒಂಬತ್ತು ಅಮಾವಾಸ್ಯೆ ಕಳೆಯಿತು, ಜಾನಪದರ ಕಾಲಗಣನೆ ಹುಣ್ಣಿಮೆ ಅಮಾವಾಸ್ಯೆಗಳನ್ನು ಎಣಿಸುವುದರ ಮೂಲಕವಾಗಿಯೇ ಅಲ್ಲವೇ?. ನವಮಾಸ ಕಳೆಯಿತು. ಮತ್ತೆ ನೀರು ಕುಡಿಯಲೆಂದು ಅದೇ ಸರೋವರಕ್ಕೆ ಬಾಯಾರಿದ ಪಂಪಾದ್ರಿ ಬಸವ ಬಂದಿತು. ನೀರು ಕುಡಿದು ನಿಂತ ಬಸವ ಕಾಲಿನಲ್ಲಿನ ಹುಣ್ಣಿನ ಬಾಧೆಯನ್ನು ತಡೆಯಲಾರದೆ ಕಾಲನ್ನು ಒದರಿ ಗಿರಕಿ ಹೊಡೆಯಿತು. ತನ್ನ ಪಾದವನ್ನು ಹೀಗೆ ಕೊಡವಲು ಒಂದು ಗಂಡು ಶಿಶು ಕೆಳಗೆ ಬಿದ್ದಿತು. ಬಸವನ ಕಾಲಗೊರಸಿನಲ್ಲಿ ವಿಭೂತಿ ಸೇರಿ ನವಮಾಸ ಕಳೆದು ಅದು ಕಾಲನ್ನು ಒದರಿದಾಗ ಮಗು ಬೀಳುವುದು ಅಸಹಜವಾದ ಸಂಗತಿ ಎನಿಸಿದರೂ ಪಶುಪಾಲಕ ಸಮುದಾಯದವರಾದ ಈ ಜನರ ಈ ಕಲ್ಪನೆಯೇ ವಿಶಿಷ್ಟವಾದುದು. ಪಶುಪಾಲಕರಿಗೆ ಎತ್ತು ದೈವೀಕವಾದುದು ಮತ್ತು ಈ ದ್ರಾವಿಡ ಮೂಲದವರಿಗೆ ಶಿವಪೂಜೆಯಲ್ಲಿ ಬಳಸುವ ವಿಭೂತಿ ಶ್ರೇಷ್ಟವಾದುದು. ಇದು ಶೈವಾರಾಧನೆಯಲ್ಲಿ ಬಹಳ ಮುಖ್ಯವಾದ ಪಾತ್ರ ವಹಿಸುತ್ತದೆ. ಹೀಗಾಗಿ

---

[೩೭] ಗೌರೀಶ ಕಾಯ್ಕಿಣಿ, ಲೋಕಾಯತ, ಪು.೪೩.

ತಮ್ಮ ಈ ಪವಿತ್ರವಾದ ವಸ್ತುವನ್ನೇ ಜೀವ ಸೃಷ್ಟಿಯ ಮೂಲವನ್ನಾಗಿ ಬಳಸಿಕೊಳ್ಳುವ ಅವರ ಮನಸ್ಸು ಅದರ ಬಗೆಗಿರುವ ಭಕ್ತಿಭಾವವನ್ನು ಸ್ಪಷ್ಟಪಡಿಸುತ್ತದೆ. ಇದನ್ನೇ ಡಾ. ದೇವಿಪ್ರಸಾದ ಚಟ್ಟೋಪಾಧ್ಯಾಯರು ಮೃಗಮೂಲವಾದ ಎನ್ನುತ್ತಾರೆ.[೬೮] 'ಧರೆಗೆ ದೊಡ್ಡವರ ಕಥೆ'ಯಲ್ಲೂ ವಿಭೂತಿ ಬಹಳ ಮುಖ್ಯವಾಗುತ್ತದೆ. ವಿಭೂತಿ ಅವರ ವೇಷಭೂಷಣದ ಒಂದು ಅಂಗ. ಅಲ್ಲದೆ ವಿವರದ ಪ್ರಕಾರ ವಿಭೂತಿ ಉಂಡೆ ಒಡೆದು ಎರಡಾಗಿ ಒಂದು ಭೂಮಿಯಾಗಿ, ಮತ್ತೊಂದು ಆಕಾಶವಾಗಿ ಉಳಿದೆಲ್ಲಾ ಸಚರಾಚರಗಳ ಸೃಷ್ಟಿ ನಡೆಯುತ್ತದೆ. ಪಂಪಾದ್ರಿಯ ಕಾಲಿನಿಂದ ವಿಭೂತಿ ಉಂಡೆಯಲ್ಲಿ ಜನಿಸಿದ ಮಗುವನ್ನು ಬಾಳೆಯ ಎಲೆ ಹಾಸಿ ಅದರ ಮೇಲೆ ಮಲಗಿಸಿದ ಪಂಪಾದ್ರಿ ನೀನು ನರಲೋಕವನ್ನು ಆಳಿ ಬಾ ಎಂದು ಹಾರೈಸಿ ಹೊರಟಿತು.

'ಆರೆಂಬ ಅಡಿವ್ಯಾಗೆ ಬೋರೆಂಬ ಮಲೆಯಾಗೆ ಬಾಲಕನ ದನಿಯು ಆಗುತಾವೆ ॥ ಸುಕ್ಕೀ ॥'

ಸೃಷ್ಟಿ ಪುರಾಣವನ್ನು ಕಟ್ಟಿದ ಬುಡಕಟ್ಟಿನ ಮನಸ್ಸಿಗೆ ಅಲ್ಲಿಗೇ ಅವರ ಕರ್ತವ್ಯ ಮುಗಿಯಲಿಲ್ಲ. ಭೂಮಿಯ ಸೃಷ್ಟಿ, ಜೀವ ಸಂಕುಲದ ಸೃಷ್ಟಿ ನಂತರ ಆ ಜೀವವನ್ನು ಸಾಕುವುದು, ಪೋಷಿಸುವುದು? ಅದಕ್ಕೆ ಅವರು ಕಂಡು ಕೊಂಡಿರುವ ಉತ್ತರ ದೈವ ಮೂಲವಾದದ್ದು. ನರಪ್ರಾಣಿಯ ಸುಳಿವೇ ಇಲ್ಲದ ಅಡವಿಯಲ್ಲಿ ಭೋರ್ಗುಡುತ್ತಿದ್ದ ಬೆಟ್ಟಗಳ ಮಧ್ಯೆ ಅನಾಥ ಸ್ಥಿತಿಯಲ್ಲಿ ಶಿಶು ಕಂಗಾಲಾಗಿ ಅಳುತ್ತಿರಲು ಅದೇ ವೇಳೆಗೆ ಪಾರ್ವತಿ ಪರಮೇಶ್ವರ ಪ್ರಪಂಚದ ಮೇಲೆ ಸುತ್ತಾಡಿ ನೋಡಿ ಬರಲು ಹೊರಟಿದ್ದಾರೆ, ನರಲೋಕಕ್ಕೆ ಬರುತ್ತಾರೆ. ಅಡವಿಯಲ್ಲಿ ಮಗು ಅಳುತ್ತಿರುವ ಸದ್ದು ಜಗತ್ತಿನ ತಾಯಿಯಾದ ಪಾರ್ವತಿಯ ಕಿವಿಗೆ ಬೀಳುತ್ತದೆ. ಕಾಪಾಡುವ ನೋವಿಗೆ ಮಿಡಿಯುವ ಮೊದಲ ಶಕ್ತಿ ತಾಯಿಯೇ ಅಲ್ಲವೇ. ಹಾಗಾಗಿ ಮಗುವಿನ ಅಳುವಿನ ಧ್ವನಿ ಪಾರ್ವತಿಯ ಮನದ ಬಾಗಿಲನ್ನು ತಟ್ಟಿತು. ಅಂದರೆ ಮೊದಲು ಸ್ಪಂದಿಸಿದವಳೇ ಆಕೆ. ಗಂಡನಾದ ಶಿವನಿಗೆ, ತಮಗೆ ವಾಹನವಾಗಿರುವ ನಂದಿಯನ್ನು ನಿಲ್ಲಿಸು, ಮಗು ಅಳುತ್ತಿರುವ ಕಡೆ ಹೋಗಿ ಸಂತೈಸೋಣ ಎನ್ನುತ್ತಾಳೆ. 'ಇನ್ನೂರೇಳು ಕೋಟಿ ಜೀವರಾಶಿಗಳೆಲ್ಲಾ ಅನ್ನ ನೀರಿಲ್ಲದೆ ಸೊರಗಿವೆ. ಅವನ್ನು ಕಾಪಾಡಲು ನಾವು ತುರ್ತಾಗಿ ಹೋಗಬೇಕಾಗಿದೆ. ನಂದಿಯನ್ನು ನಿಲ್ಲಿಸಲಾರೆ ಎನ್ನುತ್ತಾನೆ. ನೀವು ನಂದಿಯನ್ನು ನಿಲ್ಲಿಸದಿದ್ದರೆ ನಿಮ್ಮ ಪಾದದ ಮೇಲೆ ಬಿದ್ದು ಪ್ರಾಣ ಬಿಡುತ್ತೇನೆ ಎನ್ನುತ್ತಾಳೆ ಪಾರ್ವತಿ. ದುಃಖದಿಂದ ಮಿಡಿಯುವ ಹೃದಯಕ್ಕೆ ಸಮಾಧಾನ ಸಿಗಬೇಕೆಂದರೆ ತಾನು ಆ ಮಗುವಿನ ಬಳಿ ಹೋಗಿ ಅದರ ಆರೈಕೆ ಮಾಡಿ ಲಾಲಿಸಬೇಕೆಂಬ ತಾಯ ಹೃದಯದ ಆಸೆ, ಕಳಕಳಿ ಇವಳಲ್ಲಿದೆ. 'ನಮಗಿನ್ನ ಹಿರಿಯರು, ನಮಗಿನ್ನ ಕಿರಿಯರು ಏನೆಂದಾರು. ಕರ್ತವ್ಯ ಮರೆತು ಕುಳಿತರೆ ಜನ ಏನೆಂದಾರು' ಎನ್ನುತ್ತಾನೆ ಶಿವ. ನಿನಗಿಂತ ಹಿರಿಯರು ಯಾರಿಲ್ಲ, ಕಿರಿಯರು ನಿನ್ನ ಬಗ್ಗೆ ಹಾಗೆ ಹೇಳಲು ಸಾಧ್ಯವಿಲ್ಲ. ನಂದಿವಾಹನವನ್ನು ನೀನು ನಿಲ್ಲಿಸಲೇಬೇಕೆಂದು ಒತ್ತಾಯಿಸಿದಾಗ ಪಾರ್ವತಿಯ ಈ ಒತ್ತಾಯಕ್ಕೆ ಮಣಿದ ಶಿವ ನಂದಿಗೆ ನಿಲ್ಲಲು ಆದೇಶಿಸುತ್ತಾನೆ., ಬಾಲಕನ ಬಳಿ ಇಬ್ಬರೂ ಹೋಗುತ್ತಾರೆ. ಬಾಲನ ಮೊಗವೋ ಕಂದಿ ಕುಂದಿ ಹೋಗಿದೆ. ನೋಡಿ ನೊಂದ ಪಾರ್ವತಿ ಕನಿಕರಿಸಿ ಬಾಲಕನಿಗೆ ಅಮೃತವನ್ನು ತುಂಬಿ ಜೀವ ಉಳಿಸಿ ಎಂದು ಶಿವನನ್ನೇ ಬೇಡುತ್ತಾಳೆ., ಮೊದಲು ಮಗುವಿನ ಮೈ ತೊಳೆದು ಶುಚಿ ಮಾಡಿಸಿ ತಾ,

---

[೬೮] ಡಾ. ದೇವಿಪ್ರಸಾದ ಚಟ್ಟೋಪಾಧ್ಯಾಯರು, 'ಭಾರತೀಯ ದರ್ಶನಗಳು', ಪು.೧೮.

ಶುಚಿಯಾಗದ ಮಗುವಿಗೆ ನಾನು ಹೇಗೆ ಅಮೃತ ತುಂಬಲಿ ಎಂದು ಶಿವ ಹೇಳಲು ಪಾರ್ವತಿ ಸ್ವತಃ ತಾನೇ ಮಗುವನ್ನು ಬಾಚಿ ಎತ್ತೊಯ್ದು ಬಳಿಯಲ್ಲಿದ್ದ ಸರೋವರದಲ್ಲಿ ಮೈತೊಳೆದು ತರುತ್ತಾಳೆ. ಶಿವ ಮಗುವಿನ ಐದನೆಯ ಬೆರಳಿಗೆ ಅಮೃತವನ್ನು ತುಂಬಿ ಆ ಬೆರಳನ್ನೇ ಮಗುವಿನ ಬಾಯಿಯಲ್ಲಿಡುತ್ತಾನೆ. ಬಾಳೆಯ ಎಲೆಯ ಮೇಲೆ ಮಗುವನ್ನು ಮತ್ತೆ ಮಲಗಿಸಿ, ಆಶೀರ್ವದಿಸಿ ತಮ್ಮ ಕೆಲಸ ಮುಗಿಯಿತು ಹೋಗೋಣ ಎನ್ನುತ್ತಾನೆ. ಆದರೆ ತಾಯ ಹೃದಯದ ಪಾರ್ವತಿಯ ಆತಂಕ ಅಷ್ಟು ಸುಲಭವಾಗಿ ಕಡಿಮೆಯಾಗುವುದೇ?

'ಆರೆಂಬ ಅಡಿವ್ಯಾಗೆ ಬೋರೆಂಬ ಮಲೆಯಾಗೆ ಬಾಲಕನ ಜೊತೆಗೆ ಯಾರಿಲ್ಲ ನಮ ಸ್ವಾಮಿ ಬಾಲಕನ ಬಿಟ್ಟು ಬರಲಾರೆ ॥ ಸುಕ್ಕೀ॥', ಎನ್ನುತ್ತಾಳೆ. ಶಿಶುವನ್ನು ಅನಾಥ ಸ್ಥಿತಿಯಲ್ಲಿಟ್ಟು ಹೇಗೆ ಬರಲಿ ಎಂದು ದುಃಖಿತಳಾಗಿ ಕೇಳಲು ಪರಮೇಶ್ವರ ಇದೇ ಪರಿಸರದಲ್ಲಿ ಮುಂದೆ ದಾನಸಾಲಿ ಎಂಬ ಹೆಣ್ಣು ಬರುತ್ತಾಳೆ. ಅವಳೊಂದಿಗೆ ಇವನ ವಿವಾಹ ಜರುಗಿ ಸುಖದಿಂದ ಕಾಲಕಳೆಯುತ್ತಾರೆ ಎಂದು ಧೈರ್ಯ ಹೇಳುತ್ತಾನೆ. ದೇವಲೋಕದಿಂದ ದೇವಗನ್ನಿಕೆಯರನ್ನೂ, ನಾಗಲೋಕದಿಂದ ನಾಗಗನ್ನಿಕೆಯರನ್ನೂ, ಆಮಂತ್ರಿಸಲು ಅವರೂ ಅಲ್ಲಿಗೆ ಬರುತ್ತಾರೆ. ಇವರೊಂದಿಗೆ ಸೇರಿ ಆಗ ಮಗುವಿಗೆ ಸೆಟ್ಲು ಪಟ್ಲಪ್ಪ ರಾಜ ಎಂದು ನಾಮಕರಣ ಮಾಡುತ್ತಾನೆ. ತೆಲುಗಿನ ಸೆಟ್ಲು ಪದಕ್ಕೆ ಕನ್ನಡದಲ್ಲಿ ಗಿಡ ಎಂದು ಅರ್ಥ. ಗಿಡಗಂಟೆಗಳ ರಾಜ ಎಂದು ಆ ಮಗುವಿಗೆ ನಾಮಕರಣ ಮಾಡಿದಂತಾಯಿತು. ಹೀಗೆ ಅನಾಥಶಿಶುವನ್ನು ಸ್ವತಃ ಪಾರ್ವತಿ ಪರಮೇಶ್ವರರೇ ಲಾಲಿಸಿ ನಾಮಕರಣ ಮಾಡಿ ಆ ಮೂಲಕ ಅದಕ್ಕೊಂದು ಅಸ್ತಿತ್ವ ಕೊಡುತ್ತಾರೆ. ಈತನೇ ಮುಂದೆ ಸಂಚು ಶಿಖಾನಾಯಕ ಎಂದು ಕರೆಸಿಕೊಳ್ಳುತ್ತಾನೆ. ಸಂಚರಿಗೆ ಸಿಕ್ಕು ಅವರಿಂದ ಸಂರಕ್ಷಿಸಲ್ಪಟ್ಟವ, ಸಂಚರಂತೆಯೇ ತನ್ನ ತಲೆಗೂದಲನ್ನು ಎತ್ತರವಾಗಿ ಶಿಖೆಯಂತೆ ಕಟ್ಟಿಕೊಳ್ಳುತ್ತಿದ್ದ ಕಾರಣದಿಂದಾಗಿ ಸಂಚು ಶಿಖಾನಾಯಕ, ಎಂದು ಕರೆಯಲ್ಪಟ್ಟುದಾಗಿ ಸಮುದಾಯದಲ್ಲಿ ಅಭಿಪ್ರಾಯ ಪಡುತ್ತಾರೆ. ವಾಸ್ತವವಾಗಿ ಈ ಅನಾಥ ಬಾಲಕ ಪಶುಪಾಲಕನಾದ ಮಂದರಾಜನ ಮಗಳನ್ನು ವರಿಸಿ ಪಶುಮಂದೆಗೆ ನಾಯಕ ನೆನೆಸಿಕೊಳ್ಳುತ್ತಾನೆ. ಆತನ ಮಕ್ಕಳೇ ಮುಂದೆ ಧರ್ಮ ಗದ್ದುಗೆಗೆ ಒಡೆಯರಾಗುತ್ತಾರೆ. ಹೀಗೆ ತಮ್ಮ ಮೂಲ ಶ್ರೇಷ್ಠವಾಗಿರಬೇಕು ಎಂಬ ಹಂಬಲವೇ ಅಸ್ಪಷ್ಟವಾದ ತಮ್ಮ ಮೂಲದ ಬಗ್ಗೆ ಇಂತಹ ದೈವೀಕವಾದ ಆವರಣವನ್ನು ಕಟ್ಟಿಕೊಳ್ಳುವುದು ಬುಡಕಟ್ಟಿನ ಜನರಿಗೆ ಸಹಜವಾದ ಚಿಂತನೆಯಾಗಿದೆ. ಒಟ್ಟಾರೆ ಬುಡಕಟ್ಟಿನ ಸೃಜನಶೀಲ ಮನಸ್ಸು ಸೃಷ್ಟಿಯ ಬಗೆಗೆ ಮಾಡಿದ ಕಲ್ಪನೆ, ಮಾನವ ಜೀವ ಅಲ್ಲಿ ಅಂಕುರಿಸಿದ ಬಗೆಯನ್ನು ಕಟ್ಟಿಕೊಡುವ ರೀತಿ ಇಲ್ಲಿ ವಿಶಿಷ್ಟವಾದುದಾಗಿದೆ. ತಮ್ಮ ಬದುಕಿನ ವಿಧಾನವಾದ ಪಶುಪಾಲಕತನವೇ ಈ ಸೃಷ್ಟಿಯ ಪುರಾಣದ ಕಟ್ಟುವಿಕೆಯಲ್ಲಿ ಕೆಲಸ ಮಾಡಿರುವುದು ಹೀಗೆ.

**ಸೃಷ್ಟಿ ಪುರಾಣ-೨ :**

ಒಮ್ಮೆ ಮೂರು ಮಂದಿ ತ್ರಿಮೂರ್ತಿಗಳು ಒಂದು ಕಡೆ ಸೇರಿದರು. ದೇವಲೋಕದ ವಾಸ ಬೇಸರ ತರಿಸುತ್ತಿದೆ. ಕೆಲವು ದಿನ ಭೂಲೋಕದಲ್ಲಿದ್ದು ಬರೋಣ ಎಂದು ಮಾತನಾಡಿಕೊಳ್ಳುತ್ತಾರೆ. ಭೂಲೋಕದಲ್ಲಿ ಜೀವನ ಮಾಡುವುದು ಹೇಗೆ? ಸರಿ ಸೂರ್ಯನನ್ನು ಕೇಳೋಣ. ಅವನೇ ತಾನೇ ಇಡೀ ಸೃಷ್ಟಿಯನ್ನು ಕಾಪಾಡುವವನು. ದಾರಿ ತೋರಿಸುತ್ತಾನೆ ಎಂದು ಹೋಗಿ ಕೇಳುತ್ತಾರೆ. ಆ ಸೂರ್ಯ

ಆಕಾಶದಲ್ಲಿರುವ ಚುಕ್ಕೆಗಳನ್ನೆಲ್ಲಾ ಒಂದೇ ಕಡೆ ಸೇರಿಸಿ, ಸ್ವತ್ತುಗಳನ್ನು ಕೊಡುತ್ತೇನೆ ಎನ್ನಲು, ಸರಿ ಎಂದು ಹಾಗೆಯೇ ಮಾಡುತ್ತಾರೆ. ಹಸಿಕಳ್ಳೆ ಕಡಿದು ಎರಡು ಪದಿ (ಎತ್ತುಗಳನ್ನು ಕೂಡುವ ಸೊಪ್ಪು ಕಳ್ಳೆಯಿಂದ ಮಾಡಿದ ಗೂಡು) ಕಟ್ಟುತ್ತಾರೆ. ಒಂದು ಸೂರ್ಯನ ಪದಿ, ಇನ್ನೊಂದು ಚಂದ್ರನ ಪದಿ. ಮರುದಿನ ಚುಕ್ಕೆಗಳೆಲ್ಲಾ ಮೊದಲು ಎಲ್ಲಿದ್ದವೋ ಅಲ್ಲಿಗೇ ಚೆದುರಿಸಿ ಎಂದ ಸೂರ್ಯ ಹಾಗೆಯೇ ಮಾಡಿದರು. ಇನ್ನು ನೀವು ಕಟ್ಟಿರುವ ಪದಿಯಲ್ಲಿ ಧ್ಯಾನ ಮಾಡಿ ಎಂದ, ಧ್ಯಾನ ಮಾಡಿದರು. ಧ್ಯಾನಕ್ಕೆ ಮಣಿದು ಸೂರ್ಯನ ಅನುಗ್ರಹದಿಂದ ಪಂಪಾದ್ರಿ ಬಸವ ಮತ್ತು ಬಲ್ಲಾವು ಜನಿಸುತ್ತವೆ. ಇವು ಮೊದಲು ಶ್ರೀಶೈಲದಲ್ಲಿ ಪಕ್ಷಿಗಳಾಗಿದ್ದವು ಎಲ್ಲಾ ಜೀವರಾಶಿಗಳಿಗಿಂತ ಶ್ರೇಷ್ಠವಾದವು. ಈಗ ಎರಡನ್ನು ಕಾಯುವವರು ಯಾರು ಎಂದು ವಿಷ್ಣು ಕೇಳುತ್ತಾನೆ. ಪೋಷಣೆ ಹೇಗೆ ಎನ್ನುತ್ತಾನೆ. ಈಶ್ವರ ನನಗೆ ಕಲ್ಲು, ಗುಂಡುಗಳಲ್ಲಿ ತಿರುಗಿ ಈ ದನಗಳನ್ನು ಕಾಯಲು ಸಾಧ್ಯವಿಲ್ಲ. ಬೆಳಿಗ್ಗೆ, ಸಾಯಂಕಾಲ ಹಸಿ ಎಲೆ ತಂದು ಗೂಡಿನ ಸುತ್ತ ಹಸಿ ಹೊಗೆ ಹಾಕುತ್ತೇನೆ ಎಂದ (ಪ್ರತಿದಿನ ಎತ್ತಿನ ಗೂಡಿನ ಸುತ್ತ ತಂಗಟೆ, ಕಕ್ಕೆ, ಹಾಸಿನ ಎಲೆಗಳ ಹೊಗೆ ಈಗಲೂ ಹಾಕುತ್ತಾರೆ). ಬ್ರಹ್ಮ ನನಗೂ ದನ ಕಾಯಲು ಸಾಧ್ಯವಿಲ್ಲ ಬೇಕಾದರೆ ಗೂಡಿನ ರಾಜಂಗಳದ (ಗೂಡು ಮತ್ತು ಅದರ ಹೊರಭಾಗ) ಕಸ ಬಳಿಯುತ್ತೇನೆ. ಸಗಣಿ, ಗಂಜಲ ತೆಗೆದು ಹಾಕುತ್ತೇನೆ ಎಂದ. ಕೊನೆಗೆ ಬೇರೆ ದಾರಿ ಕಾಣದೆ ವಿಷ್ಣುದೇವ ದನಗಳನ್ನು ಕಾಯುವ ಕೆಲಸ ವಹಿಸಿಕೊಂಡ, ದನ ಕಾಯುತ್ತಿದ್ದಾನೆ. ಉಳಿದವರು ಅವರವರ ಕೆಲಸ ನಿರ್ವಹಿಸುತ್ತಿದ್ದಾರೆ. ಬಲ್ಲಾವು ಗರ್ಭ ಧರಿಸುತ್ತದೆ. ಕರು ಹಾಕುವ ಸಮಯ ಬಂತು. ಒಮ್ಮೆ ವಿಷ್ಣು ಅಂದರೆ ಕೃಷ್ಣ ಪರಮಾತ್ಮ ಒಂದು ಗುಂಡಿನ ಮೇಲೆ ಕುಳಿತಿದ್ದ. ಬಿಸಿಲಲ್ಲಿ ಸುತ್ತಾಡಿ ಸಾಕಾಗಿತ್ತು. ಬೆವರು ಬಂದಿತು, ಬಲಗಡೆ ಮೈ ಉಜ್ಜಿ ಬೆವರು ಬಿಸಾಡಿದ. ಎಡಗಡೆ ಮೈ ಉಜ್ಜಿ ಆ ಬೆವರನ್ನೂ ಎಡಗಡೆ ಬಿಸಾಡಿದ. ಬೆಳಗಾಗುವುದರಲ್ಲಿ ಎರಡೂ ಕಡೆ ಎರಡು ಗುಂಡುಗಳ ಮೇಲೆ ಎರಡು ಮಕ್ಕಳು ಜನಿಸಿದ್ದರು. ದನಗಳ ಗೂಡಿನಲ್ಲಿದ್ದ ವಿಷ್ಣು ಅಂದರೆ ಕೃಷ್ಣನ ಬಳಿ ಬಂದು ಅಪ್ಪಾ, ಅಪ್ಪಾ ಎಂದು ಹಿಡಿದುಕೊಂಡರು. ಇದೆಲ್ಲಿಯ ಮಕ್ಕಳು? ಇದೇನು ಕತೆ? ಎಂದು ಕೃಷ್ಣ ಗಾಬರಿಗೊಂಡು ಸಾಧ್ಯವಿಲ್ಲ ಎನ್ನುತ್ತಾನೆ. ಆಗ ಈಶ್ವರ ಹಾಗೆ ಹೇಳಬೇಡ, ಸರಿಯಾಗಿ ಯೋಚಿಸು. ನಿನ್ನ ರೂಪು ರೇಖೆ ಅವರಿಗೂ ಇದೆಯಲ್ಲಾ ಎಂದ. ನಿನ್ನೆ ಏನು ಮಾಡಿದ್ದೆ? ಎಲ್ಲಿ ಕುಳಿತಿದ್ದೆ? ಜ್ಞಾಪಿಸಿಕೋ ಎಂದ, ಅದನ್ನೆಲ್ಲಾ ಜ್ಞಾಪಿಸಿಕೊಂಡು ಕೃಷ್ಣ ವಿವರಿಸಿದ. ಹಾಗಾದರೆ ಇವರು ನಿನ್ನ ಬೆವರಿನಿಂದ ಉದ್ಭವಿಸಿದ್ದಾರೆ. ನಿನ್ನ ಮಕ್ಕಳೇ ಎಂದ ಶಿವ. ಆ ಮಕ್ಕಳನ್ನು ಹಸು ಕಾಯಲು ನಿಯಮಿಸಿದ. ಹಸು ಕರು ಹಾಕಿತು. ಅದಕ್ಕೆ 'ಕೆಚ್ಚಲೇ' ಇಲ್ಲ. ಮೂರು ದೇವತೆಗಳು ಪ್ರಯತ್ನಿಸಿದರೂ ಕೆಚ್ಚಲು ಕಟ್ಟಲು ಸಾಧ್ಯವಾಗಲಿಲ್ಲ. ಮಕ್ಕಳು ಯೋಚಿಸಿದರು. ಒಬ್ಬನು ಕೆಚ್ಚಲು ಜಾಗವನ್ನು ಬಾಯಿಂದ ಕಚ್ಚಿ ಜಗ್ಗಿದ. ಆಗ ಹಸು 'ಅಂಬಾ' ಎಂದಿತು. ಅದುವರೆಗೆ ಅದಕ್ಕೆ ಧ್ವನಿಯೂ ಇರಲಿಲ್ಲ. ಹೀಗೆ ಕಚ್ಚಿ ಕಚ್ಚಿ ನಾಲ್ಕು ಸೀಳು ಮಾಡಿದ. ಆದರೆ ಹಾಲು ಬರಿಸಲು ಸಾಧ್ಯವಾಗಲಿಲ್ಲ. ಚಿಕ್ಕವನು ಬೇಗ ಬೇಗ ಮೊಲೆ ಕಚ್ಚಿ 'ತುಂಬು' ಮಾಡಿ ಹಾಲು ಬರುವಂತೆ ಮಾಡಿದ. ಕರು ಹಾಲು ಕುಡಿಯಿತು. ಅಂದು ಆ ಹುಡುಗರಿಗೆ ನಾಮಕರಣ ಮಾಡಿದರು ಅಂಬಾ ಎಂದು ಹೇಳಿಸಿದವ ೧.

ಅಂಬೋಜಿರಾಜ. ಕೆಚ್ಚಲಿಗೆ ತುಂಬು ಕಟ್ಟಿದವನು (೨) ತುಂಬೋಜಿರಾಜ.[೩೯] ಹೀಗೆ ಇವರಿಬ್ಬರೂ ಕೃಷ್ಣನ ಮಕ್ಕಳು. ನಂತರ ತ್ರಿಮೂರ್ತಿಗಳು ಈ ಭೂಲೋಕದ ವಾಸ ಸಾಕು. ನಮ್ಮ ಲೋಕಕ್ಕೇ ಹೋಗೋಣ ಎಂದು ನಿರ್ಧರಿಸಿ ಪಶುಗಳನ್ನು ಈ ಮಕ್ಕಳಿಗೆ ಒಪ್ಪಿಸಿ ಹೋಗುತ್ತಾರೆ. ನಂತರ ಇವರಿಬ್ಬರೂ ಪಶುಸಂಪತ್ತನ್ನು ಆಳಿಕೊಂಡು ಬರುತ್ತಾರೆ. ದನಗಳ ಹಿಂಡು ಹೆಚ್ಚುತ್ತದೆ. ಇವರಿಗೆ ಕಾಟಮರಾಜ, ಕಲ್ಲಮರಾಜ ಮಕ್ಕಳಾಗಿ ಜನಿಸುತ್ತಾರೆ. ಬೇಡಗಂಪಳ ಹೀಗೆಯೇ ಮುಂದುವರಿಯುತ್ತದೆ.

ಬುಡಕಟ್ಟಿನ ಜಾನಪದ ಮನಸ್ಸು ಮುಗ್ಧತೆಯಿಂದ ತನ್ನ ಮೂಲದ ಬಗ್ಗೆ ಕಟ್ಟಿಕೊಂಡ ಕಥೆಯಿದು. ಪಶುಸಂಪತ್ತಿನ ಸೃಷ್ಟಿ ಹೇಗೆ ಆಯಿತು, ತಮ್ಮ ಸೃಷ್ಟಿ ಹೇಗೆ? ಸಾಮಾನ್ಯವಾಗಿ ಅವರನ್ನು ಕಾಡಿದ ಪ್ರಶ್ನೆಗಳಿವು. ಆದರೆ ಈ ಕುತೂಹಲಕ್ಕೆ ಇವರು ಕೊಟ್ಟುಕೊಂಡ ಉತ್ತರವೂ ಅವರ ನೆಲೆಯಿಂದಲೇ ಮಾಡಿದುದಾಗಿದೆ. ಈಶ್ವರ ಸೊಪ್ಪು, ಎಲೆ ತಂದು ಹೊಗೆ ಹಾಕುತ್ತಾನೆ, ಬ್ರಹ್ಮ ಗೂಡನ್ನು ಗುಡಿಸಿ ಸಗಣಿ, ಗಂಜಳ ಎತ್ತುತ್ತಾನೆ, ವಿಷ್ಣು ದನ ಕಾಯುತ್ತಾನೆ. ಇವರೆಲ್ಲಾ ದೇವರಾಗಿರಬಹುದು ಆದರೆ ಮನುಷ್ಯನಿಗೆ ಮೂಲತಃ ಬದುಕನ್ನು ಕಲಿಸಿದವರು ಎಲ್ಲವೂ ಗೊತ್ತಿರುವ ಅವರು ತಾನೇ. ಹಾಗೆಯೇ ಪಕ್ಷಿಗಳು ಎತ್ತುಗಳಾಗುವ ಕಲ್ಪನೆ – ಅಂಬೋಜಿರಾಜ, ತುಂಬೋಜಿರಾಜ ಎಂಬ ಹೆಸರು ತಮ್ಮ ಪೂರ್ವಿಕರಿಗೆ ಹೇಗೆ ಬಂತು ಎಂಬ ಪ್ರಶ್ನೆಗೆ ಕೊಟ್ಟುಕೊಂಡ ಉತ್ತರ ಇವೆಲ್ಲಾ ಇಲ್ಲಿ ಗಮನ ಸೆಳೆಯುವ ಸಂಗತಿಗಳಾಗುತ್ತವೆ. ತಮ್ಮನ್ನು ದೈವ ಮೂಲದಿಂದ ಬಂದವರು. ಗೋಪಾಲಕನಾದ ಕೃಷ್ಣನೇ ತಮಗೆ ತಂದೆ. ಇದೆಲ್ಲಕ್ಕೂ ಕರ್ತನಾದವನು ಸೂರ್ಯ ಎಂದು ಭಾವಿಸುತ್ತಾ ಈ ಮೂಲಕ ತಮ್ಮ ಮೂಲಕ್ಕೊಂದು ಘನತೆಯನ್ನು ಕಟ್ಟಿಕೊಳ್ಳುವ ಆ ಮೂಲಕ ಸಂಭ್ರಮಿಸುವ ಅವರ ಮನಸ್ಸು ಅನನ್ಯವಾದುದು. ಮುಗ್ಧತೆ ಅದರ ಮೂಲಕವಾಗಿಯೇ ಹುಟ್ಟುವ ಕುತೂಹಲ. ಇದನ್ನು ತಣಿಸಿಕೊಳ್ಳಲು ಹುಟ್ಟುವ ಸೃಜನಶೀಲತೆ ಇವೆಲ್ಲಾ ಬುಡಕಟ್ಟಿನ ಜನರ ಆಲೋಚನೆಯ ಅನನ್ಯತೆಯನ್ನು ಸ್ಪಷ್ಟಪಡಿಸುತ್ತದೆ.[೪೦]

ಜಗತ್ತಿನ ಸೃಷ್ಟಿ, ಜೀವ ಸಂಕುಲದ ಸೃಷ್ಟಿಯ ಬಗ್ಗೆ ಮಾತ್ರ ಮ್ಯಾಸಬೇಡರ ಮನಸ್ಸು ಆಲೋಚಿಸಿಲ್ಲ. ತಾವು ಆರಾಧಿಸುತ್ತಿರುವ ದೇವರ ಬಗ್ಗೆಯೂ ಸಹ ದೇವರ ಸೃಷ್ಟಿ ಪುರಾಣವನ್ನು ಕಟ್ಟಿ ಹೇಳುತ್ತಾರೆ. ಸಾಮಾನ್ಯವಾಗಿ ಪಶುಪಾಲಕತನವೇ ಕಾರಣವಾಗಿ ಅರೆ ಅಲೆಮಾರಿಗಳಾಗಿದ್ದ ಇವರು ತಾವು ಹೋದ ಕಡೆಯಲ್ಲೆಲ್ಲಾ ತಮ್ಮ ಅಮೂಲ್ಯ ವಸ್ತುಗಳನ್ನು ಒಂದು ದುಂಡನೆಯ ಬಿದಿರಿನ ಪೆಟ್ಟಿಗೆಯಲ್ಲಿಟ್ಟು ಕೊಂಡೊಯ್ಯುತ್ತಿದ್ದರು. ಆ ಪೆಟ್ಟಿಗೆಯೇ ಕಾಲಾಂತರದಲ್ಲಿ ಅವರ ದೇವರನ್ನು ಸಂರಕ್ಷಿಸಿಡುವ ನೆಲೆಯೂ ಆಯಿತು. ಇಂದು ಅಹೋಬಲ ನರಸಿಂಹಸ್ವಾಮಿಯನ್ನು ಮತ್ತು ಶಿವನನ್ನು ಸಾಲಿಗ್ರಾಮ ಮತ್ತು ಲಿಂಗ

---

೩೯ ಕಾಡುಗೊಲ್ಲರ ಉತ್ತಪ್ಪನ ಪುರಾಣದಲ್ಲೀ ಅಂಬೆರಾಯ, ತುಂಬೇರಾಯನ ಪ್ರಸ್ತಾಪ ಬರುತ್ತದೆ.

೪೦ ಈ ಎರಡನೇ ಸೃಷ್ಟಿ ಪುರಾಣ ಹೇಳಿದವರು ಶ್ರೀ ಗುಡ್ಡೆಜ್ಜನವರ ಮಲ್ಲಯ್ಯ, ವಯಸ್ಸು–೬೫, ಎತ್ತಿನ ಕಿಲಾರಿ, ಮುತ್ತಿಗಾರಹಳ್ಳಿ.

ರೂಪಿಯಾಗಿ ಇವರು ಪೆಟ್ಟಿಗೆಯಲ್ಲಿಟ್ಟು ಪೂಜಿಸುತ್ತಾರೆ. ಅವೇ ಪೆಟ್ಟಿಗೆ ದೇವರುಗಳು ಓಬಳದೇವರು (ಅಹೋಬಿಲಂನ ನರಸಿಂಹ ಸ್ವಾಮಿಯನ್ನು ಮ್ಯಾಸಬೇಡರು ಈ ಹೆಸರಿನಲ್ಲಿ ಆರಾಧಿಸುತ್ತಾರೆ) ಮತ್ತು ಚಿತ್ತಪ್ಪ, ಕಾಟಪ್ಪ ಎಂಬ ಹೆಸರಿನ ದೇವರುಗಳನ್ನೂ ಇವರು ಆರಾಧಿಸುತ್ತಾರೆ. ದೇವರುಗಳ ಸೃಷ್ಟಿ ಹೇಗಾಯಿತೆಂಬುದೇ ವಿಶಿಷ್ಟವಾಗಿದೆ.

ಅರಣ್ಯದಲ್ಲಿ ನವಿಲೊಂದು ಮೂರು ಮೊಟ್ಟೆಗಳನ್ನು ಇಟ್ಟಿತ್ತಂತೆ. ಅದೇ ಸಂದರ್ಭದಲ್ಲಿ ಈಶ್ವರ ಪಾರ್ವತಿ ಆಕಾಶಮಾರ್ಗವಾಗಿ ಹೋಗುತ್ತಿರುವಾಗ ಭೂಲೋಕದಲ್ಲಿ ಇದೇ ಅರಣ್ಯ ಪ್ರದೇಶದಲ್ಲಿ ಕಾಡ್ಗಿಚ್ಚು ಹರಡಿರುತ್ತದೆ. ಬೆಂಕಿಯಲ್ಲಿ ತಾನು ತನ್ನ ಮೊಟ್ಟೆಗಳೊಂದಿಗೆ ಸುಟ್ಟು ಹೋಗುತ್ತೇನೆಂಬ ಭಯದಿಂದ ನವಿಲು ಆರ್ತತೆಯಿಂದ ಧ್ವನಿ ಮಾಡುತ್ತದೆ. ನವಿಲಿನ ಈ ಸಂಕಟದ ಧ್ವನಿಯನ್ನು ಕೇಳಿಸಿಕೊಂಡ ಪಾರ್ವತಿ ಶಿವನನ್ನು ತಡೆದು ಈ ಬೆಂಕಿಯನ್ನು ನಂದಿಸಿ ಆ ಪಕ್ಷಿಯನ್ನು ರಕ್ಷಿಸಿ ಮುಂದೆ ಹೋಗೋಣ ಎನ್ನುತ್ತಾಳೆ. ಆಕೆಯ ಒತ್ತಾಯಕ್ಕೆ ಮಣಿದ ಶಿವ ಧರೆಗಿಳಿದು ಕೋಲು ಕಟ್ಟಿಗೆಗಳಿಂದ ಬೆಂಕಿಯನ್ನು ಬಡಿದು ನಂದಿಸಲು ತೊಡಗುತ್ತಾನೆ. ಈ ಕೆಲಸ ಮಾಡುವಾಗ ಆತನ ದೇಹ ಬಸವಳಿದು ಬೆವರು ತೊಟ್ಟಿಕ್ಕುತ್ತದೆ. ಈ ಬೆವರು ನೆಲಕ್ಕೆ ಬೀಳಬಾರದೆಂದು ಪಾರ್ವತಿ ಒರೆಸುತ್ತಿರುತ್ತಾಳೆ. ಜಾರಿ ಬೀಳುವ ಬೆವರಿಗೆ ತನ್ನ ಮಡಿಲೊಡ್ಡಿ ಅದರಲ್ಲಿ ತುಂಬಿಕೊಳ್ಳುತ್ತಾಳಂತೆ. ಹೀಗಾಗಿಯೂ ಮೂರು ಹನಿ ಬೆವರು ಆಕೆಯ ಮಡಿಲಿಂದ ಜಾರಿ ನವಿಲಿನ ಮೊಟ್ಟೆಗಳ ಮೇಲೆ ಬೀಳುತ್ತವೆ. ಇದರ ಪರಿಣಾಮದಿಂದಾಗಿ ಶಿವನ ಅನುಗ್ರಹವೇ ಕಾರಣವಾಗಿ ಒಂದು ಮೊಟ್ಟೆ ನರಸಿಂಹ ಸಾಲಿಗ್ರಾಮ ಆಗುತ್ತದೆ. ಎರಡು ಮೊಟ್ಟೆಗಳು 'ಲಿಂಗ' ಸಾಲಿಗ್ರಾಮ ಆಗುತ್ತದೆ. ಇವೇ ಚಿತ್ತಪ್ಪ ಮತ್ತು ಕಾಟಪ್ಪ.[೪೧] ಇದನ್ನು ನೋಡಿದ ಪಾರ್ವತಿ ಅವುಗಳನ್ನು ರಕ್ಷಿತ ಸ್ಥಳದಲ್ಲಿಟ್ಟು ಶಿವನೊಂದಿಗೆ ಹೊರಡುತ್ತಾಳೆ. ಅವು ಮುಂದೆ ದನಗಾಹಿಗಳ ಕೈಗೆ ಸಿಗುತ್ತವೆ. ಆ ಪಶುಪಾಲಕರು ಇವನ್ನು ತಮ್ಮ ದೈವವಾಗಿಸಿಕೊಳ್ಳುತ್ತಾನೆ. ಈ ಪಶುಪಾಲಕರೇ ಮ್ಯಾಸಬೇಡರು. ಕಾಡುಗೊಲ್ಲರಲ್ಲಿಯೂ ಚಿತ್ತಪ್ಪ, ಕಾಟಪ್ಪ ಈ ಮೊಟ್ಟೆಗಳ ಮೂಲಕ ಜನಿಸಿದರು ಎಂಬ ಕಥೆ ಇದೆ.

ನವಿಲಿನ ಮೊಟ್ಟೆಗಳ ಆಕಾರದಲ್ಲಿಯೇ ಇರುವ ಸಾಲಿಗ್ರಾಮ ಶಿಲೆಗಳಿಗೆ ಅವು ದೈವೀಕರಣಗೊಂಡ ಬಗೆಗೆ ಈ ಸಮುದಾಯ ಕಟ್ಟಿಕೊಂಡ ಸೃಷ್ಟಿ ಪುರಾಣವಿದು. ವಾಸ್ತವಿಕ ಕಾರಣಗಳು ತನಗೆ ಅರಿಯಲು ಸಾಧ್ಯವಾಗದಾದಾಗ ಮುಗ್ಧ ಮನಸ್ಸೊಂದು ತನ್ನ ಸೃಜನಶೀಲ ಗುಣವನ್ನು ಬಳಸಿಕೊಂಡು ಹೀಗೆ ಊಹಿಸಿಕೊಳ್ಳುವುದು ವಿಶೇಷವಾಗಿದೆ. ಮುಗ್ಧತೆ, ವಿಸ್ಮಯ, ತನ್ನ ನೆಲೆಯಲ್ಲಿಯೇ ತಾನು ಕಂಡುಕೊಂಡ ಅರ್ಥ ಇವೆಲ್ಲವನ್ನು ಗ್ರಹಿಸುವುದರ ಮೂಲಕ ಇಂತಹ ಸಮುದಾಯಗಳ ಸೃಜನಶೀಲ ಮನಸ್ಸಿನ ಬಗ್ಗೆ ನಾವು ವಿಚಾರ ಮಾಡುವಂತೆ ಮಾಡುತ್ತವೆ.

---

[೪೧] ಡಾ. ಮೀರ ಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟು ವೀರರು, ಸಿ.ವಿ.ಜಿ. ಪಬ್ಲಿಕೇಷನ್ಸ್, ೨೦೦೫, ಈ ಕೃತಿಯಲ್ಲಿ ನವಿಲಿನ ಮೊಟ್ಟೆಗಳಿಂದ ಚಿತ್ತಪ್ಪ ಮತ್ತು ಕಾಟಪ್ಪ ಎಂಬ ವೀರರು ಜನಿಸಿದರು ಎಂಬ ವಿವರವಿದೆ.

### ೩.೪ ಸಾಂಸ್ಕೃತಿಕ ನಾಯಕಿಯರನ್ನು ಕುರಿತ ಪುರಾಣಗಳು:

### ಅ) ಅಕ್ಕರಾಯಮ್ಮ ಪುರಾಣ-೧

ಮ್ಯಾಸಬೇಡರ ಸಮುದಾಯದಾದ್ಯಂತ ನಿರ್ವಿವಾದವಾಗಿ ಒಪ್ಪಿ ಗೌರವಿಸಲ್ಪಡುತ್ತಿರುವ ಮಹಿಳೆಯೆಂದರೆ ಅಕ್ಕರಾಯಮ್ಮ. ಈಕೆಯನ್ನು ವ್ಯಕ್ತಿ ನೆಲೆಯಿಂದ 'ಶಕ್ತಿ'ಯ ಸ್ಥಾನಕ್ಕೇರಿಸಿ ಸಮುದಾಯ ಸ್ಮರಿಸುತ್ತಾ ಆರಾಧಿಸುತ್ತಾ ಬರುತ್ತಿದೆ. ಈಕೆಯನ್ನೇ ಎಲ್ಲೆಡೆಯೂ ಕಾಣುವಷ್ಟು ಮಟ್ಟಿಗೆ ಈಕೆ ಪ್ರಭಾವಿಯಾಗಿದ್ದಾಳೆ.

ಮಂದರಾಜನ ಮಗ ಅಂಬೋಜಿರಾಜ. ಈತನ ಮಗಳು ದಾನಸಾಲಿ. ಹುಟ್ಟಿದ ನಕ್ಷತ್ರ ಸರಿ ಇಲ್ಲ ಎಂದು ತಮ್ಮನಿಗೆ ದಾನ ಕೊಟ್ಟ. ಪ್ರಾಪ್ತವಯಸ್ಕಳಾದಾಗ ತನ್ನ ಸಾಕು ತಂದೆ ತೋರಿದ ವ್ಯಕ್ತಿಯನ್ನು ವಿವಾಹವಾಗಲಾರದೆ ಹಟ್ಟಿಯಿಂದ ಹೊರಬಿದ್ದು ಸೂರ್ಯನ ಸ್ಮರಣೆ ಮಾಡುತ್ತಾ ತಪಸ್ಸನ್ನಾಚರಿಸಿ ಸುಕ್ಕುಲ ಮಲ್ಲನಾಯಕನನ್ನು ಗಂಡನನ್ನಾಗಿ ಪಡೆಯುತ್ತಾಳೆ. ಬಂಜೆಯಾದ ಇವಳು ಜಂಗಮನೊಬ್ಬ ನೀಡಿದ ಕುಂಬಳಬೀಜ ನೆಟ್ಟು ಅದು ಎಲ್ಲೆಡೆ ಹರಡಿದರೂ ಕಾಯಿ ಬಿಡದೆ, ಜನರ ಕಾಲಿಗೆ ತೊಡರಾಗಿ, ಜನ ದೊರೆಗೆ ದೂರು ಸಲ್ಲಿಸಿ ಆ ಬಳ್ಳಿಯನ್ನು ಕೀಳಲೆಂದು ಆತ ಆಕೆಗೆ ಆದೇಶ ಕಳಿಸಿದಾಗ ಸಂಕಟದಿಂದ ಬಳ್ಳಿಯನ್ನು ಕೀಳ ಹೊರಡುತ್ತಾಳೆ. ಬುಡದಲ್ಲಿ ಒಂದು ಕಾಯಿ ಇರುತ್ತದೆ. ಆಶ್ಚರ್ಯದಿಂದ ಕಿತ್ತು ತಂದು ಮೊದಲ ಫಲ ಎಂದು ಜಂಗಮರಿಗೆ ದಾನ ಕೊಡಲು ಆತ ಎಷ್ಟು ಒಡೆದರೂ ಅದು ಹೋಳಾಗದಿದ್ದಾಗ ಕೇಡಿನ ಫಲ ಎಂದು ಆಕೆಗೇ ಹಿಂದಿರುಗಿಸುತ್ತಾನೆ. ಪ್ರತಿ ಆಯಗಾರರಿಗೂ ಕೊಟ್ಟು ನೋಡುತ್ತಾಳೆ. ಅದನ್ನು ಪಡೆದ ಎಲ್ಲರೂ ಒಂದಲ್ಲ ಒಂದು ರೀತಿ ಅದರಿಂದ ಪೆಟ್ಟು ತಿಂದು ಆಕೆಗೇ ಹಿಂದಿರುಗಿಸುತ್ತಾರೆ. ಸಿಟ್ಟು ಸಂಕಟದಿಂದ ಆಕೆ ಅದನ್ನು ಬೆನ್ನ ಹಿಂದೆ ಬೀಳುವಂತೆ ಎತ್ತಿ ಒಡೆಯಲು ಅದು ಹೋಳಾಗುತ್ತದೆ. ಕೆಲವು ಹೋಳುಗಳನ್ನು ಎಸೆದು, ಕೆಲವನ್ನು ಬೇಯಿಸಲು ಪಾತ್ರೆಗೆ ತುಂಬಿ, ತುಂಬನ್ನು ಬೀಸುವ ಕಲ್ಲಿನ ಮೇಲಿಟ್ಟು ನೀರಿಗೆ ಹೋಗುತ್ತಾಳೆ. ಹಿಂತಿರುಗಿ ಬರುವ ವೇಳೆಗೆ ಬೀಸುವ ಕಲ್ಲಿನ ಮೇಲಿಟ್ಟಿದ್ದ 'ತುಂಬು' ಹೆಣ್ಣು ಮಗುವಾಗಿದೆ.

'ಅಕ್ಕೀನೇ ರಾಯಮ್ಮ ಮತ್ತೆಲ್ಲಿ ಹುಟ್ಟೇದೆ, ಅಚ್ಚಗುಂಬಳದ ತನಿ ಹೂವೆ ॥ ರಾಯಮ್ಮ,ಎಪ್ಪತ್ತು ರಾಜ್ಯವುಕೆ ಹೆಸರಾದೆ', ತುಂಬು ಮೊದಲು ಅಲ್ಲಿಂದ ಹಣ್ಣು. ಹಾಗಾಗಿ ಹೆಣ್ಣು ಮಗು ದಾನಸಾಲಿಯ ಮೊದಲ ಮಗು. ಅಷ್ಟೇ ಅಲ್ಲ ಉಳಿದ ಅಲ್ಲಲ್ಲಿ ಎಸೆದ ಐದು ಚೂರುಗಳೂ ಗಂಡು ಶಿಶುಗಳಾಗಿ ಅಳುತ್ತಿದ್ದು, ಈ ಕಂದರನ್ನು ತೊಟ್ಟಿಲು ಕಟ್ಟಿ ಅದರಲ್ಲಿ ಹಾಕಿ ಈ ಹೆಣ್ಣು ಶಿಶು ತೂಗುತ್ತಿದ್ದಾಳೆ. ಈ ಗಂಡು ಶಿಶುಗಳಲ್ಲಿ ಮೊದಲನೆಯವನು ಸೂರಗೊಂಡರಾಜ.

'ಅಪ್ಪಸೂರಗೊಂಡರಾಜ ಮತ್ತೆಲ್ಲಿ ಹುಟ್ಯಾನೆ, ಅಚ್ಚಗುಂಬಳದ ತನಿಹಣ್ಣ ॥ ಸೂರಣ್ಣ, ಎಪ್ಪತ್ತು ರಾಜ್ಯವುಕೆ ಹೆಸರಾದ', ಹಟ್ಟಿಯ ಗುಡಿಸಲ ಸೂರಿನಲ್ಲಿ ಸಿಕ್ಕಿಸಿದ ಕುಂಬಳದ ಹಣ್ಣಿನ ಹೋಳಿನಲ್ಲಿ ಜನಿಸಿದವನಾದ್ದರಿಂದ ಈತ ಸೂರಗೊಂಡರಾಜ. ನಂತರ ತಿಪ್ಪೆಯಲ್ಲಿ ಬಿಸಾಡಿದ ಹೋಳಿನಿಂದ ಜನಿಸಿದವನು ತಿಪ್ಪಗೊಂಡರಾಜ.

'ಅಣ್ಣಾತಿಪ್ಪಗೊಂಡರಾಜ ಮತ್ತೆಲ್ಲಿ ಹುಟ್ಟ್ಯಾನೆ, ಅಚ್ಚ ಗುಂಬಳದ ತನಿ ಹಣ್ಣು, ಎಪ್ಪತ್ತು ರಾಜ್ಯವುಕೆ ಹೆಸರಾದ' ಬಾನಿಗೆ ಎಸೆದ ಹೋಳಿನಿಂದಾದವನು ಭಾನುಗೊಂಡರಾಜ. ತದನಂತರ ಕಳ್ಳೆಯಲ್ಲಿ (ಮುಳ್ಳುಬೇಲಿ) ಬಿಸಾಡಿದ ಹೋಳಿನಿಂದ ಕಲುಪಗೊಂಡರಾಜ, ಗೋರ್ಲು (ತೆಲುಗುಪದ) ಎಂದರೆ ಕನ್ನಡದಲ್ಲಿ ಕಲ್ಲುಗಳು ಎಂದಾಗುತ್ತವೆ. ಕಲ್ಲು ಪೊಟರೆಗೆ ಎಸೆದ ಹೋಳಿನಿಂದ ಜನಿಸಿದವನು ಗೋರ್ಲುಬಯ್ಯಣ್ಣ. ಹೀಗೆ ಇವರ ಜನನವೇ ಆಕಸ್ಮಿಕ, ನಿಗೂಢ. ಈ ಎಲ್ಲಾ ಮಕ್ಕಳನ್ನೂ ತೊಟ್ಟಿಲಿಗೆ ಹಾಕಿ ರಾಯಮ್ಮ ತೂಗುತ್ತಿದ್ದಾಳೆ. ದಾನಸಾಲಿಯ ಮಾತೃತ್ವ ಜಾಗೃತವಾಗಿ ಹಾಲೂಡಿಸಲೆಂದು ಮಕ್ಕಳ ಬಳಿ ಬರುತ್ತಾಳೆ. ಆ ವೇಳೆಗೆ ಆಕೆಯ ಗಂಡ ಸುಕ್ಕುಲ ಮಲ್ಲಿನಾಯಕ ಅಲ್ಲಿಗೆ ಬರುತ್ತಾನೆ. ತನ್ನ ತಂದೆತನವನ್ನು ಒಪ್ಪಿಕೊಳ್ಳದೆ ಆಕೆ ಮಕ್ಕಳ ಬಳಿ ಹೋಗುವುದನ್ನು ನಿರ್ಬಂಧಿಸುತ್ತಾನೆ. ಕದ್ದು ಮುಚ್ಚಿ ಆಕೆ ಹೋಗಿ ಮಕ್ಕಳಿಗೆ ಮೊಲೆಯುಣಿಸುವುದನ್ನು ಗಮನಿಸಿದ ಆತ ಸತ್ಯಭಂಗವಾಯಿತು. ಇಲ್ಲಿರುವುದೇ ಬೇಡ ಎಂದು ನಿರ್ಧರಿಸಿ ದಾನಸಾಲಿಯನ್ನು ಕರೆದುಕೊಂಡು ಆ ಎಲ್ಲಾ ಮಕ್ಕಳನ್ನು ಅಲ್ಲಿಯೇ ಬಿಟ್ಟು ಬಂಗಾರು ಭಾನುಗೋಟಿಗೆ ತೆರಳುತ್ತಾನೆ. ದಾನಸಾಲಿಯ ತಾತನಾದ ಮಂದರಾಜನ ಬಳಿಗೆ ಹೋಗಿ ಆತನ ಪಶುಸಂಪತ್ತನ್ನು ತಾನು ಪಡೆಯುತ್ತಾನೆ. ಇತ್ತ ದಾನಸಾಲಿಯ ಮಕ್ಕಳ ಪೋಷಣೆ ಅನಿವಾರ್ಯವಾಗಿ ಮಕ್ಕಳಲ್ಲಿ ಹಿರಿಯವಳಾದ ರಾಯಮ್ಮನದಾಗುತ್ತದೆ. ತಮ್ಮಂದಿರನ್ನು ತಾನೇ ಶ್ರಮದಿಂದ ಸಾಕತೊಡಗುತ್ತಾಳೆ. ತಮ್ಮಂದಿರು ಬೆಳೆದು ದೊಡ್ಡವರಾಗುತ್ತಿದ್ದಾರೆ. ಓಣಿಯಲ್ಲಿ ಗೋಲಿಗಜ್ಜುಗ ಆಡುವಾಗ ನಿಮ್ಮ ತಂದೆ ತಾಯಿ ಯಾರು? ಎಂದು ಓರಗೆಯ ಮಕ್ಕಳು ಕೇಳುವ ಪ್ರಶ್ನೆಗೆ ಉತ್ತರ ಗೊತ್ತಿಲ್ಲದೆ ಆ ಮಕ್ಕಳಿಗೆ ತಡವರಿಸುವಂತಾಗುತ್ತದೆ. ಅಳುತ್ತಾ ಬಂದು ಅಕ್ಕನಾದ ರಾಯಮ್ಮನನ್ನು ಈ ಬಗ್ಗೆ ಕೇಳುತ್ತಾರೆ. ಆಕೆಯೂ ಮೊದಲು ಸುಮ್ಮನಿದ್ದರೂ ನಂತರ ಆಕಾಶದ ಸೂರ್ಯನೇ ನಮ್ಮ ತಂದೆ. ಮಂದರಾಜನ ಮೊಮ್ಮಗಳಾದ, ಅಂಬೋಜಿರಾಜನ ಮಗಳಾದ ದಾನಸಾಲಿ ನಮ್ಮ ತಾಯಿ ಎಂದು ಹೇಳುತ್ತಾಳೆ. ನಾವು ಹೋಗಿ ತಂದೆ ತಾಯಿಯನ್ನು ಕಾಣಬೇಕು ಎಂದು ಕೇಳಲು ಅವನನ್ನು ನೋಡಬೇಕೆಂದರೆ ಅದು ಸುಲಭ ಸಾಧ್ಯವಲ್ಲ. ಮೊದಲು ಅದಕ್ಕೆ ತಕ್ಕ ಸಾಮರ್ಥ್ಯವನ್ನು ನೀವು ರೂಢಿಸಿಕೊಳ್ಳಬೇಕು. ನಾನು ಹೇಳಿದಂತೆ ನೀವು ವಿದ್ಯೆ ಕಲಿಯಬೇಕು ಎನ್ನುತ್ತಾಳೆ. ತಂದೆಯ ಮೂಲಕ ತಮ್ಮ ಅಸ್ತಿತ್ವ ಕಂಡುಕೊಳ್ಳುವ ಆಸೆಯಿಂದ ಮಕ್ಕಳು ಇದಕ್ಕೆ ಒಪ್ಪಿಕೊಳ್ಳುತ್ತಾರೆ. ರಾಯಮ್ಮ ತನ್ನ ತಮ್ಮಂದಿರಿಗಾಗಿಯೇ ಬಂಡೆಯ ಮೇಲೆ ಕಡಲೆಯನ್ನು ಬಿತ್ತಿ ಬೆಳೆಯುತ್ತಾಳೆ!.

'ಹುಟ್ಟು ಬಂಡೆಯ ಮೇಲೆ ಬಿತ್ಯಾಳೆ ರಾಯಮ್ಮ,ಬಿತ್ತಿ ಬೆಳುದಾಳೆ ಕಡಲೇಯ ॥ನಿಲ್ಲು॥,ರಾಯಮ್ಮ ಮಲ್ಲೀಗಿ ಸೂರಾಡುತಾ', ಹೀಗೆ ತಾನು ಬೆಳೆಸಿದ ಕಡಲೆಯ ಹೊಲಕ್ಕೆ ಸೋದರಮಾವನಾದ ಕರಿಬೊಮ್ಮನನ್ನು ಕಾವಲು ಕಾಯಲೋಸುಗ ನೇಮಿಸುತ್ತಾಳೆ. ರಾತ್ರಿಯ ವೇಳೆ ದೇವಲೋಕದಿಂದ ಇಳಿದ ತೇಜಿಗಳು ಅಂದರೆ ಕುದುರೆಗಳು ಕಡಲೆಯ ಹೊಲವನ್ನು ಮೇಯ್ದು ಹೋಗುತ್ತವೆ. ಹೊಲದಲ್ಲಿ ಮೇಯ್ದ ಗುರುತುಗಳು ಕಾಣಿಸಿಕೊಳ್ಳುತ್ತವೆ. ಮಾವನಿಗೆ ಬುತ್ತಿಯನ್ನು ತಂದ ರಾಯಮ್ಮ ಇದನ್ನು ಗಮನಿಸಿ ಹೊಲ ಹಾಳಾಯಿತೆಂದು ಕರಿಬೊಮ್ಮನನ್ನು ಆಕ್ಷೇಪಿಸುತ್ತಾಳೆ. ನನ್ನನ್ನು ದೂರಬೇಡ, ನನಗೆ ಮೇಟಿ ಅನ್ನವನ್ನೂ, ತಾಳೆಮರದಷ್ಟು ಎತ್ತರದ ಹೋತು ಕಡಿದ ಮಾಂಸದ ಸಾರು, ಕಲ್ಲು ಪತ್ತಿಗೆಯಲ್ಲಿ ನೀರನ್ನು ತಂದು ಕೊಡು.

ಉಕ್ಕಿನ ಚಾವಟಿಯನ್ನು ಮಾಡಿಸಿಕೊಂಡು, ನಿನಗೆ ಮೆಚ್ಚಿಕೆಯಾಗುವಂತೆ ನಿನ್ನ ಹೊಲವನ್ನು ಕಾಪಾಡುತ್ತೇನೆ ಎನ್ನುತ್ತಾನೆ. ಇದೆಲ್ಲವನ್ನು ಮರುದಿನತಂದು ಕೊಡುತ್ತಾಳೆ,

ತೃಪ್ತಿಯಾಗುವಷ್ಟು ಮಾಂಸದ ಅಡಿಗೆಯನ್ನು ಊಟ ಮಾಡಿ ನಿದ್ರೆ ಬರದಿರಲೆಂದು ಬೆರಳಿಗೆ ಗಾಯ ಮಾಡಿಕೊಂಡು ಅದಕ್ಕೆ ನಿಂಬೆಹಣ್ಣು ಸಿಗಿಸಿಕೊಂಡು ರಾತ್ರಿಯೆಲ್ಲಾ ಹೊಲ ಕಾಯುತ್ತಾ ಕುಳಿತುಕೊಳ್ಳುತ್ತಾನೆ. ಕಲ್ಲು ಕರಗುವ ವೇಳೆ ಅಂದರೆ ಸರಿರಾತ್ರಿಯಲ್ಲಿ ದೇವಲೋಕದಿಂದ ನರಲೋಕಕ್ಕೆ ಇಳಿದ ತೇಜಿಗಳು ಕಡಲೆಯ ಹೊಲವನ್ನು ಮೇಯ ತೊಡಗುತ್ತವೆ. ಈ ದೃಶ್ಯ ಕಂಡ ಕರಿಬೊಮ್ಮ ಕೂಡಲೆ ಉಕ್ಕಿನ ಚಾವಟಿಯನ್ನು ಬೀಸಲು ಅದು ಹೋಗಿ ಕುದುರೆಗೆ ತಗಲುತ್ತದೆ. ಕುದುರೆಗಳು ಇವನಿಂದ ತಪ್ಪಿಸಿಕೊಂಡು ಮರಳಿ ದೇವಲೋಕದ ಕಡೆ ಓಡುತ್ತವೆ. ಉದುರಿದ ಪಿಂಡಗಳೇ ಮರಿಗಳಾಗುತ್ತವೆ. ತನ್ನ ತೆಕ್ಕೆಯಲ್ಲಿ ಕವುಚಿ ಹಿಡಿದ ಕರಿಬೊಮ್ಮ ಮಡಿಲಿಗೆ ಕಟ್ಟಿಕೊಂಡು ಬಂದು ಹೊಲದಲ್ಲಿಯೇ ಒಂದು ಸುರಕ್ಷಿತ ತಾಣದಲ್ಲಿರಿಸಿ ಜಲ್ಲೆಯನ್ನು (ಬುಟ್ಟಿ) ಬೋರಲು ಹಾಕುತ್ತಾನೆ. ಆ ಬುಟ್ಟಿ ಜರುಗದಿರಲೆಂದು ಮೇಲೊಂದು ಕಲ್ಲನ್ನು ಇಡುತ್ತಾನೆ. ಮರುದಿನ ಬುತ್ತಿ ತಂದ ರಾಯಮ್ಮನಿಗೆ ಜಲ್ಲೆಯನ್ನು ಎತ್ತಿ ನೋಡು, ನಿನಗೊಂದು ಅಚ್ಚರಿ ಕಾದಿದೆ ಎಂದ. ನೋಡುತ್ತಾಳೆ ಕುದುರೆಯ ಮರಿಗಳು! ಸಂತೋಷಗೊಂಡು ಅವನ್ನು ಅವುಚಿ ಹಿಡಿದು ಕೊಂಡೊಯ್ದು ತನ್ನರಮನೆಯ ನೆಲಮಾಳಿಗೆಯಲ್ಲಿಟ್ಟು ಸಾಕುತ್ತಾಳೆ. ಕಡಲೆಯ, ಅವರೆ, ತೊಗರಿ, ಹೆಸರು, ಅಲಸಂದೆಯ ಕಾಳನ್ನು ಬೇಯಿಸಿ ಗುಗ್ಗರಿ ಮಾಡಿ ಒಪ್ಪವಾಗಿ ಅವುಗಳಿಗೆ ತಿನ್ನಿಸುತ್ತಾ ಪೋಷಿಸುತ್ತಾಳೆ. ಒಂದೆಡೆ ತಂದೆ ತಾಯಿಯಿಂದ ತಿರಸ್ಕೃತರಾದ ತಮ್ಮಂದಿರನ್ನು ಸಾಕುವ ಹೊಣೆಗಾರಿಕೆ ಹೊತ್ತು ನಿಭಾಯಿಸುತ್ತಿದ್ದಾಳೆ. ಬೆಳೆದು ದೊಡ್ಡವರಾಗುತ್ತಿದ್ದ ತಮ್ಮಂದಿರು ತಮಗಾಗುತ್ತಿದ್ದ ಸಾಮಾಜಿಕ ಅಪಮಾನದಿಂದ ಈ ವೇಳೆಗಾಗಲೇ ತತ್ತರಿಸಿದ್ದಾರೆ. ಅಕ್ಕನಿಂದ ತಮ್ಮ ತಂದೆಯ ಬಗ್ಗೆ ತಿಳಿದ ಇವರು ಆತನ ವಿರುದ್ಧ ಹೋರಾಟ ಮಾಡಿಯಾದರೂ ಆತನನ್ನು ತಮ್ಮ ತಂದೆಯೆಂದು ಒಪ್ಪಿಸಿಕೊಂಡು ಆತನಲ್ಲಿರುವ ಆಸ್ತಿಯ ಮೇಲೆ ತಮ್ಮ ಹಕ್ಕುಗಾರಿಕೆಯನ್ನು ಸ್ಥಾಪಿಸಬೇಕೆಂಬ ಛಲ ಹೊಂದಿದ್ದಾರೆ, ಆದರೆ ಆತುರಪಡುತ್ತಿದ್ದಾರೆ. ರಾಯಮ್ಮ ಹೂವಿನ ಬಾಣಗಳನ್ನು ಹಾಲಿನಲ್ಲೂ, ಮುತ್ತಿನ ಬಾಣಗಳನ್ನು ಮೊಸರಿನಲ್ಲೂ, ಹೊನ್ನಿನ ಬಾಣಗಳನ್ನು ಮಜ್ಜಿಗೆಯಲ್ಲೂ, ಆಕಾಶದ ಬಾಣಗಳನ್ನು ಬೆಣ್ಣೆಯಲ್ಲೂ, ವಜ್ರದ ಬಾಣಗಳನ್ನು ತುಪ್ಪದಲ್ಲೂ ತೊಳೆದಿಡುತ್ತಿದ್ದಳು. ಬಾಣಗಳನ್ನು ಆರಿಸಿ ಆರಿಸಿ ತೊಳೆದು ಒಪ್ಪವಾಗಿ ಜೋಡಿಸುತ್ತಿದ್ದಳು. ಕಾಯಲು ವ್ಯವಧಾನವಿಲ್ಲದೆ ಈ ಐದು ಮಂದಿ ತಮ್ಮಂದಿರು ತಂದೆಯ ಬಳಿ ಹೋಗಲುದ್ಯುಕ್ತರಾಗುತ್ತಾರೆ. ಆಗ ಎಲ್ಲಿಗೆ ನಿಮ್ಮ ಪಯಣ ಎಂದು ರಾಯಮ್ಮ ಕೇಳುತ್ತಾಳೆ. ತಮಗೂ ಮತ್ತು ತಮ್ಮ ತಂದೆಯಾದ 'ಸುಕ್ಕರ'ನಿಗೂ ಅಂದರೆ ಹಲವು ಚುಕ್ಕೆ ಸೇರಿ ಒಂದು ದೊಡ್ಡ ಚುಕ್ಕೆಯಾದ ಸೂರ್ಯನಿಗೂ ಕೈಜಗಳವಾಗುವ ಹೊತ್ತು ಬಂದಿದೆ. ಇದು ಈಗ ಅನಿವಾರ್ಯವೂ ಹೌದು ಎನ್ನುತ್ತಾರೆ. ಈ ಮಾತುಗಳನ್ನು ಕೇಳಿಸಿಕೊಂಡ ಮುಕ್ಕಣ್ಣ ಶಿವ, ರೇವಣ್ಣ ಶಿವ ನಸುನಕ್ಕನಂತೆ. ತಂದೆ ಮಕ್ಕಳಿಗೆ ಜಗಳ ಹಚ್ಚಿ ಮೋಜು ನೋಡುವವನಲ್ಲವೆ ಶಿವ. ನಿಮ್ಮ ಉದ್ದೇಶ ಒಳ್ಳೆಯದು ಆದರೆ ಪೂರ್ವ ಸಿದ್ಧತೆಯಿಲ್ಲದೆ ಹೋಗುವುದು ಸರಿಯಲ್ಲ ಎಂದು ತಡೆದು ಶಸ್ತ್ರವಿದ್ಯೆಯನ್ನು ಕಲಿಸಿ ಅವರನ್ನು ಹೋರಾಟಕ್ಕೆ ಅಣಿ

ಮಾಡುತ್ತಾಳೆ. ಈ ಹೋರಾಟ ಅನಿವಾರ್ಯ ಮತ್ತು ಅವಶ್ಯಕವಾದುದು ಎಂದು ರಾಯಮ್ಮನೂ ನಿರ್ಧರಿಸಿದ್ದಳು ಆಕೆ ತರಬೇತಿಗೊಳಿಸುವ ವಿಧಾನವೂ ಅದ್ಭುತವಾಗಿದೆ.

'ಬಾಗುತ ಕಡುದಾಳೆ ಕೆನೆ ಮೊಸರ ರಾಯಮ್ಮ,ಕಡುಜಾಣೆ ಬೆಣ್ಣೆ ತೆಗುದಾಳೆ ॥ ನಿಲ್ಲು ನಿಲ್ಲೆನುತಾ, ರಾಯಮ್ಮ ಮಲ್ಲೀಗಿ ಸೂರಾಡುತಾ', ಮಜ್ಜಿಗೆ ಮಾಡಿ ಬೆಣ್ಣೆ ತೆಗೆದು ಅದನ್ನು ಮುದ್ದೆ ಅಂದರೆ ಉಂಡೆಯನ್ನಾಗಿ ಮಾಡಿ ತಮ್ಮಗಳೈವರನ್ನು ಸಾಲಾಗಿ ನಿಲ್ಲಿಸಿ ಅವರೆಡೆಗೆ ಎಸೆಯುತ್ತಾಳೆ. ಅವರು ಅದನ್ನು ಕತ್ತಿಯಿಂದ ಚೂರು ಚೂರಾಗಿಸಿ ಮತ್ತೆ ಅದನ್ನು ಉಂಡೆ ಮಾಡಿ ಅಕ್ಕನ ಕಡೆಗೆ ಎಸೆಯಬೇಕು. ಹೀಗೆ ತರಬೇತಿ ನೀಡುತ್ತಾಳೆ.

'ಅರಿಷಿಣ ಅರೆದಾಳೆ ಅರಿಷಿಣದುಂಡೆ ಕಟ್ಯಾಳೆ,ತಮ್ಮಗಳೈವರಿಗೆ ಎಸೆದಾಳೆ ॥ ನಿಲ್ಲು, ರಾಯಮ್ಮಾ ಮಲ್ಲೀಗಿ ಸೂರಾಡುತಾ', ಹೀಗೆ ಅರಿಷಿಣ ಅರೆದು ಉಂಡೆ ಮಾಡಿ ತಮ್ಮಂದಿರ ಕಡೆಗೆ ಎಸೆಯಲು ಅವಳ ನಿರ್ದೇಶನದಂತೆ ಅದನ್ನು ಚೂರು ಚೂರಾಗಿಸಿ ಮತ್ತೆ ಕತ್ತಿಯಿಂದಲೇ ಕಲಿಸಿ ಉಂಡೆ ಮಾಡಿ ಅಕ್ಕನೆಡೆಗೆ ಎಸೆಯುತ್ತಾರೆ. ತಮ್ಮಂದಿರಿಗೆ ಶಸ್ತ್ರವಿದ್ಯೆ ಸಿದ್ಧಿಸಿದೆ ಎಂಬುದನ್ನು ಸ್ವತಃ ಖಚಿತ ಮಾಡಿಕೊಂಡ ಮೇಲೆ ರಾಯಮ್ಮ ನೆಲಮಾಳಿಗೆಯ ಬಾಗಿಲು ತೆಗೆದು ತಾನು ಸಾಕಿದ್ದ ಕುದುರೆಗಳನ್ನು ತಮ್ಮಂದಿರಿಗೆ ಒಂದೊಂದರಂತೆ ಕೊಡುತ್ತಾಳೆ. ನಂತರ ಬಾಣಗಳನ್ನು ಕೊಡುತ್ತಾಳೆ.

೧. ಬೂದಿ ಮುಚ್ಚಿದ ಕೆಂಡ ಭೂಲೋಕಕುದ್ದಂಡ,ಸೂರಿದನ ಮಗನೆ ರಣಸೂರ ॥,ಸೂರಿದನ ಮಗನೆ ರಣಸೂರ ರಾಜಯ್ಯ,ದೇವಲೋಕದ ಬಾಣ ಇವಕ್ಕೊಳ್ಳೊ ॥

೨. ಕೆನ್ನೀರ ಹಚ್ಚೆಡ ಕೆಂಡಾದ ಕುಲಾಯಿ,ಚಂದಿರನ ಮಗನೆ ರಣಸೂರ,ಚೆಂದಿರನ ಮಗನೆ ರಣಸೂರ ಬೈಯಣ್ಣ,ಚೆಂದಿರನ ಬಾಣ ಇವಕೊಳ್ಳೊ ॥

ಸೂರ್ಯಚಂದ್ರರಿಗೆ ಇಲ್ಲಿ ಜನಪದ ಮಹಿಳೆಯರು ಕೊಡುವ ರೂಪಕಗಳು ಗಮನ ಸೆಳೆಯುತ್ತವೆ. ಹೀಗೆ ಸೂರ್ಯ, ಚಂದ್ರ ಲೋಕದ ಬಾಣಗಳನ್ನು ಕೊಡುತ್ತಾಳೆ.

'ಗಕ್ಕನೆ ತಮ್ಮನಿಗೆ ಒದಿಗ್ಯಾಳೆ ರಾಯಮ್ಮ,ಕಾರ ಬಲ್ಲಾಳನ ಕೊಡುತಾಳೆ ॥,ಬ್ಯಾಗಾನೆ ತಮ್ಮನಿಗೆ ಒದಿಗ್ಯಾಳೆ ರಾಯಮ್ಮ, ರಕ್ಕಸಿ ಬಾಣಾನ್ನ ಕೊಡುತಾಳೆ ॥ ಹೀಗೆ ರಕ್ಕಸಿ ಬಾಣ, ಖಾರಬಿಲ್ಲು ಮುಂತಾದ ಶಸ್ತ್ರಗಳನ್ನು ರಾಯಮ್ಮ ತಮ್ಮಂದಿರಿಗೆ ಒಪ್ಪವಾಗಿ ಕೊಡುತ್ತಾಳೆ. ಅಕ್ಕನಿಂದ ಬಾಣಗಳನ್ನು ಪಡೆದ ತಮ್ಮಂದಿರು ಕುದುರೆಗಳಿಗೆ ಜೀನು ಬಿಗಿದು ಪ್ರಯಾಣಕ್ಕೆ ಅಣಿಯಾಗುತ್ತಾರೆ.

'ನಂದಿಗೀಶ್ವರನಂತೆ ಮೈದೋಳು ಬಿಗುದಾರೆ,ದೊರೆಯ ರಾಜಯ್ಯನ ಕುದುರೇಗೆ ॥,ಪರಮೇಶ್ವರ ಬಿಗಿದಂತೆ ಮೈದೋಳು ಬಿಗುದಾರೆ, ದೊರೆಯ ಸೂರಣ್ಣನ ಕುದುರೇಗೆ ॥ ಹೀಗೆ ಹೊರಟು ಸಿದ್ಧರಾಗಿ ಅಕ್ಕನ ಹಾರೈಕೆ, ಆಶೀರ್ವಾದ ಬಯಸಿ ನಮಸ್ಕರಿಸುತ್ತಾರೆ.

'ಮುಕ್ಕಣ್ಣನ ಮಗಳೆ ಅಕ್ಕನೇ ರಾಯಮ್ಮ, ಗೊಕ್ಕುನ ಒಂದರಿಕೆ ಕೊಡುಬಾರೆ ॥, ಗೊಕ್ಕುನ ಒಂದರಿಕೆ, ಕೊಡುಬಾರೆಂದು ರಾಜಯ್ಯ, ಅಕ್ಕನ ಸಿರಿಪಾದಾಕೆ ಎರಿಗ್ಯಾನೆ ॥ ಹೀಗೆ ನಮಸ್ಕರಿಸಿದ ತಮ್ಮಂದಿರನ್ನು ಹರಸಿ ಆಕೆ ಆರತಿ ಬೆಳಗಿ ಬೀಳ್ಕೊಳ್ಳಲು ಕುದುರೆಗಳನ್ನು ಏರಿದ ಅವರು ದೇವಲೋಕದ ಕಡೆ ತಂದೆಯನ್ನು ನೋಡಲೆಂದು ಹೊರಡುತ್ತಾರೆ. ರಭಸದಿಂದ ಓಡಿದ ಕುದುರೆಗಳು ಭಾನಾಗೋಟೆಯನ್ನು ಹೋಗಿ ಸೇರುತ್ತವೆ.

'ರಾಯಾಭಾನ ಗೋಟೆ ಏರ್ಯಾವೆ ತೇಜಿಗಳು, ಬಾಲಮ್ಮ ಬಿದ್ದ ನಡುವಾಕೆ ॥, ಚಿತ್ತರ ಬಾನಾಗೋಟೆ ಹತ್ತಿ ಬಂದವು ಸೇಜಿ, ಪುತ್ರಮ ಬಿದ್ದಾವು ನಡುವಾಕೆ ॥ ಓಟದ ರಭಸಕ್ಕೆ ಕುದುರೆಗಳ ಕಾಲ್ತುಳಿತಕ್ಕೆ ಬೀದಿಯಲ್ಲಿ ಆಡುವ ಮಕ್ಕಳು ಬೀಳುತ್ತಾರೆ.

ಅವರನ್ನು ಕಳುಹಿಸಿದ ರಾಯಮ್ಮನೇನು ಸುಮ್ಮನೆ ಇಲ್ಲ. ಅವರದೇ ಧ್ಯಾನ ಅವಳಿಗೆ. ಕರಿಯ ಸಿಪ್ಪೆಯ ಕಾಯಿಯನ್ನು, ಗೊನೆಯ ಬಾಳೆಯಹಣ್ಣನ್ನು ಮಡಿಲಿಗೆ ಕಟ್ಟಿಕೊಂಡ ರಾಯಮ್ಮ ಶಿವನನ್ನು ಕುರಿತು ತಪಸ್ಸಿಗೆ ನಿಂತಿದ್ದಾಳೆ. ಕುಲದೈವವಾದ ಅಹೋಬಲ ನರಸಿಂಹಸ್ವಾಮಿಗೆ ತಮ್ಮಂದಿರು ಹೋಗಿರುವ ಉದ್ದೇಶ ಈಡೇರಿ ಕಾರ್ಯಸಫಲತೆಯನ್ನು ಪಡೆದು ಬಂದದ್ದೇ ಆದರೆ ಮಜ್ಜಿಗೆ ಹುಳಿಯ ನೈವೇದ್ಯ ಮಾಡುತ್ತೇನೆ. ನಿನ್ನ ಗುಡಿಯ ಮುಂದೆ ಬೆತ್ತಲೆ ಬಸವಂತೆ ಆಡುತ್ತೇನೆ ಎಂದು ಹರಕೆ ಮಾಡಿಕೊಳ್ಳುತ್ತಾಳೆ. ಧಾಳಿಗೆಂದು ಹೋದ ತಮ್ಮಂದಿರು ತಿಂಗಳಾದರೂ ಬರಲಿಲ್ಲ. ಆತಂಕ ಹೆಚ್ಚಾಯಿತು. ಧಾಳಿಗೆಂದು ತನ್ನ ಲೋಕದ ಕಡೆ ಬರುತ್ತಿರುವ ಆಗುಂತಕರನ್ನು ಕಂಡು ಸೂರ್ಯ ಅವರಿಗೆ ಎದುರಾಗಿ ಮೋಡಗಳನ್ನು ಅಡ್ಡ ನಿಲ್ಲಿಸುತ್ತಾನಂತೆ. ಆಗ ಇಡೀ ವಾತಾವರಣವನ್ನು ಕತ್ತಲು ವ್ಯಾಪಿಸಿ ಇವರಿಗೆ ದಾರಿ ಕಾಣದಂತಾಗುತ್ತದೆ. ಅಲ್ಲದೆ ಸಕಲ ಜೀವರಾಶಿಗಳು ಸೂರ್ಯನ ಬೆಳಕಿಲ್ಲದೆ ತತ್ತರಿಸುತ್ತವೆ. ರಾಯಮ್ಮನ ಮನಸ್ಸು ಕಳವಳಕ್ಕೀಡಾಗಿ ತಲ್ಲಣಗೊಳ್ಳುತ್ತದೆ. ತಮ್ಮಂದಿರಿಗೆ ಏನಾದರೂ ಅನಾಹುತವಾಯಿತೇ ಎಂಬ ಆತಂಕದಿಂದ ತನ್ನ ಸೋದರಮಾವನಾದ ಕರಿಬೊಮ್ಮನನ್ನು ಕರೆಸಿಕೊಂಡು ಅನನುಭವಿಗಳಾದ ನನ್ನ ತಮ್ಮಂದಿರು ತೊಂದರೆಗೆ ಸಿಲುಕಿರಬಹುದು. ಹೋಗಿ ಸಹಾಯ ಮಾಡು ಎಂದು ಸೂಚಿಸಿ ಕಳುಹಿಸಿಕೊಡುತ್ತಾಳೆ.

ಕರಿಬೊಮ್ಮ ಭಾನಾಗೋಟೆಯ ದಾರಿ ಹಿಡಿಯುತ್ತಾನೆ. ಹುಡುಗರು ಏರಿದ ಕುದುರೆಗಳ ಓಟದ ರಭಸಕ್ಕೆ ಕುದುರೆಗೆ ಬಿಗಿದಿದ್ದ ತೆಂಗಿನ ಮತ್ತು ನೂಲಿನ ಪಟ್ಟಣಗಳು ಹರಿದು ಪ್ರಯಾಣಕ್ಕೆ ತಡೆಯುಂಟಾಗಿರುತ್ತದೆ. ತನ್ನ ಬೆನ್ನಿನ ಚರ್ಮವನ್ನು ತೆಗೆದ ಕರಿಬೊಮ್ಮ ಹೊಸೆದು ಹಗ್ಗದಂತೆ ಮಾಡಿ ಕುದುರೆಗೆ ಪಟ್ಟಣಿಯಾಗಿ ಕಟ್ಟುತ್ತಾನೆ. ಪ್ರಯಾಣ ಮುಂದುವರೆಸಲು ಅನುವು ಮಾಡಿಕೊಡುತ್ತಾನೆ. ಸೂರಿದ ನರಲೋಕದಿಂದ ನರಮನುಷ್ಯರು ಬಂದಿರುವರೆಂದು ಅವರು ಕೋಟೆ ಪ್ರವೇಶಿಸದಿರಲೆಂದು ಬೆಂಕಿಯ ಮಳೆಯನ್ನು ಸುರಿಸುತ್ತಾನೆ. ಹಗಲು ಹೊತ್ತಿನಲ್ಲಿಯೇ ಕತ್ತಲೆ ಕವಿಯುವಂತೆ ಮಾಡುತ್ತಾನೆ. ದಾರಿಯೇ ಮುಂದಕ್ಕೆ ಕಾಣದಂತಾಗಲು ತಮಗೆ ದಾರಿ ತೋರಿಸು ಎಂದು ಈ ಐವರು ವೀರರು ಕೇಳಲು ಕರಿಬೊಮ್ಮ ತನ್ನ ದೊಕ್ಕೆ (ಪಕ್ಕೆ)ಯನ್ನು ಕತ್ತಿಯಿಂದ ಬಗೆದು ಅಲ್ಲಿಂದ ನೆಣ ತೆಗೆದು ದೀಪ ಉರಿಸಿ ಬೆಳಕು

ಮಾಡುತ್ತಾನೆ. ದಾರಿ ಸ್ಪಷ್ಟವಾಗುತ್ತದೆ ಬೆಳಕು ತೋರಿಸುತ್ತಾ ಈತ ಮುಂದೆ ಮುಂದೆ ನಡೆಯಲು ಈತನನ್ನು ಹಿಂಬಾಲಿಸಿ ಈ ಐವರೂ ಬರುತ್ತಾರೆ.

ಹುಟ್ಟಿ ಬರುತ್ತಿದ್ದ ಸೂರ್ಯನಿಗೆ ಎದುರಾಗಿ ನಿಲ್ಲುತ್ತಾರೆ. ನಮ್ಮ ತಂದೆ ನೀನು, ನಮ್ಮನ್ನು ನಿನ್ನ ಮಕ್ಕಳೆಂದು ಒಪ್ಪಿಕೋ ಎಂದು ಅಂಗಲಾಚಿ ಬೇಡುತ್ತಾರೆ. ಉದ್ದೇಶಪೂರ್ವಕವಾಗಿಯೇ ಬಿಟ್ಟು ಹೋದವನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ.

'ಯಾರ ಮಕ್ಕಳು ನೀವು ಯಾರ ಕಂದರು ನೀವು, ಯಾರು ನಿಮ್ಮನ್ನು ಕಳುವಿದರು ॥, ನಮಗಿನ್ನ ಹಿರಿಯೋಳು ನಾವೆಲ್ಲ ಕಿರಿಯೋರು, ನಮ್ಮೈವರಿಗಿಂತ ಹಿರಿಯೋಳು ರಾಯಮ್ಮ ಕಳುವಿದಳು ॥'

'ನಿಮ್ಮ ತಂದೆ ಯಾರು ನಿಮ್ಮ ತಾಯಿಯು ಯಾರು, ನಿಮ್ಮ ತಂದೆಯ ಹೆಸರು ಹೇಳಬೇಕು ॥, ತಂದೆಯು ಯಾರಿಲ್ಲ ತಾಯಿಯೂ ಯಾರಿಲ್ಲ, ಹುಟ್ಟಿ ಬರುವ ಸೂರಿದ ನೀನೇ ನಮ ತಂದೆ ।'

ಹೀಗೆ ಸಂಭಾಷಣೆ ನಡೆಯುತ್ತದೆ. ನಾನು ನಿಮ್ಮನ್ನು ನನ್ನ ಮಕ್ಕಳೆಂದು ಒಪ್ಪಿಕೊಳ್ಳಬೇಕೆಂದರೆ ನಾನು ಹಾಕುವ ಷರತ್ತನ್ನು ಗೆಲ್ಲಬೇಕು. ಅದನ್ನು ಸಾಧಿಸಿದರೆ ನಾನು ಒಪ್ಪಿಕೊಳ್ಳುತ್ತೇನೆ ಎನ್ನುತ್ತಾನೆ. ಈತನ ಸಿಂಹಾಸನ 'ಉರಿಗದ್ದಿಗೆ' ಉರಿಯುವ ಜ್ವಾಲೆಯೇ ಆತನ ಸಿಂಹಾಸನ. ಇದನ್ನು ಏರಿದರೆ ನನ್ನ ಮಕ್ಕಳೆಂದು ನಾನು ಒಪ್ಪಿಕೊಳ್ಳುತ್ತೇನೆ ಎನ್ನಲು ನಮ್ಮನ್ನು ನಂಬದೆ ಪರೀಕ್ಷಿಸುತ್ತಿದ್ದಾನೆ ಎಂದು ಕೋಪದಿಂದ ಬೈಯಣ್ಣ ಉರಿಗದ್ದಿಗೆ ಏರಿಬಿಡುತ್ತಾನೆ. ಆಗ ತಂದೆಗೆ ತುಸು ನಂಬಿಕೆ ಬರುತ್ತದೆಯಾದರೂ ಇನ್ನೂ ಪರೀಕ್ಷಿಸಬೇಕೆಂದು ಬಯಸಿ ಅನೇಕ ಪರೀಕ್ಷೆಗಳನ್ನು ಒಡ್ಡುತ್ತಾನೆ. ಅಕ್ಕನಿಂದ ತರಬೇತಿ ಪಡೆದು ಸಮರ್ಥರಾಗಿದ್ದ ತಮ್ಮಂದಿರು ಹೆದರದೆ ಈ ಎಲ್ಲಾ ಕಷ್ಟಗಳನ್ನು ನಿಭಾಯಿಸಿ ಕೊನೆಗೆ ತಂದೆಯಿಂದ ಸಮಸ್ತ ಸಂಪತ್ತನ್ನು ಪಡೆದು ಭೂಲೋಕದ ಕಡೆ ಹೊರಡುತ್ತಾರೆ. ಅಕ್ಕನ ತರಬೇತಿ, ಆಕೆ ದೇವರನ್ನು ಬೇಡಿ ಧ್ಯಾನ ಮಾಡಿದ್ದು ಎಲ್ಲವೂ ಫಲಿಸಿ ದಾರಿ ಸುಗಮವಾಗುತ್ತದೆ. ತಮ್ಮಂದಿರ ಬರವನ್ನೇ ನಿರೀಕ್ಷಿಸುತ್ತಾ ತಪಸ್ಸಿಗೆ ನಿಂತಿದ್ದ ರಾಯಮ್ಮ ತನ್ನ ತಮ್ಮಂದಿರು ಮರಳಿಬರುವ ದೃಶ್ಯವನ್ನು ನೋಡಿ ನೂರೊಂದಾರತಿಯನ್ನು ಕೈಯಲ್ಲಿ ಹಿಡಿದು ಮೂಡಿ ಬರುವ ಸೂರ್ಯನಿಗೆ ಬೆಳಗುತ್ತಾಳೆ. ನಂತರ ಹೋರಾಟ ಮಾಡಿ ದಣಿದು ಬಂದ ತಮ್ಮಂದಿರ ಪಾದ ತೊಳೆದು ಸೂರಿದನ ಮೇಲೇ ವಿಜಯ ಸಾಧಿಸಿ ಬಂದವರೆಂದು ಅವರಿಗೂ ಆರತಿ ಬೆಳಗುತ್ತಾಳೆ.

ಸೋದರ ಮಾವನಾದ ಕರಿಬೊಮ್ಮನಿಗೆ ಗೌರವಾದರ ತೋರಿಸುತ್ತಾಳೆ. ಕುದುರೆಗಳಿಗೆ ತಾನೇ ಗುಗ್ಗರಿ ಇಟ್ಟು ಮೈನೇವರಿಸಿ ನೆಲಮಾಳಿಗೆಗೆ ಕಳುಹಿಸಿಕೊಡುತ್ತಾಳೆ. ನೀರು ಕಾಯಿಸಿ ತಮ್ಮಂದಿರಿಗೆ ಜಳಕ ಮಾಡಲು ಹೇಳುತ್ತಾಳೆ. ಜಳಕ ಮುಗಿಸಿ ಬಂದ ಅವರಿಗೆ ಮಲ್ಲಿಗೆಯ, ನಿಂಬೆಯ, ಬಾಳೆಯ, ಸೇವಂತಿಗೆಯ ಹೀಗೆ ವಿವಿಧ ಹೂಗಳಿಂದ ಕೂಡಿದ ಅರತಿ ಬೆಳಗಿ ಸಂತೋಷ ಪಡುತ್ತಾಳೆ. ತಮ್ಮಂದಿರು ತಂದೆಯಿಂದ ಪಡೆದು ಬಂದ ಎಲ್ಲಾ ಸ್ವತ್ತುಗಳನ್ನಿಟ್ಟು ಕರಿಯಸಿಪ್ಪೆಯ ಕಾಯಿ, ಗೊನೆಯ ಬಾಳೆಹಣ್ಣು, ಹಸಿ ಅಡಿಕೆ, ಹೊಂಬಾಳೆ, ಗಜನಿಂಬೆ ಇಟ್ಟು ತಮ್ಮಂದಿರೊಂದಿಗೆ ಶಿವನಿಗೆ ಪೂಜೆ ಮಾಡುತ್ತಾಳೆ. ಅಮೃತದ ಅಡಿಗೆ ಮಾಡಿ ಬಡಿಸುತ್ತಾಳೆ.

'ನಮ್ಮೈವರಿಗಿಂತ ಹಿರಿಯೋಳು ನಿನಗಿಂತ ಕಿರಿಯರು ನಾವು, ಸ್ವತ್ತುಗಳ ನೀನು ಕೊಡಬೇಕು ॥

ಎಂದು ತಮ್ಮಂದಿರು ಸಂಪತ್ತನ್ನು ಹಂಚಿಕೊಡುವ ಹೊಣೆಗಾರಿಕೆಯನ್ನು ಅವಳಿಗೇ ವಹಿಸುತ್ತಾರೆ.

'ಕಡು ಜಾಣೆ ರಾಯಮ್ಮ ಸ್ವತ್ತುಗಳ ಹಿಡುದಾಳೆ, ತಮ್ಮಗಳೈವರಿಗೆ ಕೊಟ್ಟಾಳೆ ॥

ಮತ್ತೆ ಅವರೈವರೂ ಕೂಡಿ ಈಕೆಗೆ ಪ್ರೀತಿ ಅಭಿಮಾನದಿಂದ ಮುತ್ತಿನ ಕಾಲು ಪೆಂಡೆಯವನ್ನೂ, ಒಕ್ಕಳದ ಹೊನ್ನಿನ ಗಂಟೆಯನ್ನು ಕೊಡುತ್ತಾರೆ. ದಿಕ್ಕು ದೆಸೆ ಇಲ್ಲದಂತವರಾಗಿದ್ದ ತಮ್ಮಂದಿರಿಗೆ ರಾಯಮ್ಮ ಹೀಗೆ ಅಸ್ತಿತ್ವವನ್ನು ದೊರಕಿಸಿ ಕೊಡುತ್ತಾಳೆ.

ಆಕೆಯ ಹೋರಾಟ ಸಾಧನೆಗಳು ಇಲ್ಲಿಗೇ ಮುಗಿಯುವುದಿಲ್ಲ. ಈಕೆಯ ತಮ್ಮಂದಿರಲ್ಲಿ ಒಬ್ಬರ ಮಗನೇ ಕಾಟನಾಯಕನ ಮಲ್ಲಯ್ಯ. ಬರಗಾಲದ ನಿಮಿತ್ತ ದನಕರುಗಳ ಪಾಲನೆ ಕಷ್ಟವಾಗಿ ಮೇವು ನೀರನ್ನು ಅರಸುತ್ತಾ ಈತ ತನ್ನ ಪಶುಗಂಪಳದೊಂದಿಗೆ ಶ್ರೀಶೈಲ ಪ್ರಾಂತ್ಯದಿಂದ ಹೊರಟು ಸೊಂಡೂರು ಕಿಂಡಿಯ ಮೂಲಕ ಮಧ್ಯ ಕರ್ನಾಟಕದ ಕಡೆ ಬರುತ್ತಾನೆ. ಅಗಾಧವಾದ ಈ ಪಶುಸಂಪತ್ತನ್ನು ಕಂಡ ದೊರೆ ದುರಾಸೆಯಿಂದ ತಡೆಯುತ್ತಾನೆ. ಕಂಪಳ ತಬ್ಬಿಬ್ಬಾಯಿತು. ಕಾಟನಾಯಕನ ಮಲ್ಲಯ್ಯನಿಗೂ ಆತಂಕ ಪ್ರಾರಂಭವಾಯಿತು. ಈತನ ಸೋದರತ್ತೆಯಾಗಿದ್ದ ರಾಯಮ್ಮ ಮೂಲನೆಲೆಯಲ್ಲಿಯೇ ಉಳಿದಿದ್ದಳು. ಈಕೆಗೆ ಕನಸಾಗಿ ತನ್ನವರು ಕಷ್ಟದಲ್ಲಿರುವ ಸಂಗತಿ ತಿಳಿಯುತ್ತದೆ. ಕೂಡಲೆ ಹೊರಟು ಬರುತ್ತಾಳೆ. ಮಾಯಾಂಬಿಕೆಯಂತೆ ಅರಸನ ಮಗಳಿಗೆ ದಡಾರ ಏಳಿಸಿ ಅರಸನನ್ನು ಚಿಂತೆಗೀಡು ಮಾಡುತ್ತಾಳೆ. ತಾನು ಊರ ಮುಂದೆ ಜೋಗಜ್ಜಿಯಂತೆ ಕುಳಿತು ಶಾಸ್ತ್ರ ಹೇಳುತ್ತಿರುತ್ತಾಳೆ. ರಾಜನಿಗೆ ಜನ ಸುದ್ದಿ ಮುಟ್ಟಿಸುತ್ತಾರೆ. ಆಕೆಯನ್ನು ಅರಮನೆಗೆ ಕರೆಸಿಕೊಂಡು ಮಗಳ ಭವಿಷ್ಯ ಕೇಳುತ್ತಾನೆ. ನಿನಗೆ ಒಬ್ಬಳೇ ಮಗಳು, ಶರಣರ ಪಶುಸಂಪತ್ತನ್ನು ಸೆರೆಹಿಡಿದಿದ್ದೀಯೇ. ಅದನ್ನು ಬಿಡುಗಡೆ ಮಾಡಿ ಆವರಿಗೆ ಒಪ್ಪಿಸು ಆಗ ನಿನ್ನ ಮಗಳಿಗೆ ಗುಣವಾಗುತ್ತದೆ ಎನ್ನುತ್ತಾಳೆ. ನನ್ನ ಮಗಳಿಗೆ ನಾಳೆ ಬೆಳಗಾಗುವುದರೊಳಗೆ ಗುಣವಾದರೆ ಮಾತ್ರ ಬಿಡುಗಡೆ ಮಾಡುತ್ತೇನೆ ಎನ್ನುತ್ತಾನೆ. ಊರ ಮುಂದೆ ಬೇವಿನಸೊಪ್ಪಿನ ಗುಡಿಸಲನ್ನು ಹಾಕಿಸು. ಮಣ್ಣಿನಲ್ಲಿ ಮಾರಮ್ಮನನ್ನು ಮಾಡಿ ಅಲ್ಲಿರಿಸಿ ಪೂಜಿಸಿ ಮಗಳಿಗೆ ಬೇವಿನ ಸೀರೆ ಉಡಿಸಿ ಗಂಡಾ ದೀಪ ಹೊರಿಸು ಎಂದಳು. ರಾಜ ಹಾಗೆಯೇ ಮಾಡುತ್ತಾನೆ. ದೊರೆ ಮಗಳಿಗೆ ಗುಣವಾಗುತ್ತದೆ. ಆಗ ದೊರೆ ಇವರ ಪಶುಸಂಪತ್ತನ್ನೂ, ಕಂಪಳವನ್ನೂ ಬಿಡುಗಡೆ ಮಾಡುತ್ತಾನೆ. ನಂತರ ಅಲ್ಲಿಂದ ಹೊರಟು ಅಲ್ಲಲ್ಲಿ ತಂಗುತ್ತಾ ಮೇವು ನೀರು ಅರಸುತ್ತಾ ತಮಗೆ ತೊಂದರೆಯಾಗದಂತಹ ಸ್ಥಳ ಹುಡುಕುತ್ತಾ ಇಂದಿನ ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಪ್ರಾಂತ್ಯಕ್ಕೆ ಬರುತ್ತಾರೆ. ವೇದವತಿ ನದಿಯ ಉಪನದಿಯಾದ 'ಗರಣಿಯ'' ಇಕ್ಕೆಲದಲ್ಲಿ ತಮ್ಮ ಕಂಪಳದೊಂದಿಗೆ ನೆಲೆಸುತ್ತಾರೆ. ಅಪಾರವಾಗಿದ್ದ ಇವರ ಪಶುಸಂಪತ್ತು ಎಲ್ಲರ ಗಮನ ಸೆಳೆಯುತ್ತದೆ. ನಿಡುಗಲ್ಲನ್ನು ಆಳುತ್ತಿದ್ದ ಹೊಟ್ಟಣ್ಣನಾಯಕನೆಂಬುವನು ಇವರ ಪಶುಸಂಪತ್ತನ್ನು ವಶಪಡಿಸಿಕೊಳ್ಳಬೇಕೆಂದು ಇವರ ಮೇಲೆ ಆಕ್ರಮಣ ಮಾಡುತ್ತಾನೆ. ದನಕರು ಮೇಯಲು ಗೂಡಿನಿಂದ ಹೊರಗೆ ಹೋಗದಂತೆ 'ಪಾಪ ಮುತ್ತಿರೇವು' ಎಂದು ಕರೆಯಲಾಗುವ ಒಂದು ಮಡುವಿನ ಬಳಿ ತಡೆದು ನಿಲ್ಲಿಸುತ್ತಾನೆ. ಮ್ಯಾಸರೆಲ್ಲ ಒಂದಾಗಿ ಪ್ರಯತ್ನಿಸಿದರೂ ಅವನನ್ನು ಹಿಮ್ಮೆಟ್ಟಿಸಲು ಸಾಧ್ಯವಾಗುವುದಿಲ್ಲ.

ದನಕರು ಮೇವಿಲ್ಲದೆ ತತ್ತರಿಸುತ್ತವೆ. ಕೆಲವು ಸತ್ತು ಹೋಗುತ್ತವೆ. ಆಗಲೇ ವೃದ್ಧಾಪ್ಯದಲ್ಲಿದ್ದ ರಾಯಮ್ಮನನ್ನೇ ಮತ್ತೆ ಮೊರೆ ಹೋಗುತ್ತಾರೆ. ಆಕೆಯ ಸೂಚನೆಯ ಮೇರೆಗೆ ಆಕೆ ರೂಪಿಸಿಕೊಟ್ಟ ಯೋಜನೆಯಂತೆ ಪ್ರತಿ ಧಾಳಿ ಮಾಡುತ್ತಾರೆ. ಈಕೆಯೂ ಈ ಹೋರಾಟದಲ್ಲಿ ಪಾಲ್ಗೊಳ್ಳುತ್ತಾಳೆ. ಆಗ ಹೊಟ್ಟೆಣ್ಣನಾಯಕ ಹೆದರಿ ಹಿಮ್ಮೆಟ್ಟುತ್ತಾನೆ. ಈ ಹೋರಾಟದಲ್ಲಿ ಮಡಿದವರ ಸ್ಮಾರಕವಾಗಿ ಆ ಸ್ಥಳದಲ್ಲಿ ರಣಗಂಬಗಳನ್ನು ನೆಡುತ್ತಾರೆ.

ನಂತರ ಮ್ಯಾಸಮಂಡಲದಲ್ಲಿ ಒಡಕು ಪ್ರಾರಂಭವಾಗುತ್ತದೆ. ತಮಗೆ ಸಂಪತ್ತು ಭಾಗ ಮಾಡಿಕೊಡು ಎಂದು ಆಕೆಯನ್ನೇ ಕೇಳಲು ಎಲ್ಲರಿಗೂ ತಮ್ಮ ಸಮುದಾಯದಲ್ಲಿದ್ದ ಸ್ವತ್ತುಗಳನ್ನು, ಆಯುಧಗಳನ್ನು, ಮುಖ್ಯವಾಗಿ ಪಶು ಸಂಪತ್ತನ್ನು, ದೇವರುಗಳನ್ನು ಹಂಚಿಕೊಡುತ್ತಾಳೆ ರಾಯಮ್ಮ. ಆಕೆಯೇ ತಮಗೆಲ್ಲಾ ನಾಯಕಿ, ಆದಿಶಕ್ತಿಯಂತೆ ಎಂದು ಆಕೆಯ ಹೆಸರಿನಲ್ಲೂ ಎಲ್ಲಾ ಪೆಟ್ಟಿಗೆಗಳಿಗಿಂತ ದೊಡ್ಡದು ಮಾಡಿಸಿ ಅದರಲ್ಲಿ ಆಕೆಯ ಸ್ವತ್ತುಗಳನ್ನಿರಿಸಿ ಎಪ್ಪತ್ತೇಳು ಹಟ್ಟಿಗಳಿಗೆ ಆಕೆಯೇ ತಾಯಿ, ಒಡತಿ ಎಂದು ಗೌರವಿಸುತ್ತಾರೆ. ತಮ್ಮನ್ನು ಕಾಪಾಡಿದ ದೇವತೆ ಎಂದು ಈಕೆಯನ್ನು 'ದಡ್ಡಲು ಮಾರಮ್ಮ' ಎಂದೂ ಕರೆಯುತ್ತಾರೆ.

**ಪುರಾಣ–೨**

ಮಂದರಾಜನ ಮಗ ಅಂಬೋಜರಾಜ, ಈತನ ಮಗಳು ದಾನಸಾಲಮ್ಮ. ಹುಟ್ಟಿದ ನಕ್ಷತ್ರ ಚೆನ್ನಾಗಿಲ್ಲ ಎಂದು ತಮ್ಮನಾದ ಕಂಬೋಜರಾಜನಿಗೆ ಈಕೆಯನ್ನು ದಾನ ಕೊಡುತ್ತಾನೆ. ಪ್ರಾಪ್ತವಯಸ್ಕಳಾದಾಗ ತನ್ನ ಸಾಕು ತಂದೆ ಸೂಚಿಸಿದ ವರನನ್ನು ವಿವಾಹವಾಗಲು ಇಷ್ಟಪಡದೆ ಹಟ್ಟಿಯಿಂದ ಹೊರಕ್ಕೆ ಹಾಕಲ್ಪಡುತ್ತಾಳೆ. ಆದರೂ ಸೂರ್ಯನ ಮೇಲಿನ ಮೋಹವನ್ನು ಬಿಡದೆ ಧ್ಯಾನ ಮಾಡುತ್ತಾ ಕಾಲಕಳೆಯಲು ಶಿವಪಾರ್ವತಿಯರಿಂದ ಅನುಗ್ರಹಿತಳಾಗುತ್ತಾಳೆ. ಶಿವನ, ಸೂರ್ಯನಾರಾಯಣನ ಪ್ರತಿರೂಪವಾದ ದೈವಪ್ರೇರಣೆಯಿಂದ ಜನಿಸಿದ. ಸಂಚು ಶಿಖಾ ನಾಯಕನನ್ನು ವರಿಸುತ್ತಾಳೆ. ಈ ದಾನಸಾಲಮ್ಮ ಮತ್ತು ಸಂಚು ಶಿಖಾನಾಯಕ –ಈತನಿಗೆ ಸೆಟ್ಲುಪಟ್ಲಪ್ಪ ರಾಜ, ಸುಕ್ಕುಲು ಮಲ್ಲನಾಯಕ ಎಂದೂ ಕರೆಯುತ್ತಾರೆ. ಇವರಿಗೆ ಬಹುಕಾಲ ಮಕ್ಕಳಾಗದೆ ಇದ್ದಾಗ ಒಮ್ಮೆ ನಾರದ ತೋರಿಸಿದ ಮರದ ಹಣ್ಣೊಂದನ್ನು ಈ ದಂಪತಿಗಳು ತಿನ್ನಲಾಗಿ ಇದರ ಫಲವಾಗಿ ಹೆಣ್ಣುಮಗುವೊಂದನ್ನು ಪಡೆಯುತ್ತಾರೆ. ಈಕೆಯನ್ನು ಚಂಚುಲಕ್ಷ್ಮಿ ಎಂದು ಕರೆಯುತ್ತಾರೆ. ತಂದೆ ಚೆಂಚರಿಂದ ಪೋಷಿಸಲ್ಪಟ್ಟವನಾದ್ದರಿಂದ ಈತನನ್ನು ಸಂಚು ಸಿಕಾನಾಯಕ ಎಂದು ಕರೆಯಲಾಗುತ್ತಿದ್ದು ಈತನ ಮಗಳಾದ ಕಾರಣಕ್ಕಾಗಿ ಈಕೆ ಚಂಚುಲಕ್ಷ್ಮಿ ಎಂದು ಕರೆಯಲ್ಪಟ್ಟಳು.– ತಂದೆತಾಯಿ ಈಕೆಯನ್ನು ಪ್ರೀತಿಯಿಂದ ಸಾಕುತ್ತಾರೆ. ಕಾಡಿನಲ್ಲಿ ದನಗಳ ರೊಪ್ಪದಲ್ಲಿ ಬೆಳೆಯುತ್ತಿದ್ದ ಇವಳು ಸಹಜವಾಗಿ ಬಿಲ್ಲು ಬಾಣಗಳನ್ನು ಬಳಸುವುದರ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಂಡಳು. ಅಪ್ರತಿಮ ಬೇಟೆಗಾರ್ತಿಯಾದಳು. ಪಶುಪಾಲಕರೊಂದಿಗೆ ಜೊತೆಗೂಡಿ ಕಾಡಿನಲ್ಲಿ ಸಂಚರಿಸುತ್ತಾ ಗೆಡ್ಡೆ–ಗೆಣಸು ಸಂಗ್ರಹಿಸುತ್ತಿದ್ದಳು, ಬೇಟೆಯಾಡುತ್ತಿದ್ದಳು, ಚಿಗುರೆಲೆಗಳ ಸೀರೆ ಉಟ್ಟು ಎಲೆ, ಬೇರಿನಿಂದ ಮಾಡಿದ ರವಿಕೆ ತೊಟ್ಟು, ಗುಲಗಂಜಿ ಸರವನ್ನು ಧರಿಸಿ, ಬಣ್ಣದ ಗರಿಗಳನ್ನು ಮುಡಿಯಲ್ಲಿ

ಸಿಕ್ಕಿಸಿಕೊಂಡು ಬಿಲ್ಲುಬಾಣಗಳನ್ನು ಕೈಲಿ ಹಿಡಿದು ಅರಣ್ಯದಲ್ಲಿ ಇವಳು ಸಂಚರಿಸುತ್ತಿರುವಾಗ ಉಗ್ರನರಸಿಂಹನು ಈಕೆಯ ರೂಪ ಲಾವಣ್ಯವನ್ನು ಕಂಡು ಮೋಹಿಸಿ ಆಕೆಯ ಬಳಿ ಹೋಗಲು, ಹೆದರಿ ಓಡಿದ ಅವಳು ಗವಿಯೊಂದರಲ್ಲಿ ಸೇರಿಕೊಳ್ಳುತ್ತಾಳೆ. ಆತ ನರಸಿಂಹ ಎಂದು ಅವಳಿಗೆ ತಿಳಿಯದು. ಆದರೆ ಆಕೆ ನರಸಿಂಹನ ಧ್ಯಾನ ಮಾಡುತ್ತಾ ಕಾಲ ಕಳೆಯುತ್ತಿರಲು, ತನ್ನ ನಿಜರೂಪದಲ್ಲಿ ಪ್ರತ್ಯಕ್ಷನಾದ ನರಸಿಂಹ ತನ್ನ ದಶಾವತಾರಗಳನ್ನೂ ತೋರಿಸುತ್ತಾನೆ. ಸಂತೋಷದಿಂದ ಆತನನ್ನು ಮೆಚ್ಚಿ ಆಕೆ ವರಿಸುತ್ತಾಳೆ, ದೇವಾನುದೇವತೆಗಳೆಲ್ಲಾ ಇವರಿಗೆ ಹರಸುತ್ತಾರೆ. ಇತ್ತ ಸಂಚು ಶಿಖಾನಾಯಕ ತನ್ನ ಮಗಳನ್ನು ಅಡವಿ, ಬೆಟ್ಟ, ಗುಹೆಗಳಲ್ಲಿ ಹುಡುಕುತ್ತಾನೆ. ಒಂದು ಗುಹೆಯಲ್ಲಿ ಪಗಡೆಯಾಡುತ್ತಾ ಪರಸ್ಪರ ಚಕ್ಕಂದವಾಡುತ್ತಿದ್ದ ಇವರಿಬ್ಬರನ್ನೂ ನೋಡುತ್ತಾನೆ. ಕೋಪದಿಂದ ಹಿಂತಿರುಗಿ ಬಂದು ತನ್ನ ಹೆಂಡತಿಯಾದ ದಾನಸಾಲಿಗೆ ಈ ವಿಷಯ ತಿಳಿಸುತ್ತಾನೆ. ಇಬ್ಬರೂ ಸೇರಿ ಮಂದಗಿರಿಪುರಕ್ಕೆ ಹೋಗಿ ಕಾಮಗೇತಿ ಭೂಪಾಲನಿಗೆ ಮೊರೆಯಿಡುತ್ತಾರೆ. ಆತ ತನ್ನ ಸಹಸ್ರ ದಂಡು ದಳದೊಂದಿಗೆ ಬಂದು ಗೋಕರ್ಣ ಪರ್ವತವನ್ನು ಮುತ್ತಿಗೆ ಹಾಕುತ್ತಾನೆ. ಗವಿಯೊಳಗೆ ನರಸಿಂಹ ಮತ್ತು ಚಂಚುಲಕ್ಷ್ಮಿ ಇರುತ್ತಾರೆ ತಂದೆಯಾದ ಮಲ್ಲನಾಯಕ ಚಿಪ್ಪುಗೊಡಲಿ ಹಿಡಿದು ಎಲ್ಲರಿಗಿಂತ ಮೊದಲು ಹೋಗಿ ಗವಿಯಲ್ಲಿದ್ದ ನರಸಿಂಹನನ್ನು ಕೊಲ್ಲಲು ಮುನ್ನುಗ್ಗುತ್ತಾನೆ. ಆಗ ಭಗವಂತನಾದ ಈ ನರಸಿಂಹ ಕಾಮಗೇತಿಯ ಸಮಸ್ತ ಸೈನ್ಯದ ಮೇಲೆ ತೀರ್ಥವನ್ನು ಪ್ರೋಕ್ಷಿಸುತ್ತಾನೆ. ಸಹಸ್ರಕೋಟಿ ಸೈನ್ಯವೆಲ್ಲವೂ ಆ ಕ್ಷಣದಲ್ಲಿಯೇ ನಿಲುವುಗಲ್ಲುಗಳಾಗುತ್ತದೆ. ಸಂಚು ಶಿಖಾನಾಯಕ ಘೋರವಾದ ದುಃಖ ಮಾಡುತ್ತ ಈತ ಯಾರು ಎಂದು ಮಗಳನ್ನು ಕೇಳುತ್ತಾನೆ. ಆತನು ನಮ್ಮ ಹಾಗೆ ಮಾನವರಲ್ಲ, ಪರಮಾತ್ಮ. ಶ್ರೀಕೃಷ್ಣ ಭಗವಂತನೇ ಈತ. ನನ್ನ ದಂಡುದಳವನ್ನು ಬದುಕಿಸಿಕೊಟ್ಟರೆ ಮಗಳಾದ ಚಂಚುಲಕ್ಷ್ಮಿಯನ್ನು ಕೊಟ್ಟು ಮದುವೆ ಮಾಡುತ್ತೇನೆ ಎಂದು ಹರಕೆ ಮಾಡಿಕೊಳ್ಳಿ ಎನ್ನುತ್ತಾಳೆ. ಆಗ ಪರಮಾತ್ಮನಲ್ಲಿ ನೀನು ನಮಗೆ ಪ್ರಾಣದಾನ ಮಾಡಿದರೆ ಒಂಟುಕೊಂಬು ಬಲ್ಲಾವಿನ ಹಾಲು ಕರೆದು, ಕಾಯಿಸಿ, ಹೆಪ್ಪು ಹಾಕಿ, ಮಜ್ಜಿಗೆ ಮಾಡಿ, ಬೆಣ್ಣೆ ತೆಗೆದು ೧೦೧ ದೀಪ ಹಚ್ಚಿ ಬೆತ್ತಲೆ ಬಸವಂತ ಆಡಿ, ಚುಕ್ಕೆಗಳೆಲ್ಲಾ ಒಂದೇ ಕಡೆ ಸೇರುವ ವೇಳೆಗೆ ನಮಸ್ಕರಿಸುತ್ತೇವೆ ಎಂದು ಹರಕೆ ಮಾಡಿಕೊಳ್ಳುತ್ತಾನೆ. ನಿಜರೂಪ ತಳೆದ ನರಸಿಂಹ ತೀರ್ಥವನ್ನು ಹಾಕಿ ಸೈನ್ಯ ಮತ್ತೆ ಚೈತನ್ಯ ಪಡೆಯುವಂತೆ ಮಾಡುತ್ತಾನೆ. ನರಸಿಂಹನನ್ನು ವರಿಸಿದ ಚಂಚುಲಕ್ಷ್ಮಿಯು ಸುಖದಿಂದ ಕಾಲ ಕಳೆಯುತ್ತಾಳೆ. ಮುಂದೆ ಕಾಲಾಂತರದಲ್ಲಿ ಗಂಡು ಶಿಶುಗಳನ್ನು ಪಡೆದ ದಾನಸಾಲಿ ಗಂಡನ ಅಣತಿಯ ಮೇರೆಗೆ ಮಕ್ಕಳನ್ನು ಬಿಟ್ಟು ಗಂಡನೊಂದಿಗೇ ಹೋಗುತ್ತಾಳೆ.

ಅನಾಥರಾದ ಈ ಮಕ್ಕಳನ್ನು ತಾಯಿ-ತಂದೆಯಂತೆ ಪೋಷಿಸಿ, ತರಬೇತುಗೊಳಿಸಿದ ಈ ಚಂಚುಲಕ್ಷ್ಮಿ ಮುಂದೆ ಅವರು ತಂದೆಯ ಬಳಿ ಹೋಗಿ ಹೋರಾಟ ಮಾಡಿ ಸಂಪತ್ತನ್ನೂ, ಅದರೊಂದಿಗೆ ಅಸ್ತಿತ್ವವನ್ನು ಸಾಮಾಜಿಕ ಮನ್ನಣೆಯನ್ನೂ ಪಡೆಯುವಂತೆ ಮಾಡುತ್ತಾಳೆ. ಈಕೆಯನ್ನೇ ಗೌಡಗೆರೆಯಲ್ಲಿ ಲಕ್ಷ್ಮಿ ಎಂದೂ, ಕಂಪಳೋಬಯ್ಯ ಅಂದರೆ ಕಂಪಳರಂಗನ ದೇವಸ್ಥಾನದ ಪಕ್ಕದಲ್ಲಿ ಭಾಗ್ಯದ ಲಕ್ಷ್ಮಮ್ಮನೆಂದೂ ಪೂಜಿಸುವ ಪರಿಪಾಠವಿದೆ. ಈಕೆಯನ್ನೇ 'ಪೆದ್ದಕ್ಕ ರಾಯಮ್ಮ' ಎಂದರೆ ಐದು ಮಂದಿ ಸಹೋದರರಿಗೆ ಹಿರಿಯಕ್ಕ ಎಂದು ಕರೆಯುತ್ತಾರೆ.

**ಅಕ್ಕರಾಯಮ್ಮ ಮತ್ತು ಗೌರಸಮುದ್ರದ ಮಾರಮ್ಮ ಅಕ್ಕತಂಗಿಯರು :**

ದೇವರಹಳ್ಳಿಯ ದಡ್ಡಲು ಮಾರಮ್ಮ ಅಂದರೆ ಅಕ್ಕರಾಯಮ್ಮ ದೊಡ್ಡವಳು. ಗೌರಸಂದ್ರದ ಮಾರಮ್ಮ ತಂಗಿ ಎಂಬ ಪ್ರತೀತಿಯೂ ಇದೆ. ಈಕೆಗೆ ಮಕ್ಕಳಿದ್ದರು. ಆದರೆ ಗೌರಸಂದ್ರದ ಮಾರಮ್ಮನಿಗೆ ಮಕ್ಕಳಿರಲಿಲ್ಲವಂತೆ. ಒಮ್ಮೆ ತನ್ನ ಅಕ್ಕ ಮತ್ತು ಆಕೆಯ ಮಕ್ಕಳನ್ನು ನೋಡಬೇಕೆಂದು ಮಾರಮ್ಮ ಬಂದಾಗ ಬಂಜೆಯ ದೃಷ್ಟಿ ತಗುಲಿದರೆ ತನ್ನ ಮಕ್ಕಳಿಗೆ ಒಳ್ಳೆಯದಾಗುವುದಿಲ್ಲ ಎಂದು ಜಲ್ಲೆ (ಬುಟ್ಟಿ)ಯನ್ನು ಮಕ್ಕಳ ಮೇಲೆ ಬೋರಲು ಹಾಕಿ, ಅವರಿಲ್ಲ ಆಡಲು ಹೋಗಿದ್ದಾರೆ ಎಂದು ತಂಗಿಗೆ ಹೇಳುತ್ತಾಳಂತೆ. ಸತ್ಯ ಏನಿರಬಹುದು ಎಂದು ಊಹಿಸಿದ ಮಾರಮ್ಮ ತಾನು ಮಕ್ಕಳಿಗೆಂದು ತಂದಿದ್ದ ಮಂಡಕ್ಕಿ, ಕಡಲೆ, ಬೆಲ್ಲ ಇವನ್ನೆಲ್ಲಾ ಎಸೆದು ನಿನ್ನ ಮಕ್ಕಳಿಗೆ ಇವೆಲ್ಲಾ ದಡಾರ, ಸಿಡುಬು, ಸೀತಾಳವಾಗಿ ಏಳಲಿ ಎಂದು ಶಾಪ ಕೊಟ್ಟು ಹೋಗುತ್ತಾಳಂತೆ. ಅದೇ ಪ್ರಕಾರ ಆಕೆ ಹೋದ ಮೇಲೆ ಜಲ್ಲೆಯನ್ನು ಎತ್ತಿ ನೋಡಿದಾಗ ಮಕ್ಕಳಿಗಾಗಲೇ ಜ್ವರ ಬಂದಿದ್ದು ದಡಾರ ಕಾಣಿಸಿಕೊಳ್ಳುತ್ತದೆಯಂತೆ. ಅಂದಿನಿಂದ ಇಂದಿನವರೆಗೂ ಇವರಿಬ್ಬರಿಗೂ ಪರಸ್ಪರ ಮುಖ ದರ್ಶನವಿಲ್ಲ. ಅಷ್ಟೇ ಅಲ್ಲ, ಗೌರಸಂದ್ರದ ಮಾರಮ್ಮನ ಪೂಜೆಯಾಗುವ ದಿನ ಅಂದರೆ ಜಾತ್ರೆಯಲ್ಲಿ ಬೆಳಿಗ್ಗೆಯೇ ಈಕೆಗೆ ಪೂಜೆ ಮಾಡಿ ತೆರೆ ಹಾಕಿ ಗುಡಿ ಬಾಗಿಲು ಹಾಕಿ ಬಿಡುತ್ತೇವೆ ಎಂದು ಹೇಳಲಾಗುತ್ತಿದೆ.

**ಅಕ್ಕರಾಯಮ್ಮ ಪುರಾಣದ ವಿಶ್ಲೇಷಣೆ:**

ಮ್ಯಾಸಬೇಡರಿಗೆ ಆರಾಧ್ಯದೇವತೆಯೆನಿಸಿರುವ ಅಕ್ಕರಾಯಮ್ಮನ ಬಗ್ಗೆ ಪ್ರಚಲಿತವಾಗಿರುವ ಪುರಾಣಗಳಿವು. ಮೌಖಿಕವಾಗಿ ಹಾಡಲಾಗುವ ಕಥನಗಳ ಮೂಲಕ ಮತ್ತು ಗದ್ಯರೂಪದಲ್ಲಿ ಹೇಳಲಾಗುವ ಕಥೆಗಳ ಮೂಲಕ ಅಕ್ಕರಾಯಮ್ಮನನ್ನು, ಆಕೆಯ ವ್ಯಕ್ತಿತ್ವವನ್ನು ನಾವು ಗ್ರಹಿಸಲು ಸಾಧ್ಯವಾಗುತ್ತದೆ. ಒಬ್ಬ ವ್ಯಕ್ತಿ ತನ್ನ ಸಮುದಾಯಕ್ಕೆ ನೀಡಿದ ವಿಶಿಷ್ಟವಾದ ಕಾಣಿಕೆಯೇ ಕಾರಣವಾಗಿ ಆ ಸಮುದಾಯದ ಸ್ಮರಣೆಯಲ್ಲಿ ಉಳಿದು ಬಂದು ಜೀವಂತಿಕೆಯನ್ನು ಪಡೆಯುತ್ತಾರೆ. ರಾಯಮ್ಮನ ಅನನ್ಯತೆಯೇ ಕಾರಣವಾಗಿ ಆಕೆ ಅನೇಕ ನೆಲೆಗಳಲ್ಲಿ ಆರಾಧಿಸಲ್ಪಡುತ್ತಾ ಜನಮನದಲ್ಲಿ ಉಳಿದುಬಂದಿದ್ದಾಳೆ. ಈ ಹಿಂದೆ ಕೊಟ್ಟಿರುವ ಎರಡೂ ಕಥೆಗಳ ಆಧಾರದ ಮೇಲೆ ಅಕ್ಕರಾಯಮ್ಮ ದಾನಸಾಲಿ ಮತ್ತು ಸುಕ್ಕಲು ಮಲ್ಲನಾಯಕನ ಮಗಳು ಎಂಬುದು ಸ್ಪಷ್ಟವಾಗುತ್ತದೆ. ಚಂಚರಿಂದ ಪೋಷಿಸಲ್ಪಟ್ಟ ಈತ ಸಂಚು ಸಿಕಾನಾಯಕ ಎಂದು ಕರೆಯಲ್ಪಡುತ್ತಾನೆ. ಗಿಡಗಂಟೆಗಳ ರಾಜ ಎಂದೂ ಕರೆಯಲಾಗುತ್ತದೆ. ಈತ ಮಂದರಾಜನ ಮೊಮ್ಮಗಳಾದ ದಾನಸಾಲಿಯನ್ನು ವಿವಾಹವಾದ. ಈತನ ಸಂತತಿಯವರೇ ಮುಂದೆ 'ಸಂಚು ಮ್ಯಾಸವಾಳ್ಳು' ಅಂದರೆ ಸಂಚು ಮ್ಯಾಸನಾಯಕರು, ಮ್ಯಾಸನಾಯಕರು, ಮ್ಯಾಸಬೇಡರು ಎಂದು ಕರೆಯಲ್ಪಟ್ಟರು. ದಾನಸಾಲಿ ಮತ್ತು ಈ ಸಂಚು ಸಿಕಾನಾಯಕನ ಮಗಳೇ ಅಕ್ಕರಾಯಮ್ಮ ಸಂಚುಲಕ್ಷ್ಮಿ. ಎರಡನೆಯ ಪುರಾಣದ ಪ್ರಕಾರ ಅಕ್ಕರಾಯಮ್ಮ ಮಗಳಾಗಿ ಜನಿಸುತ್ತಾಳೆ. ಈಕೆಯ ಜನನವೇ ವಿಶಿಷ್ಟವಾದುದು. ಮದುವೆಯಾಗಿ ಅನೇಕ ವರ್ಷಗಳು ಕಳೆದರೂ ಇವರಿಗೆ ಮಕ್ಕಳಿರುವುದಿಲ್ಲ. ಒಮ್ಮೆ ಜಂಗಮನೊಬ್ಬ ನೀಡಿದ ಕುಂಬಳ ಬೀಜ ನೆಡುವಾಗ ದಾನಸಾಲಿಯಮ್ಮ ಸೂರ್ಯನ ಧ್ಯಾನ ಮಾಡುತ್ತಾ ಆ ಸೂರ್ಯನನ್ನೇ ಭ್ರಮಿಸಲು ಕಿರಣಗಳ

ಮೂಲಕ ಸೂರ್ಯನ ಅಂಶವೇ ಈ ಕುಂಬಳ ಬೀಜದ ಮೇಲೆ ಬಿದ್ದು ಆ ಬೀಜನೆಡಲು ಅದು ಬಳ್ಳಿಯಾಯಿತು. ಈ ಎರಡೂ ವಿವರಗಳನ್ನು ಪರಿಶೀಲಿಸಿದಾಗ ಬಹುಶಃ ಇವರಿಬ್ಬರ ಮೊದಲ ಮಗಳೇ ಈ ರಾಯಮ್ಮ ಅಥವಾ ಸಂಚುಲಕ್ಷ್ಮಿ. ನಂತರ ಕೆಲವು ವರ್ಷಗಳ ಅಂತರದಲ್ಲಿ ಪಡೆದವರು ಉಳಿದ ಐದೂ ಮಂದಿ ಗಂಡು ಶಿಶುಗಳು. ಹಣ್ಣಿನ ಮೂಲ 'ತುಂಬು'. ಹಾಗಾಗಿ ತುಂಬಿನಲ್ಲಿ ಜನಿಸಿದವಳು ರಾಯಮ್ಮ ಎಂಬ ಸಾಂಕೇತಿಕವಾದ ಚಿತ್ರಣವನ್ನು ಜನಪದರು ಕೊಡುತ್ತಾ ಬಂದಿದ್ದಾರೆ. ಹುಟ್ಟಿನ ಮೂಲ ನಿಗೂಢವಾಗಿದ್ದಾಗ ಕ್ರಮೇಣ ಬದುಕು ಶಿಷ್ಟತೆಯ ಕಡೆ ಸಾಗಿದಂತೆಲ್ಲಾ ಇಂತಹ ಕಥೆಗಳು ಹುಟ್ಟಿಕೊಳ್ಳುವುದು ಸಹಜ. ಇಲ್ಲಿ ಕುಂಬಳಕಾಯಿಯ ಕಥೆಯೂ ಹೀಗೆಯೇ ಸೃಷ್ಟಿಗೊಂಡಿದೆ. ಅಕ್ಕರಾಯಮ್ಮನನ್ನು ಶರಣೆ ಎಂದು ಆಕೆಯ ಸೋದರರನ್ನು ಶರಣರು ಎಂದು ಕರೆಯುವ ವಾಡಿಕೆ ಈ ಬುಡಕಟ್ಟಿನಲ್ಲಿದೆ. ಮಕ್ಕಳು ಮಾತೆಯ ಮೂಲಕ ಸಹಜವಾಗಿ ಜನಿಸಿದವರು ಎಂದಾಗ ಅದು ಅಷ್ಟಾಗಿ ಶ್ರೇಷ್ಠವಲ್ಲ ಅಪವಿತ್ರ ಎಂಬ ಆಲೋಚನೆ ಕಾರಣವಾಗಿಯೂ ಇವರ ಹುಟ್ಟನ್ನು ಹೀಗೆ ವಿವರಿಸಿರಬಹುದು. ಮಂಟೇಸ್ವಾಮಿ ತಾವರೆ ಹೂವಿನಲ್ಲಿ ಮರಿದುಂಬಿಯಾಗಿ ಹುಟ್ಟುತ್ತಾನೆ. ಜುಂಜಪ್ಪ ತನ್ನ ತಾಯಿ ಚಿನ್ನಮ್ಮನ ಬಲತೋಳನ್ನು ಸೀಳಿ ಹಲ್ಲಿಯಾಗಿ ಹುಟ್ಟುತ್ತಾನೆ, ಏಸುಕ್ರಿಸ್ತನ ಹುಟ್ಟಿನ ಬಗ್ಗೆಯೂ ಇಂತಹುದೇ ನಂಬಿಕೆಯಿದ್ದು ಅವನು ಕನ್ಯಾಪುತ್ರನೆಂದು ಹೇಳಲಾಗಿದೆ. ಈ ಹಿನ್ನೆಲೆಯಿಂದ ಈ ಕಥೆಯನ್ನು ಗ್ರಹಿಸಬಹುದಾಗಿದೆ. ತನ್ನ ಮಕ್ಕಳನ್ನು ನಿರಾಕರಿಸಿ ಸಾಕುವ ಹೊಣೆಗಾರಿಕೆಯನ್ನು ಹೊತ್ತುಕೊಳ್ಳದೆ, ತನ್ನ ಪತ್ನಿಯನ್ನೂ ಕರೆದುಕೊಂಡು ಅಲ್ಲಿಂದ ಹೊರಟು ಹೋಗಿ ಹೆಂಡತಿಯ ಮೂಲಕ ಆಕೆಯ ತಾತನಿಂದ ಪಶುಸಂಪತ್ತನ್ನೂ ಉಳಿದ ಅನೇಕ ವಿಧದ ಸಂಪತ್ತನ್ನೂ ಪಡೆದು ಅದಕ್ಕೆ ತಾನು ಯಜಮಾನನಾಗಿ ಈತ ಮೆರೆಯತೊಡಗುತ್ತಾನೆ.

ಇತ್ತ ಅನಿವಾರ್ಯವಾಗಿ ಹಿರಿಯಕ್ಕನಾದ ರಾಯಮ್ಮನ ಮೇಲೆ ಪೋಷಣೆಯ ಹೊಣೆಗಾರಿಕೆ ಬೀಳುತ್ತದೆ. ಮಾತೃಪ್ರಧಾನವಾಗಿದ್ದ ಬುಡಕಟ್ಟು ಸಮುದಾಯಗಳಲ್ಲಿ ಮೂಲತಃ ಪಿತೃವಿನ ಸ್ಥಾನ ಮುಖ್ಯವಾದುದೇ ಅಲ್ಲ. ಮಕ್ಕಳು ಒಟ್ಟು ಸಮುದಾಯದ ಮಕ್ಕಳು. ಅಲ್ಲಿ ಎಲ್ಲರೂ ಮಾತೆಯರು. ಇಂತಹ ಸ್ಥಿತಿಯಿಂದ ಪಿತೃಪ್ರಧಾನ್ಯತೆಯ ಕಡೆ ವ್ಯವಸ್ಥೆ ಸರಿದಂತೆಲ್ಲಾ ಪುರುಷ ಪ್ರಾಧಾನ್ಯತೆಯೂ ಕಾಣಿಸಿಕೊಂಡಿತು. ಮ್ಯಾಸಬೇಡರಲ್ಲಿಯೂ ಮೂಲತಃ ಇದ್ದದ್ದು ಮಾತೃ ಮೂಲೀಯ ಕುಟುಂಬ ವ್ಯವಸ್ಥೆಯೇ. ಕಾರಣ ಅಲೆಮಾರಿ ಸಮುದಾಯಗಳಿವು. ಆಹಾರ ಸಂಪಾದನೆಯ ಹಂತದಿಂದ ಪಶುಪಾಲನೆಯ ಕಡೆ ತಿರುಗಿದಾಗಲೂ ಈ ಅಲೆಮಾರಿತನ ಇವರಿಗೆ ಅನಿವಾರ್ಯವಾಗಿತ್ತು. ಆಗ ಮಾತೆಯ ಸ್ಥಾನ ಮುಖ್ಯವಾದುದಾಗಿತ್ತು. ಆದರೆ ಕ್ರಮೇಣ ಅಲ್ಲಿ ಕಾಣಿಸಿಕೊಂಡ ಪುರುಷ ಪ್ರಾಧಾನ್ಯತೆಯ ಸಂದರ್ಭವನ್ನು ಸುಕ್ಕಲು ಮಲ್ಲನಾಯಕನ ವರ್ತನೆ ಸ್ಪಷ್ಟಪಡಿಸುತ್ತದೆ. ಹೀಗಾಗಿ ಈತ ತನ್ನ ಪತ್ನಿಯನ್ನು ಆಕೆಯ ಮಕ್ಕಳಿಂದ ದೂರ ಮಾಡುತ್ತಾನೆ. ತಾನೂ ಹೊಣೆಗಾರಿಕೆಯಿಂದ ಜಾರಿಕೊಳ್ಳುತ್ತಾನೆ. ಹೀಗಾಗಿ ರಾಯಮ್ಮನೇ ಶ್ರಮದಿಂದ ತನ್ನ ತಮ್ಮಂದಿರನ್ನು ಸಾಕತೊಡಗುತ್ತಾಳೆ. ಓರಗೆಯ ಮಕ್ಕಳು ನಿಮ್ಮ ತಂದೆ ಯಾರು ಎಂದು ಅಪಹಾಸ್ಯ ಮಾಡುತ್ತಾರೆ. ತಂದೆಯ ಮೂಲಕ ಮಾತ್ರ ಸಮಾಜದಲ್ಲಿ ತಮಗೊಂದು ಅಸ್ತಿತ್ವ ದೊರೆತು ಸಾಮಾಜಿಕ ಮನ್ನಣೆ ಪ್ರಾಪ್ತವಾಗುತ್ತದೆ ಎಂದು ಅರಿತ ಈ ಹುಡುಗರು ತಮ್ಮ ತಂದೆ ಯಾರು ಎಂದು ಅಕ್ಕನನ್ನು ಪೀಡಿಸಿದಾಗ ಆಕೆ ಆತನ

ವಿವರವನ್ನು ಕೊಡುತ್ತಾಳೆ. ಮೊದಲು ಹುಟ್ಟಿಬರುವ ಸೂರ್ಯನೇ ನಮ್ಮ ತಂದೆ ಎಂದು ಹೇಳುತ್ತಾಳೆ. ಹಾಗಾದರೆ ಆತನನ್ನು ನಮ್ಮ ತಂದೆ ಎಂದು ಒಪ್ಪಿಸಿಕೊಂಡು ಬರುತ್ತೇವೆ ಎಂದು ಅವರು ಹೊರಟಾಗ ಇದ್ದಕ್ಕಿದ್ದಂತೆಯೇ ಹೊರಟರೆ ಅದು ಸಾಧ್ಯವಾಗುವುದಿಲ್ಲ. ಅದಕ್ಕೆ ತಯಾರಿಯ ಅಗತ್ಯವಿದೆ ಎಂದು ಅವರಿಗೆ ಶಸ್ತ್ರಾಭ್ಯಾಸ ಮಾಡಿಸತೊಡಗುತ್ತಾಳೆ. ತಮ್ಮಂದಿರಿಗೆ ಯುದ್ಧವಿದ್ಯೆಯನ್ನು ಕಲಿಸುವ ರಾಯಮ್ಮನ ಶೈಲಿ ವಿಶಿಷ್ಟತೆಯಿಂದ ಕೂಡಿದೆ. ನಾವು ಶಿಷ್ಟ ಪುರಾಣಗಳಲ್ಲಿ ಓದುವ ಶಸ್ತ್ರವಿದ್ಯೆಯನ್ನು ಕಲಿಸುವ ರೀತಿಗೂ, ಕಾಡಿನ ನಿವಾಸಿಯಾದ ರಾಯಮ್ಮ ಶಸ್ತ್ರವಿದ್ಯೆಯನ್ನು ಕಲಿಸುವ ರೀತಿಗೂ ಸಾಕಷ್ಟು ವ್ಯತ್ಯಾಸವಿದೆ. ಬುಡಕಟ್ಟಿನ ಮಹಿಳೆಗೆ ಇದು ಸಹಜವಾದುದು ಎಂದು ಕೊಂಡರೂ ಇದಕ್ಕೆ ಆಕೆಯ ಕುಶಲತೆಯಿಂದ ಕೂಡಿದ ಜ್ಞಾನವೂ ಕಾರಣವಾಗಿದೆ ಎಂಬುದನ್ನು ಮರೆಯುವ ಹಾಗಿಲ್ಲ. ಜೊತೆಗೆ ಇಲ್ಲಿ ಕಲಿಸುತ್ತಿರುವವಳು ಹೆಣ್ಣು. ಕಲಿಯುತ್ತಿರುವವರು ಪುರುಷರು. 'ಮಹಿಳೆಗೆ ಜ್ಞಾನದ ವಿಶಿಷ್ಟರೂಪವಾದ ಆತ್ಮವಿಲ್ಲದಿರುವುದರಿಂದ ಆಕೆಯ ಕೊಲೆ ಶಿಕ್ಷಾರ್ಹ ಅಪರಾಧವಾಗುವುದಿಲ್ಲ' ಎಂದು ಚೀನಾದ ಖ್ಯಾತ ಚಿಂತಕ 'ಕನ್‌ಫ್ಯುಷಿಯಸ್' ಹೇಳುತ್ತಾನೆ. ಜ್ಞಾನದ ವಿಶಿಷ್ಟ ರೂಪವಾದ ಆತ್ಮವೇ ಮಹಿಳೆಗೆ ಇಲ್ಲ ಎಂದರೆ ಆಕೆಗೆ ಜ್ಞಾನವೇ ಇಲ್ಲ ಎಂದರ್ಥವಾಗುತ್ತದೆ. ಆದರೆ ಇಂತಹ ಅರ್ಥವಿಲ್ಲದ ದಾರ್ಶನಿಕನ ಮಾತಿಗೆ ಈಕೆಯ ಕಾರ್ಯಕುಶಲತೆ, ಕಲಿಸುವ ಜ್ಞಾನ ಶಿಸ್ತು ಪ್ರತಿ ಉತ್ತರವಾಗುತ್ತದೆ. ತಾನು ಕಲಿತಿದ್ದರೆ ಮಾತ್ರ ಮತ್ತೊಬ್ಬರಿಗೆ ಕಲಿಸಲು ಸಾಧ್ಯ. ತನ್ನದೇ ನೆಲೆಯಲ್ಲಿ ತನ್ನಲ್ಲಿರುವ ಪರಿಕರಗಳನ್ನು ಬಳಸಿಕೊಂಡು ಶಸ್ತ್ರವಿದ್ಯೆಯನ್ನು ಕಲಿಸುವ ರಾಯಮ್ಮನ ಈ ಶೈಲಿಯೇ ಅನನ್ಯತೆಯಿಂದ ಕೂಡಿದೆ. ಈ ಅನನ್ಯತೆಯೇ ನಮಗೆ ಅಚ್ಚರಿಯನ್ನೂ ಮೂಡಿಸುತ್ತದೆ. ಅಬಲೆಯೆಂದು ಭಾವಿಸಿಕೊಂಡು/ಭಾವಿಸಲ್ಪಟ್ಟು ಕೈಚೆಲ್ಲಿರುವ ಮಹಿಳೆ ತನಗಿರುವ ಸಾಧ್ಯತೆಗಳನ್ನು ಹುಡುಕಿಕೊಳ್ಳುವಂತೆ ಎಚ್ಚರಗೊಳಿಸುತ್ತದೆ. ತನ್ನ ತಮ್ಮಂದಿರಿಗಾಗಿ ಈಕೆ ಕಡಲೆಯನ್ನು ಬಿತ್ತಿ ಬೆಳೆಯುತ್ತಾಳೆ. ಪಶುಪಾಲಕರಾಗಿದ್ದ ಇವರಿಗೆ ಬೇಟೆ ಸಹಜವಾಗಿದ್ದಂತೆ ಕೃಷಿ ಸಹಜವಾದುದಾಗಿರಲಿಲ್ಲ.

ಪಶುಪಾಲನೆಯೊಂದಿಗೇ ಕ್ರಮೇಣ ಕೃಷಿಯನ್ನು ಕಲಿಯತೊಡಗಿದ ಮಾನವ. ಅವರಲ್ಲಿ ಮಹಿಳೆಯೇ ಮೊದಲಿಗಳು ಎಂಬ ಅಭಿಪ್ರಾಯವೂ ಇದೆ. ಕೃಷಿ ಗೊತ್ತಿಲ್ಲದ ಸಂದರ್ಭದಲ್ಲಿ ಬಹುಶಃ ಕೃಷಿಯನ್ನು ಕರಗತ ಮಾಡಿಕೊಳ್ಳಲು ಇವಳು ಮಾಡಿದ ಪ್ರಯತ್ನವನ್ನೇ, ಆಕೆಯ ಪರಿಶ್ರಮವನ್ನೇ ಬಂಡೆಯ ಮೇಲೆ ರಾಯಮ್ಮ ಕಡಲೆ ಬಿತ್ತಿ ಬೆಳೆದಳು ಎಂದು ಹೇಳಿರಬಹುದು. ಹೀಗೆ ತಾನು ಬೆಳೆದ ಕಡಲೆಯ ಹೊಲಕ್ಕೆ ಸೋದರಮಾವನಾದ ಕರಿಬೊಮ್ಮನನ್ನು ಕಾವಲು ಕಾಯಲೋಸುಗ ನೇಮಿಸುತ್ತಾಳೆ. ಮಾತೃ ಮೂಲೀಯ ಸಂಸ್ಕೃತಿಯಲ್ಲಿ ಸೋದರಮಾವ ತನ್ನ ಅಕ್ಕತಂಗಿಯರ ಮಕ್ಕಳಿಗೆ ಸಹಾಯ ನೀಡುವುದು ಸಾಮಾನ್ಯ ತುಂಬಾ ಆತ್ಮೀಯವಾದ ಬಾಂಧವ್ಯ ಇಲ್ಲಿರುತ್ತದೆ. 'ತಾಯಿ ಇಲ್ಲದ ಮಕ್ಕಳಿಗೆ ಸೋದರಮಾವನೇ ತಾಯಿ' ಎಂಬ ಗಾದೆಯೇ ಇದೆ. ಹೊಲಕ್ಕೆ ಮೇಯಲು ಬರುವ ಕುದುರೆಗಳನ್ನು ಹಿಡಿಯಲು ತನ್ನ ಮಾವನಿಗೆ ಉಕ್ಕಿನ ಚಾವಟಿಯನ್ನು ತಂದುಕೊಡುತ್ತಾಳೆ. ಬುಡಕಟ್ಟು ಸಮುದಾಯಗಳಲ್ಲಿ ಉಕ್ಕಿನ ಚಾವಟಿ ಎಂದರೆ ಅಪರೂಪದ್ದೇ. ಇದನ್ನು ದೊರಕಿಸಿಕೊಳ್ಳುತ್ತಾಳೆ. ಹೊಲ ಮೇಯಲು ಬಂದ ಕುದುರೆಯ ಮರಿಗಳನ್ನು ಕರಿಬೊಮ್ಮ ಹಿಡಿದು ಕೊಟ್ಟಾಗ ಅವುಗಳನ್ನು ಸಾಕಿ ತನ್ನ ತಮ್ಮಂದಿರಿಗೆ ಕೊಡುತ್ತಾಳೆ. ಅಂದರೆ ತುಂಬಾ ಮುಂದಾಲೋಚನೆಯಿಂದ ತನ್ನ ತಮ್ಮಂದಿರಿಗೆ ಬದುಕನ್ನು ಕಟ್ಟಿಕೊಡಲು ಬೇಕಾದುದೆಲ್ಲವನ್ನೂ ಈಕೆ

ಜೋಡಿಸಿಕೊಳ್ಳುತ್ತಲೇ ಬರುತ್ತಾಳೆ. ಕುದುರೆಗಳ ಬಳಕೆ ಇನ್ನೂ ಅಷ್ಟಾಗಿ ಇಲ್ಲದಿದ್ದ ಈ ಸಮುದಾಯದಲ್ಲಿ ರಾಯಮ್ಮ ಅವುಗಳನ್ನು ಸಾಕಿದ್ದು ವಿಶೇಷ. ನೆಲಮಾಳಿಗೆಯಲ್ಲಿ ಗುಪ್ತವಾಗಿ ತುಂಬಾ ಜತನದಿಂದ ಅವುಗಳನ್ನು ಸಾಕುತ್ತಾಳೆ. ಜೊತೆಗೆ ತಮ್ಮಂದಿರನ್ನೂ ಸಾಕುತ್ತಾಳೆ. ತಂದೆ, ತಾಯಿಯಿಂದ ತಿರಸ್ಕೃತರಾದವರಿಗೆ ತಾನೇ ಆ ಸ್ಥಾನದಲ್ಲಿ ನಿಂತು ಸಾಕುವ ಹೊಣೆಗಾರಿಕೆ ಹೊತ್ತಿದ್ದಾಳೆ. ಆಕೆ ಇದನ್ನು ಸಾಧ್ಯ ಮಾಡಿಕೊಂಡಿದ್ದೇ ಅದ್ಭುತವಾದ ಸಂಗತಿ. ಮಹಿಳೆ ಸದಾ ಪರಾವಲಂಬಿ ಆಕೆಯನ್ನು ಪುರುಷ ಪೋಷಿಸಬೇಕು ಎಂಬುದೇ ಸಾಮಾನ್ಯ ಸಂಗತಿಯಾಗಿರುವಾಗ ಈಕೆ ಸ್ವತಃ ತನ್ನನ್ನು ಮತ್ತು ತನ್ನ ಆಸರೆಗೆ ಸಿಲುಕಿದವರನ್ನು ಪೋಷಿಸಿದ್ದು ಅವಳ ದಕ್ಷತೆಗೆ ಸಾಕ್ಷಿಯಾಗುವ ಸಂಗತಿ. ಸಾಮಾಜಿಕ ಅಪಮಾನದಿಂದ ತತ್ತರಿಸಿದ ತಮ್ಮಂದಿರನ್ನು ಹೋರಾಟಕ್ಕೆ ಅಣಿಗೊಳಿಸಿ ಶಸ್ತ್ರಾಸ್ತ್ರಗಳನ್ನು, ಕುದುರೆಗಳನ್ನೂ ಕೊಟ್ಟು ತಂದೆಯ ವಿರುದ್ಧ ದಾಳಿಗೆ ಕಳುಹಿಸಿಕೊಡುತ್ತಾಳೆ. ಈ ಹೋರಾಟ ಅನಿವಾರ್ಯ ಅಷ್ಟೇ ಅವಶ್ಯಕ ಎಂದು ಆಕೆ ನಿರ್ಧರಿಸುವಲ್ಲಿ ಸಾಮಾಜಿಕ ನ್ಯಾಯವನ್ನು ಬೇಡುವ ಅವಳ ವೈಚಾರಿಕತೆ ಇಲ್ಲಿ ಎದ್ದು ಕಾಣಿಸುತ್ತದೆ. ಧಾಳಿಗೆ ಹೋದ ತಮ್ಮಂದಿರು ನಿರೀಕ್ಷಿತ ಕಾಲಾವಧಿಯಲ್ಲಿ ಮರಳಿ ಬರದೇ ಇದ್ದಾಗ ಆತಂಕಿತಳಾಗುತ್ತಾಳೆ. ಒಂಟಿ ಕಾಲಲ್ಲಿ ಸೂರ್ಯನನ್ನು ಕುರಿತು ತಪಸ್ಸು ಮಾಡುತ್ತಾಳೆ, ಹರಕೆಗಳನ್ನು ಹೊರುತ್ತಾಳೆ, ಇದೆಲ್ಲಾ ತಮ್ಮಂದಿರ ಬಗ್ಗೆ ಅವಳಿಗಿದ್ದ ಪ್ರೀತಿಯನ್ನು ಸ್ಪಷ್ಟಪಡಿಸುತ್ತದೆ. ತನ್ನ ತಮ್ಮಂದಿರು ತೊಂದರೆಗೆ ಸಿಲುಕಿರಬಹುದು. ಹೋಗಿ ಸಹಾಯ ಮಾಡು ಎಂದು ಸೋದರಮಾವನಾದ ಕರಿಬೊಮ್ಮನನ್ನು ಕಳುಹಿಸುತ್ತಾಳೆ. ಆತ ಬೆನ್ನಿನ ಚರ್ಮವನ್ನು ಕಿತ್ತು ಅಳಿಯಂದಿರ ಕುದುರೆಯ ಹರಿದ ಪಟ್ಟಣಿಗೆ ಬದಲಾಗಿ ಕಟ್ಟಿ, ಪಕ್ಕೆಯನ್ನು ತಿವಿದುಕೊಂಡು ನೆಣವನ್ನು ತೆಗೆದು ಬೆಳಕು ಮಾಡಿ ಅವರ ದಾರಿಯನ್ನು ಸ್ಪಷ್ಟಮಾಡುತ್ತಾನೆ.

ಇಲ್ಲಿ ಈ ಪ್ರಸ್ತಾಪ ಮಾಡುತ್ತಿರುವ ಕಾರಣವೆಂದರೆ ಪುರುಷನೊಬ್ಬನಲ್ಲಿಯೂ ಇರಬಹುದಾದ ಅಂತಃಕರಣ, ಸಹಾನುಭೂತಿಯನ್ನು ಗುರುತಿಸುವ ಸಲುವಾಗಿ "ಸಂಸ್ಕೃತಿಯನ್ನು ಬರೀ ನೆಗೆಟಿವ್ ನೆಲೆಯಲ್ಲಿಯೇ ಚರ್ಚಿಸಿ ನಮಗೆ ಅಭ್ಯಾಸವಾಗಿ ಹೋಗಿದೆ. ಸಂಸ್ಕೃತಿಯು ನಿರ್ಬಂಧಗಳ ನಿರ್ಮಾಪಕ ಎಂದೇ ನಾವು ಹೆಚ್ಚಾಗಿ ಗ್ರಹಿಸುವುದು. ಆದರೆ ಸಂಸ್ಕೃತಿಯೊಂದನ್ನು ನಿರ್ಬಂಧ ಮತ್ತು ಸಾಮರ್ಥ್ಯಗಳ ಜಂಟಿ ನಿರ್ಮಾಣ ಕ್ಷೇತ್ರ ಎಂದು ಭಾವಿಸುವುದೇ ಹೆಚ್ಚು ಪ್ರಯೋಜನಕಾರಿಯಾದ ವ್ಯಾಖ್ಯಾನ"[೪೨] ಎಂಬ ಡಿ.ಆರ್. ನಾಗರಾಜ್‌ರವರ ಹೇಳಿಕೆಯ ಹಿನ್ನೆಲೆಯಲ್ಲಿ ನಾವು ಕರಿಬೊಮ್ಮನ ಪಾತ್ರವನ್ನು ನೋಡಬೇಕಾಗಿದೆ. ಹೆಂಡತಿಯನ್ನು ತನ್ನ ಆಜ್ಞೆಯನ್ನು ಪಾಲಿಸಿಕೊಂಡು ಅನುಸರಿಸಿಕೊಂಡು ಬರಬೇಕಾದ ಸ್ಥಿತಿಯಲ್ಲಿಟ್ಟು, ಮಕ್ಕಳನ್ನು ಆತಂಕ ಸ್ಥಿತಿಗೆ ದೂಡಿದ ಸುಕ್ಕುಲ ಮಲ್ಲಿನಾಯಕ ನಿರ್ಬಂಧಕ್ಕೆ ಸಂಕೇತವಾದರೆ. ತನ್ನ ಸೊಸೆಗೆ, ಅಳಿಯಂದಿರಿಗೆ ಸಹಾಯ ಮಾಡುವ ಕರಿಬೊಮ್ಮ ಸಹಾನುಭೂತಿ ಹೊಂದಿರುವ ಸಂಸ್ಕೃತಿಯ ನಿರ್ಮಾಪಕನಾಗಿ ಕಂಡುಬರುತ್ತಾನೆ. ಅದಕ್ಕೆ ಈತನನ್ನು ಅಣಿಗೊಳಿಸಿದ ಶಕ್ತಿ ರಾಯಮ್ಮನೇ ಎನ್ನುವುದನ್ನೂ ನಾವು ಇಲ್ಲಿ ಗಮನಿಸಬೇಕಾಗುತ್ತದೆ. ಸೂರಿದ ಅಂದರೆ ಸುಕ್ಕಲು ಮಲ್ಲನಾಯಕ ಒಡ್ಡಿದ ಎಲ್ಲಾ

---

೪೨ ಅನು. ಎಲ್.ಜಿ. ಮೀರ, ಮಾನುಷಿಯ ಮಾತು, ಪು.೧೪೨ (ಹಿನ್ನುಡಿ), ೧೯೯೭, ಅಕ್ಷರ ಪ್ರಕಾಶನ, ಮೂಲ : ಸ್ತ್ರೀವಾದ ಚಿಂತಕಿ ಮದುಕೀಶ್ವರ ಅವರ ಬರಹಗಳು.

ಪರೀಕ್ಷೆಗಳಲ್ಲೂ ಜಯಗಳಿಸಿದ ಸಹೋದರರು ಆತನಿಂದ ಪಶುಸಂಪತ್ತನ್ನೂ, ಚಿನ್ನ ವಜ್ರ ಮುಂತಾದ ಸಂಪತ್ತನ್ನೂ, ಶಸ್ತ್ರಾಸ್ತ್ರಗಳನ್ನೂ, ಲಿಂಗಗಳನ್ನೂ ಪಡೆದು ಹಿಂದಿರುಗುತ್ತಾರೆ. ಅಕ್ಕನ ಬಗ್ಗೆ ತಮಗಿದ್ದ ಗೌರವವೇ ಕಾರಣವಾಗಿ ಆಕೆಯ ಮುಂದಿಟ್ಟು ಹಂಚಿಕೊಡು ಎನ್ನುತ್ತಾರೆ. ಆಕೆಯೇ ಅವುಗಳನ್ನು ಅವರಿಗೆ ಹಂಚುತ್ತಾಳೆ, ಅವರು ಮುಂದಿನ ಬದುಕನ್ನು ರೂಪಿಸಿಕೊಳ್ಳಲು ಅನುವು ಮಾಡಿಕೊಡುತ್ತಳೆ. ಹೀಗೆ ತಮ್ಮಂದಿರನ್ನು ಪೋಷಿಸಿ, ಶಸ್ತ್ರವಿದ್ಯೆಯಲ್ಲಿ ಪರಿಣಿತರನ್ನಾಗಿಸಿ, ಆಯುಧಗಳನ್ನು ಕೊಟ್ಟು ತನ್ನ ತಂದೆಯ ಬಳಿ ಹಕ್ಕು ಬಾಧ್ಯತೆಗಳನ್ನು ಪಡೆದು ಬರಲು ಕಳುಹಿಸಿ ಅದನ್ನು ಪಡೆದು ಬರುವಲ್ಲಿ ಅವರು ಯಶಸ್ಸನ್ನು ಗಳಿಸಲು ಕಾರಣಳಾಗುತ್ತಾಳೆ. ದಿಕ್ಕು ದೆಸೆ ಇಲ್ಲದವರು, ತಂದೆ ತಾಯಿ ಯಾರೆಂಬುದೇ ತಿಳಿಯದು ಎಂಬ ಸಾಮಾಜಿಕ ಅಪಮಾನದಿಂದ ಮುಕ್ತಗೊಳಿಸಿಕೊಂಡು ಸಾಮಾಜಿಕ ಮನ್ನಣೆ ಗಳಿಸಿಕೊಳ್ಳುವ ಹೋರಾಟದಲ್ಲಿ ಅವಳ ಪ್ರಯತ್ನವೇ ಮುಖ್ಯವಾಗುತ್ತದೆ. ಪುರುಷ ರಾಜಕಾರಣದ ಮಧ್ಯೆಯೂ ಇದನ್ನು ಸಾಧಿಸಿ ತೋರಿಸಿದ್ದಾಳೆ ರಾಯಮ್ಮ. ತಮ್ಮ ತಾಯಿ ದಾನಸಾಲಿಯದಾಗಿದ್ದು ಆದರೆ ತಂದೆಯ ಅಧಿಪತ್ಯದಲ್ಲಿದ್ದ ಆಸ್ತಿಯನ್ನು ತಾವು ಪಡೆದುಕೊಳ್ಳಬೇಕಾದುದು ತಮ್ಮ ಹಕ್ಕಿನ ಪ್ರಶ್ನೆಯಾಗಿದ್ದು ಅದಕ್ಕಾಗಿ ಈ ಹೋರಾಟ ಅನಿವಾರ್ಯವಾಗಿತ್ತು. ಇಲ್ಲಿ ರಾಯಮ್ಮ ನೇರವಾಗಿ ತಂದೆಯೊಂದಿಗೆ ಹೋರಾಟಕ್ಕಿಳಿಯುವುದಿಲ್ಲ. ಆದರೆ ಹೋರಾಟ ಮಾಡಿದ ತಮ್ಮಂದಿರಿಗೆ ಮೂಲಶಕ್ತಿಯಾಗಿದ್ದವಳೇ ಈಕೆ. "ಸ್ತ್ರೀತ್ವವನ್ನು ಪ್ರಕಟಪಡಿಸುವ ಅನೇಕ ಆಶಯಗಳು ಜಾನಪದ ಕಥೆಗಳಲ್ಲಿ ದೊರೆಯುತ್ತವೆ. ಇಲ್ಲಿ ಸಾಹಸದ ಕಾರ್ಯ ಸಾಧನೆ ಮಾಡುವವನು ಗಂಡು. ಆದರೆ ಇಡೀ ಕಥಾಹಂದರದೊಳಗೆ ಆತನ ಈ ಸಾಹಸದ ಕ್ರಿಯಾ ಚಾಲನಾ ಶಕ್ತಿಯಾಗಿ ಹೆಣ್ಣು ನಿರ್ವಹಿಸಲ್ಪಟ್ಟಿರುತ್ತಾಳೆ."[೪೩] ಇಲ್ಲಿ ಸೋದರರಿಗೆ ಪ್ರೇರಕಶಕ್ತಿಯೇ ರಾಯಮ್ಮ. ಮಾನವೀಯ ಗುಣಗಳಿಂದ ಕೂಡಿದ ಮಾತೃತ್ವದ ಸಾಕಾರಮೂರ್ತಿಯಾದವಳು ಹೆಣ್ಣು. ಈ ಅಂತಃಸತ್ವದೊಂದಿಗೇ ಅನಿವಾರ್ಯ ಸಂದರ್ಭವೊದಗಿದಾಗ ತನ್ನ ವೈಚಾರಿಕ ಚಿಂತನೆಗಳ ಮೂಲಕವಾಗಿ ಕ್ರಿಯಾಚಾಲಕ ಶಕ್ತಿಯಾಗಿ ನಿಲ್ಲುತ್ತಾಳೆ. ತಮ್ಮಂದಿರ ಕಾರ್ಯಸಾಧನೆಗಿಂತಲೂ ಇಲ್ಲಿ ಮುಖ್ಯವಾಗಬೇಕಾದದ್ದು ಅದರ ಹಿಂದಿನ ಪ್ರೇರಕಶಕ್ತಿಯಾಗಿದ್ದ, ರೂವಾರಿಯಾಗಿದ್ದ ರಾಯಮ್ಮನ ಯೋಜನಾ ಚಾತುರ್ಯ. ಅದರ ಹಿಂದೆ ಕೆಲಸ ಮಾಡುತ್ತಿದ್ದುದು ಅವಳ ಪ್ರಖರ ವೈಚಾರಿಕ ಶಕ್ತಿ.

ಮುಂದೆ ತನ್ನ ತಮ್ಮಂದಿರಲ್ಲಿ ಒಬ್ಬರ ಮಗನಾದ ಕಾಟನಾಯಕನ ಮಲ್ಲಯ್ಯ ತನ್ನ ಪಶುಸಂಪತ್ತು ಮತ್ತು ಬೇಡಗಂಪಳದೊಂದಿಗೆ ಶ್ರೀಶೈಲ ಪ್ರಾಂತ್ಯದಿಂದ ಮಧ್ಯಕರ್ನಾಟಕದ ಕಡೆ ಬರುತ್ತಿರುವಾಗ ಆನೆಗೊಂದಿಯ ದೊರೆ ಇವರ ಪಶುಸಂಪತ್ತನ್ನು ತನ್ನದಾಗಿಸಿಕೊಳ್ಳಬೇಕು ಎಂದು ಆಶಿಸಿ ಸೆರೆ ಹಿಡಿದಾಗ ಮೂಲನೆಲೆಯಲ್ಲಿಯೇ ಉಳಿದಿದ್ದ ರಾಯಮ್ಮ ಈ ಸಂಗತಿಯನ್ನು ತಿಳಿದು ತಕ್ಷಣವೇ ಬಂದು ಮಂತ್ರವಿದ್ಯೆಯನ್ನು ಬಳಸಿಕೊಂಡು ತನ್ನ ಬೇಡ ಗಂಪಳನ್ನು ಆಪತ್ತಿನಿಂದ ಪಾರು ಮಾಡುತ್ತಾಳೆ. ಬುಡಕಟ್ಟು ಸಮಾಜಗಳಲ್ಲಿ ಮಾಟದಂತಹ ವಿದ್ಯೆಯೂ ಇರುತ್ತದೆ. ತಮಗೆ ಕೇಡುಬಗೆದವರಿಂದ ತಮ್ಮನ್ನು ರಕ್ಷಿಸಿಕೊಳ್ಳಲೋಸುಗ ಪ್ರತಿ ಕೇಡು ಬಗೆಯಲು ಈ ಮಂತ್ರವಿದ್ಯೆಯನ್ನು ಬಳಸಿಕೊಳ್ಳುತ್ತಾರೆ. ಸಾಧಾರಣ

---

೪೩ ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ: ಒಂದು ಸಂಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೧೧೦.

ಮಾನವರ ಕೈಯಿಂದಾಗದ ವಿಷಯಗಳಿಗೆ ಬೇರೆ ಜಗತ್ತಿನ ಸಹಾಯ ಪಡೆದುಕೊಳ್ಳಲು ಮಾಟವು ನೆರವಾಗುತ್ತಿತ್ತು. 'ಮಾಟ' ಇದೊಂದು ಬೌದ್ಧಿಕ ಶಕ್ತಿಯಾಗಿದ್ದು ಇದನ್ನು ಸಮುದಾಯ ಒಪ್ಪಿಕೊಂಡಿತ್ತು. ಇದನ್ನು ಕಲಿತವರಿಗೆ ಗೌರವವೂ ಇತ್ತು. ಈ ತಂತ್ರದ ಮೂಲಕ ರಾಯಮ್ಮ ತಮ್ಮವರಿಗೆ ಎದುರಾಗಿದ್ದ ವಿಪತ್ತನ್ನು ಪರಿಹರಿಸುವಲ್ಲಿ ಅವಳ ಚಾಣಾಕ್ಷತೆಯನ್ನು ತೋರಿಸುತ್ತಾಳೆ. ನಾಯಕನಹಟ್ಟಿ ಪ್ರಾಂತ್ಯದಲ್ಲಿ ತನ್ನ ಬೇಡಗಂಪಳ ನೆಲೆಸಿದ್ದಾಗ ಪಶುಸಂಪತ್ತನ್ನು ವಶಪಡಿಸಿಕೊಳ್ಳಲು ನಿಡುಗಲ್ಲಿನ ಹೊಟ್ಟೆಣ್ಣನಾಯಕ ಆಕ್ರಮಣ ಮಾಡಿ ೧೪ ದಿನಗಳ ಕಾಲ ದನಕರು ಸಹ ಮೇಯಲು ಹೊರಗಡೆ ಹೋಗದಂತೆ ದಿಗ್ಬಂಧನ ಹಾಕಿದಾಗ ನಾಯಕರ ಪ್ರತಿ ಹೋರಾಟ ಫಲಪ್ರದವಾಗುವುದಿಲ್ಲ, ಆಗ ವೃದ್ಧಾಪ್ಯದಲ್ಲಿದ್ದರೂ ರಾಯಮ್ಮನೆ ಕಾರ್ಯತಂತ್ರವನ್ನು ರೂಪಿಸಿ ಪ್ರತಿದಾಳಿ ನಡೆಸಲು ಹೊಟ್ಟಣ್ಣನಾಯಕ ಹೆದರಿ ಹಿಮ್ಮೆಟ್ಟುತ್ತಾನೆ. ಆ ಸ್ಥಳದಲ್ಲಿ ಅದರ ಸಂಕೇತವಾಗಿ ರಣಗಂಬಗಳನ್ನು ನೆಟ್ಟಿದ್ದಾರೆ. "ಮಹಿಳೆಯ ಸಾಮರ್ಥ್ಯ ಪ್ರಕಟಗೊಳ್ಳುವುದು ಅತ್ಯಂತ ಅವಶ್ಯಕ ಸಂದರ್ಭದಲ್ಲಿ ಮಾತ್ರ". (Abigail Adams –First Lady of the United States. 1744-1818)

ಹೀಗೆಯೇ ಅವಶ್ಯಕ ಸಂದರ್ಭಗಳಲ್ಲೆಲ್ಲಾ ಪ್ರಕಟಗೊಂಡಿದ್ದು ರಾಯಮ್ಮನ ಸಾಮರ್ಥ್ಯ. ಹೀಗೆ ತನ್ನಲ್ಲಿದ್ದ ಯುಕ್ತಿ ಮತ್ತು ಶಕ್ತಿಗಳ ಮೂಲಕ ಸಮುದಾಯದ ಆಂತರಿಕ ಸಮಸ್ಯೆಗಳನ್ನೂ ಮತ್ತು ಹೊರಗಿನಿಂದ ಬಂದ ಸಮಸ್ಯೆಗಳನ್ನು ಮುಖ್ಯವಾಗಿ ಆಕ್ರಮಣಕಾರೀ ಪ್ರಭುತ್ವವನ್ನು ಹಿಮ್ಮೆಟ್ಟಿಸುತ್ತಾಳೆ. ಆಕ್ರಮಣಕಾರೀ, ದಮನಕಾರೀ ಶತ್ರುಗಳನ್ನು ಹಿಮ್ಮೆಟ್ಟಿಸುವುದು ಸುಲಭದ ಮಾತೇನಲ್ಲ. ಆದರೆ ಹಿಮ್ಮೆಟ್ಟಿಸಿ ತನ್ನ ಸಂಸ್ಕೃತಿಯ ರಕ್ಷಣೆ ಮಾಡುತ್ತಾಳೆ. ಹೀಗೆ ಭಾರತೀಯ ಮಹಿಳೆಯರಲ್ಲಿ ಅಂತರ್ಗತವಾಗಿರುವ ಸಾಮರ್ಥ್ಯಕ್ಕೆ ಇವಳು ಉದಾಹರಣೆಯಾಗುತ್ತಾಳೆ. ಸಾಮಾನ್ಯವಾಗಿ ಹೆಣ್ಣು ತಾನು ಕಳೆದುಕೊಂಡ ಸ್ಥಾನಮಾನಗಳನ್ನು ಪಡೆಯಲು ತನ್ನ ಹಕ್ಕಿನ ಹೋರಾಟವನ್ನು ಮಾಡುವುದು ಒಂದು ವಿಶಿಷ್ಟ ಸಂಗತಿಯಾಗುತ್ತದೆ. ಆದರೆ ಇಲ್ಲಿ ತನಗೆ ಮತ್ತು ತನ್ನ ತಮ್ಮಂದಿರಿಗೂ ಆಗುತ್ತಿರುವ ಅಪಮಾನದಿಂದ ಹೊರಬರಲು ತಂದೆ ತನ್ನ ಪಿತೃತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿ ಅವರ ಮುಂದಿನ ಬದುಕಿಗೆ ಬೇಕಾದ ದಾರಿಯನ್ನು ನಿರ್ಮಿಸಿಕೊಡುವ ಹೊಣೆಗಾರಿಕೆಯನ್ನು ಆತನಿಗೆ ಉಂಟು ಮಾಡಿಸುವ ಮೂಲಕ ಪುರುಷರಿಗೆ ಸಹಾಯ ಮಾಡಿದ ಸಬಲೆಯಾಗುತ್ತಾಳೆ. ಒಟ್ಟಾರೆ ಅಕ್ಕರಾಯಮ್ಮನ ಬದುಕಿನ ಒಟ್ಟು ನಡೆಯನ್ನು ಗಮನಿಸಿದಾಗ ಕಥನದಲ್ಲಿಯೇ ಹೇಳಿರುವಂತೆ, ಆಕೆ ಕಡುಜಾಣೆ, ಆಕೆಯ ಶಕ್ತಿ, ಕುಶಲತೆಯಂತೂ ಆಕೆಯ ಸಹಜಜ್ಞಾನ ಎಂಬುದರಲ್ಲಿ ಅನುಮಾನವಿಲ್ಲ. "ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ಹೊರತು ಯಾರೂ ಹೆಣ್ಣಾಗಿಯೇ ಹುಟ್ಟುವುದಿಲ್ಲ. ಹೆಣ್ಣು ರೂಪಿಸಲ್ಪಟ್ಟವಳು" ಎಂದು ಹೇಳುತ್ತಾಳೆ ಸಿಮೊನ್ ಡಿ. ಬೊವಾ.[೪೪] ಅಂದರೆ ಹೆಣ್ಣುತನ, ಅಬಲೆ, ಪರಾವಲಂಬಿ ಎನ್ನುವುದು ಆಕೆಯ ಸಹಜಗುಣವಲ್ಲ. ಇದನ್ನು ಸ್ಪಷ್ಟಪಡಿಸುತ್ತದೆ ರಾಯಮ್ಮನ ಬದುಕು. ಮುಖ್ಯವಾಗಿ ಹೆಣ್ಣಿಗೆ ತನ್ನ ಸಾಮರ್ಥ್ಯದಲ್ಲಿ ವಿಶ್ವಾಸವಿರಬೇಕಷ್ಟೆ. ಆಗ ಎಲ್ಲವೂ ಸಾಧ್ಯವಾಗುತ್ತದೆ. ರಾಯಮ್ಮನಲ್ಲಿದ್ದ ಪ್ರಖರ

---

೪೪ Simone De Beauvoir (೧೯೪೨), The Second Sex; Random House, New York.

ವೈಚಾರಿಕ ಶಕ್ತಿ ಇದೆಲ್ಲವನ್ನೂ ಅವಳಿಗೆ ಸಾಧ್ಯ ಮಾಡಿಕೊಳ್ಳುವ ಹಾಗೆ ಮಾಡುತ್ತದೆ. ದಾಸ್ಯದ ಶೃಂಖಲೆಯಿಂದ ಹೆಣ್ಣು ಬಿಡುಗಡೆಯನ್ನು ಪಡೆಯಬೇಕಾದರೆ ದಿಟ್ಟತನ, ಸ್ಥೈರ್ಯ, ಧೈರ್ಯಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಬೇಕಾದರೆ ಪಾಶ್ಚಿಮಾತ್ಯ ಲೋಕದ ಸ್ತ್ರೀಶಕ್ತಿಗಳನ್ನು ನೋಡಿ ಕಲಿಯಬೇಕೆಂಬ ತಿಳುವಳಿಕೆ ಇರುವಂತಹ ಸನ್ನಿವೇಶದಲ್ಲಿ ತಮ್ಮ ದೇಸೀಯ ನೆಲೆಯಲ್ಲಿರುವ ಸ್ತ್ರೀವಾದೀ ಧೋರಣೆಗಳನ್ನು ಕಟ್ಟಿಕೊಂಡು ಹೋರಾಟಕ್ಕೆ ಅಣಿಗೊಳ್ಳಬೇಕಾದುದನ್ನು ರಾಯಮ್ಮನ ಅಂತಸ್ಸತ್ವವನ್ನು ಮಾದರಿಯಾಗಿಟ್ಟುಕೊಂಡು ರೂಪಿಸಿಕೊಳ್ಳಬೇಕಾಗಿದೆ. ಮಾನವ ಸಮೂಹಕ್ಕಾಗಲೀ, ಒಂದು ನಿರ್ದಿಷ್ಟ ಜನಾಂಗಕ್ಕಾಗಲೀ ಅಥವಾ ತನ್ನ ಸಮುದಾಯಕ್ಕಾಗಲೀ, ತನ್ನ ಕ್ರಿಯಾಶೀಲವಾದ ಹೋರಾಟದ ಮೂಲಕ ಅಗತ್ಯವಾದ ಸೌಲಭ್ಯಗಳನ್ನು ಅಥವಾ ನೀತಿ ಸಂಹಿತೆಯೊಂದನ್ನು ಕಟ್ಟಿಕೊಟ್ಟವನನ್ನು ಸಾಮಾನ್ಯವಾಗಿ ಆ ಗುಂಪಿನ ನಾಯಕ ಎಂದು ಪರಿಗಣಿಸಲಾಗುತ್ತದೆ ಎಂಬುದು ಸಾಮಾನ್ಯವಾಗಿ ಸಾಂಸ್ಕೃತಿಕ ನಾಯಕನ ಬಗೆಗಿನ ಅಧ್ಯಯನಕಾರರ ವ್ಯಾಖ್ಯಾನವಾಗಿದೆ. ಈ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ ರಾಯಮ್ಮ ಇಲ್ಲಿ ಹೋರಾಟದ ಮೂಲಕ, ಅದಕ್ಕೆ ಬೇಕಾದ ನೀತಿ ನಿಯಮಗಳನ್ನು ರೂಪಿಸುವ ಮೂಲಕ, ತನ್ನ ಧೀಮಂತಿಕೆ ಹಾಗೂ ಕ್ರಿಯಾತ್ಮಕತೆಯ ಮೂಲಕ ಒಟ್ಟು ಈ ಸಮುದಾಯದ 'ಸಾಂಸ್ಕೃತಿಕ ನಾಯಕಿ' ಎನಿಸುವ ಎಲ್ಲಾ ಅರ್ಹತೆಗಳನ್ನೂ ಈಕೆ ಪಡೆಯುತ್ತಾಳೆ. ಹೀಗಾಗಿಯೇ ಈ ಸಮುದಾಯ ಈಕೆಯನ್ನು ಸ್ಮರಣೆಯಲ್ಲಿರಿಸಿಕೊಂಡು ಆರಾಧಿಸುತ್ತಾ ಬರುತ್ತಿವೆ. ಎಪ್ಪತ್ತೇಳು ಹಟ್ಟಿಗಳಿಗೆ ಈಕೆ ಅಕ್ಕ. ಹಿರಿಯಳು ಎಂದು ಗೌರವಿಸಲ್ಪಟಿದ್ದಾಳೆ, ಮ್ಯಾಸಮಂಡಲದಾದ್ಯಂತ ಅನೇಕ ನೆಲೆಗಳಲ್ಲಿ ಈಕೆಯನ್ನು ಆರಾಧಿಸುತ್ತಾ ಈ ಸಮುದಾಯ ಸ್ಮರಣೆಯಲ್ಲಿರಿಕೊಂಡಿದೆ. ಹೀಗೆ ಅನನ್ಯತೆಗೆ ಏರಿದ ಈ ಮಹಿಳೆ ನಂತರದ ಪೀಳಿಗೆಯಲ್ಲಿ ದೈವೀಕರಣಗೊಂಡಿದ್ದಾಳೆ. ಹಾಗಾಗಿಯೇ ಈಕೆಯನ್ನು ಸಂಚುಲಕ್ಷ್ಮಿ ಎಂದು ಕರೆದು ಅಹೋಬಲ ನರಸಿಂಹಸ್ವಾಮಿಗೆ ಪ್ರಿಯಳಾದ ಇವಳು ಅವನೊಂದಿಗೆ ಗುರುತಿಸಲ್ಪಡುತ್ತಿದ್ದಾಳೆ. ನರಸಿಂಹಸ್ವಾಮಿ ಮತ್ತು ಸಂಚುಲಕ್ಷ್ಮಿ ಗಂಡ ಹೆಂಡತಿಯರು. ಈಕೆಯೇ ಕಂಪಳರಂಗನ ಪತ್ನಿ ಭಾಗ್ಯದ ಲಕ್ಷ್ಮಮ್ಮ ಎಂದೆಲ್ಲಾ ಹೇಳಲಾಗುತ್ತದೆ.

**ಅಕ್ಕರಾಯಮ್ಮನ ಹೊಗಳಿಕೆಯ ಪದಗಳು :**

ವ್ಯಕ್ತಿಯೊಬ್ಬರಿಗೆ ವಿಶಿಷ್ಟತೆ ಪ್ರಾಪ್ತವಾದಾಗ ಅವರನ್ನು ಹೊಗಳುವುದೂ ಅಷ್ಟೇ ಸಹಜ. ಈ ಹೊಗಳಿಕೆ ಆ ವ್ಯಕ್ತಿಯ ಬಗೆಗಿರುವ ಪ್ರೀತಿ, ಗೌರವ, ಭಕ್ತಿ. ಅಭಿಮಾನವನ್ನು ತೋರ್ಪಡಿಸುತ್ತವೆ. ಹೊಗಳಿಕೆಯಲ್ಲಿ ಉತ್ಪ್ರೇಕ್ಷಿತ ಅಂಶಗಳೂ ಇರಬಹುದು. ಆದರೆ ವಾಸ್ತವದ ಒಂದು ತಳಹದಿಯ ಮೇಲೆಯೇ ಅದು ನಿರ್ಮಿತವಾಗಿರುತ್ತದೆ.

ಕಾಟಮರಾಜನ ಕೊಲುವಲು ಎಂದು ಹೇಳಿಕೊಳ್ಳುವ ಛಲವಾದಿಗಳು ಎಂಬ ಸಮುದಾಯ ಮಧ್ಯಕರ್ನಾಟಕದಲ್ಲಿದೆ. ಇವರು ಉರುಮೆ ಎಂಬ ವಾದ್ಯವನ್ನು ಬಾರಿಸುತ್ತಾ ಮ್ಯಾಸಬೇಡರ ಕುಲದೇವತಾರಾಧನೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಮ್ಯಾಸಬೇಡರು ಮತ್ತು ಈ ಸಮುದಾಯದ ಮಧ್ಯೆ ಆತ್ಮೀಯವಾದ ಅವಿನಾಭಾವ ಸಂಬಂಧವಿದೆ. ಬೇಡಗಂಪಳದೊಂದಿಗೆ ಸಾಗಿ ಬಂದ ಸಮುದಾಯವಿದು.

ಇವರು ರಾಯಮ್ಮನ ಕೊಂಡಾಟವನ್ನು ಮಾಡುತ್ತಾರೆ. ಅವರ ಪ್ರಕಾರ ಈಕೆ ಸಾಮಾನ್ಯಳಲ್ಲ. ೭೭ ಗೊಡಗಿನ ಅಕ್ಕ ಎಂದರೆ ಮ್ಯಾಸರ ಹಟ್ಟಿಗಳು ಒಟ್ಟು ೭೭. ಪ್ರತಿಹಟ್ಟಿಗೂ ಒಬ್ಬೊಬ್ಬ ಯಜಮಾನನಿದ್ದು ಒಂದೊಂದಕ್ಕೂ ಒಂದು 'ಛತ್ರಿ' ಗೌರವ ಸೂಚಕವಾಗಿ ಬಳಕೆಯಾಗುತ್ತಿದ್ದಿರಬಹುದು. ಆದರೆ ಈ ಎಲ್ಲಾ ಹಟ್ಟಿಗಳ ಮೇಲೆ ಅಧಿಕಾರ ಇರುವಂತಹ ಸಾರ್ವಭೌಮಳು ರಾಯಮ್ಮ. ಹಾಗಾಗಿಯೇ ಈಕೆ ೭೭ ಛತ್ರಿ ಅಂದರೆ ೭೭ ಹಟ್ಟಿಗಳಿಗೆ ಅಕ್ಕ. ತನ್ನೊಂದಿಗೆ ಸೌಜನ್ಯದಿಂದ ಇರುವವರಿಗೆ ಬಾಳೆಯಹಣ್ಣಿನಂತೆ ಮೃದು ಮನಸ್ಸಿನಿಂದ ವ್ಯವಹರಿಸುತ್ತಾಳೆ. ನಿಡಗಲ್ಲು ಪ್ರಾಂತ್ಯಕ್ಕೂ ಈ ಮ್ಯಾಸಗಂಪಳ ಹೋಗಿದ್ದುದಾಗಿ ತಿಳಿದುಬರುತ್ತದೆ. ಆ ಪ್ರಾಂತ್ಯಕ್ಕೆ ಈಕೆ ಕಂಪನ್ನು ಸೂಚಿಸುವ ನಿತ್ಯಮಲ್ಲಿಗೆ ಇದ್ದಂತೆ. ಮೂರು ಪದವಿ ಪಡೆದ ಅಕ್ಕ ಅಂದರೆ ೭೭ ಹಟ್ಟಿಗಳು ಕಾಲಾಂತರದಲ್ಲಿ ಮೂರು ಕಟ್ಟೇಮನೆಗಳಾದವು. ರಾಯಮ್ಮನೇ ಇದನ್ನು ನಿಷ್ಕರ್ಷಿಸಿದವಳು. ನಾಯಕನಹಟ್ಟಿ, ಗೋಣೂರು ಮತ್ತು ನನ್ನಿವಾಳದ ಕಟ್ಟೇಮನೆ ಎಂದು. ಈ ಎಲ್ಲಾ ಮೂರು ಕಟ್ಟೇಮನೆಗಳಿಗೂ ಈಕೆ ನಾಯಕಿ. ನೂರೊಂದು ಮಲ್ಲನಾಯಕನವರು ಅಂದರೆ ಸುಕ್ಕಲು ಮಲ್ಲನಾಯಕನ ಸಂತತಿಯವರಿಗೆಲ್ಲಾ ಈಕೆ ಅಕ್ಕ. ಅಂದರೆ ಹಿರಿಯಳು ಎಂದು ಒಪ್ಪಿಕೊಂಡು ಕೊಂಡಾಟ ಮಾಡುತ್ತಾರೆ. ಮ್ಯಾಸಮಂಡಲದಲ್ಲಿ ಮೂಲತಃ ಇದ್ದವರು ಮೂರು ಮಂದಿ ಪೂಜಾರಿಗಳು, ಮೂರು ಮಂದಿ ದಾಸಯ್ಯಗಳು. ಮುಂಡಾಸುದಾಸರಿ, ಗೊಡಗುದಾಸರಿ, ಬೋಡಿದಾಸರಿ ಮಾತ್ರ. ಇವರಿಗೆಲ್ಲಾ ಹಿರಿಯಳೆಂದರೆ ಈಕೆ ಮಾತ್ರ. ಎಪ್ಪತ್ತೇಳು ಪಾಳೆಯಗಾರರಿಗೆ, ಏಳು ಮಂದಿ ದೊರೆಗಳಿಗಿಂತಲೂ ಶ್ರೇಷ್ಠಳೆಂದರೆ ಈಕೆ ಮಾತ್ರ. ಅಷ್ಟೆ ಅಲ್ಲ ಸಮುದಾಯವರ ಅಭಿಮಾನ ಎಷ್ಟೆಂದರೆ ಈಕೆ ಕೇವಲ ತಮ್ಮ ಬುಡಕಟ್ಟಿಗೆ ಮಾತ್ರವಲ್ಲದೆ ಇಡೀ ಜಗತ್ತಿಗೆ ಅಕ್ಕ. ಆದಿಶಕ್ತಿಗೆ ಸರಿಸಮಾನವಲ್ಲ, ಈಕೆಯೇ ಸ್ವತಃ ಆದಿಶಕ್ತಿ ಎಂದು ಗೌರವಿಸುತ್ತಾ ಬಂದಿದ್ದಾರೆ. ಹೀಗೆ ತನ್ನ ಸಮುದಾಯವರಿಂದಲೇ ಒಪ್ಪಿತವಾಗಿ ರಾಯಮ್ಮ ಅಧಿದೇವತೆ ಎಂಬ ಸ್ಥಾನಮಾನ ಪಡೆದು, ಇಂದಿಗೂ ಪಡೆಯುತ್ತಲಿರುವ ಈಕೆಯ ದೃಷ್ಟಿ ಒಂದು ಮುಷ್ಟಿಯಷ್ಟಾದರೂ ಒಂದು ಘಳಿಗೆ ಸಿಗಲಿ ಎಂದು ಬಯಸಿ ಬೇಡುತ್ತಾರೆ. ವರವೀಯುವ ದೇವತೆ ಎಂದು ಭಕ್ತಿ, ಶ್ರದ್ಧೆಯಿಂದ ಆರಾಧಿಸುತ್ತಿದ್ದಾರೆ.

**ಹೊಗಳಿಕೆಯ ಪದಗಳು**

'ಎಪ್ಪತ್ತೇಳು ಗೊಡಗಿನ ಅಕ್ಕ
ಬಾಯಿಗೆ ನೀಟು ಮಾತಿನಕ್ಕ
ಸಣ್ಣ ಮಲ್ಲಿಗೆಯಕ್ಕ
ದೊಡ್ಡ ಮಲ್ಲಿಗೆಯಕ್ಕ
ಸಣ್ಣ ಸೇವಂತಿಗೆಯಕ್ಕ
ದುಂಡು ಮಲ್ಲಿಗೆಯಕ್ಕ
ಬಾಗೋರಿಗೆ ಬಾಳೆಹಣ್ಣಿನಕ್ಕ
ನಿಡಗಲ್ಲು ನಿಚ್ಚಮಲ್ಲಿಗೆಯಕ್ಕ
ಮೂರು ಪದವಿಯ ಮೂರುಗೊಡಗಿನ ಅಕ್ಕ
ಮೂರು ಕಟ್ಟೆಗೆಯಕ್ಕ

ನೂರೊಂದು ಮಲ್ಲಿನಾಯಕನಿಗೆ ಅಕ್ಕ
ಮೂರು ಸಾವಿರ ಕುಲಕ್ಕೆ ಅಕ್ಕ
ಮೂರು ಮಂದಿ ಪೂಜಾರಿಗಳಿಗೆ ಅಕ್ಕ
ಮೂರು ಮಂದಿ ದಾಸರುಗಳಿಗೆ ಅಕ್ಕ
ಎಪ್ಪತ್ತೇಳು ಪಾಳೆಯಗಾರರಿಗೆ ಅಕ್ಕ
ಎಪ್ಪತ್ತೇಳು ದೊರೆಗಳಿಗೆ ಅಕ್ಕ
ಈ ಜಗತ್ತಿಗೆಲ್ಲಾ ನೀನೇ ದೊಡ್ಡಕ್ಕ
ಮಹಾದೇವಿಯೆಂದು ಈ ಧರೆಯೊಳಗೆ ಬಲ್ಲಿದಳು ನೀನೇ ಅಕ್ಕ
ನೀನೇ ಆದಿಶಕ್ತಿಯಕ್ಕ.[೪೫]

ಮೂಲತಃ ತೆಲುಗು ಭಾಷಿಕರಾದ ಮ್ಯಾಸಬೇಡರು ಈಕೆಯನ್ನು ಕುರಿತು ಕೋಲಾಟದ ಪದ ಕಟ್ಟಿ ಸ್ಮರಣೆಯಲ್ಲಿರಿಸಿಕೊಂಡಿದ್ದಾರೆ. ರಾಯಲು ಮೆಚ್ಚಿನ ಆಟಬಿಡ್ಡೇರ. ಅಂದರೆ ಸ್ವತಃ ರಾಜನೇ, ಬಹುಶಃ ವಿಜಯನಗರದ ಅರಸಿರಿರಬಹುದು. ಈಕೆಯ ಸಾಮರ್ಥ್ಯವನ್ನು ಮೆಚ್ಚಿದ್ದರು. ಅಂತಹ ಜಾಣೆಯಾದ, ಕಲಿಯಾದ ಈಕೆ ತಮ್ಮಂದಿರೊಂದಿಗೆ ಕೋಟಿಲಿಂಗಗಳನ್ನು ಮಡಿಲಿಗೆ ಕಟ್ಟಿಕೊಂಡು ಜಂಬುದ್ವೀಪದ ಗಡ್ಡೆಗೆ, ಅಂದರೆ ಇಂದಿನ ತಳುಕಿನ ಗರಣಿ ಪ್ರಾಂತ್ಯಕ್ಕೆ ಬಂದಳು ಎನ್ನುತ್ತಾ ಆಕೆಯನ್ನು ಕೊಂಡಾಟ ಮಾಡುತ್ತಾರೆ. ಹೀಗೆ ಜನಮನದಲ್ಲಿ ಅನೇಕ ಬಗೆಯಲ್ಲಿ ಉಳಿದುಬಂದಿರುವ ಈಕೆ ಯಾವುದೇ ವೈರುಧ್ಯವಿಲ್ಲದೆ ಸಾಂಸ್ಕೃತಿಕ ನಾಯಕಿಯ ಪಟ್ಟವನ್ನು ಪಡೆಯುತ್ತಾಳೆ.

### ಆ) ಮಲೆಯಮ್ಮನ ಪುರಾಣಗಳು



ಮುತ್ತಿಗಾರರಹಳ್ಳಿ ಅರಣ್ಯದಲ್ಲಿರುವ ಮಲೆಯಮ್ಮ

ಸಮುದಾಯವೊಂದರ ಅಳಿವು ಉಳಿವಿನ ಪ್ರಶ್ನೆ ಬಂದಾಗ ಅದನ್ನು ಉಳಿಸಲು ಮುಂದಾದವರೂ ಆ ಕಾರ್ಯದಲ್ಲಿ ಯಶಸ್ಸನ್ನು ಪಡೆದವರೂ ಆ ಸಮುದಾಯದ ಸ್ಮರಣೆಯಲ್ಲಿ ಉಳಿದುಬರುತ್ತಾರೆ. ಅವರನ್ನು

---

[೪೫] ಹೊಗಳಿಕೆಯ ಪದವನ್ನು ಹೇಳಿದವರು ಚಲುವಾದಿ ಹನುಮಂತಪ್ಪ, ಕೂನುಬೇವು, ಮ್ಯಾಸಬೇಡರ ಹಬ್ಬ, ಆಚರಣೆಗಳಲ್ಲಿ ಉರುಮೆ ವಾದ್ಯ ಬಾರಿಸುತ್ತಾರೆ.

ದೈವೀಕ ನೆಲೆಗೇರಿಸಿ ಸಮುದಾಯ ಪೂಜಿಸುತ್ತಾ ಬರುತ್ತದೆ. ತಾನು ರೂಪಿಸಿದ ಕಾರ್ಯತಂತ್ರವೇ ಕಾರಣವಾಗಿ ಸಮುದಾಯವನ್ನು ರಕ್ಷಿಸಿದ 'ಮಲೆಯಮ್ಮ' ಮ್ಯಾಸಮಂಡಲದಲ್ಲಿ ಸ್ಮರಣೆಗೆ ಪಾತ್ರಳಾಗಿದ್ದಾಳೆ. ಈಕೆಯ ಬಗ್ಗೆ ಕಥನವನ್ನು ಕಟ್ಟಿ ತಮ್ಮ ನೆನಪಿನಂಗಳದಲ್ಲಿ ಈಕೆಯನ್ನು ಜೀವಂತವಾಗಿರಿಸಿಕೊಂಡಿದ್ದಾರೆ. ತಮಗೆ ರೋಗ, ರುಜಿನ, ಕಷ್ಟ, ಕಾರ್ಪಣ್ಯಗಳು, ದನಕರುಗಳಿಗೆ ಅನಾರೋಗ್ಯ ಇತರೆ ತಾಪತ್ರಯಗಳು ಬಾಧಿಸಿದಾಗಲೆಲ್ಲಾ ಕಾಡಿನಲ್ಲಿರುವ ಮಲೆಯಮ್ಮನ ನೆಲೆ ಬಳಿಗೆ ಓಡುತ್ತಾರೆ. ದುಂಬಾಲು ಬೀಳುತ್ತಾರೆ. ಹರಕೆ ಹೊತ್ತುಕೊಂಡು ಬರುತ್ತಾರೆ. ಆಕೆ ಯಾವ ರೂಪದಲ್ಲಾದರೂ, ಕೊನೆಗೆ ಒಬ್ಬ ಚಿಕ್ಕ ಬಾಲಕಿಯಾಗಿಯಾದರೂ ಅಂದಿನ ಕನಸಿನಲ್ಲಿ ಬಂದರೆ ತಮ್ಮ ಸಮಸ್ಯೆ ಪರಿಹಾರವಾದಂತೆಯೇ ಎಂದು ನಂಬುತ್ತಾರೆ. ವಕ್ತೃಗಳು ಕೊಡುವ ವಿವರಗಳ ಮೂಲಕ ಆಕೆಯ ಬಗೆಗೆ ಹರಡಿರುವ ಪುರಾಣ-ಕಥೆಗಳನ್ನು ಹೀಗೆ ಗ್ರಹಿಸಬಹುದಾಗಿದೆ.

**ಪುರಾಣ-೧**

ಶ್ರೀಶೈಲ ಪ್ರಾಂತ್ಯದಲ್ಲಿ ನೆಲೆಸಿದ್ದ ಬೇಡಗಂಪಳವು ಕಾರಣಾಂತರಗಳಿಂದ ಕಾಟಮಲ್ಲನಾಯಕನ ನೇತೃತ್ವದಲ್ಲಿ ಮಧ್ಯಕರ್ನಾಟಕದ ಕಡೆ ಬಂದಿತು ಎಂದು ಇದುವರೆಗೆ ನಡೆದಿರುವ ಅಧ್ಯಯನಗಳಲ್ಲಿ ಹೇಳಲಾಗಿದೆ. ಆದರೆ ಸಮುದಾಯದ ವಕ್ತೃಗಳು ಕೊಡುವ ವಿವರದ ಪ್ರಕಾರ ಇವರು ಹಲವು ತಂಡಗಳಾಗಿ ಬಂದರು. ಕಾಟನಾಯಕನ ಮಲ್ಲಯ್ಯನಾಯಕನ ನೇತೃತ್ವದಲ್ಲಿ ಒಂದು ತಂಡ ಬಂದ ನಂತರ ಸ್ವಲ್ಪ ಕಾಲದಲ್ಲಿಯೇ ಮತ್ತೊಂದು ತಂಡವೂ ಇತ್ತ ಬರುತ್ತದೆ. ಈ ತಂಡದವರನ್ನು ಮೂಲದಲ್ಲಿ ೧೨ ಗುಡಿಸಲಿನವರು ಎಂದು ಕರೆಯಲಾಗುತ್ತಿತ್ತು. ಬರುತ್ತಿರುವಾಗ ದಾರಿಯಲ್ಲಿ ಅಲ್ಲಲ್ಲಿ ತಮ್ಮ ಪಶುಸಂಪತ್ತಿನೊಂದಿಗೆ ತಂಗುತ್ತಾರೆ. ಹೀಗೆಯೇ ಆನೆಗೊಂದಿ ಪ್ರಾಂತ್ಯದಲ್ಲಿ ಕೆಲವು ದಿನ ನೆಲೆಸಿರುತ್ತಾರೆ. ಅಲ್ಲಿಂದ ಮುಂದೆ ಸೊಂಡೂರು ಕಿಂಡಿಯ ಬಳಿ – ಕಿಂಡಿ ಬಸವಣ್ಣನ ಬಳಿ ಎಂಬ ಅಭಿಪ್ರಾಯವಿದೆ. ಕಾಡಿನ ಅಂಚಿನಲ್ಲಿ ತಮ್ಮ ಪಶುಗಳನ್ನು ಮೇಯಿಸುತ್ತಾ ಗೂಡುಗಳನ್ನು ಕಟ್ಟಿಕೊಂಡು ಕಾಲ ಹಾಕುತ್ತಿರುತ್ತಾರೆ. ಇಲ್ಲಿಗೆ ಹತ್ತಿರದ ಪ್ರದೇಶ ಗೆದ್ದವಲ್ಲಿ ಎಂಬುದಾಗಿದ್ದು ಅಲ್ಲಿಯ ದೊರೆಯನ್ನು 'ಗೆದ್ದಲ ಕಟ್ಟೆರಾಜ' ಎಂದು ಕರೆಯುತ್ತಿದ್ದರು. ತಮ್ಮ ದನಗಳ ಗೂಡಿನೆಡೆಯಿಂದ ದಿನಭತ್ಯೆ ಅಂದರೆ ಹಿಟ್ಟು, ಧಾನ್ಯಕ್ಕಾಗಿ ಈ ಮ್ಯಾಸರಲ್ಲಿ ಕೆಲವರು ಊರೊಳಗೆ ಅಪರೂಪವಾಗಿ ಬರುತ್ತಿದ್ದರು. ಹೀಗೆ ಎತ್ತಿನ ಗೂಡಿನಿಂದ 'ಕಿಲಾರಿ' (ಎತ್ತುಗಳನ್ನು ಕಾಯುವವನು.) ಊರೊಳಗೆ ಬರುತ್ತಾನೆ. ಆತನ ಹೆಸರು ದಾನಸೂರಿ. ಆಕರ್ಷಕವಾದ ರೂಪ, ಅಂಗಸೌಷ್ಠವದಿಂದ ಕೂಡಿದ ಈತನನ್ನು ಊರಿನ ಒಬ್ಬ ಯುವತಿ ಕಂಡು ಮೋಹಿಸುತ್ತಾಳೆ. ಆ ಊರಿನ ದೊರೆಗೆ ಅವಳ ಮೇಲೆ ಮೋಹವಿರುತ್ತದೆ. ಹೀಗಾಗಿ ರಾಜನ ಭಯದಿಂದ ಆಕೆ ಹಿಂಜರಿಯುತ್ತಾಳೆ. ನಂತರ ಧೈರ್ಯ ಮಾಡಿ 'ಕಿಲಾರಿ'ಯೊಂದಿಗೆ ಮಾತನಾಡಿ ತನ್ನೊಂದಿಗೆ ಬಾಳಲು ಕೇಳಿಕೊಳ್ಳುತ್ತಾಳೆ. ಕಿಲಾರಿಯೂ ರಾಜನಿಗೆ ಹೆದರಿ ಮೊದಲು ನಿರಾಕರಿಸುತ್ತಾನೆ. ಮೂರು ರಾತ್ರಿ, ಮೂರು ಹಗಲು ಅವನು ತನ್ನ ವಶವಾಗಲೆಂದು ಆಶಿಸಿ ತಪಸ್ಸು ಮಾಡುತ್ತಾಳೆ. ಕಿಲಾರಿ ತನ್ನ ವಶಕ್ಕೆ ಬಂದರೆ ಕಲ್ಲು ದೋಣಿಗೆ ಜೇನುತುಪ್ಪ ಹಾಕಿಸಿ ಎತ್ತುಗಳಿಗೆ ಅದನ್ನೇ ನೈವೇದ್ಯ ಎಂದು ನೀಡುತ್ತೇನೆ ಎಂದು ಹರಕೆ ಮಾಡಿಕೊಂಡು ಧ್ಯಾನ ಮಾಡುತ್ತಾಳೆ. ತಪಸ್ಸು ಫಲಿಸಿತೆಂಬಂತೆ ಕೊನೆಗೆ ಕಿಲಾರಿ ಈಕೆಯ ಇಚ್ಛೆಗೆ ಸಮ್ಮತಿಸಲು ತನ್ನ ಕೈಬೆರಳಲ್ಲಿದ್ದ

ಉಂಗುರವನ್ನು ಆತನ ಬೆರಳಿಗೆ ತೊಡಿಸಿ ಆತನ ಹಿಂದೆ ಬರುತ್ತಾಳೆ. ಪಶು ಸಂಪತ್ತು ಮತ್ತು ತಮ್ಮ ಮ್ಯಾಸಕಂಪಳದೊಂದಿಗೆ ಇವರು ಮುಂದಕ್ಕೆ ಸಾಗಿ ಬರುತ್ತಿರಲು ನದಿ ತಡೆದು ನಿಲ್ಲಿಸುತ್ತದೆ. ಪ್ರಯಾಣಕ್ಕೆ ತಡೆಯುಂಟಾಗುತ್ತದೆ. ಈ ವೇಳೆಗೆ ಗೆದ್ದವಲ್ಲಿಯ ರಾಜನಿಗೆ ತಾನು ಮೋಹಿಸಿದ್ದ ಹೆಣ್ಣು ಒಬ್ಬ ಸಾಮಾನ್ಯ ಪಶುಪಾಲಕನಾದ 'ಕಿಲಾರಿ'ಯ ಹಿಂದೆ ಹೋದಳು ಎಂಬ ಸುದ್ದಿ ತಿಳಿದು ರೋಷದಿಂದ ಅವರನ್ನು ತಡೆಯಲು ತನ್ನ ದಂಡನ್ನು ಕಳುಹಿಸುತ್ತಾನೆ. ಆ ವೇಳೆಗೆ ಕಿಲಾರಿಯನ್ನು ಮೆಚ್ಚಿ ಹಿಂದೆ ಬಂದ ಹೆಣ್ಣಿಗೆ ಕನಸಾಗಿ ತಮ್ಮನ್ನು ತಡೆಯಲು ದೊರೆ ದಂಡನ್ನು ಕಳುಹಿಸುತ್ತಿರುವ ಸೂಚನೆ ಸಿಗುತ್ತದೆ. ಸ್ವತಃ ಧೈರ್ಯಸ್ಥನಾಗಿದ್ದರೂ ಕಿಲಾರಿಗೆ ಆತಂಕ ಪ್ರಾರಂಭವಾಗುತ್ತದೆ. ಕಾರಣ ರಾಜನ ಸಶಸ್ತ್ರಬಲದ ಮುಂದೆ ತಮ್ಮ ಕೋಲು ಕಡ್ಡಿಗಳಿಂದ ಏನು ಪ್ರತಿರೋಧ ಒಡ್ಡಲು ಸಾಧ್ಯ ಎಂಬುದೇ ಅವನ ಚಿಂತೆಯಾಗಿ ಕಂಗಾಲಾಗಿ ಕುಳಿತುಕೊಳ್ಳುತ್ತಾನೆ. ಆಗ ಇವರ ಗುಂಪಿನಲ್ಲಿ 'ಮಲೆಯಮ್ಮ' ಎಂಬ ಹಿರಿಯ ಮಹಿಳೆ ಇದ್ದು ಆಕೆ ಕಿಲಾರಿಗೆ ಧೈರ್ಯ ಹೇಳುತ್ತಾಳೆ. ಅಕ್ಕರಾಯಮ್ಮನ ಮಗಳು ಎಂದು ಕೆಲವರೂ, ಕೆಲವರು ಆಕೆಯ ಕಿರಿಯ ಸಮಕಾಲೀನಳು ಎಂದೂ ಹೇಳುತ್ತಾರೆ. ನೀನು ಹೆದರುವ ಅಗತ್ಯವಿಲ್ಲ. ಆಕೆ ನಿನ್ನನ್ನು ಮೆಚ್ಚಿ ನಿನ್ನ ಹಿಂದೆ ಬಂದಿದ್ದಾಳೆಯೇ ಹೊರತು ನೀನು ಆಕೆಯನ್ನು ಅಪಹರಿಸಿಕೊಂಡು ಬಂದಿಲ್ಲ. ಹಾಗಾಗಿ ನೀನು ತಪ್ಪಿತಸ್ಥನಲ್ಲ. ನ್ಯಾಯಧರ್ಮ ಎನ್ನುವುದು ಇದ್ದೇ ಇದೆ ಅದು ನಿನ್ನನ್ನು ಕಾಪಾಡುತ್ತದೆ ಎಂದು ತಿಳಿಸುತ್ತಾಳೆ. ಬೇಡಗಂಪಳವನ್ನೂ, ಪಶುಸಂಪತ್ತನ್ನೂ ನಾನು ರಕ್ಷಿಸುತ್ತೇನೆ ಎಂದು ಭರವಸೆ ಕೊಡುತ್ತಾಳೆ. ಆ ವೇಳೆಗೆ ದೊರೆಯ ಕಡೆಯವರು ಕತ್ತಿ, ಈಟಿಗಳನ್ನು ಹಿಡಿದು ಬರುತ್ತಾರೆ. ಮಲೆಯಮ್ಮ ತಮ್ಮ ಎತ್ತುಗಳ ಸುತ್ತಲೂ ಮೂರು ಬಾರಿ ಪ್ರದಕ್ಷಿಣೆ ಹಾಕಿ ಈಗ ನಮ್ಮನ್ನೂ ನಮ್ಮ ಕಂಪಳ ಹಾಗೂ ಪಶುಸಂಪತ್ತನ್ನೂ ನೀವೇ ರಕ್ಷಿಸಬೇಕು ಎಂದು ಪ್ರಾರ್ಥಿಸುತ್ತಾಳೆ. ಕಿಲಾರಿಗಳಿಗೆ ಮತ್ತು ಇಡೀ ಮ್ಯಾಸಗಂಪಳಕ್ಕೆ ಜೋರಾಗಿ ಕೇಕೆ ಹಾಕಿ ಎನ್ನುತ್ತಾಳೆ. ಈ ಧ್ವನಿಗೆ ಬೆದರಿದ ಎತ್ತುಗಳು ಧೂಳೆಬ್ಬಿಸುತ್ತಾ ಕುಣಿಯಲು ಆರಂಭಿಸುತ್ತವೆ. ಇಲ್ಲಿ ಎತ್ತುಗಳೇ ಶಕ್ತಿಗಳಾಗಿ ರೂಪುಗೊಳ್ಳುತ್ತವೆ. ಹಸು ಹಾಗೂ ಎತ್ತುಗಳು ಕಾಲು ಕೆದರುತ್ತಾ, ಕುಣಿಯುತ್ತಾ ಧೂಳು ಎಬ್ಬಿಸಿದವು. ಅಪಾರವಾದ ಧೂಳೆದ್ದು ಆ ಧೂಳಿಗೆ ಸಿಕ್ಕಿದ ಎದುರಾಳಿಗಳ ಸೇನೆ ತಬ್ಬಿಬ್ಬಾಯಿತು. ಎತ್ತುಗಳ ಕೊಂಬುಗಳೇ ಕತ್ತಿಗಳಾದವು, ಬಾಲವೇ ಬಾಣದಂತಾಯಿತು, ಸೇನೆ ಮತ್ತು ಈ ಎತ್ತುಗಳ ಮಧ್ಯೆ ಹೀಗೆ ಘರ್ಷಣೆ ನಡೆದು ಶತ್ರುಗಳು ಎತ್ತುಗಳ ಇರಿತಕ್ಕೆ ಸಿಕ್ಕು ನಾಶವಾದರು. ಕೆಲವರು ಹೆದರಿ ಓಡಿಹೋಗುತ್ತಾರೆ. ಪಶುಪಾಲಕರಾದ ಇವರಿಗೆ ಎತ್ತು, ಹಸು, ಕೇವಲ ತಮ್ಮ ಉದರ ಪೋಷಣೆಗಾಗಿ ಅಥವಾ ಪ್ರತಿಷ್ಠೆಗಾಗಿ ಮಾತ್ರವಲ್ಲ. ತಮ್ಮ ಬದುಕಿನ ಅವಿಭಾಜ್ಯ ಅಂಗವಾಗಿರುವ ಅವುಗಳು ತಮ್ಮ ಒಡನಾಡಿ ಜನದಂತೆಯೂ ಹೌದು. ದೈವೀಕ ಅಂಶ ಪಡೆದ ಶಕ್ತಿಗಳೂ ಹೌದು. ಮ್ಯಾಸಬೇಡರಂತೆಯೇ ಪಶುಪಾಲಕರಾಗಿದ್ದ ಕಾಡುಗೊಲ್ಲರ ಪುರಾಣದಲ್ಲಿ ಸಹ ಇಂತಹ ಎತ್ತಿನ ಪ್ರಸ್ತಾಪ ಬರುತ್ತದೆ. ಎತ್ತಪ್ಪ ಮತ್ತು ಜುಂಜಪ್ಪನೊಂದಿಗೆ ಶಕ್ತಿಯೋಪಾದಿಯಲ್ಲಿ ಜೊತೆಗಿದ್ದದ್ದು 'ಬಡಮೈಲ' ಎಂಬ ಎತ್ತು. ಹೀಗೆ ಗೆದ್ದವಲ್ಲಿ ರಾಜನ ಸೇನೆಯನ್ನು ಮಣಿಸಿದವು ಎತ್ತುಗಳೇ ಅದರೂ ಆ ಉಪಾಯವನ್ನು ಮಾಡಿ ಎತ್ತುಗಳು ಧೂಳೆಬ್ಬಿಸುತ್ತಾ ಹುಚ್ಚೆದ್ದು ಕುಣಿಯುವಂತೆ ಮಾಡಿದವಳು ಮಲೆಯಮ್ಮ. ತನ್ನ ಯುಕ್ತಿಯ ಮೂಲಕ ತಮ್ಮ ಕಂಪಳಕ್ಕೆ ಬಂದಿದ್ದ ವಿಪತ್ತನ್ನು ಪಾರು ಮಾಡಿದಳು ಈ ಮಲೆಯಮ್ಮ. ಗೆಲುವು ಸಿಕ್ಕ ನಂತರ ತಾವು ಇನ್ನು

ಇಲ್ಲಿರುವುದು ಸುರಕ್ಷಿತವಲ್ಲ ಎಂದು ಪ್ರಯಾಣ ಬೆಳೆಸಲು ಈ ಗುಂಪು ಸಿದ್ಧವಾಯಿತು. ಸೋತ ರಾಜನಾದರೋ ಅವಳು ಹೋದರೆ ಹೋಗಲಿ, ಅವಳ ಹಿಂದೆ ಎಲ್ಲರೂ ಹೋಗಲು ಸಾಧ್ಯವೇ? ಇಲ್ಲಿರುವ ಕಾಗೆ, ಹದ್ದನ್ನೂ ಅವನೇನು ಕೊಂಡೊಯ್ಯಲಾರ. ಕೇವಲ ಒಬ್ಬ ಹೆಂಗಸನ್ನು ಮಾತ್ರ ತೆಗೆದುಕೊಂಡು ಹೋಗಿದ್ದಾನೆ ಎಂದು ಕಿಲಾರಿಯನ್ನು ತೆಗಳುತ್ತಾ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬಂತೆ ಪ್ರತಿಷ್ಠೆಯ ಮಾತನ್ನಾಡುತ್ತಾನೆ. ಆಗ ಈ ವಿಷಯ ತಿಳಿದ ಮಲೆಯಮ್ಮ 'ಕಿಲಾರಿ'ಯೊಂದಿಗೆ ಈ ರಾಜ್ಯದಲ್ಲಿರುವ ಹದ್ದು, ಕಾಗೆ, ಕೊನೆಗೆ ಇರುವೆಯನ್ನೂ ಕೊಂಡೊಯ್ಯೋಣ. ಇವನಿಗೆ ತಕ್ಕ ಪಾಠ ಕಲಿಸಬೇಕು ಎಂದು ಹೇಳುತ್ತಾಳೆ. ಅನ್ನ, ಮಾಂಸ, ರಕ್ತಗಳನ್ನು ಚೆಲ್ಲುತ್ತಾ ಬನ್ನಿ ಎಂದು ಹೇಳುತ್ತಾಳೆ. ಇರುವೆಗಳಿಗೆ ಸಕ್ಕರೆಯನ್ನು ಚೆಲ್ಲುತ್ತಾ ಬನ್ನಿ ಎನ್ನುತ್ತಾಳೆ. ಆಹಾರದ ಆಸೆಗೆ ಹದ್ದು, ಕಾಗೆ, ಇರುವೆ ಹೀಗೆ ಎಲ್ಲಾ ಪ್ರಾಣಿಗಳೂ ಇವರನ್ನು ಹಿಂಬಾಲಿಸಿಕೊಂಡು ಬರುತ್ತವೆ. ಹೀಗೆ ದನಕರುಗಳನ್ನು ಸಾಗಿಸಿಕೊಂಡು ಬರುತ್ತಾರೆ. ತಾವಿನ್ನು ಸುರಕ್ಷಿತವಾಗಿದ್ದೇವೆ ಎಂಬಷ್ಟು ದೂರ ಬಂದ ಮೇಲೆ ಮಲೆಯಮ್ಮ ತಮಗೆ ದೊರೆತ ವಿಜಯಕ್ಕೆ ತಮ್ಮ ಸಮುದಾಯದ ಅಧಿದೇವತೆಯಾದ ಮಾರಮ್ಮನ ಕೃಪೆಯೇ ಕಾರಣ, ಹಾಗಾಗಿ ಮಾರಮ್ಮನನ್ನು ಪೂಜಿಸಬೇಕು ಎಂದು ತೀರ್ಮಾನಿಸುತ್ತಾಳೆ. ಮಣ್ಣಿನಲ್ಲಿ ಮಾರಮ್ಮನ ಪ್ರತಿಮೆಮಾಡಿ, ಕುರಿಕೊಯ್ದು, ಜನಿಗೆ ಹಸುವಿನ ಹಾಲನ್ನು ಅದಕ್ಕೆ ಹಾಕಿ, ಎಡೆಹಾಕಿ ಪೂಜೆ ಮಾಡಿ ತನ್ನ ಕಂಪಳದೊಂದಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ ಅಲ್ಲಿಂದ ಮುಂದೆ ಪ್ರಯಾಣ ಕೈಗೊಳ್ಳುತ್ತಾರೆ. ಕೊನೆಗೆ ಇವರು ನೆಲೆ ನಿಂತಿದ್ದು ಇಂದಿನ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಅರಣ್ಯ ಪ್ರದೇಶಗಳಲ್ಲಿ, ಮುಂದೆ ಇದೇ ವ್ಯಾಪ್ತಿಗೆ ಸೇರಿದ ಊಟಕುಂಟೆ ಬಳಿಯ ಅಲಕಲು ಬಂಡೆಯ ಹತ್ತಿರ ಕಾಲಾನಂತರ ಕಿಲಾರಿಯ ಸಮಾಧಿ ಮಾಡಲಾಯಿತು ಎಂಬುದು ಸಮುದಾಯವರ ನಂಬಿಕೆ. ಮುಖ್ಯವಾಗಿ ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಮ್ಯಾಸಬೇಡರ ಹಟ್ಟಿಗಳ ಜನ ಈಕೆಯನ್ನು ತಮ್ಮ ಆರಾಧ್ಯದೇವತೆ ಎಂದು ಪೂಜಿಸುತ್ತಿದ್ದಾರೆ. ಈಕೆಯ ಬಗ್ಗೆ ಕಥನಗಳನ್ನು ಕಟ್ಟಿ ಹಾಡುತ್ತಾರೆ. ಹೀಗೆ ಅವಶ್ಯಕ ಸಂದರ್ಭದಲ್ಲಿ ಸಾಂದರ್ಭಿಕ ಜಾಣ್ಮೆಯನ್ನು ಬಳಸಿಕೊಂಡು ಸಮುದಾಯದ ರಕ್ಷಣೆ ಮಾಡಿದ ಮಲೆಯಮ್ಮ 'ಅತ್ಯಂತ ಅವಶ್ಯಕ ಸಂದರ್ಭದಲ್ಲಿ ಮಾತ್ರ ಸಾಮರ್ಥ್ಯ ಪ್ರಕಟಗೊಳ್ಳುತ್ತದೆ" ಎಂಬ ಸ್ತ್ರೀವಾದಿಯಾದ Abigail Adams (1744-1818)ಳ ಮಾತಿಗೆ ಉದಾಹರಣೆ ಆಗುತ್ತಾಳೆ.

**ಪುರಾಣ-೨**

ಮೊಳಕಾಲ್ಮೂರು ತಾಲೂಕು ಚಿತ್ರದುರ್ಗ ಜಿಲ್ಲೆಗೆ ಸೇರಿದ ಒಂದು ಪುಟ್ಟ ಹಳ್ಳಿ ಮರ್ಲಹಳ್ಳಿ. ಹೆಚ್ಚಾಗಿ ಮ್ಯಾಸನಾಯಕರೇ ವಾಸಿಸುತ್ತಿರುವ ಪ್ರದೇಶವಿದು. ಒಮ್ಮೆ ದೆಡ್ಡಿಸೂರನಾಯಕನ ಎತ್ತುಗಳ ಗೂಡುಗಳು ಅಲ್ಲಿದ್ದವು. ಈತ ಈಗ ಒಬ್ಬ ಸಾಂಸ್ಕೃತಿಕ ನಾಯಕ/ಶರಣ ಎಂದು ಪರಿಗಣಿಸಲ್ಪಟ್ಟು ಆರಾಧಿಸಲ್ಪಡುತ್ತಿದ್ದಾನೆ. ಪಶುಸಂಪತ್ತು ಇರುವ ಕಡೆ ಹಾಲು ಕಾಯಿಸುವುದು, ಹೆಪ್ಪು ಹಾಕಿ ಮೊಸರು ಮಾಡಿ ಕಡೆಯುವುದು, ಇದೆಲ್ಲಾ ಸಾಮಾನ್ಯವಾಗಿರುವ ಸಂಗತಿ. ಒಮ್ಮೆ ಇಲ್ಲಿ ದನಗಳ ಗೂಡಿನಲ್ಲಿದ್ದ ಮ್ಯಾಸರು ಒಂದು ಆಲದಮರದ ಕೊಂಬೆಯನ್ನು ಕಡಿದು ತಮ್ಮ ಗೂಡಿನ ಮುಂಭಾಗದಲ್ಲಿ ನೆಟ್ಟು ಅದನ್ನೇ

ಮಜ್ಜಿಗೆ ಕಡೆಯುವ ಕಂಬವನ್ನಾಗಿ ಮಾಡಿಕೊಂಡು ಮಜ್ಜಿಗೆ ಕಡೆಯುತ್ತಿದ್ದರಂತೆ. ಕೆಲವೇ ದಿನಗಳಲ್ಲಿ ಆ ಮರ ಚಿಗುರುತ್ತದೆ. ಆ ಮರದ ಕೆಳಗೆ ಮಲೆಯಮ್ಮ ಒಡಮೂಡಿದಳು ಎಂಬುದು ಆ ಸಮುದಾಯದವರ ನಂಬಿಕೆ. ಮಜ್ಜಿಗೆ ಕಡೆಯುವ ಕಂಬದಲ್ಲಿ ಮಲೆಯಮ್ಮ ಜನಿಸಿದಳು ಎಂದು ಹೇಳುತ್ತಾ ಆ ಪ್ರಾಂತ್ಯದ ಜನ ಆಕೆಯನ್ನು ಪೂಜಿಸುತ್ತಾ ಬರುತ್ತಿದ್ದಾರೆ.

**ಪುರಾಣ –೩**

ಬಳ್ಳಾರಿ ಜಿಲ್ಲೆಯ ಕೂಡ್ಲಿಗೆ ತಾಲ್ಲೂಕಿಗೆ ಸೇರಿದ ಹಳ್ಳಿ ಜುಮ್ಮೋಬನ ಹಳ್ಳಿ. ಹಳ್ಳದ ಒಂದು ಬದಿಯಲ್ಲಿ ಹಳ್ಳಿ ಮತ್ತೊಂದು ಬದಿಯಲ್ಲಿ ಮ್ಯಾಸಬೇಡರ ಹಟ್ಟಿ ಇದೆ. ಹಳ್ಳಿಯಲ್ಲೂ ಮ್ಯಾಸನಾಯಕರಿದ್ದಾರೆ. ಇಲ್ಲಿ ಎರಡೂ ಕಡೆ ಮಲೆಯಮ್ಮನ ಗುಡಿ ಇದೆ. ಮೂಲತಃ ಹಟ್ಟಿಯಲ್ಲಿ ಅಂದರೆ ಹಳ್ಳದ ಸಮೀಪದಲ್ಲಿ ಮಾತ್ರ ಇತ್ತು. ಕ್ರಮೇಣ ಊರಲ್ಲಿಯೂ ಒಂದು ಗುಡಿಕಟ್ಟಿ ಅಲ್ಲಿಯೂ ಮಲೆಯಮ್ಮನನ್ನು ಇರಿಸಿ ಪೂಜಿಸುತ್ತಾರೆ ಹಳ್ಳದ ಬಳಿ ತೀರಾ ಹಳೆಯ ಗಟ್ಟಿಯಾದ ಒಂದು ಮಣ್ಣಿನ ಮೂರ್ತಿಯಿದೆ ಮತ್ತು ಇರುವ ಗುಡಿಯಲ್ಲಿ ಕುದುರೆ ಮೇಲೆ ಕುಳಿತ ಸ್ತ್ರೀಯ ವಿಗ್ರಹವಿದೆ. ಅದಕ್ಕೆ ಬಿಳಿ ಸೀರೆಯನ್ನು ಉಡಿಸಿರುತ್ತಾರೆ. ಗುಡಿಯ ಎದುರುಗಡೆ ಮಾತಂಗಿಯಮ್ಮನ ಗುಡಿ ಇದೆ. ಊರೊಳಗಿರುವ ಗುಡಿಯಲ್ಲಿಯೂ ಇದೇ ಬಗೆಯ ವಿಗ್ರಹವಿದ್ದರೂ ಅದರ ಮುಖವನ್ನು ಮಾತ್ರ ಪೆಟ್ಟಿಗೆಯಲ್ಲಿಟ್ಟು ಪೂಜಿಸುತ್ತಾರೆ. ಉಳಿದ ಭಾಗಗಳನ್ನು ಬೇರ್ಪಡಿಸಿ ಮಾಡಿಗೆ ಕಟ್ಟಿರುತ್ತಾರೆ. ಜಾತ್ರೆಯ ದಿನ ಇವೆಲ್ಲವನ್ನು ಸೇರಿಸಿ ಅದಕ್ಕೊಂದು ಸ್ವರೂಪ ಕೊಡುತ್ತಾರೆ. ಮ್ಯಾಸಬೇಡರ ತಂಡ ಸೊಂಡೂರು ಕಿಂಡಿಯ ಮೂಲಕ ಇತ್ತಬರುವಾಗ ಮಲೆಯಮ್ಮನೇ ಮಣ್ಣಿನ ಮಾರಮ್ಮನ ಮೂರ್ತಿಯನ್ನು ಮಾಡಿ ಪೂಜಿಸಿ ಬಂದಿರುತ್ತಾಳೆ. ಅದೇ ದಾರಿಯಲ್ಲಿ ನಂತರ ಸಾಗಿ ಬಂದ ಕೊರಚರು ಈ ಮೂರ್ತಿಯನ್ನು ತೆಗೆದುಕೊಂಡು ಬಂದು ಈ ಹಟ್ಟಿಯವರಿಗೆ ತಲುಪಿಸಿದರು. ಹೀಗಾಗಿ ತಮಗೆ ಮಲೆಯಮ್ಮ ಬಂದದ್ದು ಕೊರಚರ ಕಡೆಯಿಂದ ಎಂಬುದು ಈ ಹಟ್ಟಿಯವರ ನಂಬಿಕೆ.

**ಮಲೆಯಮ್ಮ ಪುರಾಣದ ವಿಶ್ಲೇಷಣೆ :**

ಆಹಾರ ಸಂಗ್ರಹಣೆಯನ್ನಾಧರಿಸಿದ ಸಮುದಾಯಗಳು ಸಾಧಾರಣವಾಗಿ ಮಾತೃದೇವತೆಗಳನ್ನು ಆರಾಧಿಸುವ ಪದ್ಧತಿಯನ್ನು ಹೊಂದಿರುತ್ತವೆ. ಅಲ್ಲಿಯ ವ್ಯವಸ್ಥೆಯೂ ಕೂಡ ಮಾತೃಪ್ರಧಾನ ಕುಟುಂಬದ ವ್ಯವಸ್ಥೆಯೇ ಆಗಿರುತ್ತದೆ. ಅಲ್ಲಿಂದ ಎರಡನೆಯ ಹಂತವಾದ ಪಶುಪಾಲಕತನಕ್ಕೆ ಬಂದಾಗ ಅಲ್ಲಿ ಕಾಣಿಸಿಕೊಳ್ಳುವುದೇ ಪಿತೃಪ್ರಧಾನ್ಯತೆ ಮತ್ತು ಅದರೊಂದಿಗೆ ಪುರುಷದೇವತೆಗಳ ಆರಾಧನೆ. ಈ ಪುರುಷ ದೇವರುಗಳು ಸಾಮಾನ್ಯವಾಗಿ ಆಯಾ ಸಮುದಾಯಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ನಾಯಕರೇ ಆಗಿರುತ್ತಾರೆ. ಚರಿತ್ರೆಯ ಪರಿಕ್ರಮದಲ್ಲಿ ಮಾತೃದೇವತೆಗಳನ್ನು ಆರಾಧಿಸುವ ಪಶುಪಾಲಕರೂ ಕಂಡುಬರುತ್ತಾರೆ

ಎನ್ನುತ್ತಾರೆ. ಡಿ.ಡಿ. ಕೊಸಾಂಬಿಯವರು. ಪಶುಪಾಲಕರಲ್ಲಿ ಗಂಡು ದೇವರುಗಳು ಮಾತ್ರವೇ ಇರಲು ಸಾಧ್ಯ ಎನ್ನುವುದು ಒಂದು ವಿತಂಡವಾದ ಎನ್ನುತ್ತಾರೆ.[೪೬]

ಪಶುಪಾಲಕರಾದ ಮ್ಯಾಸಬೇಡರ ಸಂಸ್ಕೃತಿಯನ್ನು ಅವಲೋಕಿಸಿದಾಗ ಕೊಸಾಂಬಿಯವರ ಅಭಿಪ್ರಾಯದಂತೆಯೇ ಈ ಪಶುಪಾಲಕರಲ್ಲಿಯೂ ಅನೇಕ ಮಾತೃದೇವತೆಗಳನ್ನು ಆರಾಧಿಸುವ ಪರಿಪಾಠವಿದೆ. ಅಂದರೆ ಪುರುಷ ರಾಜಕಾರಣ ವಿಜೃಂಭಿಸುವ ವ್ಯವಸ್ಥೆಯ ಮಧ್ಯೆಯೂ ಇವರು ಪೂಜೆಗೊಳ್ಳುತ್ತಿರುವರೆಂದರೆ ಇದಕ್ಕೆ ಇವರ ಸತ್ವ, ಅನನ್ಯತೆ, ಸಮುದಾಯಕ್ಕೆ ಇವರಿಂದ ಸಂದ ಕೊಡುಗೆ ಕಾರಣವೇ ಹೊರತು ಬೇರೆ ಏನೂ ಅಲ್ಲ. ಹೀಗೆ ಆರಾಧಿಸಲ್ಪಡುತ್ತಿರುವ ನಾಯಕಿಯರಲ್ಲಿ 'ಮಲೆಯಮ್ಮ'ನೂ ಒಬ್ಬಳು. ಈ ಹಿಂದೆ ಈಕೆಯ ಬಗ್ಗೆ ಮ್ಯಾಸಮಂಡಲದಲ್ಲಿ ಪ್ರಚಲಿತವಾಗಿರುವ ಪುರಾಣಗಳನ್ನು ವಿವರವಾಗಿ ಕೊಡಲಾಗಿದ್ದು ಈ ಮೂಲಕ ಬಹುಶಃ ಮಲೆಯಮ್ಮನನ್ನು ನಾವು ಈ ಕೆಳಕಂಡಂತೆ ಗ್ರಹಿಸಬಹುದಾಗಿದೆ.

ಪಶುಪಾಲಕತನದಲ್ಲಿ ಬರೀ ಪುರುಷನಷ್ಟೇ ಪಶುಪಾಲಕನಲ್ಲ. ಅವನೊಂದಿಗೆ ಆಕೆಯೂ ಅಂದರೆ ಮಹಿಳೆಯೂ ಈ ವೃತ್ತಿಯಲ್ಲಿ ಪಾಲ್ಗೊಳ್ಳುವುದು ಅನಿವಾರ್ಯವಾಗಿರುತ್ತದೆ. ಕೃಷಿಗೂ ಹಾಗೂ ಇತರೆ ಕಸುಬುಗಳಿಗೂ ಇದು ಅನ್ವಯಿಸುತ್ತದೆ. ದನ ಮೇಯಿಸಲು ಪುರುಷ ಕಾಡಿಗೆ ಹೋದರೆ ಹಟ್ಟಿಯ ಬಳಿಯ ಗೂಡಿನ ಕರು–ಮರಿಗಳನ್ನು ಪೋಷಿಸುವುದು, ಹೈನುಗಾರಿಕೆ ಮಾಡುವುದು ಮಹಿಳೆಯ ಹೊಣೆಗಾರಿಕೆಯಾಗಿರುತ್ತದೆ. ಹೀಗೆ ಮಹಿಳೆಯರೂ ಇಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ಅಷ್ಟಲ್ಲದೆ ಈ ಸಮುದಾಯದ ಕೆಲವು ಮಹಿಳೆಯರು ತಮ್ಮ ಜಾಣ್ಮೆ, ಸಾಹಸಗಳಿಂದ ಸಮುದಾಯದ ರಕ್ಷಣೆಯನ್ನು ಮಾಡಿರುವುದು ವಿಶೇಷ. ಇಲ್ಲಿ ಶ್ರೀಶೈಲ ಪ್ರಾಂತ್ಯದಿಂದ ಮಧ್ಯ ಕರ್ನಾಟಕಕ್ಕೆ ಬಂದ ಎರಡನೆಯ ತಂಡ ಒಟ್ಟು ಹನ್ನೆರೆಡು ಗುಡಿಸಲು ಮ್ಯಾಸಗಂಪಳದೊಂದಿಗೆ ಇದ್ದವಳು ಮಲೆಯಮ್ಮ ಎಂದು ಹೇಳಲಾಗುತ್ತದೆ. ಈಕೆಯನ್ನು ಅಕ್ಕರಾಯಮ್ಮನ ಮಗಳೆಂದೂ, ಕಿರಿಯ ಸಮಕಾಲೀನಳು ಎಂದೂ ಕರೆಯಲಾಗುತ್ತದೆ. ಗೆದ್ದವಲ್ಲಿಯ ದೊರೆ ಈಕೆ ಇದ್ದ ಮ್ಯಾಸಗಂಪಳದ ಮೇಲೆ ಆಕ್ರಮಣ ಮಾಡಲು ಬಂದಾಗ ಈಕೆ ರೂಪಿಸಿದ ಯೋಜನೆ ವಿಶಿಷ್ಟವಾದುದು. ಅರಸನ ಬಳಿ ಇರುವಷ್ಟು ಆಯುಧಗಳು ತಮ್ಮಲ್ಲಿಲ್ಲ ಎಂಬುದು ಆಕೆಗೆ ತಿಳಿದಿತ್ತು. ಕೋಲು, ಕಟ್ಟಿಗೆ, ಬಿಲ್ಲು, ಬಾಣ, ಕೊಡಲಿಗಳಿಂದ ರಾಜನ ಸೇನೆಯನ್ನು ನಿಯಂತ್ರಿಸಲು ಸಾಧ್ಯವಿರಲಿಲ್ಲ. ಆಗ ಎತ್ತುಗಳನ್ನು ಕಾಯುತ್ತಿದ್ದ ಕಿಲಾರಿಗಳೊಂದಿಗೆ ಕಂಪಳ ಕಂಗಾಲಾದಾಗ ಮಲೆಯಮ್ಮ ರೂಪಿಸಿದ ಯೋಜನೆ ಅತ್ಯಂತ ಪರಿಣಾಮಕಾರಿಯಾದುದಾಗಿತ್ತು. ತಮ್ಮಲ್ಲಿ ಪ್ರಬಲವಾಗಿರುವ ಅಸ್ತ್ರವೆಂದರೆ ತಮ್ಮ ಪಶುಸಂಪತ್ತು. ಅವುಗಳನ್ನೇ ಬಳಸಿಕೊಂಡು ಎದುರಾಳಿಗಳನ್ನು ಮಣಿಸಬೇಕು ಎಂದು ತೀರ್ಮಾನಿಸಿದ್ದ ಆಕೆಯ ಜಾಣ್ಮೆ ಗಮನಿಸುವಂತಹುದು. ಸೂರ್ಯ ಪರಮಾತ್ಮನನ್ನೂ, ಮಾರಮ್ಮನನ್ನೂ ಧ್ಯಾನಿಸುತ್ತಾ ಎತ್ತುಗಳ ಸುತ್ತ ಮೂರು ಬಾರಿ ತಿರುಗುತ್ತಾಳೆ ತಿರುಗುತ್ತಾ ಕೇಕೆ, ಸಿಳ್ಳೆಗಳನ್ನು ಹಾಕುತ್ತಾಳೆ. ತನ್ನಂತೆಯೇ ಕಿಲಾರಿಗಳಿಗೂ ಕೇಕೆ ಹಾಕಿ ಎಂದು ಹೇಳಿ ಅವರೂ ಕೇಕೆ ಹಾಕಿ ಎತ್ತುಗಳಿಗೆ ಗೊಂದಲ ಉಂಟು

---

೪೬ Piligrims Progress. ಪು.೧೩೮.

ಮಾಡುವಂತೆ ಮಾಡುತ್ತಾಳೆ. ಆಕೆಯ ಉಪಾಯ ಫಲಿಸುತ್ತದೆ. ಆಕೆ ಅಂದುಕೊಂಡಂತೆಯೇ ಈ ಧ್ವಸಿಗೆ ಎತ್ತುಗಳು ಗಾಬರಿಗೊಂಡು ಒಂಡೆಡೆಯಿಂದ ಮತ್ತೊಂದೆಡೆಗೆ ಓಡಲು ಪ್ರಾರಂಭಿಸುತ್ತವೆ. ಓಟದ ರಭಸಕ್ಕೆ ಕೆಂದೂಳು ಏಳುತ್ತದೆ. ಈ ದೂಳಿಗೇ ಗೆದ್ದವಲ್ಲಿ ರಾಜನ ಸೇನೆ ತಬ್ಬಿಬ್ಬಾಗುತ್ತದೆ. ದಾರಿ ಕಾಣದಂತಾಗಿ ಅವರೇ ಒಬ್ಬರನ್ನೊಬ್ಬರು ಪರಸ್ಪರ ತಿವಿದುಕೊಳ್ಳುವಂತಾಗುತ್ತದೆ. ಎತ್ತು ಹಸುಗಳೆಲ್ಲಾ ಗಾಬರಿಗೊಂಡು ಓಡುತ್ತಿರುವಾಗ ಅವುಗಳ ಕೊಂಬು, ಕಾಲುಗಳೇ ಆಯುಧದೋಪಾದಿಯಲ್ಲಿ ಶತ್ರುಗಳನ್ನು ಇರಿದು ನೆಲಕ್ಕೆ ಬೀಳಿಸಲು ಕಾಲ್ತುಳಿತಕ್ಕೆ ಸಿಕ್ಕ ಅನೇಕ ಮಂದಿ ಶತ್ರುಗಳು ಸಾಯುತ್ತಾರೆ. ಕಂಗಾಲಾದ ರಾಜನ ಸೇನೆ ಸೋತು ಹಿಮ್ಮೆಟ್ಟುತ್ತದೆ. ಇದು ಮಲೆಯಮ್ಮನ ಕಾರ್ಯತಂತ್ರ. ಶಸ್ತ್ರಾಸ್ತ್ರಗಳಿಲ್ಲದೆ, ಜನಬಲವಿಲ್ಲದೆ ಸೇನೆಯನ್ನು ಮಣಿಸಿದ ಈ ಕಾರ್ಯವೈಖರಿ ಅಸಾಧಾರಣವಾದ ಅವಳ ಬುದ್ಧಿಶಕ್ತಿಯನ್ನು ಸ್ಪಷ್ಟಪಡಿಸುತ್ತದೆ. ನಂತರ ದೊರೆ ಕೇವಲ ಒಂದು ಹೆಣ್ಣನ್ನು ಮಾತ್ರ ಕಿಲಾರಿ ಕರೆದೊಯ್ದಿದ್ದಾನೆ ಏನು ನಮ್ಮ ರಾಜ್ಯದ ಹದ್ದು ಕಾಗೆಗಳನ್ನೂ ಕರೆದೊಯ್ದಿದ್ದಾನೆಯೇ ಎಂದು ಅಪಹಾಸ್ಯ ಮಾಡಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬಂತೆ ನುಡಿದಾಗ ಮತ್ತೆ ಮಲೆಯಮ್ಮ ಆತನಿಗೆ ಬುದ್ಧಿ ಕಲಿಸದಿದ್ದರೆ ತಾನು ಬೇಡರ ಮಹಿಳೆಯೇ ಅಲ್ಲ ಎಂದು ಪ್ರತಿಜ್ಞೆ ಮಾಡಿ ಅನ್ನದೊಂದಿಗೆ ಮಾಂಸ, ರಕ್ತ ಬೆರೆಸಿ ಊರಲ್ಲೆಲ್ಲಾ ಚೆಲ್ಲಿ ದಾರಿಯುದ್ದಕ್ಕೂ ಚೆಲ್ಲುತ್ತ ಬರಲು ಕಾಗೆ ಹದ್ದು ಹಿಂಬಾಲಿಸಿಕೊಂಡು ಬರುತ್ತವೆ. ಬೆಲ್ಲ ಸಕ್ಕರೆ ತರಿಸಿ ದಾರಿಗೆ ಚೆಲ್ಲುತ್ತಾ ಬರಲು ಇರುವೆ ಗೊದ್ದಗಳೂ ಹಿಂಬಾಲಿಸಿ ಒಟ್ಟಾರೆ ರಾಜನ ರಾಜ್ಯವೇ ಬರಿದಾಯಿತು ಎಂಬ ಸಾಂಕೇತಿಕ ಅರ್ಥ ಇಲ್ಲಿ ಕಂಡುಬರುತ್ತದೆ. ಹೀಗೆ ರಾಜನಿಗೆ ಪಾಠ ಕಲಿಸುತ್ತಾಳೆ.

'ದಂಡಿಗೋಗುತೀನಯ್ಯಾ ಬಡಗೀ ಬಂಡಿವೋಜು ಮಾಡು' ಹೀಗೆ ದಿಟ್ಟತನದಿಂದ ತಾನೂ ಕೈಲಿ ಆಯುಧ ಹಿಡಿದು ಹೋರಾಟದಲ್ಲಿ ಪಾಲ್ಗೊಳ್ಳುತ್ತಾಳೆ. ಶಕ್ತಿ ಮತ್ತು ಯುಕ್ತಿ ಎರಡನ್ನೂ ಮೇಳೈಸಿಕೊಂಡಾಗ ಮಾತ್ರ ಜಯಶೀಲರಾಗಲು ಸಾಧ್ಯ ಎಂಬುದೇ ಆಕೆಯ ತಿಳುವಳಿಕೆಯಾಗಿತ್ತು. ಬುಡಕಟ್ಟಿನ ಮಹಿಳೆಯರು ಬದುಕಿನ ಸಹಜತೆಯನ್ನು ಮೈಗೂಡಿಸಿಕೊಂಡವರು. ಸ್ವಭಾವತಃ ಶ್ರಮಜೀವಿಗಳು ಮಲೆಯಮ್ಮನಂತವರಿಗೆ ಅವರಿಗಿಂತಲೂ ಹಿರಿಯಳಾದ ಅಕ್ಕರಾಯಮ್ಮ ಆದರ್ಶಪ್ರಾಯಳಾಗಿದ್ದಳು. ಆಕೆಯ ಹೋರಾಟದ ಬಿಸುಪು, ಕ್ರಿಯಾಶೀಲತೆ ಮನದಲ್ಲಿತ್ತು ಹಾಗಾಗಿ ಈ ಬಗೆಯ ತಂತ್ರಗಾರಿಕೆಯಿಂದ ಎದುರಾಳಿಗಳನ್ನು ಮಣಿಸಿ ತನ್ನ ಬೇಡಗಂಪಳವನ್ನು ರಕ್ಷಿಸಿಕೊಳ್ಳುತ್ತಾಳೆ. "ಪುರಾಣ ಅನಾಗರಿಕ ಜನರಲ್ಲಿ ಕೇವಲ ಹೇಳಿದ ಕಥೆಯಲ್ಲ. ಅತ್ಯಂತ ಕ್ರಿಯಾಶಾಲಿಯಾದ ಸಾಂಸ್ಕೃತಿಕ ಶಕ್ತಿ" ಎನ್ನುತ್ತಾನೆ ಮ್ಯಾಲಿನೋವಸ್ಕಿ. (Branishaw Malinowiask: Magic. Science and Religion and other essays: p.101) ಈ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ ಮಲೆಯಮ್ಮನ ಬಗ್ಗೆ ಪ್ರಚಲಿತವಿರುವ ಪುರಾಣವೂ ಕೂಡ ಕೇವಲ ಮನರಂಜಿಸುವ ಕಥೆಯಲ್ಲ. ಬದಲಾಗಿ ಅದೊಂದು ಸಾಂಸ್ಕೃತಿಕ ಶಕ್ತಿ. ಮ್ಯಾಸಬೇಡರ ಸಮುದಾಯದಲ್ಲಿದ್ದ ಮಲೆಯಮ್ಮನಂತಹ ಸಾಂಸ್ಕೃತಿಕ ಶಕ್ತಿಯನ್ನು ತನ್ನ ಮೂಲಕ ಉಳಿಸಿಕೊಂಡು ಬಂದ ಒಂದು ವಿಧಾನ. ಮಾನವೀಯ ಗುಣಗಳಿಂದ ಕೂಡಿದ ಮಾತೃತ್ವದ ಸಾಕಾರ ಮೂರ್ತಿಯಾದವಳು ಹೆಣ್ಣು. ಇದೊಂದೇ ಆಕೆಯ ವಿಶೇಷತೆ ಎಂದು ಭಾವಿಸುವ ಸಾಮಾಜಿಕ ಸಂದರ್ಭದಲ್ಲಿ ಈ ಅಂತಸ್ಸತ್ವದೊಂದಿಗೇ ಅನಿವಾರ್ಯ ಸಂದರ್ಭವೊದಗಿದಾಗ ತನ್ನ ವೈಚಾರಿಕ ಚಿಂತನೆಗಳ ಮೂಲಕವಾಗಿ ಕ್ರಿಯಾಚಾಲಕ ಶಕ್ತಿಯಾಗಿ ನಿಲ್ಲುತ್ತಾಳೆ

ಮಲೆಯಮ್ಮ. ಬೌದ್ಧಿಕಶಕ್ತಿ ಮತ್ತು ದೈಹಿಕ ಕಸರತ್ತು ಇವೆರಡನ್ನೂ ಬಳಸಿಕೊಂಡು ಯೋಜನಾ ಚಾತುರ್ಯದಿಂದ ಪ್ರತಿನಾಯಕನನ್ನು ಮಣಿಸುವ ಸಾಮರ್ಥ್ಯ ಪುರುಷನದು ಮಾತ್ರ ಎಂದು ಭಾವಿಸುತ್ತಾ ಬಂದಿರುವ ನಮ್ಮ ವ್ಯವಸ್ಥೆಯಲ್ಲಿ ಈ ಎಲ್ಲಾ ಗುಣಗಳ ಕೊರತೆಯಿಂದ ಕೂಡಿರುವವಳೇ ಹೆಣ್ಣು ಎಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ ಮೇಲ್ಕಾಣಿಸಿದ ಎಲ್ಲಾ ಗುಣಗಳನ್ನು ಹೊಂದಿದ್ದು ಆ ಮೂಲಕ ಸಮರ್ಥವಾಗಿ ತನ್ನ ಸಮುದಾಯವನ್ನು ರಕ್ಷಿಸಿದ ಮಲೆಯಮ್ಮ ಇಲ್ಲಿ ಅನನ್ಯತೆಯನ್ನು ಪಡೆಯುತ್ತಾಳೆ.

ಮರ್ಲಹಳ್ಳಿ-ಮೊಳಕಾಲ್ಮುರು ತಾಲ್ಲೂಕಿನಲ್ಲಿಯೂ ಮಲೆಯಮ್ಮನನ್ನು ಆರಾಧಿಸುವ ನೆಲೆಯೊಂದಿದೆ. ಅವರ ಪ್ರಕಾರ ಮಜ್ಜಿಗೆ ಮಾಡುವ ಕಂಬದಲ್ಲಿ ಉದ್ಭವಿಸಿದವಳೇ ಮಲೆಯಮ್ಮ. ಪಶುಸಂಗೋಪನೆಯ ನೆಲೆಯಲ್ಲಿ ತಮ್ಮ ಆರಾಧ್ಯದೇವತೆಯನ್ನು ಗ್ರಹಿಸಿಕೊಂಡಿರುವ ಪರಿ ಅಷ್ಟೇ ಇದು. ಎತ್ತಿನ ಗೂಡುಗಳ ಬಳಿಯಲ್ಲಿಯೇ ಆಲದಮರದ ಕೊಂಬೆಯೊಂದನ್ನು ಹೂಳಿ ಅದನ್ನೇ ಮಜ್ಜಿಗೆ ಕಡೆಯುವ ಕಂಬವನ್ನಾಗಿ ಮಾಡಿಕೊಂಡಿದ್ದರಂತೆ. ದೆಡ್ಡಿಸೂರನಾಯಕನ ಎತ್ತುಗಳ ಗೂಡದು. ಕ್ರಮೇಣ ಆ ಕೊನೆಯೇ ಚಿಗುರಿತಂತೆ. ಅವರ ಬುಡದಲ್ಲಿ ಒಂದು ಕಪ್ಪು ಬಣ್ಣಕ್ಕೆ ತಿರುಗಿರುವ ಮೂರ್ತಿ ಇದೆ. ಬಹಳ ಹಿಂದೆ ಮಾಡಿಟ್ಟಿದ್ದ ಮಣ್ಣಿನ ಮೂರ್ತಿ ಹಾಲು ಮೊಸರುಗಳ ಲೇಪನದಿಂದ ಜಿಡ್ಡುಗಟ್ಟಿ ಹೀಗೆ ಕಪ್ಪಾಗಿರಬಹುದು. ತಮ್ಮ ಮನದಾಳದಲ್ಲಿ ನೆಲೆಯಾಗಿದ್ದ ಮಲೆಯಮ್ಮ ನಮ್ಮೊಂದಿಗೆ ಇದ್ದಾಳೆ ಎಂದು ಭಾವಿಸಿ ಆ ಮರ ಮತ್ತು ಆ ಮೂರ್ತಿಯನ್ನೇ ಮಲೆಯಮ್ಮ ಎಂದು ಅಲ್ಲಿ ಪೂಜಿಸಲಾಗುತ್ತಿದೆ.

ಜುಮ್ಮೋಬನಹಳ್ಳಿ ಬಳ್ಳಾರಿ ಜಿಲ್ಲೆಗೆ ಸೇರಿದ ಒಂದು ಹಳ್ಳಿ ಇಲ್ಲಿಯೂ ಒಂದು ದೇವಾಲಯವಿದೆ. ಅದರ ಪಕ್ಕದ ಮ್ಯಾಸರೇ ವಾಸವಾಗಿರುವ ಹಟ್ಟಿಯಲ್ಲಿಯೂ ಒಂದು ಮಲೆಯಮ್ಮನ ಗುಡಿ ಇದೆ. ಅವರ ಪ್ರಕಾರ ಮಲೆಯಮ್ಮ ತಮಗೆ ಕೊರಚರಿಂದ ದೊರೆತವಳು ಎಂದಾಗಿದೆ. ಸೊಂಡೂರು ಕಿಂಡಿಯಿಂದ ಒಮ್ಮೆ ಇತ್ತ ಕೊರಚರು ಬರುವಾಗ ಅಲ್ಲಿದ್ದ ಮಣ್ಣಿನ ಮೂರ್ತಿಯನ್ನು ಮಲೆಯಮ್ಮ ಎಂದು ತಂದುಕೊಡುತ್ತಾರಂತೆ. ಮಲೆಯಮ್ಮನೂ ಕೂಡ ತನ್ನ ಮ್ಯಾಸಗಂಪಳವನ್ನು ರಕ್ಷಿಸುವ ನಂತರ ಮಣ್ಣಿನಿಂದ ಮಾರಮ್ಮನ ಮೂರ್ತಿಯನ್ನು ಮಾಡಿ ಪೂಜಿಸಿದ್ದಳು. ಈಗ ಮಲೆಯಮ್ಮನ ಆರಾಧನೆ ಮಾಡುವಾಗ ಕೆಲವೆಡೆ ಮಣ್ಣಿನ ಮೂರ್ತಿಯನ್ನು ಮಾಡಿ ಅದನ್ನೇ ಮಲೆಯಮ್ಮ ಎಂದು ಪೂಜಿಸಲಾಗುತ್ತದೆ. ಹಾಗಾಗಿ ಈ ಮಣ್ಣಿನ ಮೂರ್ತಿ ಮತ್ತು ಜೋಳಿಗೆಯೊಂದನ್ನು ಅವರು ಮ್ಯಾಸಬೇಡರ ಕೈಗೆ ತಲುಪಿಸಲು ನಮ್ಮ ಮಲೆಯಮ್ಮ ನಮಗೆ ಸಿಕ್ಕಿದ್ದಾಳೆ ಎಂದು ಆಕೆಯನ್ನು ಪೂಜಿಸುತ್ತಾ ಬರುತ್ತಿದ್ದಾರೆ. ಕೊನೆಯ ಈ ಎರಡೂ ಕಥೆಗಳೂ ಮೂಲದಲ್ಲಿದ್ದ ಮಲೆಯಮ್ಮ ನಾಯಕಿಯ ಸ್ಥಾನವನ್ನು ಪಡೆದು ದೈವೀಕ ನೆಲೆಗೇರಿದಾಗ ಆಕೆಯನ್ನು ಆ ಸಮುದಾಯದ ಬೇರೆ ಬೇರೆ ಭಾಗದಲ್ಲಿ ಗ್ರಹಿಸಿದ ಪರಿ ಅಷ್ಟೆ. ಹನ್ನೆರಡು ಗುಡಿಸಿಲಿನವರು ಎರಡನೆಯ ತಂಡವಾಗಿ ಮಧ್ಯಕರ್ನಾಟಕದ ಕಡೆ ಬಂದಾಗ ಆ ಕಂಪಳದಲ್ಲಿ ಬಂದು ತನ್ನ ಸಮುದಾಯವನ್ನು ರಕ್ಷಿಸಿ ಮುನ್ನಡೆಸಿಕೊಂಡು ಬಂದು ನಾಯಕಿಯ ಪಟ್ಟವನ್ನು ಪಡೆಯುತ್ತಾಳೆ. ಸಮುದಾಯದಲ್ಲಿ ಮುಖ್ಯವಾಗಿ ಎರಡನೆಯ ತಂಡದ ಎತ್ತಿನ ಗೂಡುಗಳು ಇರುವ ಪರಿಸರದಲ್ಲಿ ಈಕೆ ವ್ಯಾಪಕವಾಗಿ ಪ್ರಚಲಿತದಲ್ಲಿದ್ದು ಪೂಜೆಗೊಳ್ಳುತ್ತಿದ್ದಾಳೆ.

## ೩) ಮುಂಗಲು ದೇವಮ್ಮ :

ಆಂಧ್ರಪ್ರದೇಶದ ವ್ಯಾಪ್ತಿಯಲ್ಲಿ ಬರುವ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕಿಗೆ ಸೇರಿದ ಒಂದು ಪುಟ್ಟ ಗ್ರಾಮವೇ ಗಲಗಲ್ಲು. ಇದರ ಪಕ್ಕದಲ್ಲಿಯೇ ಕರಿಸೂರಯ್ಯನ ಹಟ್ಟಿ ಇದೆ. ಇದಕ್ಕೆ ಒಂದೆರಡು ಕಿ.ಮೀ.ಗಳ ಅಂತರದಲ್ಲಿ ಮಾಪಲ್ಲಿ, ರೇಪಲ್ಲಿ, ಎನ್ನಮುದ್ದಲಪಲ್ಲಿ ಎಂದು ಹೇಳಲಾಗುವ ಆದರೆ ಇಂದು ಹಾಳಾಗಿರುವ ಹಳ್ಳಿಗಳಿವೆ. ಇದಕ್ಕೆ ಸಮೀಪದಲ್ಲಿಯೇ ಇರುವ ರಾಯದುರ್ಗದ ಹಿಂಭಾಗದ ಬೆಟ್ಟದ ಸೆರಗಿನಲ್ಲಿ ಇವೆಲ್ಲವೂ ಬರುತ್ತವೆ. ಬೆಟ್ಟಕ್ಕೆ ಹೊಂದಿಕೊಂಡಂತೆಯೇ ಇರುವ ಕಣಿವೆಯನ್ನು 'ಲಂಜಿಗುಂಟ ಕಣಿವೆ' ಎಂದೂ ಕರೆಯಲಾಗುತ್ತದೆ. ಇದೆಲ್ಲವೂ ಮುಂಗಲದೇವಮ್ಮ ಓಡಾಡಿದ ಸ್ಥಳಗಳು ಈಕೆಯನ್ನು ಆರಾಧಿಸುವ ನೆಲೆ ಇರುವುದು ಗಲಗಲ್ಲು ಗ್ರಾಮದಲ್ಲಿ. ಈ ವ್ಯಾಪ್ತಿಗೆ ಬರುವ ಪ್ರದೇಶಕ್ಕೆಲ್ಲಾ ಕೇಂದ್ರ ಸ್ಥಳ ಅಂದು ಗಲಗಲ್ಲು ಆಗಿದ್ದು ಅದನ್ನು 'ಗಾದಿನಾಯಕ' ಎಂಬ ಮ್ಯಾಸನಾಯಕರ ಸಮುದಾಯಕ್ಕೆ ಸೇರಿದ ವ್ಯಕ್ತಿಯೇ ಆಳುತ್ತಿದ್ದ. ಆತನ ಪತ್ನಿಯೇ ಮುಂಗಲು ದೇವಮ್ಮ. ಹಾಗಾಗಿ ಈಕೆಯನ್ನು ಈಗ ಆರಾಧಿಸುತ್ತಿರುವುದೂ ಇದೇ ಗ್ರಾಮದಲ್ಲಿ.



*ಮುಂಗಲು ದೇವಮ್ಮನಗುಡಿ ಗಲಗಲ್ಲಿನಲ್ಲಿ*



*ಮುಂಗಲು ದೇವಮ್ಮನ ಪೆಟ್ಟಿಗೆ-ಗಲಗಲ್ಲಿನಲ್ಲಿ ಆಕೆ ಬಳಸುತ್ತಿದ್ದ ಆಯುಧಗಳೊಂದಿಗೆ*

**ಪುರಾಣ-೧**

ಮುಂಗಲು ದೇವಮ್ಮನನ್ನು ಗಾದಿನಾಯಕನ ಪತ್ನಿ ಎಂದು ಪರಿಚಯಿಸುವುದರೊಂದಿಗೆ ಮುಖ್ಯವಾಗಿ ಈಕೆಯನ್ನು ಕೊಡಗಲು ಬೊಮ್ಮನ ಮೂಲಕ ಪರಿಚಯಿಸುವುದೂ ಸೂಕ್ತ ಎನಿಸುತ್ತದೆ. ಅಕ್ಕ ರಾಯಮ್ಮನ ಸೋದರಮಾವನಾದ ಯರಿಪೋತು ಕರಿಬೊಮ್ಮಂತರಾಜನ ಪರಂಪರೆಯಿಂದ ಬಂದ ಬುಟ್ಟುಗಲವರು ಎಂಬ ಬೆಡಗಿಗೆ ಸೇರಿದ ವ್ಯಕ್ತಿ ಈತ. ಅಪ್ರತಿಮ ವೀರ, ಸಾಹಸಿಯಾಗಿದ್ದವನೀತ. ಬಹುಶಃ ಈತನ ಹೆಸರು

ಕೊಡಗಲು ಬೊಮ್ಮಂತರಾಜ ಆಗಿರದೆ ಕೊಳುಗುಳದ ಬೊಮ್ಮಂತರಾಜನೇ ಈತನಾಗಿರಬಹುದು. ಕೊಳುಗುಳ ಅಂದರೆ ಯುದ್ಧ. ಇದರಲ್ಲಿ ಭಾಗವಹಿಸಿ ವೀರಾವೇಶದಿಂದ ಕಾದಾಡಿ ಬರುತ್ತಿದ್ದವ ಈತ ಎಂಬ ಕಾರಣದಿಂದ, ಈ ಪದ ಈತನ ಹೆಸರಿನೊಂದಿಗೆ ಸೇರಿಕೊಂಡಿರಬಹುದು. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿಗೆ ಸೇರಿದ ಮುತ್ತಿಗಾರಹಳ್ಳಿಗೆ ಹೊಂದಿಕೊಂಡಂತಿರುವ ಕಮರದ ಕಾವಲಿನ ಮಧ್ಯಭಾಗ ಈತನ ವಾಸಸ್ಥಳವಾಗಿತ್ತು. ಅಲ್ಲಿ ಒಂದು ಮಟ್ಟಿಯ ಮೇಲೆ ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದ. ಇಂದಿಗೂ ಅಲ್ಲಿ ಸಾಕಷ್ಟು ಕುರುಹುಗಳಿವೆ. ಆ ಪ್ರದೇಶವನ್ನು 'ಊಟು ಕುಂಟೆ' ಎಂದು ಕರೆಯಲಾಗುತ್ತದೆ. ಮ್ಯಾಸಮಂಡಲಕ್ಕೆ ಬಂದ ಆಪತ್ತನ್ನು ಪರಿಹರಿಸಿ ಆ ಮೂಲಕ ಪ್ರಸಿದ್ಧಿ ಪಡೆದವನು. ಆ ಬೆಡಗಿನವರ ಆರಾಧ್ಯದೇವತೆಯ ಸ್ಥಾನಕ್ಕೆ ಏರಿದವನೀತ. ಈತನ ಸಾಧನೆಯ ಹಿಂದೆ ಈತನ ಅಕ್ಕನಾದ ದೇವಮ್ಮನ ಒತ್ತಾಸೆ ಕೆಲಸ ಮಾಡುತ್ತಿದೆ. ತನ್ನ ತಮ್ಮನ ಬಗ್ಗೆ ಈಕೆಗೆ ತುಂಬಾ ಪ್ರೀತಿ, ಅತಿಯಾದ ಅಭಿಮಾನ, ಬಹುಶಃ ಅಕ್ಕರಾಯಮ್ಮ ತನ್ನ ಸೋದರರಿಗೆ ಒತ್ತಾಸೆಯಾಗಿ ಬೆನ್ನು ತಟ್ಟಿ ನಿಂತಿದ್ದೇ ಕಾರಣವಾಗಿ ಅವರಿಗೊಂದು ಅಸ್ತಿತ್ವ ದೊರೆಯಿತು. ಇದೇ ಮಾದರಿಯಲ್ಲಿ ನಂತರ ಪೀಳಿಗೆಯಲ್ಲಿ ಬರುವ ಆ ಪರಂಪರೆಯ ಅನೇಕ ಮಹಿಳೆಯರು ಸಹೋದರರ ಅಗ್ಗೆ ಅತಿಯಾದ ಮಮಕಾರ ಹೊಂದಿದ್ದು ಅವರ ಅಭ್ಯುದಯ ಬಯಸಿ ಸಾಧ್ಯವಾದಷ್ಟೂ ಒತ್ತಾಸೆಯಾಗಿ ನಿಂತಿರುವುದು ಕಂಡುಬರುತ್ತದೆ.

ಇವರಿಬ್ಬರೂ ಕೂಡಿಯೇ ಶಸ್ತ್ರಾಭ್ಯಾಸ ಮಾಡುತ್ತಿದ್ದರು. ಜೊತೆಯಾಗಿಯೇ ಬೆಟ್ಟ-ಕಾಡುಗಳಲ್ಲಿ ಸಂಚರಿಸುತ್ತಾ ಬೇಟೆಯಾಡುತ್ತಿದ್ದರು. ಸಾಂದರ್ಭಿಕವಾಗಿ ತಮ್ಮನಿಗೆ ಯುದ್ಧವಿದ್ಯೆಯ ಬಗ್ಗೆ ಸೂಚನೆ, ಸಲಹೆಗಳನ್ನು ನೋಡುತ್ತಿದ್ದಳು. ಹೀಗಾಗಿ ಬೊಮ್ಮಂತರಾಜನಿಗೆ ಈಕೆಯ ಬಗ್ಗೆ ಎಣೆಯಿಲ್ಲದ ಅಭಿಮಾನ. ಈಕೆಯನ್ನು ರಾಯದುರ್ಗ ಪ್ರಾಂತ್ಯದ ಗಲಗಲ್ಲುನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳುತ್ತಿದ್ದ 'ಗಾದಿನಾಯಕ' ಎಂಬ ದೊರೆಗೆ ಮದುವೆ ಮಾಡಿ ಕೊಡಲಾಗಿತ್ತು. ಸ್ಥಳೀಯರ ಪ್ರಕಾರ ಈತ ಟಿಪ್ಪುಸುಲ್ತಾನನ ವಿರುದ್ಧ ಹೋರಾಡಿ ಮಡಿದವನು. ತಮ್ಮ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಕೃತಿಯಲ್ಲಿ ಡಾ. ವಿರೂಪಾಕ್ಷ ಪೂಜಾರಿಹಳ್ಳಿಯವರು ಇದೇ ಉಲ್ಲೇಖವನ್ನು ಮಾಡಿದ್ದಾರೆ. ಕಾಲ ಕ್ರಿ.ಶ. ೧೪ನೇ ಶತಮಾನ ಇದ್ದಿರಬಹುದು, ಆದರೆ ಟಿಪ್ಪುಸುಲ್ತಾನನ ಕಾಲ ಇದಕ್ಕೆ ತಾಳೆಯಾಗುವುದಿಲ್ಲ. ಬಹುಶಃ ಬೇರೊಬ್ಬ ಮುಸ್ಲಿಂ ದೊರೆಯೊಂದಿಗೆ ಈತ ಸೆಣಸಿರಬಹುದು. ಗಾದಿನಾಯಕರ ಪತ್ನಿಯಾದ ನಂತರವೂ ದೇವಮ್ಮ ತನ್ನ ತಮ್ಮನಿಗೆ ಸ್ಫೂರ್ತಿಯನ್ನು ತುಂಬುತ್ತಾ ಸಹಾಯ, ಸಹಕಾರ, ಮಾರ್ಗದರ್ಶನ ಮಾಡುತ್ತಲೇ ಇದ್ದಳು. ಒಮ್ಮೆ ನರಕಾಸುರ ಬಹುಶಃ ಆನೆಗೊಂದಿ ರಾಜ ನರಪತಿ ಇರಬಹುದು. ಈ ಮ್ಯಾಸಬೇಡರ ೧೨ ಪೆಟ್ಟಿಗೆಗಳನ್ನು ಮತ್ತು ೬ ಅಜ್ಜನವರನ್ನು ತನ್ನ ವಶಕ್ಕೆ ತೆಗೆದುಕೊಂಡು ೭೭ ಹಟ್ಟಿಗಳನ್ನು ತನ್ನ ಅಧೀನದಲ್ಲಿರಿಸಿ ಕೊಳ್ಳಲು ಪ್ರಯತ್ನಿಸುತ್ತಾನೆ. ಮ್ಯಾಸಬೇಡರ ಪೆಟ್ಟಿಗೆ ದೇವರುಗಳೇ ಅವರಿಗೆ ಅಮೂಲ್ಯವಾದ ಸಂಪತ್ತು. ತಮ್ಮ ದೇವರು ಎಂದು ಹೇಳುತ್ತಾ ತಮ್ಮ ನಾಯಕನಿಗೆ ಸಂಬಂಧಿಸಿದ ಅಮೂಲ್ಯವಾದ ವಸ್ತುಗಳನ್ನು ಅದರಲ್ಲಿಟ್ಟಿರುತ್ತಾರೆ. ಇದಲ್ಲದೆ ಅವರ ಪಶುಸಂಪತ್ತಿನ ಮೇಲೆ ಎಲ್ಲರಿಗೂ ಕಣ್ಣಿತ್ತು. ಹೀಗಾಗಿ ಇದನ್ನು ವಶಪಡಿಸಿಕೊಳ್ಳಲು ಪ್ರಬಲರಿಂದ ಆಗಾಗ್ಗೆ ಈ ಸಮುದಾಯದ ಮೇಲೆ ಆಕ್ರಮಣ ನಡೆಯುತ್ತಿತ್ತು. ಇದೇ ರೀತಿ 'ನರಪತಿ' ದೊರೆ ತನ್ನ ಅಧೀನಕ್ಕೊಳಪಡಿಸಿಕೊಳ್ಳಲು

ಪ್ರಯತ್ನಿಸಿದಾಗ ಮ್ಯಾಸಮಂಡಲಕ್ಕೆ ಆಗ ದೊರೆಯಾಗಿದ್ದ ಯರಮಂಚಿನಾಯಕ ಇದನ್ನು ತಡೆಯುವ ಪ್ರಯತ್ನ ಮಾಡಿಯೂ ವಿಫಲನಾಗುತ್ತನೆ. ಅಸಹಾಯಕನಾದ ಆತ ಕೊನೆಗೆ ಒಂದು ದಿನ ಮ್ಯಾಸಮಂಡಲದ ಸಭೆ ಸೇರಿಸಿ ನಿಮ್ಮಲ್ಲಿ ಯಾರಾದರೂ ಧೈರ್ಯದಿಂದ ಹೋರಾಡಿ ನರಪತಿಯನ್ನು ಸೋಲಿಸಿ ೧೨ ಪೆಟ್ಟಿಗೆಗಳನ್ನೂ, ತಮ್ಮ ಪಶುಸಂಪತ್ತನ್ನೂ, ೯ ಅಜ್ಜನವರನ್ನೂ ಬಿಡುಗಡೆ ಗೊಳಿಸಿಕೊಂಡು ಬರಲು ಸಾಧ್ಯವೇ ಎಂದು ಕೇಳುತ್ತಾನೆ. ಎಲ್ಲರೂ ಮೌನವಾಗಿರುತ್ತಾರೆ. ಆ ಸಭೆಗೆ ಬೊಮ್ಮನೂ ತನ್ನ ಸಹೋದರಿಯೊಂದಿಗೆ ಬಂದಿದ್ದ. ತಾವಿಬ್ಬರೂ ಸೇರಿ ಹೇಗಾದರೂ ಹೋರಾಟ ಮಾಡಿ ಪೆಟ್ಟಿಗೆಗಳನ್ನು ಬಿಡಿಸಿಕೊಂಡು ಬರಬೇಕು ಎಂದು ತೀರ್ಮಾನಿಸಿದ ದೇವಮ್ಮ ಬೊಮ್ಮನಿಗೆ ವೀಳೆಯವನ್ನು ಹಿಡಿ ಎಂದು ಒತ್ತಾಯ ಮಾಡುತ್ತಾಳೆ. ಆಪತ್ತಿನಲ್ಲಿರುವ ಮ್ಯಾಸಮಂಡಲವನ್ನು ಈಗ ಪಾರುಮಾಡದಿದ್ದಾರೆ ನಮ್ಮ ಪರಾಕ್ರಮಕ್ಕೆ ಅರ್ಥವೇ ಇಲ್ಲ. ಕಾರ್ಯಸಾಧನೆ ಮಾಡಲೇ ಬೇಕು ಎಂದು ಹೇಳಿ ತನ್ನ ಸೋದರ ವೀಳೆಯ ಹಿಡಿಯುವಂತೆ ಮಾಡುತ್ತಾಳೆ. ವೀಳೆಯ ಹಿಡಿಯುವುದು ಎಂದರೆ ನಮ್ಮ ಬುಡಕಟ್ಟು ಸಮುದಾಯಗಳಲ್ಲಿ ಬಹುಮುಖ್ಯವಾದ ವಿಧಿ ಇದು. ಕಾರ್ಯನಿರ್ವಹಿಸಲು ಒಪ್ಪಿಕೊಳ್ಳುವುದು. ಒಪ್ಪಂದಮಾಡಿಕೊಳ್ಳುವುದು ಎಂದರ್ಥ. ಒಮ್ಮೆ ವೀಳೆಯವನ್ನು ಹಿಡಿದ ಮೇಲೆ ಮಾತಿಗೆ ತಪ್ಪುವಂತಿಲ್ಲ. ಮೂರು ದಿನಗಳೊಳಗಾಗಿ ನರಕದ ಕೋಟೆಯನ್ನು ಭೇಧಿಸಿ ಪೆಟ್ಟಿಗೆಗಳನ್ನು ಹೊರತರಬೇಕು ಎಂದು ತೀರ್ಮಾನವಾಗುತ್ತದೆ. ಅಂದಿನಿಂದಲೇ ಅಕ್ಕ ತಮ್ಮ ಕುಳಿತು ಚರ್ಚಿಸಿ ಕೋಟೆಯನ್ನು ಪ್ರವೇಶಿಸಲು ಬೇಕಾದ ಕಾರ್ಯತಂತ್ರವನ್ನು ರೂಪಿಸುತ್ತಾರೆ. ನರಕಾಸುರನ ಕೋಟೆ ಅಂದರೆ ನರಕಾಸುರ ಎಂಬ ಅಸುರನ ನರಕದ ಕೋಟೆಯನ್ನು ಕೃಷ್ಣ ಪರಮಾತ್ಮ ಪ್ರವೇಶಿಸಿ ಬಂಧಿತರನ್ನು ಬಿಡುಗಡೆಗೊಳಿಸಿದಂತೆ ಎಂದು ಪುರಾಣದ ಈ ಪ್ರಸಂಗದೊಂದಿಗೆ ಇದನ್ನು ಸಮೀಕರಿಸುತ್ತಾರೆ. ಮುಂಗಲು ದೇವಮ್ಮ ತಮ್ಮನಿಗೆ ಈ ಎಲ್ಲಾ ಕಾರ್ಯತಂತ್ರವನ್ನೂ ರೂಪಿಸಿಕೊಟ್ಟು ಸಲಹೆ ಸೂಚನೆ ಕೊಡುವುದಲ್ಲದೆ ತಾನೂ ನಿನ್ನ ಜೊತೆ ಈ ಯುದ್ಧದಲ್ಲಿ ಪಾಲ್ಗೊಳ್ಳುತ್ತೇನೆ, ಮಾಂತ್ರಿಕ ವಿದ್ಯೆಯನ್ನು ಬಳಸುತ್ತೇನೆ ಎಂದು ಹೇಳುತ್ತಾಳೆ. ಒಂದು ದಿನ ಕಳೆಯುತ್ತದೆ, ಎರಡನೆಯ ದಿನ ಅಕ್ಕ ತಮ್ಮ ಶಸ್ತ್ರಾಸ್ತ್ರಗಳನ್ನೆಲ್ಲಾ ಅಣಿಗೊಳಿಸಿಕೊಂಡು ತಮ್ಮ ಅನುಯಾಯಿಗಳಿಗೆ ಸೂಚನೆ ಸಲಹೆ ನೀಡಿದಾದ ಮೇಲೆ 'ಬೊಮ್ಮ' ಈತ ಜನಪದರ ಬಾಯಿಯಲ್ಲಿ ಕರೆಯಲ್ಪಡುವುದೇ ಹೀಗೆ. ಆಹಾರಕ್ಕಾಗಿ ಏನಾದರೂ ಬೇಟೆಯಾಡಿಕೊಂಡು ಬರುತ್ತೇನೆ ಎಂದು ಹೇಳಿ ಹೋಗುತ್ತಾನೆ. ತಮ್ಮ ಬರುವವರೆಗೆ ಸುಮ್ಮನೆ ಕಾಲಹರಣ ಮಾಡಲು ಇಷ್ಟವಾಗದೆ ಊಟಕ್ಕೆ ಸೊಪ್ಪನ್ನಾದರೂ ತರೋಣವೆಂದು ಹಟ್ಟಿಯಿಂದ ಕಾಡಿನ ಕಡೆಗೆ ನಡೆಯುತ್ತಾಳೆ. ಒಮ್ಮೆ ಈಕೆಯ ತಮ್ಮನೇ ಈಕೆಗಾಗಿ ಪೇಟೆಯಿಂದ ಒಂದು ಕಪ್ಪುಬಣ್ಣದ ಸೀರೆ (ಕಾಗಿನ ಸೀರೆ) ತಂದು ಕೊಟ್ಟಿದ್ದ. ಅದನ್ನೇ ಅಂದು ಉಟ್ಟಿದ್ದಳು. ಗಿಡಮರಗಳ ಮಧ್ಯೆ ಸೊಪ್ಪನ್ನು ಬಿಡಿಸಲು ತೊಡಗುತ್ತಾಳೆ. ಇದನ್ನು ಅರಿಯದ ಬೊಮ್ಮನೂ ಅದೇ ಪ್ರದೇಶದಲ್ಲಿ ಬೇಟೆಗೆ ಹೊಂಚು ಹಾಕಿ ಕುಳಿತಿದ್ದ, ಉತ್ಸಾಹದಿಂದ ಬೇಟೆಯಾಡುವ ಪ್ರಾಣಿಯ ನಿರೀಕ್ಷೆಯಲ್ಲಿದ್ದ ಈತನಿಗೆ ಪೊದೆಯ ಮಧ್ಯೆ ಶಬ್ದ ಕೇಳಲು ಯಾವುದೇ ಪ್ರಾಣಿ ಇರಬೇಕೆಂದು ಬಾಣ ಬಿಡುತ್ತಾನೆ. ಗುರಿ ತಪ್ಪದೆ ಬಾಣ ಪೊದೆಯೊಳಗಿನ ಪ್ರಾಣಿಗೆ ತಲುಪಿತ್ತು. ಆದರೆ ಆ ಪ್ರಾಣಿ ಬೊಮ್ಮ ಅಂದುಕೊಡಂತೆ ಕಾಡು ಪ್ರಾಣಿಯಾಗಿರದೆ ಆತನ ಅಕ್ಕನಾದ ಮುಂಗಲು ದೇವಮ್ಮನೇ ಆಗಿದ್ದಳು. ತಕ್ಷಣ ಆರ್ತಳಾಗಿ ಆಕೆ ಕಿರಿಚಿಕೊಳ್ಳುತ್ತಾಳೆ. ಪ್ರಮಾದವಾಯಿತು, ಯಾರೋ ಮನುಷ್ಯರಿಗೆ ಬಾಣ

ಬಿಟ್ಟಿದ್ದೇನೆ ಎಂದು ಗಾಬರಿ, ಪಶ್ಚತ್ತಾಪದಿಂದ ಬೊಮ್ಮ ಪೊದೆಯ ಕಡೆ ಓಡಿ ಬರುತ್ತಾನೆ. ನೋಡಿದರೆ ತನ್ನ ಅಕ್ಕನಾದ ದೇವಮ್ಮನಿಗೆ ತಾನೇ ಬಾಣ ಬಿಟ್ಟಿದ್ದೇನೆ ಎಂದು ತಿಳಿಯುತ್ತದೆ. ಬಾಣವನ್ನು ಕಿತ್ತು ಆಕೆಯನ್ನು ಪೊದೆಯಿಂದ ಹೊರಗೆ ಹೊತ್ತು ತರುತ್ತಾನೆ. ಬಾಣ ನಾಟಿದ ಜಾಗದಲ್ಲಿ ತಡೆಯಿಲ್ಲದೆ ರಕ್ತ ಸುರಿಯುತ್ತದೆ. ನನ್ನ ಅಕ್ಕನನ್ನು ನಾನೇ ಕೈಯಾರೆ ಘಾಸಿಗೊಳಿಸಿದೆ ಎಂದು ಪಶ್ಚಾತ್ತಾಪದಿಂದ ಕಣ್ಣೀರು ಹಾಕುತ್ತಾನೆ. ನೋವಿನಿಂದ ತತ್ತರಿಸುತ್ತಿದ್ದ ದೇವಮ್ಮನ ಉಸಿರಾಟ ಕ್ಷೀಣವಾಗುತ್ತದೆ. ಅಕ್ಕನ ಅಂತ್ಯ ಸನ್ನಿಹಿತವಾಗುತ್ತಿದ್ದುದನ್ನು ಅರಿತ ಬೊಮ್ಮ ದುಃಖವನ್ನು ಸಹಿಸಲಾರದೆ ಅಕ್ಕ ನಾನೂ ಬದುಕುವುದಿಲ್ಲ. ನಿನ್ನೊಂದಿಗೇ ಪ್ರಾಣಬಿಡುತ್ತೇನೆ ಎಂದು ಅಳುತ್ತಾನೆ. ಕೊನೆಯುಸಿರೆಳೆಯುತ್ತಿದ್ದರೂ ಕರ್ತವ್ಯಪ್ರಜ್ಞೆಯಿಂದ ಜಾಗೃತಗೊಂಡ ದೇವಮ್ಮನ ಮನಸ್ಸು ಜಾಗೃತಾವಸ್ಥೆಗೆ ಮರಳಿ, ಭ್ರಮೆಗೊಳಗಾಗಿ ಹೀಗೆ ಮಾತನಾಡಬೇಡ. ಹೀಗೆ ಅಂತ್ಯಗೊಳ್ಳುವುದು ನನ್ನ ವಿಧಿಯಾಗಿತ್ತು. ಅದಕ್ಕಾಗಿ ಚಿಂತಿಸುತ್ತಾ ಕರ್ತವ್ಯದಿಂದ ವಿಮುಖನಾಗಬೇಡ. ದೊರೆ ವಶಪಡಿಸಿಕೊಂಡಿರುವ ಪೆಟ್ಟಿಗೆ ದೇವರುಗಳನ್ನು ಅಜ್ಜನವರನ್ನು ಬಿಡುಗಡೆಗೊಳಿಸು. ಮ್ಯಾಸಮಂಡಲದ ರಕ್ಷಣೆ ಮಾಡು ಎಂದು ಬೊಮ್ಮನನ್ನು ಎಚ್ಚರಿಸಿ ಆತನಲ್ಲಿ ಕರ್ತವ್ಯ ಪ್ರಜ್ಞೆ ಮೂಡಿಸಿ ಪ್ರಾಣಬಿಡುತ್ತಾಳೆ. ಅಕ್ಕನ ಶವವನ್ನು 'ಊಟುಕುಂಟೆ' (ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನ ಮುತ್ತಿಗಾರಹಳ್ಳಿ ಅರಣ್ಯದಲ್ಲಿರುವ ಒಂದು ಪ್ರದೇಶ)ಯಲ್ಲಿ ಸಮಾಧಿ ಮಾಡುತ್ತಾನೆ. ತನ್ನ ಹಟ್ಟಿಗೆ ಹಿಂತಿರುಗಿ ಅಕ್ಕನ ಮಾತುಗಳನ್ನೇ ವಿಚಾರ ಮಾಡುತ್ತಾ ಕುಳಿತಿರಲು ಹಾಗೇ ತೂಕಡಿಸಿ ನಿದ್ರೆಹೋಗುತ್ತಾನೆ. ಬೆಳಗಿನ ಜಾವದಲ್ಲಿ ದೇವಮ್ಮ ಮತ್ತೆ ಕನಸಿನಲ್ಲಿ ಕಾಣಿಸಿಕೊಂಡು ಮ್ಯಾಸರಿಗೆ ಕೊಟ್ಟ ಮಾತನ್ನು ಮರೆಯಬೇಡ. ವೀಳ್ಯ ಹಿಡಿದ ಮೇಲೆ ಕೆಲಸ ಪೂಜಿಸಬೇಕು. ಇಲ್ಲದಿದ್ದರೆ ಅವಮಾನ ಎಂದು ಎಚ್ಚರಿಸುತ್ತಾಳೆ. ನಾನು ಜೀವಂತವಾಗಿ ಇಲ್ಲದಿರಬಹುದು. ಆದರೆ ನಿನಗೆ ಸಹಾಯ ಮಾಡುತ್ತೇನೆ. ನರಪತಿರಾಜನ ಕೋಟೆಯ ಬಳಿ ಕಾದಿರು, ಮಧ್ಯಾಹ್ನದ ವೇಳೆಗೆ ಗಾಳಿಯಾಗಿ ಬರುತ್ತೇನೆ. ಭಯಂಕರ ಬಿರುಗಾಳಿಯ ಮಧ್ಯೆ ವರಾಹ ಸ್ವರೂಪದಲ್ಲಿ ಬಂದು ನರಕದ ಕೋಟೆಯನ್ನು ಒಡೆದು ಪ್ರವೇಶಿಸಿ ನಿನಗೆ ಈ ಮೂಲಕ ಕೋಟೆಯನ್ನು ಪ್ರವೇಶಿಸಲು ಅವಕಾಶ ಮಾಡಿಕೊಡುತ್ತೇನೆ ಎಂದು ಭರವಸೆ ಕೊಟ್ಟು ಆತ ಜಾಗೃತನಾಗುವಂತೆ ಮಾಡುತ್ತಾಳೆ.

ಮರುದಿನ ಬೊಮ್ಮಂತರಾಜ ನರಕದ ಕೋಟೆಯ ಬಳಿ ಬರುತ್ತಾನೆ. ಮಧ್ಯಾಹ್ನದ ವೇಳೆಗೆ ಭಯಂಕರವಾದ ಕೆಂದೂಳು ಮಿಶ್ರಿತವಾಗಿ ಗಾಳಿ ಬೀಸತೊಡಗುತ್ತದೆ. ಕೋಟೆಯಲ್ಲಿದ್ದ ನರಕಾಸುರನೇ ಈ ಸುಂಟರಗಾಳಿಯ ರಭಸಕ್ಕೆ ದಿಕ್ಕೆಟ್ಟು ಓಡುತ್ತಾನೆ. ಈ ಗಾಳಿಯ ಮಧ್ಯೆ ಒಂದು ಕಪ್ಪು ಹಂದಿ ಕಾಣಿಸಿಕೊಳ್ಳುತ್ತದೆ. ಹಿಂದೆ ಒಮ್ಮೆ ಮ್ಯಾಸಗಂಪಳ ಯುಗಾದಿ ದಿನ ಬೇಟೆಗೆ ಹೋದಾಗ ತಮಟೆ ಶಬ್ದಕ್ಕೆ ಹಂದಿ ನೆಗೆದು ನಿಲ್ಲುತ್ತದೆ. ಹನ್ನೆರಡು ಮಂದಿಯಷ್ಟು ಎತ್ತರದ ಹಂದಿಯದು. ಜನ ಬಹಳ ದೂರದಲ್ಲಿದ್ದರು. ಹಂದಿ ಹಟ್ಟಿಯ ಕಡೆ ನುಗ್ಗಿ ಬಂದಿತು. ಮುಂಗಲು ದೇವಮ್ಮ ಬಂಡೆ ಮೇಲೆ ಹನ್ನೆರಡು ಖಂಡುಗ ಭತ್ತ ಹಾಕಿಕೊಂಡು ಕುಟ್ಟುತ್ತಿದ್ದಳು. ಹಂದಿಯನ್ನು ನೋಡಿ ತನ್ನ ಕೈಯಲ್ಲಿದ್ದ ಒಸಕೆಯಿಂದ ಹೊಡೆದು ಕೊಂದಳು. ನನಗೆ ಅನ್ಯಾಯ ಮಾಡಬೇಡ ಗಂಧದ ಚಕ್ಕೆಯಲ್ಲಿ ಸುಟ್ಟು ಎಲುಬು ಬೂದಿಯನ್ನು ಹಾಗೇ ಕಾಪಾಡು ಸಮಯ ಬಂದಾಗ ಸಹಾಯ ಮಾಡುತ್ತೇನೆಂದು ಹೇಳಿ ಹಂದಿ ಪ್ರಾಣಬಿಟ್ಟಿತು. ಆಕೆ

ಹಾಗೆಯೇ ಮಾಡಿದಳು. ನರಪತಿ ರಾಜನ ಕೋಣೆಯಲ್ಲಿದ್ದ ೧೨ ಪೆಟ್ಟಿಗೆಗಳನ್ನು ಬಿಡಿಸಿಕೊಂಡು ಬರುವಾಗ ಈ ಎಲುಬು ಬೂದಿಯನ್ನು ಸಾಂಬ್ರಾಣಿಯಂತೆ ಹೊಗೆ ಹಾಕಲು ಹಂದಿ ಜೀವ ಪಡೆದು ಕೋಟೆಗೆ ನುಗ್ಗಿ ಸಹಾಯ ಮಾಡಿ ಆಕೆಯ ಋಣ ತೀರಿಸಿತು[೯೭] ಕೋಟೆಗೆ ಲಗ್ಗೆಯಿಟ್ಟು ಅದನ್ನು ನಿರ್ನಾಮ ಮಾಡುತ್ತದೆ. ಪ್ರವೇಶಕ್ಕೆ ಹೀಗೆ ದಾರಿ ಮಾಡಿಕೊಟ್ಟಾಕ್ಷಣ ಬೊಮ್ಮ ಒಳಗೆ ನುಗ್ಗುತ್ತಾನೆ. ಸೆರೆಯಲ್ಲಿದ್ದ ಹನ್ನೆರಡು ಪೆಟ್ಟಿಗೆ ಮತ್ತು ಒಂಬತ್ತು ಅಜ್ಜನವರನ್ನು ಬಿಡುಗಡೆಗೊಳಿಸಿಕೊಂಡು ಕರೆ ತಂದು ಯರಮಂಚಿನಾಯಕನಿಗೆ ಒಪ್ಪಿಸಿ ತಾನು ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತಾನೆ. ದೊರೆ ಮಾತು ಕೊಟ್ಟಂತೆ ಬೊಮ್ಮನಿಗೆ ಪುರಸ್ಕಾರ ಮಾಡಿ ತಾನೂ ಮಾತನ್ನು ಉಳಿಸಿಕೊಳ್ಳುತ್ತಾನೆ. ಈ ದೇವಮ್ಮನ ದೇವಾಲಯ ಗಲಗಲ್ಲಿನಲ್ಲಿದೆ. ಈಕೆಯೇ ಗಲಗಲ್ಲು ಗಾದಿನಾಯಕನ ಪತ್ನಿ.

**ಪುರಾಣ-೨**

ಆಂಧ್ರಪ್ರದೇಶದ ವ್ಯಾಪ್ತಿಯಲ್ಲಿ ಬರುವ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕಿಗೆ ಸೇರಿದ. ರಾಯದುರ್ಗಕ್ಕೆ ಹೊಂದಿಕೊಂಡಿರುವಂತಹ ಊರೇ 'ಗಲಗಲ್ಲು' ಗಲಗಲ್ಲನ್ನು ಕೇಂದ್ರವನ್ನಾಗಿ ಮಾಡಿಕೊಂಡು ವ್ಯಾಸನಾಯಕರ ಬೆಡಗಿಗೆ ಸೇರಿದ 'ಗಾದಿನಾಯಕ' ಎಂಬ ವ್ಯಕ್ತಿ ಆ ಪ್ರಾಂತ್ಯವನ್ನು ಆಳುತ್ತಿದ್ದ. ಅಡಗುಪ್ಪೆ ಪ್ರಾಂತ್ಯ ಎಂದು ಇದನ್ನು ಕರೆಯಲಾಗುತ್ತದೆ. ಮುಂಗಲು ದೇವಮ್ಮ ಈತನ ಪತ್ನಿಯಾಗಿದ್ದಳು. ಈಕೆ ಸ್ವುರದ್ರೂಪಿ. ಹಾಗೆಯೇ ಉತ್ತಮ ಗುರಿಕಾರಳೂ ಹೌದು. ಬುಟ್ಟುಗಲವರ ಹೆಣ್ಣು ಮಗಳೀಕೆ. ಗಾದಿನಾಯಕ ವ್ಯಾಸಮಂಡಲದ ಪ್ರಕಾರ ಒಬ್ಬ ದೊರೆ. ಈತನನ್ನು ದಂಡನಾಯಕ ಎಂದೂ ಹೇಳಲಾಗುತ್ತದೆ. ಒಟ್ಟಾರೆ ಅಧಿಕಾರ ಸ್ಥಾನ ಪಡೆದಿದ್ದ ಒಬ್ಬ ಪ್ರಮುಖ. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುವೀರರು' ಕೃತಿಯಲ್ಲಿಯೂ ಡಾ. ವಿರೂಪಾಕ್ಷ ಪೂಜಾರಹಳ್ಳಿಯವರು ಈತನ ಉಲ್ಲೇಖ ಮಾಡಿದ್ದಾರೆ ಈಕೆಯ ದೊರೆಯ ಪತ್ನಿಯಾದ ಕಾರಣ ಒಳ್ಳೆಯ ಸೀರೆ ಉಟ್ಟು ಆಭರಣಗಳಿಂದ ಅಲಂಕರಿಸಿಕೊಂಡು ಅಕರ್ಷಕವಾಗಿ ಕಾಣುತ್ತಿದ್ದಳು. ಇದೇ ಪ್ರಾಂತ್ಯಕ್ಕೆ 'ಕಾಟನಾಯಕ' ಎಂಬ ವ್ಯಕ್ತಿ ಬಂದು ತನ್ನ ಎತ್ತುಗಳ ರೊಪ್ಪವನ್ನು ಹಾಕಿಕೊಂಡಿರುತ್ತಾನೆ. ಪರಸ್ಪರ ಇಬ್ಬರೂ ಆಕರ್ಷಿತರಾಗುತ್ತಾರೆ. ಸ್ನೇಹ ಬೆಳೆಯುತ್ತದೆ. ಮುಂದುವರಿದು ಅನುರಾಗವೇರ್ಪಟ್ಟು ಸಮಯ ಸಾಧಿಸಿ ಭೇಟಿ ಮಾಡುತ್ತಿರುತ್ತಾರೆ. ಸಂಬಂಧ ಹೀಗೆ ಮುಂದುವರಿದಾಗ ವಿಷಯ ಗಾದಿನಾಯಕನಿಗೆ ತಿಳಿಯುತ್ತದೆ. ತಡೆಯುವ ಪ್ರಯತ್ನ ಮಾಡುತ್ತಾನೆ. ಮಾತನ್ನು ಮೀರಿ ಆಕೆ ತನ್ನ ಪ್ರಿಯಕರನಲ್ಲಿಗೆ ಹೋಗಿ ಬರುತ್ತಿರುತ್ತಾಳೆ. ಆಕೆ ಈಗ ಗರ್ಭಿಣಿ ಎಂಬ ಸುದ್ದಿ ತಿಳಿಯುತ್ತದೆ. ಒಂದು ದಿನ ರಾತ್ರಿ ಯಾವುದೋ ಸಮಸ್ಯೆ ಕಾರಣವಾಗಿ ಗಾದಿನಾಯಕ ಜನರ ಸಭೆ ಸೇರಿಸಿ ಪಂಚಾಯಿತಿ ನಡೆಸುತ್ತಲಿರುತ್ತಾನೆ. ಅಮಾವಾಸ್ಯೆಯ ಕತ್ತಲು, ಸಮಯ ಸಾಧಿಸಿ ಕಂಬಳಿ ಹೊದ್ದ ಮುಂಗಲು ದೇವಮ್ಮ ಕಪ್ಪು ಸೀರೆ ಬೇರೆ ಉಟ್ಟಿರುತ್ತಾಳೆ. ತನ್ನ ಪ್ರಿಯಕರನ ಎತ್ತಿನ ಗೂಡಿನ ಬಳಿ ಹೋಗುತ್ತಾಳೆ. ದಾರಿಯಲ್ಲಿ ಬಾಣವೊಂದು ನಾಟಿ ಪ್ರಾಣ ಬಿಡುತ್ತಾಳೆ. ಬಾಣದ ರಭಸಕ್ಕೆ ತತ್ತರಿಸಿದಾಗ ಆಕೆಯ ಹೊಟ್ಟೆಯಿಂದ ಜಾರಿ ಪಿಂಡ ಕೆಳಗೆ ಬೀಳುತ್ತದೆ. ಅದನ್ನು ಮುಂದೆ ಕಾಟನಾಯಕನ ಕಡೆಯುವರು

---

೯೭ ಹೆಳವರ ಶ್ರೀನಾಗಪ್ಪ, ವಯಸ್ಸು-೭೦, ಗೋಪನಹಳ್ಳಿ ಇವರಿದ ಪಡೆದ ವಿವರ.

ಸಾಕಿಕೊಳ್ಳುತ್ತಾರೆ. ಇವರನ್ನೇ 'ಪೇಯಲವರು' ಎಂದು ಕರೆಯಲಾಗುತ್ತದೆ. ಬಾಣಬಿಟ್ಟವನು ಗಾದಿನಾಯಕನ ಕಡೆಯವನೇ ಆಗಿರುತ್ತಾನೆ. ಗಾದಿನಾಯಕನೇ ಇದನ್ನು ಹೇಳಿ ಮಾಡಿಸಿರುತ್ತಾನೆ. ಅರಿಯದವನಂತೆ ಪಂಚಾಯಿತಿ ನಡೆಸುತ್ತಿರುತ್ತಾನೆ. ಪಂಚಾಯಿತಿ ಮುಗಿಸಿಕೊಂಡು ಜನ ತಮ್ಮ ಹಟ್ಟಿಗಳಿಗೆ ಹಿಂದಿರುಗುವಾಗ ಮಾರ್ಗದಲ್ಲಿ ಹೆಣ್ಣಿನ ಶವವನ್ನು ನೋಡಿಕೊಳ್ಳುತ್ತಾರೆ. ತಮಗೆ ರಾತ್ರಿ ಊಟ ಬಡಿಸಿದ ಮಹಿಳೆಯಲ್ಲವೇ ಈಕೆ ಎಂದು ಗುರುತಿಸಿ ಸುದ್ದಿಯನ್ನು ಗಾದಿನಾಯಕನಿಗೆ ತಲುಪಿಸುತ್ತಾರೆ. ನಂತರ ಆಕೆಯನ್ನು ಅಡಗುಪ್ಪೆ ಕಾವಲಿನಲ್ಲಿಯೇ ಸಮಾಧಿ ಮಾಡಲಾಗುತ್ತದೆ. ಯಾರದೋ ಬಾಣಕ್ಕೆ ಸಿಕ್ಕಿ ದೇವಮ್ಮ ಪ್ರಾಣಬಿಟ್ಟಳು ಎಂದು ಸುದ್ದಿಯನ್ನು ಹಬ್ಬಿಸುತ್ತಾರೆ. ಹೀಗೆ ದೇವಮ್ಮನ ಅಂತ್ಯವಾಗುತ್ತದೆ.

**ಪುರಾಣ – ೩**

ತನ್ನ ಪ್ರಿಯಕರನ ಎತ್ತಿನ ಗೂಡಿನ ಕಡೆ ಕಪ್ಪು ಸೀರೆ ಉಟ್ಟು ಕಂಬಳಿ ಹೊದ್ದ ಮುಂಗಲು ದೇವಮ್ಮ ರಾತ್ರಿಯ ವೇಳೆ ಕಪ್ಪು ಕತ್ತಲಿನಲ್ಲಿ ಬರುತ್ತಿದ್ದಳು. ತನ್ನ ಪ್ರಿಯಳ ನಿರೀಕ್ಷೆ ಮಾಡುತ್ತಾ ತನ್ನ ಗೂಡಿನ ರಕ್ಷಣೆ ಮಾಡುತ್ತಿದ್ದ ಕಾಟನಾಯಕ ಯಾವುದೋ ಕಪ್ಪು ಕರಡಿ ರೊಪ್ಪಕ್ಕೆ ನುಗ್ಗುತ್ತಿದೆ ಎಂದು ಆಕೆಯನ್ನು ತಪ್ಪಾಗಿ ಭಾವಿಸಿ ಬಾಣ ಬಿಡುತ್ತಾನೆ. ಬಾಣ ನಾಟಿ ಆಕೆ ಚೀತ್ಕರಿಸಿದಾಗ ಅನ್ಯಾಯವಾಯಿತು. ಯಾರೋ ಹೆಣ್ಣಿಗೆ ಬಾಣ ಬಿಟ್ಟೆ ಎಂದು ಪಶ್ಚಾತ್ತಾಪದಿಂದ ಧಾವಿಸಿ ಬಂದು ನೋಡಲು ಆಕೆ ಬೇರೆ ಯಾರೂ ಆಗಿರದೆ ತನ್ನ ಪ್ರೇಯಸಿಯಾದ ದೇವಮ್ಮನೇ ಆಗಿರುವುದನ್ನು ಕಂಡು ದುಃಖ ಪಡುತ್ತಾನೆ. ಏಟಿಗೆ ತತ್ತರಿಸಿ ಗರ್ಭಿಣಿಯಾಗಿದ್ದ ಆಕೆಯ ಗರ್ಭ ಜಾರಿ ಉದುರಿದ ಪಿಂಡವೇ ಮಗುವಾಗಿ ಅದನ್ನು ಆತನೇ ಸಾಕುತ್ತಾನೆ.

**ವಿಶ್ಲೇಷಣೆ :**

ಮೇಲಿನ ಮೂರು ಕತೆಗಳನ್ನು ಅವಲೋಕಿಸಿದಾಗ ಒಟ್ಟು ದೇವಮ್ಮನ ಚಿತ್ರಣವನ್ನು ನಾವು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ. ಮೇಲಿನ ಮೂರು ವಿವರಗಳಲ್ಲಿ ಬರುವಂತೆ ಆಕೆ ಬುಟ್ಟುಗಲವರ ಹೆಣ್ಣುಮಗಳು. ಕೊಳುಗುಳದ ಬೊಮ್ಮ ಬುಟ್ಟುಗಲವರ ಬೆಡಗಿಗೆ ಸೇರಿದ ವ್ಯಕ್ತಿ. ಈಕೆ ಸ್ವರುದ್ರೂಪಿ. ಉತ್ತಮ ಗುರಿಕಾರಳು, ಬೇಟೆಗಾರ್ತಿ, ಕೊಳುಗುಳದ ಬೊಮ್ಮನಂತಹ ಸಾಹಸಿಯ ಹಿಂದೆ ಪ್ರೇರಕ ಶಕ್ತಿಯಾಗಿದ್ದ ಆತನ ಅಕ್ಕನೀಕೆ. ಮ್ಯಾಸಬೇಡ ಸಮುದಾಯಕ್ಕೆ ನರಪತಿ ರಾಜನಿಂದ ತೊಂದರೆ ಉಂಟಾದಾಗ ಅದನ್ನು ನಿವಾರಿಸಲು ತಮ್ಮನನ್ನು ಹುರಿದುಂಬಿಸಿ ಸ್ಥೈರ್ಯವನ್ನು ತುಂಬಿ ಅಣಿಗೊಳಿಸಿದ ಶಕ್ತಿಯೇ ಈಕೆ. ಈ ಕಾರ್ಯದಲ್ಲಿ ತನ್ನನ್ನೂ ತನ್ನ ತಮ್ಮನನ್ನು ತೊಡಗಿಸಿಕೊಳ್ಳುವಾಗ ಈಕೆಗೆ ಮುಖ್ಯವಾದದ್ದು ಸಮಷ್ಟಿಯೇ ಹೊರತು ಕೇವಲ ತನ್ನ ತಮ್ಮ ಅಥವಾ ತನ್ನ ಉಳಿಯುವಿಕೆ ಅಲ್ಲ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಜನರಿಗೆ ಎಂದಿಗೂ ತಮ್ಮ ಮೇಲ್ಮೆಗಿಂತ ತಮ್ಮ ಒಟ್ಟು ಸಮುದಾಯದ ಉಳಿವು, ಉನ್ನತಿ ಮುಖ್ಯವಾಗುತ್ತದೆ. ಹೀಗೆ ತನ್ನ ಸಮುದಾಯ ಸಂಕಷ್ಟಕ್ಕೆ ಸಿಲುಕಿದಾಗ ಅದನ್ನು ಪರಿಹರಿಸಲು ಪ್ರಯತ್ನಿಸುವ ಈಕೆ ಖಂಡಿತ ಸ್ತುತ್ಯಾರ್ಹಳೇ. ಇದು ಒಂದು ಹಂತವಾದರೆ ಆಕೆಯ ಬಗೆಗೆ ಪ್ರಚಲಿತವಿರುವ ಮೇಲೆ ತಿಳಿಸಿರುವ ಕತೆಗಳ ಮೂಲಕ ಆಕೆ ಗಲಗಲ್ಲಿನ ಗಾದಿನಾಯಕನ ಪತ್ನಿಯಾಗಿದ್ದು ಕಾಟನಾಯಕನೆಂಬ ಪರಪುರುಷನನ್ನು ಮೋಹಿಸಿದ್ದು ನಂತರ ಸಾವಿಗೀಡಾದದ್ದು, ಈಕೆಯ

ಅಂತ್ಯದ ಬಗ್ಗೆಯೇ ಮೂರು ವಿಧದ ವಿವರಗಳು ದೊರೆಯುವುದರಿಂದ ಈ ಸಾವೇ ಒಂದು ನಿಗೂಢವೆನ್ನಿಸುತ್ತದೆ. ಒಂದು ತನ್ನ ತಮ್ಮನಿಂದ ಅಂತ್ಯವಾದಳು ಎಂಬ ಹೇಳಿಕೆಯಾದರೆ ಮತ್ತೊಂದೆಡೆಯಲ್ಲಿ ಗಂಡನಿಂದ, ಪ್ರಿಯಕರನಿಂದ ಎಂಬ ಹೇಳಿಕೆಗಳೇ ಆಕೆಯ ಸಾವನ್ನು ನಿಗೂಢವಾಗಿಸುತ್ತಾ ಹೋಗುತ್ತವೆ. ಇಂದಿಗೂ ಈ ಸಮುದಾಯದಲ್ಲಿ ಈ ಮುಂಗಲು ದೇವಮ್ಮ ಯಾರು ಎಂದು ಪ್ರಶ್ನಿಸಿದರೆ ತಟ್ಟನೆ ಉತ್ತರ ದೊರೆಯುವುದಿಲ್ಲ. ಒಂದು ಬಗೆಯ ಮೌನ ಅಲ್ಲಿ ಆವರಿಸಿಕೊಳ್ಳುತ್ತದೆ. ವಿಷಾದ ಛಾಯೆ ಅಲ್ಲಿ ಎದ್ದು ಕಾಣುತ್ತದೆ. ತನ್ನ ಪತ್ನಿ ತನ್ನ ಅಂಕೆಯನ್ನು ಮೀರಿ ತನ್ನ ಪ್ರಿಯಕರನಲ್ಲಿಗೆ ಹೋಗಿ ಬರುವುದನ್ನು ಸಹಿಸಲಾರದೆ ತನಗೆ ಇದೊಂದು ಅವಮಾನದ ಸಂಗತಿ ಎಂದು ಭಾವಿಸಿದ ಆತನೇ ಆಕೆಯನ್ನು ಅಂತ್ಯಗೊಳಿಸಿದ ಎಂಬ ಅನುಮಾನ ಇಲ್ಲಿ ಉಂಟಾಗುತ್ತದೆ. ಆದರೆ ಆತ ಅಂದು ಅಧಿಕಾರ ಸ್ಥಾನದಲ್ಲಿದ್ದುದರಿಂದ ಅದನ್ನು ತನ್ನ ಮೇಲೆ ಹಾಕಿಕೊಳ್ಳದೆ ಆಕೆಯ ಪ್ರಿಯಕರನನ್ನೇ ಆರೋಪಿಯನ್ನಾಗಿ ಮಾಡಿದ. ಆ ಪ್ರಿಯಕರನ ಗುಂಪಿನವರೋ ಇದನ್ನು ಪ್ರತಿಭಟಿಸುವ ಸ್ಥಿತಿಯಲ್ಲೂ ಇರಲಿಲ್ಲ. ಕಾರಣ ಎಷ್ಟಾದರೂ ಆತ ದೊರೆಯೇ ಎಂಬುದಾಗಿತ್ತು.

ಇನ್ನು ಕೊಳುಗುಳದ ಬೊಮ್ಮನೇ ತನ್ನ ಅಕ್ಕನನ್ನು ಕಾಣದೆ ಪ್ರಾಣಿಯೆಂದು ಬಗೆದು ಬಾಣ ಬಿಡಲು ಬಾಣ ನಾಟಿದ ಆಕೆ ಸತ್ತಳು. ಇದು ಅನಿರೀಕ್ಷಿತ ಮತ್ತು ಅಚಾತುರ್ಯದಿಂದ ಆದುದು ಎಂದು ಹೇಳುವಲ್ಲಿ ಆಕೆಯ ಮಾನವನ್ನು ಸಂರಕ್ಷಿಸುವ ಸದುದ್ದೇಶ ಕಂಡುಬರುತ್ತದೆ. ವೀರ ಮಹಿಳೆಯಾಗಿದ್ದ, ದಿಟ್ಟೆಯಾಗಿದ್ದ, ಎಲ್ಲಕ್ಕಿಂತಲೂ ತಮಗೆ ಪ್ರೀತಿಯ ಸಹೋದರಿಯಾಗಿದ್ದ ಆಕೆಯ ಬದುಕನ್ನು ಆಕೆಯ ಸಾವಿನ ಮೂಲಕ ಆಕೆಯೊಬ್ಬ ಅನೈತಿಕ ಮಹಿಳೆ ಎಂಬುದು ಜಗತ್ತಿನಲ್ಲಿ ಹರಡದೇ ಇರಲಿ. ಸಮಾಜ ಆಕೆಯನ್ನು ಅಗೌರವದಿಂದ ಕಾಣುವುದು ಬೇಡ ಎಂಬ ಆಲೋಚನೆಯಿಂದ ಕಟ್ಟಿದ ಕತೆ ಎಂಬುದರಲ್ಲಿ ಸಂಶಯವಿಲ್ಲ. ಆಕೆಯ ಸಾವಿಗೆ ತಾವೇ ಕಾರಣ ಎಂದು ತವರಿನವರು ತಮ್ಮ ಮೇಲೆ ಹಾಕಿಕೊಳ್ಳುವಲ್ಲಿ ಆಕೆಯ ಬಗ್ಗೆ ಅವರಿಗಿರುವ ಅಭಿಮಾನ ಎದ್ದು ಕಾಣುತ್ತದೆ.

ಮೂಲತಃ ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿಯೂ ಇದ್ದದ್ದು ಮುಕ್ತ ಸಂಬಂಧಗಳು ಇಲ್ಲಿ ಸ್ತ್ರೀ ಪುರುಷ ಎಂಬ ಭೇದ ವಿರಲಿಲ್ಲ. ವ್ಯಕ್ತಿ ಗೌರವ ಎಂಬುದು ಅಲ್ಲಿ ಸ್ತ್ರೀ ಮತ್ತು ಪುರುಷ ಸಮುದಾಯಕ್ಕೆ ಸಹಜವಾಗಿಯೇ ಸಮಾನವಾಗಿಯೇ ಸಲ್ಲುತ್ತಿತ್ತು. ಸಮುದಾಯದಲ್ಲಿ ಮಹಿಳೆಯೇ ಸರ್ವಸ್ವ. ಆಕೆಯೇ ನಾಯಕಿ ಎಂಬ ವಾತಾವರಣವೂ ಇದ್ದು ಇದನ್ನೇ ಮಾತೃರೂಪೀ ಕುಟುಂಬ ವ್ಯವಸ್ಥೆ ಎಂದು ಕರೆಯಲ್ಪಡುತ್ತಿತ್ತು. ಹೆಣ್ಣು ಎಂದರೆ ಭೂಮಿ ಇದ್ದಂತೆಯೇ. ಸಮೃದ್ಧಿ ಮತ್ತು ಫಲವಂತಿಕೆ ಆಕೆಯ ಮೂಲಕವೆ ಎಂದು ಹೆಚ್ಚಿನ ಮರ್ಯಾದೆ ಇತ್ತು. ಆರ್ಯರ ಪ್ರವೇಶಾನಂತರ ಇಲ್ಲಿಯ ದ್ರಾವಿಡ ಬುಡಕಟ್ಟುಗಳಲ್ಲಿದ್ದ ಈ ವ್ಯವಸ್ಥೆಯಲ್ಲಿ ಬದಲಾವಣೆ ಪ್ರಾರಂಭವಾಯಿತು. ಆರ್ಯಧರ್ಮ ಮಹಿಳೆಯ ಪಾತಿವ್ರತ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿತು. ಪಾತಿವ್ರತ್ಯವೇ ಹೆಣ್ಣಿನ ಅತಿಮುಖ್ಯವಾದ, ಉತ್ತಮವಾದ ಮೌಲ್ಯ ಎಂದು ಸಾರುತ್ತಾ ಬಂದಿತು. ಆರ್ಯರ ಮನುಧರ್ಮಶಾಸ್ತ್ರ ಏಕಸಂಗಾತಿ ವಿವಾಹ ಪದ್ಧತಿಯನ್ನು ನೆಲೆಗೊಳಿಸಲು ಪ್ರಯತ್ನಿಸಿತು. ಕುಟುಂಬದ ಸ್ವಾಸ್ಥ್ಯದ ದೃಷ್ಟಿಯಿಂದ ಇದು ಅತ್ಯುತ್ತಮ ನೀತಿಯಾದರೂ ಇದು ಇಬ್ಬರಿಗೂ ಅನ್ವಯವಾದಾಗ ಮಾತ್ರ ಯಶಸ್ವಿ ಸೂತ್ರ ಎನಿಸುತ್ತದೆ. ಇದು ಹೆಣ್ಣಿಗೆ

ಮಾತ್ರ ಅನ್ವಯವಾಯಿತೇ ಹೊರತು ಗಂಡು ಈ ನಿಯಮದ ಒಳಗೆ ಬರಲೇ ಇಲ್ಲ. ಹೆಣ್ಣಿಗೆ ವಿವಾಹ ಪವಿತ್ರವಾದ ಬಂಧನವಾಯಿತೇ ಹೊರತು ಪುರುಷ ಪ್ರಶ್ನಾತೀತವಾಗಿಯೇ ಮುಂದುವರಿದ. ಕೊನೆಗೆ ಜನಪದ ಮಹಿಳೆ ತನ್ನ ಗಂಡ ಪರಸ್ತ್ರೀಯ ಸಹವಾಸ ಮಾಡಿದಾಗ 'ನಾ ಮೆಚ್ಚಿ ಮುಡಿದ ಪರಿಮಳದಾ ಹೂವ ಅವಳೊಂದು ಗಳಿಗೆ ಮುಡಿಯಲಿ" ಎಂದು ಸಮಾದಾನಪಡುವಂತೆ ಮಾಡಿತು. ಆದರೆ ಹೆಣ್ಣಿನ ಮನಸ್ಸಿನ ಮತ್ತು ಭಾವನೆಗಳ ಮೇಲೆ ಅತಿಯಾದ ನಿರ್ಬಂಧವನ್ನು ಹೇರಲಾಯಿತು. ಈ ನಿಯಮಗಳೇ ಇಲ್ಲಿನ ಸ್ಥಳೀಯ ಸಂಸ್ಕೃತಿಯ ಪುರುಷರಿಗೂ ಆದರ್ಶವೆನಿಸಿದವು. ಗಂಡು ಹೇರಿದ ನಿಯಮಗಳನ್ನು ಪಾಲಿಸಿದ ಸೀತೆ ಸಾವಿತ್ರಿ, ಅರುಂಧತಿ ಇಲ್ಲಿ ಶ್ರೇಷ್ಠ ಸ್ಥಾನಕ್ಕೇರಿದರು. ಮ್ಯಾಸಬೇಡ ಬುಡಕಟ್ಟಿನಲ್ಲಿಯೂ ಮಾತೃಮೂಲೀಯವಾಗಿ, ಮುಕ್ತವಾಗಿದ್ದ ಸಾಮಾಜಿಕ ವ್ಯವಸ್ಥೆಯು ಪಶುಪಾಲಕತನದೊಂದಿಗೇ ಪುರುಷ ಪ್ರಧಾನತೆಯ ಕಡೆ ತಿರುಗಿದಾಗ ಸ್ತ್ರೀ ಕಡೆಗಣಿಸಲ್ಪಟ್ಟಳು. ಪುರುಷ ಪ್ರಶ್ನಾತೀತನಾದ. ಇಂತಹ ಒಂದು ಪ್ರಸಂಗವೇ ಇಲ್ಲಿ ಮುಂಗಲು ದೇವಮ್ಮನ ಸ್ಥಿತಿ. ಈಕೆ ವಿವಾಹವಾಗಿದ್ದು ಒಬ್ಬ ಸ್ಥಳೀಯ ದೊರೆ ನಾಯಕನನ್ನು. ತಾನೆಷ್ಟೇ ಸಬಲಳಾಗಿದ್ದರೂ ಪರಾಧೀನೆ, ತನ್ನಿಚ್ಛೆಯಂತೆ ಆಕೆ ನಡೆದುಕೊಂಡಾಗ ಆಕೆಯ ಗಂಡನಿಗೆ ಅದು ಮುಜುಗರ ಉಂಟು ಮಾಡುತ್ತದೆ. ತನ್ನ ಪ್ರತಿಷ್ಠೆಗೆ ಇದು ಧಕ್ಕೆಯುಂಟು ಮಾಡುತ್ತದೆ ಎಂದು ಭಾವಿಸುತ್ತಾನೆ. ಪ್ರತಿಯೊಬ್ಬ ವ್ಯಕ್ತಿಗೂ ಕನಿಷ್ಟ ಬದುಕುವ ಹಕ್ಕಾದರೂ ಇರುತ್ತದೆ. ಆದರೆ ಈ ಬದುಕನ್ನು ಕಸಿಯುವಲ್ಲಿ ಈತ ಯಶಸ್ವಿಯಾಗುತ್ತಾನೆ. ಮಾನವ ಹಕ್ಕಿನ ಉಲ್ಲಂಘನೆಯಾಗುತ್ತದೆ. ಅಂದರೆ ಆಕೆಯನ್ನು ಕೊನೆಗಾಣಿಸುತ್ತಾನೆ. ಈಕೆಯನ್ನು ಗಾದಿನಾಯಕನ ಪರಂಪರೆಯವರ್‍ಯಾರೂ ಇಂದು ಸ್ಮರಿಸುವುದಿಲ್ಲ. ಅದೊಂದು ಕೆಟ್ಟ ಕನಸೆಂಬಂತೆ ಭಾವಿಸುತ್ತಾರೆ. ಆಕೆ ಓಡಾಡಿದ ಸ್ಥಳವನ್ನು ಲಂಜಗುಂಟ ಕಣಿವೆ ಎಂದು ಕರೆಯುತ್ತಾರೆ. 'ಲಂಜಿ' ಎಂಬುದು ತೆಲುಗು ಪದ. ಇದಕ್ಕೆ ಕನ್ನಡದಲ್ಲಿ 'ಸೂಳೆ' ನಡತೆ ತಪ್ಪಿದವಳು ಎಂದಾಗುತ್ತದೆ. ಆಕೆ ಓಡಾಡಿದ ಸ್ಥಳ ಅಂದರೆ ಕಾಟನಾಯಕ ದನಗಳ ಗೂಡನ್ನು ಹಾಕಿಕೊಂಡಿದ್ದು ಅಲ್ಲಿ ಆಕೆ ಹೋಗಿ ಬರುತ್ತಿದ್ದ ಸ್ಥಳವನ್ನು ಹಾಗೆ ಕರೆಯಲಾಗುತ್ತದೆ. ಹೀಗೆಯೇ ಆಲೋಚಿಸಿದರೆ ಬೇರೆ ಸಮುದಾಯದ ಮಾತು ಒತ್ತಟ್ಟಿಗಿರಲಿ, ಮ್ಯಾಸಬೇಡ ಬುಡಕಟ್ಟಿನಲ್ಲಿ ಇಂದು ವೈಭವೀಕರಣಗೊಂಡು ಸ್ಮರಣೆಯಲ್ಲಿ ಉಳಿದಿರುವ ಸಾಂಸ್ಕೃತಿಕ ನಾಯಕರು ಎಂದು ಕರೆಸಿಕೊಳ್ಳುತ್ತಿರುವ ವೀರರು ಹೀಗೆಯೇ ಅಡ್ಡಾಡಿದ ದಾರಿಗಳು ಹೆದ್ದಾರಿಗಳೇ ಆಗಿವೆಯಲ್ಲ. ಈ ಸ್ಥಳಗಳಿಗೆ ವಿಟಪುರುಷರ ಕಣಿವೆ' ಎಂದು ಕರೆಯಬೇಕಾಗುತ್ತದೆಯೇ? ಇದೇ ಒಂದು ಸಮುದಾಯ ಅಥವಾ ಒಟ್ಟು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿರುವ ವೈರುಧ್ಯವಲ್ಲವೇ. ಇಸ್ಲಾಂ ಧರ್ಮಕ್ಕೆ ಸೇರಿದ ನನ್ನಿಯಮ್ಮನನ್ನು ಮೋಹಿಸಿದ ದೆಡ್ಡಿಯರ ಪಾಲನಾಯಕ ಆಕೆಯ ಹೆಸರಿನಲ್ಲಿ ಊರೊಂದನ್ನು ಕಟ್ಟುತ್ತಾನೆ. ಈತ ಮೊದಲು ವಿವಾಹಿತನೆಂಬುದಲ್ಲಿ ಸಂಶಯವಿಲ್ಲ. ತನ್ನ ಅಧಿಕಾರ ಬಲದಿಂದ ಪುರುಷ ವರ್ತಿಸುವ ಮತ್ತು ಅದನ್ನು ಒಪ್ಪಿಕೊಳ್ಳುವ ಸಾಮಾಜಿಕ ವ್ಯವಸ್ಥೆಯೊಂದು ಮಹಿಳೆಯನ್ನು ಮಾತ್ರ ಇಲ್ಲಿ ನಿರಾಕರಿಸುತ್ತದೆ. ಅಲ್ಲದೆ ಅಪಮಾನಿಸುತ್ತದೆ. ವೀರಶೈವ ಧರ್ಮದಲ್ಲಿ ತನ್ನ ಮನದ ಭಾವನೆಗಳನ್ನು ಪುರಸ್ಕರಿಸಿದ ಗಂಡ ಮಹಾದೇವಿಗೆ ಒಲ್ಲದ ಗಂಡನಾಗುತ್ತಾನೆ. ಈಕೆ ಶರಣ ಸಮುದಾಯದಲ್ಲಿ 'ಅಕ್ಕ ಮಹಾದೇವಿ'ಯಾಗುತ್ತಾಳೆ. ತನ್ನ ಮನಸ್ಸನ್ನು ತೆರೆದಿಟ್ಟು ಆಕೆ ಮಾತಾಡಿದ ಮಾತುಗಳ ಹಿಂದೆ ಆಕೆಯ

ನೋವಿದೆ. ತಲ್ಲಣವಿದೆ. ಪ್ರಖರವಾದ ವೈಚಾರಿಕ ಶಕ್ತಿ ಇದೆ. ಇಂತಹ ಅಕ್ಕನನ್ನು ಶರಣ ಸಮಾಜ ಪುರಸ್ಕರಿಸಿತು ಪರಿತ್ಯಕ್ತೆಯಾಗಿ ಸಮಾಜದಲ್ಲಿ ನಿಕೃಷ್ಟ ಸ್ಥಿತಿಯಲ್ಲಿರಬೇಕಾದ ಆಕೆಗೆ ಈ ಮೂಲಕ ಸ್ಥಾನಮಾನ ಲಭ್ಯವಾಯಿತು. ಇದು ಲಭ್ಯವಾಗಬೇಕಾದುದೇ ಆಕೆ ಗಂಡನನ್ನು ಇಷ್ಟ ಪಡದವಳು ಎಂದಾಕ್ಷಣ ಆಕೆಯನ್ನು ಅಪರಾಧಿ ಸ್ಥಾನದಲ್ಲಿರಿಸಿ ನೋಡಬೇಕಾಗಿಲ್ಲ ಎಂಬುದನ್ನು ಶರಣ ಸಂಕುಲ ಜಗತ್ತಿಗೆ ತೋರಿಸಿಕೊಟ್ಟಿತು. ಹಾಗೆಯೇ, 'ಸೂಳೆ ಸಂಕವ್ವೆ' ಯೂ ಸಹ ಅನುಭವ ಮಂಟಪ ವೆಂಬ ಅಂದಿನ ವಿಚಾರವಂತರ ಸಭೆಯಲ್ಲಿ ಗುರುತಿಸಲ್ಪಟ್ಟಳು. ವಿಮಲ, ಪದ್ಮಾವತಿ, ಅಂಬಾಪಾಲಿ, ಮುಂತಾದವರು ಬೌದ್ಧ ಧರ್ಮವನ್ನು ಸೇರಿ 'ಅರ್ಹತ್' ಎಂಬ ಪದವಿಯನ್ನು ಪಡೆದರು. ಸಮಾಜದಲ್ಲಿ ಹೀಗೆ ನೀಚ ಸ್ಥಾನದಲ್ಲಿದ್ದ ವೇಶ್ಯೆಯರು ಕೂಡ ಬೌದ್ಧ ಧರ್ಮ ಸೇರಿ ಮುಕ್ತಿ 'ಪಡೆಯಬಹುದೆಂಬ ಉದಾರ ಧೋರಣೆಯನ್ನು ಬೌದ್ಧ ಧರ್ಮ ಅನುಸರಿಸಿದ್ದು ಒಂದು ಪ್ರಗತಿಪರ ಹೆಜ್ಜೆಯೆನಿಸುತ್ತದೆ. ಆದರೆ ಸಹಜವಾಗಿಯೇ ಸ್ತ್ರೀಪುರುಷ ಎಂದು ಭಿನ್ನತೆಯಿಂದ ಪರಿಗಣಿಸದ ಸಂಸ್ಕೃತಿಯೊಂದರಲ್ಲಿ ಒಡೆತನ, ಪಾಳೆಯಗಾರಿಕೆಗಳು ಕ್ರಮೇಣ ಭಿನ್ನವಾಗಿ ಆಲೋಚಿಸುವಂತೆ ಮಾಡಿದವು. ಹೀಗಾಗಿ ಗಾದಿ ನಾಯಕನ್ನು ಒಲ್ಲದ ಮುಂಗಲುದೇವಮ್ಮ ತಾನೊಲಿದ ಪುರುಷನ ಕಡೆ ಹೋಗಿರುವುದೇ ಕಾರಣವಾಗಿ ಅಮಾನುಷವಾಗಿ ಹತ್ಯೆಗೊಳಗಾದಳು. ಹೀಗೆ ಮರೆಗೆ ಸರಿದ ದೇವಮ್ಮನ ಮೌನ, ಆಕೆಯ ಸ್ಮರಣೆಗಾಗಿ ಆಕೆಯ ಕೆಲವು ವಸ್ತುಗಳು, ಆಯುಧಗಳನ್ನು ಆಕೆಯ ತವರಿನವರು ಮಾತ್ರ ಪೂಜಿಸುತ್ತಿದ್ದಾರೆ. ಅವರಿಗೆ ಮಾತ್ರ ಅಭಿಮಾನವಿದೆ ಅವಳ ಬಗೆಗೆ. ಆದರೆ ಒಟ್ಟು ಸಮುದಾಯದಲ್ಲಿ ಆಕೆ ಸ್ಮರಣೆಯಲ್ಲಿ ಉಳಿದಿರುವುದು 'ಲಂಜ' ಎಂಬುದಾಗಿ ಈ ಬಗೆಯ ಆಲೋಚನೆಯಿಂದ ಹೊರಬಂದು ಆಕೆ ಸಮೃದ್ಧಿಯ ಉಳಿವಿಗಾಗಿ ಕಾರ್ಯ ತಂತ್ರವನ್ನು ರೂಪಿಸಿ ತಮ್ಮನಾದ ಕೊಳುಗುಳದ ಬೊಮ್ಮನನ್ನು ಹುರಿದುಂಬಿಸಿ ಶಸ್ತ್ರಾಸ್ತ್ರಗಳನ್ನು ಅಣಿಗೊಳಿಸಿ ಹೋರಾಟವನ್ನು ಆಯೋಜಿಸಿದವಳು. ನರಪತಿಯ ಕೋಟೆಯನ್ನು ಕೊಳುಗುಳದ ಬೊಮ್ಮ ಪ್ರವೇಶಿಸಿ ಮ್ಯಾಸ ಮಂಡಲದ ಪೆಟ್ಟಿಗೆಗಳನ್ನು, ಪಶುಸಂಪತ್ತನ್ನು, ೯ ಅಜ್ಜನವರನ್ನು ಬಿಡುಗಡೆಗೊಳಿಸುವಲ್ಲಿ ಸಹಾಯ, ಸಹಕಾರ ನೀಡಿದವಳು ಎಂದು ಸ್ಮರಿಸಬೇಕಾಗಿದೆ. ಆಕೆಯನ್ನು ಒಟ್ಟು ಸಮುದಾಯದ ನಾಯಕಿ, ಸಾಂಸ್ಕೃತಿಕ ನಾಯಕಿ ಎಂದು ಕರೆದು ಗೌರವಿಸಬೇಕಾಗಿದೆ.

**ಈ) ಕಂಚವ್ವ-ಕಾಮವ್ವ :**

ಮ್ಯಾಸಬೇಡರ ಬಹುತೇಕ ಹಟ್ಟಿಗಳಲ್ಲಿ ಮತ್ತು ಮ್ಯಾಸಬೇಡರು ನೆಲೆಸಿರುವ ಊರುಗಳಲ್ಲಿ ಸಾಕಷ್ಟು ಕಡೆ ಗಾದರಿಪಾಲನಾಯಕನ ದೇವಾಲಯವನ್ನು ಕಾಣಬಹುದು. ವರ್ಷದಲ್ಲಿ ನಡೆಯುವ ವಿಶೇಷ ಹಬ್ಬವಾದ 'ಗುಗ್ಗರಿ ಹಬ್ಬ' ಅಲ್ಲದೆ ಶ್ರಾವಣ, ದೀಪಾವಳಿಗಳಲ್ಲೂ ಈ ದೇವಾಲಯಗಳಲ್ಲಿ ಈತನಿಗೆ ವಿಶೇಷವಾದ ಪೂಜೆ ಸಲ್ಲುತ್ತದೆ. ಇಷ್ಟೊಂದು ವ್ಯಾಪಕವಾಗಿ ಈತನ ಪ್ರಭಾವ ದಟ್ಟವಾಗಿ ಹರಡಿದ್ದು ಈತನನ್ನು ಈ ಸಮುದಾಯದ ಒಬ್ಬ 'ಸಾಂಸ್ಕೃತಿಕ ವೀರ' ಎಂದು ಪರಿಗಣಿಸಲಾಗಿದೆ. ತನ್ನ ಪಶುಪಾಲನಾ ವೃತ್ತಿಯನ್ನು ಜತನದಿಂದ ನಿರ್ವಹಿಸಿ ಆ ಮೂಲಕ ಆ ಸಮುದಾಯದ ರಕ್ಷಣೆ ಮಾಡಿದ. ಏಳಿಗೆಗೆ ಕಾರಣನಾದ ವ್ಯಕ್ತಿ ಎಂದು ಆತನ ಬಗೆಗೆ ಇರುವ ಜನಪದ ಕಥನಗಳು ಪುಷ್ಟೀಕರಿಸುತ್ತವೆ.

ಕಾಟಮಲ್ಲನಾಯಕನ ಸಂತತಿಯವನಾದ ಈತನದು ಅಪಾರವಾದ ಪಶುಸಂಪತ್ತು. ಕಾಡಿನ ನೆಲೆಗಳಲ್ಲಿ ವಾಸ ಮಾಡುವ ಅನಿವಾರ್ಯ ಈತನದಾದ್ದರಿಂದ ಸದಾ ಕ್ರೂರಪ್ರಾಣಿಗಳ ಭಯದ ನೆರಳಿನಲ್ಲಿಯೇ ತನ್ನ ಪಶುಸಂಪತ್ತನ್ನು ಕಾಪಾಡುತ್ತಿದ್ದ, ಹುಲಿಗಳೊಂದಿಗೆ ಒಪ್ಪಂದ ಮಾಡಿಕೊಂಡು ಸ್ನೇಹಬೆಳೆಸಿದ್ದ. ತಾನು ಹುಲಿಯನ್ನು ಬೇಟೆಯಾಡುವುದಿಲ್ಲ ಎಂದು, ತನ್ನ ಪಶುಗಳನ್ನು ನೀವು ಕೊಲ್ಲುವಹಾಗಿಲ್ಲ ಎಂದು ಹುಲಿಯೊಂದಿಗೆ ಒಪ್ಪಂದ ಮಾಡಿಕೊಂಡಿದ್ದನಂತೆ. ಕಾಡಿನ ಅಂಚಿನ ಊರುಗಳಲ್ಲಿ ಈತ ಹಾಲನ್ನು ಮಾರಾಟ ಮಾಡುತ್ತಿದ್ದ. ಮ್ಯಾಸಬೇಡರು ಇಂದು ಹಾಲು ಮಾರಾಟ ಮಾಡಿ ಜೀವನ ಮಾಡುವವರಲ್ಲವಾದರೂ ಆಗ ತಮ್ಮ ಅವಶ್ಯಕ ವಸ್ತುಗಳನ್ನು ಪಡೆಯುವ ಸಲುವಾಗಿ ಅನಿವಾರ್ಯವಾಗಿ ಈ ವಿಕ್ರಯ ನಡೆಯುತ್ತಿದ್ದಿರಬಹುದು. ಸೆಟ್ಟೂರಿನ ಸೊಟ್ಟಪ್ಪ ಎಂಬುವವನ ಮಕ್ಕಳಾದ ಕಂಚವ್ವ-ಕಾಮವ್ವ ಈತನನ್ನು ಕಂಡು ಮೋಹಿಸುತ್ತಾರೆ. ತಮ್ಮ ಗೌಡಿಯರನ್ನು ಅಂದರೆ ಸೇವಕಿಯರನ್ನು ಕಳಿಸಿ ಈತನನ್ನು ಬರ ಮಾಡಿಕೊಳ್ಳುತ್ತಾರೆ. ಒಂದು ದಿನ ಈತ ಇವರೊಂದಿಗೆ ಕಾಲಕಳೆಯುತ್ತಾನೆ. ಮರುದಿನ ಅವರನ್ನು ಕರೆದುಕೊಂಡು ಗೂಡಿಗೆ ಮರಳುತ್ತಾನೆ. ಈ ಮಹಿಳೆಯರು 'ಕಾಮಗೇತಿ' ಬೆಡಗಿಗೆ ಸೇರಿದವರು.



*ಗಂಜಿಗಟ್ಟಿಯಲ್ಲಿ ಕಂಚವ್ವ, ಕಾಮವ್ವ ಹೆಸರಿನಲ್ಲಿರುವ ಸತೀಕಲ್ಲು, ಹುಲಿ, ಹಸುವಿನ ಚಿತ್ರ ಮೇಲ್ಭಾಗದಲ್ಲಿದೆ. ಗಾದ್ರಿಪಾಲನಾಯಕನ ಚಿತ್ರವೂ ಇದೆ. ಈ ಮಹಿಳೆಯರು ಕಂಚವ್ವ ಮತ್ತು ಕಾಮವ್ವ*



*ಕಂಚವ್ವ ಮತ್ತು ಕಾಮವ್ವ ಮಿಂಚೇರಿ ಕಾಡಿನಲ್ಲಿ ಮಜ್ಜಿಗೆ ಕಡೆಯುತ್ತಿದ್ದ ಎತ್ತಿನಗೂಡುಗಳ ಬಳಿ ತಮ್ಮ ಬಳಿಯಲ್ಲಿದ್ದ ಮಜ್ಜಿಗೆ ಕಡೆಯುತ್ತಿದ್ದ ಕಡಗಲು ಮರಗಳಿವು. ಈ ಮರದ ಬಳಿ ಇದ್ದ ಕಲ್ಲಿಗೆ ಕಡಗಲ್ಲು ಎಂದು ಕರೆಯುತ್ತಾರೆ*

ಆತನ ಕೌಟುಂಬಿಕ ಜೀವನ ಅವರೊಂದಿಗೆ ಸಾಗುತ್ತಿರಲು ಆತನ ಪತ್ನಿಯರೂ ಈತನೊಂದಿಗೆ ಈ ಪಶುಸಂಗೋಪನೆಯ ಕೆಲಸ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ದನಗಳು ಮೇಯಲೆಂದು ಕಾಡಿಗೆ

ಹೋದಾಗ ರೊಪ್ಪದಲ್ಲಿಯೇ ಉಳಿದ ಕರುಗಳನ್ನು ನೋಡಿಕೊಳ್ಳುವುದು. ಹತ್ತಿರದ ಊರುಗಳಿಗೆ ಹೋಗಿ ಹಾಲು ಮಾರಾಟ ಮಾಡಿ ದಿನಸಿ ಧಾನ್ಯ ತರುವುದೂ ಇವರ ಜವಾಬ್ದಾರಿಯಾಗಿತ್ತು. ಜನಪದರು ಹೇಳುವಾಗ ಹಾಗೆ ಹಾವನ್ನೇ ಸಿಂಬೆ ಮಾಡಿಕೊಂಡು ತಲೆಯ ಮೇಲಿಟ್ಟು ಬಿಂದಿಗೆಯಲ್ಲಿ ನೀರನ್ನು ಹೊತ್ತು ತಂದು ಕರುಗಳಿಗೆ ಕುಡಿಸುತ್ತಿದ್ದರಂತೆ, ದನಕರುಗಳ ಗೂಡಿಗೆ ಹಾವಿನ ಕಾಟ ಅವರಿಗೆ ಸಾಮಾನ್ಯವಾಗಿತ್ತು. ಗಂಡ ಹುಲಿಯೊಂದಿಗೆ ಒಪ್ಪಂದ ಮಾಡಿಕೊಂಡಂತೆ ಹಾವಿನೊಂದಿಗೆ ಇವರಿಗೆ ಸ್ನೇಹ, ಸಲಿಗೆ, ಕಂಟಕವೆನಿಸಿದಾಗ ಹೊಡೆದುಹಾಕುವುದು ಸಾಮಾನ್ಯವಾಗಿತ್ತು. ಒಪ್ಪಂದ ಎಂಬುದು ಇಲ್ಲಿ ಒಂದು ಆಶಯವಷ್ಟೆ. ಅವುಗಳೊಂದಿಗೇ ಬಾಳುವ ಒಂದು ಅನಿವಾರ್ಯ. ಹೀಗಿರಲು ಒಮ್ಮೆ ಪಾಲನಾಯಕ ದನ ಮೇಯಿಸಲು ಕಾಡಿಗೆ ಹೋಗಿದ್ದಾನೆ. ಪತ್ನಿಯರು ಹತ್ತಿರದ ಪೇಟೆಗೆ ಹಾಲು ಮಾರಲು ಹೋಗಿರುತ್ತಾನೆ. ಗೂಡಿನ ಬಳಿ ಇದ್ದ ಕರುಗಳೊಂದಿಗೆ ಹುಲಿಮರಿಗಳು ಆಟವಾಡುತ್ತಲಿವೆ. ಆಗ ಗಾದ್ರಿಪಾಲನಾಯಕನ ತಮ್ಮ ಚಿನಪಾಲನಾಯಕ, ಕೆಲವರ ಪ್ರಕಾರ 'ಅಜ್ಜಡಲವರು' ಬೆಡಗಿನ ಒಬ್ಬ ಪಾಲನಾಯಕನ ಅನುಚರ. ಇನ್ನೂ ಕೆಲವರ ಪ್ರಕಾರ ಕಂಚವ್ವ ಕಾಮವ್ವನ ಸಹೋದರರಾದ ಚಿತ್ತಯ್ಯ ಕಾಟಯ್ಯ. ಒಟ್ಟಾರೆಯಾಗಿ ಪಾಲ ನಾಯಕನಲ್ಲ. ಬೇರೊಬ್ಬ ವ್ಯಕ್ತಿ ಎಂಬುದು ನಿಶ್ಚಿತ. ಈ ದೃಶ್ಯ ಕಂಡು ಮುಂದೆ ಈ ಹುಲಿಮರಿಗಳು ದೊಡ್ಡವಾದಾಗ ಈ ಮಂದೆಗೆ ಅಪಾಯವಿದೆ ಎಂದು ಭಾವಿಸಿ ಅವುಗಳನ್ನು ಹೊಡೆದು ಕೊಲ್ಲುತ್ತಾರೆ. ಗೂಡಿಗೆ ಮರಳಿದ ಪಾಲನಾಯಕ ತಾನು ವಚನಭ್ರಷ್ಟನಾದೆ. ಹುಲಿಮರಿಯನ್ನು ಕೊಂದು ತಪ್ಪುಮಾಡಿದಿರಿ ಎಂದು ಹೇಳಿ ಯೋಚಿಸುತ್ತಿರಲು ಅಲ್ಲಿಗೆ ಬಂದು ಈ ದೃಶ್ಯ ಕಂಡ ಗಂಡು ಹುಲಿ ರೋಷಗೊಂಡು ಆತನ ಮೇಲೆ ಏರಿಬರುತ್ತದೆ. ಇಬ್ಬರಿಗೂ ಹೋರಾಟ ನಡೆದು ಪಾಲನಾಯಕ ಹುಲಿಯನ್ನು ಕೊಲ್ಲುತ್ತಾನೆ. ಗಾದ್ರಿಪಾಲನಾಯಕ ಕೊಂದನೆಂದು ಹೇಳಲಾಗುವ ಗಂಡು ಹುಲಿಯ ಸಮಾಧಿ ನನ್ನಿವಾಳದ ಬಳಿ ಇದೆ. ತನ್ನ ಸಂಗಾತಿಯನ್ನು ಕಳೆದುಕೊಂಡ ಹೆಣ್ಣು ಹುಲಿ ತನ್ನ ಮೇಲೆ ಆಕ್ರಮಣ ಮಾಡಲು ಬಂದೇ ಬರುತ್ತದೆ. ತಾನು ಆ ವೇಳೆಗೆ ಇಲ್ಲಿಂದ ಜಾಗ ಖಾಲಿ ಮಾಡಬೇಕು ಎಂದು ಅಲ್ಲಿಂದ ತನ್ನ ದನಗಂಪಳ, ಜನ ಮತ್ತು ಹೆಂಡತಿಯರೊಂದಿಗೆ ಹೊರಡುತ್ತಾನೆ. ವೇದವತಿ ನದಿ ಅಡ್ಡಬರಲು ಕೆಲವು ದಿನ ಪ್ರವಾಹ ಇಳಿಯುವವರೆಗೂ ಕಾದು ಮಿಂಚೇರಿ ಅರಣ್ಯ ಸೇರುತ್ತಾರೆ. ಅಲ್ಲಿಗೂ ಅಟ್ಟಿಸಿಕೊಂಡು ಬಂದ ಹುಲಿ ಮತ್ತು ಪಾಲನಾಯಕನ ಮಧ್ಯೆ ಹೋರಾಟ ನಡೆದು ಹುಲಿ ಮತ್ತು ಆತ ಮಡಿಯುತ್ತಾರೆ. ಈ ವಿಷಯ ತಿಳಿದು ಅಲ್ಲಿಗೆ ಬಂದ ಆತನ ಪತ್ನಿಯರೂ ಸಹಗಮನ ಮಾಡುತ್ತಾರೆ. ಮ್ಯಾಸಬೇಡರಲ್ಲಿ ಪ್ರಚಲಿತವಿರುವ ಗಾದ್ರಿಪಾಲನಾಯಕನ ಕಥನದ ಮೂಲಕ ತಿಳಿದು ಬರುವ ಸಂಗತಿಯಿದು ಹುಲಿಯೊಂದಿಗೆ ಹೋರಾಡಿ ಮಡಿದ ವೀರ, ಪಶುಪಾಲಕ ಈ ಮೂಲಕ ಸಮುದಾಯದ ರಕ್ಷಣೆ ಮಾಡಿದವ ಎಂಬ ಕಾರಣದಿಂದ ಆತ ಪೂಜೆಗೊಳ್ಳುತ್ತಿರುವುದೂ, ಜನಮನದಲ್ಲಿ ಉಳಿದು ಬಂದಿರುವುದೂ, ಸಾಂಸ್ಕೃತಿಕ ನಾಯಕನೆಂದು ಪರಿಗಣಿಸಲ್ಪಟ್ಟಿರುವುದೂ ಸ್ಪಷ್ಟವಾಗುವ ಸಂಗತಿ.

ಚರಿತ್ರೆ ಎಂದಾಕ್ಷಣ ಅದು ಶಿಷ್ಟವಾಗಿರಲಿ ಅಥವಾ ಜಾನಪದೀಯವಾಗಿರಲಿ ಅಲ್ಲಿ ಮುಖ್ಯವಾಗಿ ಕಾಣುವುದು ಹೋರಾಟಗಳು. ಕೆಲವಡೆ ಕ್ರೂರ ಪ್ರಾಣಿಗಳೊಂದಿಗೆ ಹೋರಾಟ, ಕೆಲವಡೆ ಮನುಷ್ಯರೇ ಪ್ರತಿಸ್ಪರ್ಧಿಗಳು. ಇಂತಹ ಘರ್ಷಣೆಗಳಲ್ಲಿ ಹೋರಾಟ ಮಾಡಿ ಈ ಮೂಲಕ ತನ್ನ ಸಮುದಾಯದ

ಸ್ಥಿರತೆಯನ್ನು ಕಾಪಾಡಿ ಕೊಳ್ಳುವವ ಆ ಸಮುದಾಯದಲ್ಲಿ ವೀರನೆಂದು ಪರಿಗಣಿಸಲ್ಪಡುತ್ತಾನೆ. ಇಂತಹ ಅನೇಕ ಮಂದಿ ವೀರರು ನಮ್ಮ ಕಥನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಮ್ಯಾಸಬೇಡ ಬುಡಕಟ್ಟಿನ ಕಥನಗಳಲ್ಲಿ ಇಂತಹ ಅನೇಕ ಮಂದಿ ವೀರರೆಂದು ಪರಿಗಣಿಸಿಲ್ಪಟ್ಟಿದ್ದಾರೆ. ಗಾದ್ರಿಪಾಲನಾಯಕ, ಜಗಲೂರು ಪಾಪನಾಯಕ, ಯರಗಾಟನಾಯಕ, ದೆಡ್ಡಿಸೂರನಾಯಕ, ದೆಡ್ಡಿಕಾಮನಾಯಕ, ಇತ್ಯಾದಿ ಹೀಗೆ ಈ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಅವರನ್ನು ಕುರಿತ ಆರಾಧನೆಗಳು, ಆಚರಣೆಗಳ ವೈಭವೀಕರಣ ಆ ಸಮುದಾಯದಲ್ಲಿ ನಡೆಯುತ್ತಾ ಬರುತ್ತದೆ. ಗಾದ್ರಿಪಾಲನಾಯಕನಂತೂ ಆ ಸಮುದಾಯದ 'ಸಾಂಸ್ಕೃತಿಕ ನಾಯಕ' ಎಂದು ಸ್ಥಿರೀಕರಿಸಲ್ಪಟ್ಟಿದ್ದಾನೆ. ಈ ಸಂಗತಿಯನ್ನು ಅಲ್ಲಗಳೆಯುವುದೂ ನನ್ನ ಉದ್ದೇಶವಲ್ಲ. ಒಂದು ವ್ಯವಸ್ಥೆಯಲ್ಲಿ ಪುರುಷ ಮತ್ತು ಸ್ತ್ರೀ ಎಂಬ ಲಿಂಗಭೇದ ವರ್ಗ ವೈರುಧ್ಯ ವರ್ಣ ವೈರುಧ್ಯಗಳಿಲ್ಲದಿದ್ದರೆ ಅದನ್ನು ಸಮಸಂಸ್ಕೃತಿ ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಬುಡಕಟ್ಟಿನ ವ್ಯವಸ್ಥೆ ಈ ಮಾದರಿಯದೇ. ಆದರೆ ಈ ಬುಡಕಟ್ಟಿನಲ್ಲಿ ಈ ಬಗೆಯ ಸಮಾನತೆ ಇದೆಯೇ? ಎಂಬ ಹುಡುಕಾಟ ನಡೆಸಬೇಕಾದ ಅಗತ್ಯವಿದೆ. ಪ್ರಧಾನವಾಗಿ ಈ ಸಮುದಾಯದ ಕಥನಗಳೆಲ್ಲಾ ಪುರುಷ ರಾಜಕಾರಣವನ್ನು ಹೇಳುವ ಕಥನಗಳೇ. ಸ್ತ್ರೀಯರೇ ಕಥನಗಳನ್ನು ಕಟ್ಟಿ ಹಾಡುವವರಾಗಿದ್ದರೂ ಪುರುಷನ ಅಧಿಕಾರದ ನೆರಳಿನಲ್ಲಿಯೇ ಬಾಳಬೇಕಾದ ಅನಿವಾರ್ಯತೆ ಕಾರಣವಾಗಿ ಅವರು ಅಲ್ಲಿಯ ಸ್ತ್ರೀಯರಿಗೆ ಪ್ರಧಾನ ಸ್ಥಾನ ಕೊಟ್ಟಿರಲಿಕ್ಕಿಲ್ಲ. ಗಾದ್ರಿಪಾಲನಾಯಕನ ಕಥನ ಪಿತೃಪ್ರಧಾನ ದೃಷ್ಟಿಕೋನವುಳ್ಳದ್ದಾಗಿದ್ದು ಇಂತಹ ಚರಿತ್ರೆಯನ್ನು ಯಾವುದೇ ಸ್ತ್ರೀವಾದ ನಿರಾಕರಿಸುತ್ತದೆ. ಯಾವುದೇ ಮಾನವೀಯ ನೆಲೆಯ ಚಿಂತನೆ ಇದನ್ನು ನಿರಾಕರಿಸಲೇ ಬೇಕಾಗುತ್ತದೆ. ಪಿತೃಪ್ರಧಾನ ಕಥನಗಳಲ್ಲಿಯ ಖಾಲಿ ಸ್ಥಳಗಳಲ್ಲಿ, ಉಪೇಕ್ಷಿಸಿದ ನೆಲೆಗಳಲ್ಲಿ ಅಲ್ಲಿದ್ದಿರಬಹುದಾದ ಮಹಿಳೆಯನ್ನು ಗುರುತಿಸುವ ಪ್ರಯತ್ನ ಮಾಡಬೇಕಾಗಿದೆ. ಇಂತಹ ಪ್ರಯತ್ನದ ಮಾರ್ಗವಾಗಿ ಗಾದ್ರಿಪಾಲನಾಯಕನ ಕಥನವನ್ನು ಸೂಕ್ಷ್ಮವಾಗಿ ಗಮನಿಸುವ ಪ್ರಯತ್ನ ಮಾಡಿದಾಗ ಅಲ್ಲಿಯ ಸ್ತ್ರೀಮುಖಗಳನ್ನೂ, ಶೋಷಣೆಯ ನೆಲೆಗಳನ್ನು ಕಾಣಲು ಸಾಧ್ಯವಾಗುತ್ತದೆ. ಪಾಲನಾಯಕನ ಪಶುಸಂಪತ್ತಿನ ರಕ್ಷಕನಾದರೆ, ಅವರ ಆದಾಯದ ಮೂಲವಾದ ಹಾಲು–ತುಪ್ಪಗಳನ್ನು ನಾಡಿನಲ್ಲಿ ಮಾರಿ ತಮ್ಮ ಕುಟುಂಬದ/'ಗುಂಪಿನ ಅವಶ್ಯಕತೆಗಳನ್ನು ಪೂರೈಸುವ ಜವಾಬ್ದಾರಿ ಹೊತ್ತವರು ಆತನ ಪತ್ನಿಯರು – ಉಳಿದ ವೇಳೆಯಲ್ಲಿ ಹಟ್ಟಿಯಲ್ಲಿದ್ದ ಮರಿ ಕರುಗಳನ್ನು ರಕ್ಷಣೆ ಮಾಡುತ್ತಿದ್ದವರೂ ಅವರೇ. ಇಡೀ ಈ ಪಶುಪಾಲಕ ಸಮುದಾಯದ ಮಹಿಳೆಯರ ಕೊಡುಗೆ ಅ ಸಮುದಾಯಕ್ಕೆ ಒಟ್ಟಾರೆ ಹೇಗೆ ಸಲ್ಲುತ್ತಿತ್ತು ಎಂಬುದಕ್ಕೆ ಇವರು ಉದಾಹರಣೆಯಾಗುತ್ತಾರೆ. ಪಶುಪಾಲಕನಾದ ಗಾದ್ರಿಪಾಲ 'ನಾಯಕ''ನಾದ, ಆದರೆ ಪಶುಪಾಲಕಿಯರು? ಅದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಪುರುಷನನ್ನು ಕುಟುಂಬದ ಪ್ರಮುಖ ಸ್ಥಾನದಲ್ಲಿರಿಸಿದ್ದಾಗ್ಯೂ ಮಹಿಳೆ ಆ ಪುರುಷನಿಗೆ ಸರಿಸಮಾನಳಾಗಿ/ಕೆಲವೊಮ್ಮೆ ಅವನಿಗಿಂತಲೂ ಅಧಿಕ ದುಡಿಮೆಯನ್ನು ಆಕೆ ಮಾಡುವುದುಂಟು. ಆರ್ಥಿಕವಾಗಿ ಆತನಿಗೂ ಮೀರಿದ ಕೊಡುಗೆ ಅಲ್ಲಿ ಸಲ್ಲುವುದುಂಟು. ಎಷ್ಟೇ ಗುರುತರವಾದ ಹೊಣೆಗಾರಿಕೆಯನ್ನು ಆಕೆ ನಿರ್ವಹಿಸಿದರೂ ಆಕೆಯ ದುಡಿಮೆಯಾಧಾರಿತ ಆರ್ಥಿಕತೆ ನಿರ್ಲಕ್ಷಿಸಲ್ಪಟ್ಟು ಗೌಣವಾಗುಳಿಯುತ್ತದೆ. ಮಹಿಳೆಯರು ಸಾಮಾಜಿಕ, ಆರ್ಥಿಕತೆಯನ್ನು ಬೆಳೆಸುವಲ್ಲಿ ವಹಿಸುವ ಮುಖ್ಯಪಾತ್ರವನ್ನು ಮಹಿಳಾ ಅಧ್ಯಯನಗಳು

ಇತ್ತೀಚೆಗೆ ಸಾಕಷ್ಟು ಪರಿಚಯಿಸಿವೆ. ಬತ್ತದಗದ್ದೆಯಲ್ಲಿ, ಕಟ್ಟಡ ಕೆಲಸವನ್ನು ನಿರ್ವಹಿಸುವಲ್ಲಿ, ಬೀಡಿ ಕಟ್ಟುವ, ಹೂಕಟ್ಟಿ ಮಾರಿ ಜೀವನ ಯಾಪನೆ ಮಾಡುವ ಮಹಿಳೆಯರು, ಅವರ ಕೆಲಸಗಳು ಆಂಶಿಕ ಕೆಲಸಗಳೆಂದೇ, ಅಮುಖ್ಯವೆಂದೋ ಉಪೇಕ್ಷೆಗೊಳಗಾಗುತ್ತವೆ. ಇನ್ನು ಗೃಹಕೃತ್ಯ ನಿರ್ವಹಿಸುತ್ತಾ ಇಡೀ ಕುಟುಂಬವನ್ನೇ ಪೋಷಿಸುವ ಜವಾಬ್ದಾರಿ ಹೊತ್ತ ಮಹಿಳೆಯರು ಸಂಪೂರ್ಣವಾಗಿ ಅನುತ್ಪಾದಕರೆಂದೇ ಪರಿಗಣಿಸಲ್ಪಡುತ್ತಾರೆ.

(ನಾಗರೀಕ ಸಮಾಜಗಳಲ್ಲಿ ಸ್ತ್ರೀಯರನ್ನು ಹೀಗೆ ಪರಿಗಣಿಸುವ ರೀತಿ ಸಾಮಾನ್ಯವಾದುದಾಗಿದೆ. ಹಣ ರೂಪದಲ್ಲಿ ಶ್ರಮದ ಸಂಭಾವನೆ ಗಳಿಸುವ ಪುರುಷ ಉತ್ಪಾದಕನೆಂದು ಬೆಲೆ ಪಡೆಯುತ್ತಾನೆ. ಇದ್ಯಾವುದು ಅವನಿಂದ ಸಾಧ್ಯವಿಲ್ಲದಾಗಲು ಆತ ಯಜಮಾನನೇ! ಆರ್ಥಿಕತೆಯನ್ನು ಹೊರತು ಪಡಿಸಿ ಮನೆಯೊಳಗೆ ಮಹಿಳೆ ನಿರ್ವಹಿಸುವ ಕೆಲಸಕ್ಕೆ ಒಂದು ಗಟ್ಟಿಯಾದ ತಾತ್ವಿಕ ಮೌಲ್ಯಕೊಡಲು ಸಾಧ್ಯವಿದೆಯಲ್ಲವೇ? ಆಕೆ ತಾನು ಮಾಡಿದ ಕೆಲಸಕ್ಕೆ ಪ್ರತಿಯಾಗಿ ಹಣ ಪಡೆಯದಿರಬಹುದು, ಆದರೆ ಅದಕ್ಕೆ ಬೆಲೆಯಿಲ್ಲವೆಂದು ಅರ್ಥವೇ? ವೇತನ ರಹಿತ ಮಹಿಳೆಯ ಕೆಲಸಗಳನ್ನು ಅನಾವಶ್ಯಕವೆಂದು ಪರಿಗಣಿಸಬೇಕೇ? ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಪುರುಷ ಪ್ರಾಬಲ್ಯಕ್ಕೆದುರಾಗಿ ಇಂಥ ಪ್ರಶ್ನೆಗಳನ್ನು ಹಾಕುತ್ತಾ ಸಮಸಂಸ್ಕೃತಿಯ ನಿರೀಕ್ಷಣೆಯನ್ನು ಮಾಡಿದ್ದಾರೆ. ಪ್ರತಿ ಸಮಾಜದ ಅಳಿವು ಉಳಿವಿಗೆ ಮಹಿಳೆಯ 'ದ್ವಿಸ್ತರದ ಉತ್ಪಾದಕ' ಪಾತ್ರ ಅತ್ಯಂತ ಮುಖ್ಯವೆಂದು ಇವರು ತೀರ್ಮಾನಿಸುತ್ತಾರೆ.[೪೮] ಅಂದರೆ ಒಂದು ಕುಟುಂಬ ಅಥವಾ ಸಮುದಾಯದ ಉಳಿವಿಗೆ ಪುರುಷನಷ್ಟೇ ಅಗತ್ಯ ಮಹಿಳೆಯೂ ಕೂಡ. ಇಂತಹ ಸಂದರ್ಭದಲ್ಲಿ ಕಂಚವ್ವ-ಕಾಮವ್ವನ ಗೃಹಕೃತ್ಯನಿರ್ವಹಣೆ, ಪಶುಸಂಗೋಪನೆ (ರೊಪ್ಪದ ಶುಚಿಕಾರ್ಯ, ಕರು-ಮರಿಗಳ ಪೋಷಣೆ) ಮಾಡಿದ್ದಲ್ಲದೆ ಹಾಲು ಮಾರಾಟ ಮಾಡಿ ಹಣ ಅಥವಾ ಅಗತ್ಯ ವಸ್ತು ತರುತ್ತಿದ್ದುದು ಇವೆರಡನ್ನೂ ಗಮನಿಸಿದಾಗ ಅವರು ಅನುತ್ಪಾದಕರು ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುವುದೇ ಇಲ್ಲ. ಹೀಗಿದ್ದು ಇವರು ಈ ಸಮುದಾಯದಲ್ಲಿ ನಿರ್ಲಕ್ಷಿಸಲ್ಪಟ್ಟಿರುವುದು, ಅವಜ್ಞೆಗೆ ಗುರಿಯಾಗಿರುವುದು ಅಲ್ಲಿಯ ಪುರುಷ ರಾಜಕಾರಣವಾಗಿಯೇ ಹೊರತು ಬೇರೆ ನಿಮಿತ್ತವಾಗಿ ಅಲ್ಲ ಎನಿಸುತ್ತದೆ. ಗಾದ್ರಿಪಾಲನಾಯಕ ತನ್ನ ಪಶುಮಂದೆ, ಬೇಡಗಂಪಳವನ್ನು ಮುನ್ನಡೆಸುತ್ತಾ ಬರುವಾಗ ಈ ಇಬ್ಬರು ಪತ್ನಿಯರೂ ಆತನೊಂದಿಗೆ ಹೆಜ್ಜೆ ಹಾಕಿದರು. ತನ್ನ ಮರಿಗಳ ಸಾವನ್ನು ಕಂಡು ರೊಚ್ಚಿಗೆದ್ದ ಹುಲಿ ಪಾಲನಾಯಕನಿಗೆ ಹೊಂಚು ಹಾಕಿ ಕುಳಿತಿರಲು ಸೀಗೆ ಮರದ ಸೊಪ್ಪನ್ನು ಕೀಳಲು ಹೋದ ಕಂಚವ್ವ ಇದನ್ನು ಕಂಡು ಹಿಂದಿರುಗಿ ಬಂದು ಗಂಡನಿಗೆ ಸುದ್ದಿಮುಟ್ಟಿಸುತ್ತಾಳೆ. ಹುಲಿ ಬೆನ್ನಟ್ಟಲು ಭಯಗೊಂಡು ಸೆಟ್ಟೂರು ಕಾವಲಿಗೆ ಬರುತ್ತಾರೆ. ಅಲ್ಲಿಂದ ತಪ್ಪಿಸಿಕೊಂಡು ಮಿಂಚೇರಿಯ ಕಡೆ ಹೋಗಲುದ್ಯುಕ್ತರಾದಾಗ ನದಿ ಭೋರ್ಗರೆಯುತ್ತ ಹರಿಯುತ್ತಿರಲು ಅದನ್ನು ದಾಟುವುದೇ ಇವರಿಗೆ ದುಸ್ತರವಾಗುತ್ತದೆ. ಹಿಂದೆ ಹುಲಿ

---

೪೮ ಕೆಲವು ಪ್ರಮುಖ ಸ್ತ್ರೀವಾದದ ಪ್ರಸ್ಥಾನಗಳು: ಕೃತಿ ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಲೇ. ಡಾ. ಪ್ರೀತಿ ಶುಭ ಚಂದ್ರ, ಪು.೪೨-೪೫, ಪ್ರಕಟಿತ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಗರ್ಜಿಸುತ್ತಾ ಬರುತ್ತಿದೆ. ಮುಂದೆ ನದಿ, ಚಿಂತಾಕ್ರಾಂತರಾದ ದಂಪತಿಗಳು ಸಂಕಟಕ್ಕೊಳಗಾದರು. ಅತ್ತ ನೀರು ಇತ್ತ ಪುಲಿ. ಪ್ರವಾಹ ಹೆಚ್ಚಿ ಏಳು ಹಗಲು ಏಳೂ ರಾತ್ರಿ ಇವರನ್ನು ತಡೆಯಿತು ಎನ್ನುತ್ತಾರೆ. ಕೊನೆಗೆ ತಮ್ಮ ಮನೆದೇವರನ್ನು ಸ್ಮರಿಸಿ ಗಂಗೆಯಲ್ಲಿ ಸ್ನಾನ ಮಾಡಿ ಪೂಜೆ ಸಲ್ಲಿಸಿ ದಯೆತೋರಿ ಕಾಪಾಡು ಇಲ್ಲವೇ ನಿನ್ನಲ್ಲಿಯೇ ಅಡಗಿಸಿಕೋ ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ಪ್ರವಾಹ ಕಡಿಮೆಯಾಗುತ್ತದೆ. ನೀರಿಗಿಳಿದು ನದಿದಾಟಿ ಮಿಂಚೇರಿ ಅರಣ್ಯ ಸೇರಿಕೊಳ್ಳುತ್ತಾರೆ. ಅಲ್ಲಿಗೆ ಹಿಂಬಾಲಿಸಿ ಬಂದ ಕೋಪೋದ್ರಿಕ್ತ ಹೆಣ್ಣು ಹುಲಿ ಪಾಲನಾಯಕನ ಮೇಲೆ ದಾಳಿ ಮಾಡುತ್ತದೆ. ಈತನೂ ಪ್ರತಿಯಾಗಿ ಘರ್ಷಣೆಗಿಳಿಯುತ್ತಾನೆ. ಇಬ್ಬರಲ್ಲಿಯೂ ಸೆಣಸಾಟ ನಡೆದು ಈಗಾಗಲೇ ಅರ್ಧ ಶಕ್ತಿಗುಂದಿದ್ದ ಪಾಲನಾಯಕ ಸುಲಭವಾಗಿಯೇ ಸಾವನ್ನಪ್ಪುತ್ತಾನೆ. ಹೆಣ್ಣು ಹುಲಿಯೂ ಸಾಕಷ್ಟು ಸಂಕಟ ಅನುಭವಿಸಿ ಅದೇ ಸ್ಥಳದಲ್ಲಿ ತಾನೂ ಕೊನೆಯುಸಿರೆಳೆಯುತ್ತದೆ. ಅಂದನೂರು, ಗಂಜಿಗಟ್ಟಿ, ಕೋಗಲೂರುಗಳಲ್ಲಿ ಮಜ್ಜಿಗೆ, ಬೆಣ್ಣೆ ಮಾರಾಟ ಮಾಡುತ್ತಿದ್ದ ಈತನ ಪತ್ನಿಯರ ಕಿವಿಗೆ ಸುದ್ದಿ ತಲುಪುತ್ತದೆ. ಅಪಶಕುನಗಳಾಗುತ್ತವೆ. ಓಡೋಡಿ ಗೂಡಿಗೆ ಬರುತ್ತಾರೆ. ಪತಿ ಮತ್ತು ಹುಲಿ ಇಬ್ಬರೂ ಮಡಿದಿರುವ ದೃಶ್ಯ ಕಂಡು ಕಂಗಾಲಾಗುತ್ತಾರೆ. ಗಂಡ ತೀರಿಕೊಂಡ ಮೇಲೆ ತಾವು ಈ ಭೂಮಿಯ ಮೇಲೆ ಬದುಕಿ ಸಾರ್ಥಕವೇನು ಎಂದು ಚಿಂತಾಕ್ರಾಂತರಾಗಿ ಪಾಲಯ್ಯ ಸತ್ತ ಮೂರನೆಯ ದಿನ ಕರ್ಮಗಳನ್ನು ತೀರಿಸಿ ತಾವು ಗಂಜಿಕಟ್ಟೆಯ ಕಡೆಹೋಗಿ ಊರಗೌಡನಿಂದ ಒಪ್ಪಿಗೆ ಪಡೆದು ಅರಿಷಿಣ-ಕುಂಕುಮ ಗಂಧದ ಚಕ್ಕೆ ಪಡೆದು ಬಂದು ಅನುಗಮನ ಮಾಡುತ್ತಾರೆ. ಜನಪದರು ಗಂಜಿಗಟ್ಟೆಯ ದೊಡ್ಡ ಹೊಂಡದಲ್ಲಿ ಐಕ್ಯರಾದರು ಎಂದೂ ಹೇಳುತ್ತಾರೆ. ಒಟ್ಟಾರೆ ಆತನೊಂದಿಗೆ ಅವರೂ ಅಂತ್ಯವನ್ನು ಕಂಡುಕೊಂಡರು. ಹೀಗೆ ಒಟ್ಟು ಪಾಲನಾಯಕನ ಬಗ್ಗೆ ಇರುವ ಕಥನಗಳ ಮೂಲಕ ಗ್ರಹಿಸಬಹುದಾದ ಸಂಗತಿಯೆಂದರೆ - ಗಂಡನೊಂದಿಗೆ ಸದಾ ಜೊತೆಯಾಗಿ ನಡೆದವರಿವರು ಈತ ಹುಲಿಯೊಂದಿಗೆ ಸೆಣಸಿದರೆ ಗೂಡಿನ ಬಳಿ ಕಾಟಕೊಡುತ್ತಿದ್ದ ಹಾವುಗಳಿಂದ ಗೂಡನ್ನು ರಕ್ಷಣೆ ಮಾಡಿದವರು. ಹೈನುಗಾರಿಕೆ ಅದರ ಮಾರಾಟ. ಈ ಮೂಲಕ ತಮ್ಮ ಕಂಪಳವನ್ನು ರಕ್ಷಣೆ ಪೋಷಣೆ ಮಾಡುತ್ತಿದ್ದವರೂ ಇವರೆ. ಹುಲಿಯಂತಹ ಭಯಂಕರ ಪ್ರಾಣಿಯ ಪ್ರತಿರೋಧದ ಮಧ್ಯೆ ಆತಂಕದ ಕ್ಷಣಗಳನ್ನು ಧೈರ್ಯವಾಗಿಯೇ ಎದುರಿಸಿದವರಿವರು. ಇವರ ನೆನಪಿಗಾಗಿ ಸ್ಮಾರಕವಾಗಿ 'ಸತಿ'ಯರಾದ ಸ್ಥಳದಲ್ಲಿ ಸತಿಕಲ್ಲನ್ನು ನಿಲ್ಲಿಸಿರುವುದನ್ನು ಬಿಟ್ಟರೆ ಉಳಿದ ಯಾವುದೇ ಆಚರಣೆಯ ಮೂಲಕ ಈ ಸಮುದಾಯ ತಮ್ಮ ನೆನಪಿನ ಸಂಪುಟದಲ್ಲಿ ಅವರನ್ನು ಉಳಿಸಿಕೊಂಡು ಬರುವ ಪ್ರಯತ್ನ ಮಾಡಿಲ್ಲ. ವಿಪರ್ಯಾಸವೆಂದರೆ ಸತಿ ಕಲ್ಲಿನ ಬಳಿ ನಡೆಯುವುದು ಗಾದ್ರಿಪಾಲನಾಯಕನ ಜಾತ್ರೆ. ಸತಿಕಲ್ಲನ್ನು ಪೂಜಿಸುವವರು ಆಕೆಯ ತವರಿನ ಕಡೆಯವರು. ಯಾವುದೇ ವ್ಯಕ್ತಿಯ ಸ್ಮರಣೆಯನ್ನು ಆತನ ತರುವಾಯದ ಪರಂಪರೆ ಮಾಡಿದರೆ ಅದೇ ಅವರಿಗೆ ಸಲ್ಲುವ ನಿಜವಾದ ಸ್ಮಾರಕ. ಇಂತಹ ಸ್ಮಾರಕ ಗಾದ್ರಿಪಾಲನಾಯಕನಿಗೆ ಸಮುದಾಯದಾದ್ಯಂತ ಇದೆ. ಆದರೆ ಕಂಚವ್ವ-ಕಾಮವ್ವ ಏನಾದರು? ಕೋಲು ಹಿಡಿದವರೆಲ್ಲಾ ನಾಯಕರು ಎಂಬ ಒಂದು ಹೇಳಿಕೆ ಈ ಸಮುದಾಯದಲ್ಲಿದೆ. ಅಂದರೆ ಒಂದು ಸಣ್ಣಪುಟ್ಟ ಹೋರಾಟ, ಕೆಲವೊಮ್ಮೆ ಹೋರಾಟವಿಲ್ಲದಿದ್ದರೂ ಗುಂಪಿನ ನಾಯಕನ ಸ್ಥಾನ ಅಲಂಕರಿಸಿದ್ದವರೆಲ್ಲಾ

ನಾಯಕ ಸ್ಥಾನ ಪಡೆದು ಪೂಜೆಗೊಳ್ಳುತ್ತಿರುವಾಗ ಈ ಮಹಿಳೆಯರನ್ನು ಈ ಸಮಾಜ ಏಕೆ ನಿರ್ಲಕ್ಷಿಸಿತು? ಸಾಮಾನ್ಯವಾಗಿ ಈ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರದ ಪುರುಷ ರಾಜಕಾರಣ ಇಲ್ಲಿ ಪ್ರವೇಶಿಸಿ ಇವರನ್ನು ನಿರ್ಲಕ್ಷಿಸಿದೆಯಲ್ಲದೆ ಬೇರೆ ಕಾರಣವಾಗಿ ಅಲ್ಲ.

ವಿವಾಹದ ಮೂಲಕ ಹೆಣ್ಣಿನ ಮೇಲೆ ಗಂಡು ಹಕ್ಕನ್ನು ಸ್ಥಾಪಿಸುತ್ತಾನೆ. ಅವನ ನಂತರವೂ ಇದು ಮುಂದುವರಿಯುತ್ತದೆ. ಪ್ರಭುತ್ವದ ನೆರಳಿನಲ್ಲಿಯೇ ಬಾಳಬೇಕಾದ ಅವಳು ಆತ ಇಲ್ಲವಾದಾಗ ಆತನೊಂದಿಗೆ ಸಹಗಮಿಸಬೇಕು. ಇಲ್ಲಿ ಕಂಚವ್ವ-ಕಾಮವ್ವ ಮಾಡಿದ್ದೂ ಹಾಗೆಯೇ. ಬುಡಕಟ್ಟು ಸಮುದಾಯದಲ್ಲಿ ಇಲ್ಲದೇ ಇದ್ದ ಈ ಪದ್ಧತಿ ಅನ್ಯ ಸಂಸ್ಕೃತಿಯ ಪ್ರಭಾವದಿಂದ ಆಗಿದ್ದೇ ಹೊರತು ತನ್ನಿಂದಾಗಿಯೇ ಆಗಿದ್ದಲ್ಲ. ಪಲ್ಲಟಗೊಳ್ಳುತ್ತಿದ್ದ ಸಾಂಸ್ಕೃತಿಕ ಸಂದರ್ಭಕ್ಕೆ ಇದು ಉದಾಹರಣೆಯಾಗುತ್ತದೆ.

ಒಟ್ಟಾರೆ ಈ ಪಶುಪಾಲಕ ಸಮುದಾಯಕ್ಕೆ ಇವರು ಸಲ್ಲಿಸಿದ ಕೊಡುಗೆ ಮತ್ತು ಅವರ ತ್ಯಾಗ ಬಲಿದಾನಗಳು ಇಲ್ಲಿ ಪ್ರಮುಖವಾಗಬೇಕಾದ ಸಂಗತಿ. ಗಾದ್ರಿಪಾಲನಾಯಕನನ್ನು ಸಾಂಸ್ಕೃತಿಕ ವೀರನೆಂದು ಸ್ಥಾನ ಕಲ್ಪಿಸಿರುವ ಸಮುದಾಯ ಆತನ ಈ ಪತ್ನಿಯರನ್ನು ಆ ನೆಲೆಯಲ್ಲಿ ಗೌರವಿಸುವ ಪ್ರಯತ್ನ ಮಾಡಬೇಕಾಗಿದೆ. ಹಾಗೆಯೇ ಪಶುಪಾಲಕ ಸಮುದಾಯವೊಂದರಲ್ಲಿ ಆ ಸಮುದಾಯಕ್ಕೆ ಅಲ್ಲಿಯ ಮಹಿಳೆಯರ ಕೊಡುಗೆ ಯಾವ ರೀತಿಯದಾಗಿರುತ್ತಿತ್ತು ಎಂಬುದಕ್ಕೆ ಇವರು ಉದಾಹರಣೆಯಾಗುತ್ತಾರೆ. ಹಾಗೆಯೇ ಸಾಂಸ್ಕೃತಿಕ ನಾಯಕರು, ಬುಡಕಟ್ಟಿನ ವೀರರು ಎಂದು ಪರಿಗಣಿಸಲ್ಪಟ್ಟಿರುವ ಅನೇಕ ಮಂದಿ ನಾಯಕರಿಗೆ ದಕ್ಕಿರುವ ಸ್ಥಾನಮಾನ ಅವರ ಪತ್ನಿಯರಿಗೆ ಸಂದಿವೆಯೇ. ಅವರ ಹೆಸರೂ ಸಹ ತಿಳಿಯದು. ಹೀಗೆ ವಿಸ್ಮೃತಿಯಲ್ಲಿಯೇ ಉಳಿದ ಆ ನಾಯಕಿಯರು ಕಂಚವ್ವ-ಕಾಮವ್ವನ ಮೂಲಕ ಅನಾವರಣಗೊಳ್ಳಬೇಕಾಗಿದೆ. ಕಂಚವ್ವ-ಕಾಮವ್ವನೊಂದಿಗೆ ಇತರೆ ಆ ಅದೃಶ್ಯ ಮಹಿಳೆಯರನ್ನು ಸೇರಿಸಿ ಆಸಮುದಾಯದ 'ಸಾಂಸ್ಕೃತಿಕ ನಾಯಕಿಯರು' ಎಂದು ಅತಿಶಯೋಕ್ತಿಯಿಲ್ಲದೆ ಹೇಳಲು ಸಾಧ್ಯವಿದೆ.

**ದಾನಸಾಲಮ್ಮ: ಪುರಾಣ- ೧**

ಗೋದಾವರಿ ಪ್ರಾಂತ್ಯದಲ್ಲಿ ದನಕರುಗಳ ಮಂದೆಯನ್ನು ಕಾಯುವುದನ್ನೇ ವೃತ್ತಿಯನ್ನಾಗಿ ಅವಲಂಬಿಸಿದ್ದ ಪಶುಪಾಲಕನೇ[೪೯] ಮಂದರಾಜ. ಈತನನ್ನು ಮಂದಭೂಪಾಲ ಎಂದು ಕರೆಯುತ್ತಾರೆ. ಈತ ಶ್ರೀ ಕೃಷ್ಣನಿಂದ ಅನುಗ್ರಹಿಸಲ್ಪಟ್ಟು ಚಿಪ್ಪು, ಕೊಡಲಿ, ಕೋಲು, ಕೊಳಲು, ಕಲ್ಲಿ (ದಕಕುರಿ ಮೇಯಿಸಲು ಹೋಗುವಾಗ ಆಹಾರವನ್ನು ತುಂಬಿಕೊಂಡು ಹೋಗಲು ಬಳಸುವ ಹೆಗಲಿಗೆ ಹಾಕಿ ಕೊಳ್ಳುವ ನಾರಿನಿಂದ ಮಾಡಿದ ಚೀಲ) ಯನ್ನು ಪಡೆದಿದ್ದ. ಗೋದಾವರಿ ತೀರದಲ್ಲಿ ಹಲವು ಕಾಲ ಕಳೆದು ನಂತರ ಚಂದ್ರಗಿರಿ ಪರ್ವತ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಹಟ್ಟಿಯನ್ನು ಕಟ್ಟಿಕೊಂಡು ತನ್ನ ದನಗಳ ರೊಪ್ಪದೊಂದಿಗೆ ಕಾಲ ಹಾಕುತ್ತಿದ್ದ. ಅಲ್ಲಿ ಈ ಮೊದಲೇ ಇದ್ದ ಗಂಧರ್ವರ ಸಂಪರ್ಕ ಪಡೆದು ಅವರ ಮಗಳೊಬ್ಬಳನ್ನು ವರಿಸುತ್ತಾನೆ. ಸೂರ್ಯನ ಧ್ಯಾನ ಮಾಡುತ್ತಾ ಸಚ್ಚಾರಿತ್ರ್ಯದಿಂದ ಕಾಲ ಕಳೆಯುತ್ತಿದ್ದ ಹಲವು ಕಾಲ

---

[೪೯] ಯಾದವರೂ ಮತ್ತು ಮ್ಯಾಸಬೇಡರೂ ಮೂಲದಲ್ಲಿ ಒಂದೇ ಆಗಿದ್ದು ನಂತರ ಪರಸ್ಪರ ಬೇರೆಯಾದವರು. ಈ ಎರಡು ಸಂಸ್ಕೃತಿಗಳ ಮಧ್ಯೆ ಸಾಕಷ್ಟು ಹೋಲಿಕೆ ಇದೆ.

ಗತಿಸಿತು. ಪಶುಪಾಲಕರಾದ ಈ ಯಾದವರಿಗೂ[೫೦] ಆ ಪ್ರಾಂತ್ಯದಲ್ಲಿ ಇದ್ದ ಅಡವಿ ಸಂಚರಿಗೂ ಪರಸ್ಪರ ಒಡನಾಟ ಉಂಟಾಗಿ ಎಲ್ಲರೂ ಒಂದೇ ಸಮುದಾಯವೆಂಬಂತೆ ಬಾಳುತ್ತಿರಲು ಅವರಿಗೆ ತಾನೇ 'ಸಂಚು ಮ್ಯಾಸವಾಳ್ಳು', 'ಸಂಚಮೇಸರು' ಎಂದು ಹೆಸರಿಟ್ಟನು. ಈತನಿಗೆ ಅಂಬೇರಾಜ, ತುಂಬೇ ರಾಜ, ಕಂಬೇರಾಜ ಎಂಬ ಹೆಸರಿನ ಮಕ್ಕಳಿದ್ದರು. ಕಾಲಾಂತರದಲ್ಲಿ ಈ ಮಂದರಾಜ ಹಿರಿಯಮಗನಾದ ಅಂಬೇರಾಜನಿಗೆ ಕೋಲು ಕೊಡಲಿ ಕೊಟ್ಟು ತನ್ನ ಪಶುಮಂದೆಯನ್ನು ಸಾಕುವ ಕೆಲಸ ವಹಿಸಿಕೊಟ್ಟು ತಾನು ಬಂಗಾರು ಬೂದಿಕೋಟೆಗೆ ಹೋಗಿ ಸೂರ್ಯನನ್ನು ಕುರಿತು ತಪಸ್ಸು ಮಾಡುತ್ತಾ ಕಾಲಕಳೆಯ ತೊಡಗಿದ.

ಇತ್ತ ಅಂಬೋಜಿ ರಾಜನಿಗೆ ಒಂದು ಹೆಣ್ಣು ಮಗು ಜನಿಸಿತು. ಹುಟ್ಟಿದ ನಕ್ಷತ್ರ ಮೂಲಾ ನಕ್ಷತ್ರ ಎಂದು ಪುರೋಹಿತರು ಹೇಳಿ ಯಾರಿಗಾದರೂ ದಾನಕೊಟ್ಟು ಬಿಡಲು ಸೂಚಿಸಿದರು. ತನ್ನ ತಮ್ಮನಾದ ತುಂಬೋಜಿರಾಜನಿಗೆ ಆ ಮಗುವನ್ನು ದಾನಕೊಟ್ಟನು. ಹಾಗಾಗಿ ಇವಳಿಗೆ ದಾನಸಾಲಿ ಎಂಬ ಹೆಸರು ಬಂದಿತು. ತಂದೆಯಿಂದ ದೂರವಾಗಿ ಚಿಕ್ಕಪ್ಪನ ಆರೈಕೆಯಿಂದ ಬೆಳೆಯುತ್ತಿದ್ದ ಇವಳು ಪ್ರಾಪ್ತ ವಯಸ್ಕಳಾದಳು. ಸಾಕಿದ ತಂದೆಗೆ ಮತ್ತೊಬ್ಬ ಮಗನಿರುತ್ತಾನೆ. ಆತನ ಹೆಸರು ಕರಿಬೊಮ್ಮಂತರಾಜು. ಅವನನ್ನೇ ಮದುವೆ ಮಾಡಿಕೊಳ್ಳಲು ಮಗಳಿಗೆ ಸೂಚಿಸುತ್ತಾನೆ. ಈ ರೀತಿಯ ವಿವಾಹಕ್ಕೆ ದಾನಸಾಲಿಯ ಮನಸ್ಸು ಒಪ್ಪುವುದಿಲ್ಲ. ಈ ವೇಳೆಗಾಗಲೇ ಸೂರ್ಯನ ಮೇಲೆ ವ್ಯಾಮೋಹವನ್ನು ಬೆಳೆಸಿಕೊಂಡಿದ್ದ ಈಕೆ ಸೂರ್ಯನನ್ನೇ ವರಿಸುತ್ತೇನೆ ಎನ್ನುತ್ತಾಳೆ. ಸೂರ್ಯನ ಜಪ ತಪದಲ್ಲಿ ಕಾಲ ಕಳೆಯ ತೊಡಗುತ್ತಾಳೆ. ನಂತರ ಪಂಪಾದ್ರಿ ಬಸವನ ಕಾಲ ಗೊರಸಿನಲ್ಲಿ ಜನಿಸಿ ಪಾರ್ವತಿ ಪರಮೇಶ್ವರರಿಂದ ಅನುಗ್ರಹಿಸಲ್ಪಟ್ಟು ಅಡವಿ ಚೆಂಚರಿಂದ ಪೋಷಿಸಲ್ಪಟ್ಟ 'ಚೆಟ್ಲು ಪಟ್ಲಪ್ಪರಾಜ'ನನ್ನು ವರಿಸುತ್ತಾಳೆ. ಈತನಿಗೆ 'ಸಂಚುಸಿಕಾನಾಯಕ', 'ಸುಕ್ಕಲು ಮಲ್ಲನಾಯಕ' ಎಂದೂ ಹೆಸರುಂಟು. ಬಹುಕಾಲ ಕಳೆದು ವೃದ್ಧಾಪ್ಯದ ಕಡೆ ಸರಿಯುತ್ತಿದ್ದರು ಇವರು ಮಕ್ಕಳನ್ನು ಪಡೆಯಲಿಲ್ಲ. ಸುತ್ತಮುತ್ತಲಿನ ಜನ 'ಬಂಜೆ' ಎಂದು ತೆಗಳಲು ತೊಡಗಿದರು. ಈಕೆ ಹಟ್ಟಿಯಲ್ಲಿ ಇರುತ್ತಿದ್ದಳು. ಗಂಡನು, ಮಾವನ ಪಶುಮಂದೆಯನ್ನು ಕಾಯಲು ಹೋಗುತ್ತಿದ್ದ. ಒಂದು ದಿನ ಜಂಗಮನೊಬ್ಬ ಭಿಕ್ಷೆಗೆ ಬಂದ. ಮುತ್ತು ರತ್ನವನ್ನೇ ಭಿಕ್ಷೆಯಾಗಿ ಕೊಡಹೋದಳು. ಮಕ್ಕಳೆಷ್ಟು ಎಂದ. ಇಲ್ಲ ಎಂದಳು, ಬಂಜೆ ಕೈಯಲ್ಲಿ ಭಿಕ್ಷೆ ತೆಗೆದುಕೊಳ್ಳುವುದಿಲ್ಲ ಎಂದ. ಆಗ ಈ ದಾನಸಾಲಿ ಜಂಗಮನ ಕಾಲು ಹಿಡಿದು ಮಕ್ಕಳ ಭಾಗ್ಯ ಬೇಡುತ್ತಾಳೆ. ಅನುಗ್ರಹಿಸಿ ಆತ ಹೋಗುತ್ತಾನೆ. ಅದೇ ದಿನ ಸಾಕಷ್ಟು ಮಳೆಯಾಯಿತು. ಎಲ್ಲರೂ ಬಿತ್ತನೆ ಮಾಡಲು ಆರಂಭಿಸಿದರು ತಾವು ಬಿತ್ತನೆ ಮಾಡೋಣ, ನನ್ನ ತವರಿಗೆ ಹೋಗಿ ಒಂದಿಷ್ಟು ಕುಂಬಳ ಬೀಜವನ್ನು ತನ್ನಿ ಎಂದು ಗಂಡನಿಗೆ ಹೇಳುತ್ತಾಳೆ. ಆಕೆಯ ತವರಿನ ಹಟ್ಟಿಯ ಕಡೆ ಹೊರಟ ಈತ ಅಲ್ಲಲ್ಲಿ ಕಲ್ಲುಗಳನ್ನಿಡುತ್ತಾ ಹೋಗುತ್ತಾನೆ. ಆಕೆ ತನ್ನ ಗುಡಿಸಲನ್ನು ಬಿಟ್ಟು ಹೋಗಬಾರದೆಂಬ ನಿಬಂಧನೆಯಾಗಿ ಈತ ಕಲ್ಲುಗಳನ್ನು ಇಡುತ್ತಾ ಹೋಗುತ್ತಾನೆ. ಜಂಗಮರೂಪಾಗಿ ಶಿವ ಕಾಣಿಸಿಕೊಂಡು ಏಕೆ ಹೀಗೆ ಕಲ್ಲುಗಳನ್ನಿಡುತ್ತಿದ್ದೀಯ ಎಂದು

---

[೫೦] ಮಂದ ಎಂದರೆ ಗುಂಪು ಎಂದರ್ಥ. ಕಾಟಮರಾಜನ ಕತೆಯಲ್ಲಿ (ಆರ್ವಿಯಸ್ ಸುಂದರಂ) 'ತಿರುಮಂದರು ಎಂಬ ಗುಂಪಿನವರ ಪ್ರಸ್ತಾಪ ಬರುತ್ತದೆ. ಬಹುಶಃ ಅ ಮೂಲದಿಂದಲೇ ಬಂದ ಯಾದವರು ಇವರಾಗಿರಬಹುದು.

ಕೇಳಲು ತಾನು ಹೋಗುತ್ತಿರುವ ಉದ್ದೇಶ ತಿಳಿಸಿ ದಾರಿ ತಪ್ಪಬಹುದೆಂದು ಕಲ್ಲುಗಳನ್ನಿಡುತ್ತಿದ್ದೇನೆ ಎನ್ನುತ್ತಾನೆ. ಆಗ ಈ ಜಂಗಮ ಏಳನೇ ಗುರುತಿಗಾಗಿ ನೀನು ಕಲ್ಲನ್ನಿಡಲು ಕಲ್ಲನ್ನು ಎತ್ತುವಾಗ ಅಲ್ಲಿ ಕುಂಬಳ ಬೀಜ ಸಿಗುತ್ತದೆ. ಅದನ್ನು ತೆಗೆದುಕೊಂಡು ಹೋಗಿ ನಿನ್ನ ಹೆಂಡತಿಗೆ ಕೊಡು ಎನ್ನುತ್ತಾನೆ. ಆಗ ಮಲ್ಲನಾಯಕ ಹಾಗೆಯೇ ಮಾಡುತ್ತಾನೆ. ಸೂರ್ಯನ ಧ್ಯಾನ ಮಾಡುತ್ತಾ ಆ ಸೂರ್ಯನನ್ನೇ ಮನಸ್ಸಿನಲ್ಲಿ ಭ್ರಮಿಸಿದ ದಾನಸಾಲಿ ಕುಂಬಳ ಬೀಜವನ್ನು ನೆಡುವಾಗ ಆತನ ಅಂಶ ಆ ಬೀಜಗಳ ಮೇಲೆ ಬೀಳಲು ಒಂದು ಬೀಜವನ್ನು ತಾನು ಸೇವಿಸಿ ಉಳಿದ ಬೀಜಗಳನ್ನು ನೆಡುತ್ತಾಳೆ. ಅದು ಬಳ್ಳಿಯಾಗಿ ಬೆಳೆಯಿತು. ಕೋಟೆ ಪ್ಯಾಟಿಗೆಲ್ಲಾ ಹಬ್ಬಿತು. ಕ್ರೂರಪ್ರಾಣಿ ಬಂದು ಅದರಲ್ಲಿ ಸೇರಿಕೊಳ್ಳತೊಡಗಿದವು. 'ಓಡಾಡುವ ಜನರ ಕಾಲಿಗೆ ತೊಡರಿಬಿದ್ದರು. ಈಕೆಯನ್ನು ಬೈಯ್ದಾಡಿದರು. ಎಷ್ಟಾದರೂ ಬಂಜೆ ಹಾಕಿದ ಬಳ್ಳಿ, ಕಾಯಿಲ್ಲ ಹೂವಿಲ್ಲ ನಾವೆಲ್ಲಾ ಕೈಕಾಲು ಮುರಿದು ಕೊಳ್ಳುವಂತಾಯಿತು ಎಂದು ಹಳಿಯುತ್ತಾ ದೊರೆಗೆ ದೂರು ಕೊಟ್ಟರು. ಹಟ್ಟಿಗಳ ಒಡೆತನ ಈಕೆಯ ತವರಿನವರದೇ. ಆ ಒಡೆಯನೋ ಏಳು ದಿನಗಳೊಳಗಾಗಿ ಆ ಬಳ್ಳಿಯನ್ನು ಕಿತ್ತು ಹಾಕದಿದ್ದರೆ ಶಿಕ್ಷೆಗೆ ಗುರಿಪಡಿಸುತ್ತೇನೆ ಎಂದು ಡಂಗುರ ಹೊಡೆಸುತ್ತಾನೆ. ಈ ಸುದ್ಧಿ ತಿಳಿದು ಬೇಸರಗೊಂಡ ದಾನಸಾಲಿ ತನ್ನ ದುರ್ವಿಧಿಯನ್ನು ಹಳಿಯುತ್ತಾ ಬಳ್ಳಿಯನ್ನು ಕಿತ್ತು ಹಾಕಲು ನಿರ್ಧರಿಸಿದಳು. ಮರುದಿನವೇ ಕುಡುಗೋಲು ಹಿಡಿದು ಬಳ್ಳಿಯ ಬುಡ ಅರಸ ತೊಡಗಿದಳು. ಬುಡ ಸಿಕ್ಕಿತು. ಕೊಯ್ದುಹಾಕಲೆಂದು ಬಾಗಿದಾಗ ಅಮ್ಮ, ಅಮ್ಮಾ ಕೊಯ್ಯಬೇಡ ಎಂಬ ಧ್ವನಿ ಕೇಳಿಸಿತು. ನೋಡಿದರೆ ಒಂದು ಕಾಯಿ ಬಿಟ್ಟಿತ್ತು. ಆಶ್ಚರ್ಯ ಪಟ್ಟು ಆ ಕಾಯಿಯನ್ನು ಕಿತ್ತು ಮೊದಲ ಫಲ ಎಂದು ಜಂಗಮನಿಗೆ ದಾನ ನೀಡಿದಳು. ಆತ ಎಷ್ಟು ಪ್ರಯತ್ನಪಟ್ಟರೂ ಅದು ಒಡೆಯಲಿಲ್ಲ. ಕೆಳಗೆ ಬಿದ್ದ ಕಾಯಿ ಪುಟ ನೆಗೆದು ಆತನ ಹಣೆಗೆ ಬಡಿದು ರಕ್ತಕಾರಿದ, ಭಯಗ್ರಸ್ಥನಾಗಿ ಅವಳಿಗೇ ಆ ಕಾಯಿಯನ್ನು ಹಿಂದಿರುಗುಸಿದ. ನಂತರ ಕುಂಬಾರನಿಗೆ ಕೊಟ್ಟಳು. ಮಡಕೆ ಸಾಲಿಗೆ ತಾಗಿ ಮಡಕೆಗಳೆಲ್ಲಾ ಉರುಳಿ ಒಡೆದವು. ಅವನೂ ಹಿಂದಿರುಗಿಸಿದ. ಕಮ್ಮಾರನಿಗೆ ಕೊಟ್ಟಳು. ಅವನು ಎತ್ತಿ ಹಾಕಲು ಅಡಿಗಲ್ಲಿಗೆ ಬಡಿದು ತಿರುಗಿ ಅವನಿಗೇ ಬಡಿಯಿತಂತೆ. ಹೀಗೆ ಎಲ್ಲಾ ಆಯಗಾರರಿಗೆ ಕೊಡಲಾಗಿ ಅವರೆಲ್ಲಾ ಅದರಿಂದ ಪೆಟ್ಟುತಿಂದು ಹಿಂದಿರುಗಿಸಿದರು. ಆಕೆಯೇ ಬೇಸರದಿಂದ ಇದೊಂದು ಕೇಡುಗಾಯಿ ಎಂದು ನೆಲಕ್ಕೆ ಎತ್ತಿ ಬಿಸಾಡುತ್ತಾಳೆ. ತಕ್ಷಣವೇ ಅದು ಒಡೆಯಿತು. ತುಂಬಿನ ಭಾಗ ಹೋಗಿ ಬೀಸುವ ಕಲ್ಲಿನ ಮೇಲೆ ಕುಳಿತಿತ್ತು. ಹೋಳುಗಳನ್ನು ಹೊರಗೆ ಬಿಸಾಡಿದಳು. ಒಂದು ಹೋಳು ಕಳ್ಳೆ (ಬೇಲಿ) ಯಲ್ಲೋ, ಒಂದು ಹೋಳು ಗುಡಿಸಲ ಸೂರಿನಲ್ಲೂ, ಒಂದು ಕರಬಾನ (ಮಡಕೆ ಸಾಲು) ದಲ್ಲೂ, ಒಂದು ತಿಪ್ಪೆಯಲ್ಲೋ ಒಂದು ಕಲ್ಲುಗಳ ಪೊಟರೆಯಲ್ಲೂ ಬಿದ್ದವು. ಉಳಿದವನ್ನು ಬೇಯಿಸಲೆಂದು ಮಡಕೆಗೆ ತುಂಬಿ ಬೇಯಿಸಲು ನೀರು ತರಲೆಂದು ಬಾವಿಗೆ ಇಳಿದು ನೀರು ತುಂಬಲೆಂದು ಬಾಗುತ್ತಾಳೆ. ಹಾಲುತುಂಬಿದ ಸ್ತನಗಳು ಭಾರವಾಗಿ ಹಾಲು ಬಾವಿಗೆ ಸುರಿಯುತ್ತದೆ. ಅಯ್ಯೋ ದೇವರೇ ನನ್ನ ಗಂಡ ದೂರ ಇದ್ದಾನೆ. ಆತನಿಗೆ ಏನು ಉತ್ತರ ಕೊಡಲಿ? ಎಂದು ಯೋಚಿಸುತ್ತಾ ಬರುತ್ತಾಳೆ. ಮತ್ತೊಂದು ಅಚ್ಚರಿ ಇಲ್ಲಿ ಕಾದಿದೆ. ಬೀಸುವ ಕಲ್ಲಿನ ಮೇಲಿಟ್ಟಿದ್ದ ಕುಂಬಳ ಕಾಯಿಯ ತುಂಬು ಹೆಣ್ಣು ಮಗುವಾಗಿ ಆಕೆಯೇ ತೊಟ್ಟಿಲು ಕಟ್ಟಿ

ಬೀಸಾಡಿದ್ದ ಕುಂಬಳದ ಹೋಳುಗಳೆಲ್ಲಾ ಶಿಶುಗಳಾಗಿರಲು ಅವುಗಳನ್ನು ತೊಟ್ಟಿಲಿಗೆ ಹಾಕಿ ಜೋಗುಳ ಹಾಡುತ್ತಿದ್ದಾಳೆ.

"ಸುಮ್ಮನಿರಿ ಕಂದಗಳಿರಾ, ದಾನಸಾಲಿಯ ಕಂದಗಳಿರಾ, ಪೆದ್ದಕ್ಕ ರಾಯಮ್ಮನ ತಮ್ಮಗಳಿರಾ ನಿಮ್ಮಲ್ಲಿ ಹಿರಿಯರಾರು, ಕಿರಿಯರಾರು"(ತೆಲುಗು ಭಾಷೆಯಲ್ಲಿರುವುದನ್ನು ಕನ್ನಡೀಕರಿಸಲಾಗಿದೆ)

ಹಾಲು ತುಂಬಿ ಎದೆ ಭಾರವಾಗಿದೆ. ತಾಯ್ತನ ಚಿಗುರಿದೆ, ಮಾತೃತ್ವ ಜಾಗೃತವಾಗಿ ಮಕ್ಕಳಿಗೆ ಹಾಲೂಡಿಸಲು ಮನಸ್ಸು ತವಕಗೊಳ್ಳುತ್ತದೆ. ಸಂತೋಷ, ವಿಸ್ಮಯಗಳಿಂದ ದಾನಸಾಲಿ ಈ ಮಕ್ಕಳ ಬಳಿ ಹೋಗುತ್ತಾಳೆ. ಐದು ಮಂದಿ ಗಂಡು ಶಿಶುಗಳು ಒಂದು ಹೆಣ್ಣು ಶಿಶು. ಕುಂಬಳದ ಹಣ್ಣಿನ ತುಂಬಿನಲ್ಲಿ ಜನಿಸಿದವಳೇ ರಾಯಮ್ಮ. ಹೂವಿನ ತೊಟ್ಟೇ ತುಂಬಾಗುತ್ತದೆ. ತುಂಬುಮೊದಲು ನಂತರ ಹಣ್ಣು, ಅಂದರೆ ಮೊದಲ ಮಗುವೇ ರಾಯಮ್ಮ ನಂತರ ಜನಿಸಿದವರು ಐದು ಮಂದಿ ಗಂಡು ಶಿಶುಗಳು ಇವರಲ್ಲಿ ಮೊದಲಿಗ ಸೂರಗೊಂಡರಾಜ ;

"ಅಪ್ಪಸೂರ ಗೊಂಡರಾಜ ಮತ್ತೆಲ್ಲಿ ಹುಟ್ಯಾನೆ, ಅಚ್ಚಗುಂಬಳದ ತನಿಹಣ್ಣು , ಎಪ್ಪತ್ತು ರಾಜ್ಯವುಕೆ ಹೆಸರಾದ" ಹಟ್ಟಿಯ ಗುಡಿಸಿಲಿನ ಸೂರಿನಲ್ಲಿ ಸಿಕ್ಕಿಸಿದ್ದ ಕುಂಬಳದ ಹಣ್ಣಿನ ಹೋಳಿನಲ್ಲಿ ಜನಿಸಿದನಾದ್ದರಿಂದ ಈತ ಸೂರಗೊಂಡರಾಜ. ತಿಪ್ಪೆಯಲ್ಲಿ ಬಿಸುಟ ಹೋಳಿನಿಂದ ಜನಿಸಿದವನು ತಿಪ್ಪಗೊಂಡರಾಜ.

"ಅಣ್ಣ ತಿಪ್ಪಗೊಂಡರಾಜ ಮತ್ತೆಲ್ಲಿ ಹುಟ್ಯಾನೆ, ಅಚ್ಚಗೊಂಬಳದ ತನಿಹಣ್ಣು ,ಎಪ್ಪತ್ತು ರಾಜ್ಯವುಕೆ ಹೆಸರಾದ"

ನಂತರದವನು ಭಾನುಗೊಂಡ ರಾಜ ಬಾನಿಗೆ ಎಸೆದ ಹೋಳಿನಿಂದ ಜನಿಸಿದವನು ಎಂಬ ಪ್ರತೀತಿ. ತದನಂತರ ಕಳ್ಳೆ (ಮುಳ್ಳುಬೇಲಿ)ಯಲ್ಲಿ ಬಿಸಾಡಿದ ಹೋಳಿನಿಂದ ಕಲುಪುಗೊಂಡ ರಾಜ 'ಗೋರ್ಲು' ತೆಲುಗು ಪದ ಎಂದರೆ ಕನ್ನಡದಲ್ಲಿ ಕಲ್ಲುಗಳು ಎಂದಾಗುತ್ತದೆ. ಕಲ್ಲು ಪೊಟರೆಗೆ ಎಸೆದ ಹೋಳಿನಿಂದ ಜನಿಸಿದವನು ಗೋರ್ಲು ಬಯ್ಯಣ್ಣ. ಹೀಗೆ ಇವರ ಜನನವೇ ಆಕಸ್ಮಿಕ. ಹಾಲೂಡಿಸಲು ಕಾತರಿಸಿದ ಅವಳ ಮನಸ್ಸು ಮಕ್ಕಳ ಬಳಿ ಹೋಗುವಂತೆ ಮಾಡುತ್ತದೆ. ಅದೇ ವೇಳೆಗೆ ಅವಳ ಗಂಡ ಅಲ್ಲಿಗೆ ಬರುತ್ತಾನೆ. ಆತನ ಆಜ್ಞೆ ಕಾರಣವಾಗಿ ಆಕೆ ಹಾಲೂಡಿಸಲು ಸಾಧ್ಯವಾಗುವುದಿಲ್ಲ. ಅವಳಿಗೂ ಮತ್ತು ಮಕ್ಕಳಿಗೂ ಮಧ್ಯೆ ತೆರೆ ಕಟ್ಟಿಸಿ ನಿರ್ಬಂಧಿಸುತ್ತಾನೆ. ಪವಾಡ ಸದೃಶವಾಗಿ ತೆರೆಯ ಹಿಂದೆ ಇದ್ದ ಮಕ್ಕಳ ಬಾಯಿಗೆ ತೆರೆಯನ್ನು ಬೇಧಿಸಿಕೊಂಡು ಹೋಗಿ ಇವಳ ಮೊಲೆ ಹಾಲು ಬೀಳುತ್ತದೆ. ಅಂದರೆ ಕದ್ದು ಮುಚ್ಚಿ ಸ್ವಲ್ಪದಿನ ಮಕ್ಕಳನ್ನು ಸಾಕುವ ಪ್ರಯತ್ನ ಮಾಡಿದಳು. "ನೀವಾಳದಗ್ಗರಿಕೆ ಪೋಯಿತೆ ಸತ್ಯಬಂಧ ಮು ಕಲಗಿಂಚು ತಾದಮನಿ" – ನೀನು ಆ ಮಕ್ಕಳ ಬಳಿ ಹೋದರೆ ಸತ್ಯ ಭಂಗವಾದಂತೆ. ನೀನು ನನ್ನ ಹೆಂಡತಿ ಎಂಬ ಸತ್ಯವನ್ನು ಬಿಟ್ಟಂತೆಯೇ ಎನ್ನುತ್ತಾನೆ. ಇನ್ನು ತಾವಿಲ್ಲಿ ಇರುವುದೇ ಬೇಡವೆಂದು ನಿರ್ಧರಿಸಿ ದಾನಸಾಲಿಯನ್ನು ಕರೆದುಕೊಂಡು ಚಂದ್ರಗಿರಿ ಬೂದಾಳು ಕೋಟೆಗೆ ಬರುತ್ತಾನೆ. ಮುಂದೆ ಹಿರಿಯ ಮಗಳಾದ ರಾಯಮ್ಮನೇ ಆ ಅನಾಥ ಕಂದರನ್ನು ಸಾಕುತ್ತಾಳೆ.

ಚಂದ್ರಗಿರಿ ಬೂದಾಳು ಕೋಟೆಯಲ್ಲಿ ದಾನಸಾಲಿಯ ತಾತನಾದ ಮಂದರಾಜ ಸೂರ್ಯನ ದರ್ಶನ ಮಾಡಲು ಬಯಸಿ ಅನೇಕ ವರ್ಷಗಳಿಂದ ತಪಸ್ಸು ಮಾಡುತ್ತಾ ಕುಳಿತಿದ್ದ ರಾತ್ರಿಯೆಲ್ಲಾ ದಾರಿ ನಡೆದು ಬಂದ ಮಲ್ಲನಾಯಕ ಸೂರ್ಯೋದಯ ಆಗುವ ವೇಳೆಗೆ ಪತ್ನಿಯೊಂದಿಗೆ ಗುಹೆಯ ಬಾಗಿಲಿಗೆ ಬಂದು ನಿಲ್ಲುತ್ತಾನೆ. ಎಳೆಯ ಸೂರ್ಯನ ಕಿರಣಗಳು ಅವನ ಮೇಲೆ ಬಿದ್ದು ಮುಖ ಶೋಭಾಯಮಾನವಾಗಿ ಕಂಗೊಳಿಸುತ್ತಿರಲು ಅದೇ ವೇಳೆಗೆ ಧ್ಯಾನದಿಂದ ಹೊರಬಂದ ಮಂದ ರಾಜನ ಕಣ್ಣಿಗೆ ಬೀಳುತ್ತಾನೆ. ತನ್ನ ಭಕ್ತಿಗೆ ಮೆಚ್ಚಿ ಸಾಕ್ಷಾತ್ ಸೂರ್ಯ ಪರಮಾತ್ಮನೇ ಪ್ರತ್ಯಕ್ಷನಾಗಿ ಬಿಟ್ಟ ಎಂದು ಸಂತೋಷಗೊಂಡು ಆ ಮಲ್ಲನಾಯಕನ ಕಾಲಿಗೆ ನಮಸ್ಕರಿಸಿ ತನ್ನ ಸಂಪತ್ತನ್ನೆಲ್ಲಾ ಧಾರೆಯೆರೆಯುತ್ತಾನೆ. ಸೂರ್ಯದೇವನಾದ ನೀನೇ ಇನ್ನು ಮುಂದೆ ನಮಗೆ ದೊರೆ. ನಾನು, ನನ್ನ ಸಂತತಿ ನಿನಗೆ ಪ್ರಧಾನಿ ಎಂದು ಹೇಳುತ್ತಾನೆ. ನಂತರ ಆತನಿಗೆ ತಿಳಿಯುತ್ತದೆ; ತಾನು ಅಂದುಕೊಂಡಂತೆ ಈತ ಸೂರ್ಯದೇವನಲ್ಲ. ನನ್ನ ಮೊಮ್ಮಗಳಾದ ದಾನಸಾಲಿಯ ಗಂಡನೀತ ಎಂದು. ಅರಿಯದೆ ಮೋಸ ಹೋದೆ ಎಂದು ಪರಿತಪಿಸುತ್ತಾನೆ. ಆದರೆ ಕಾಲ ಮಿಂಚಿ ಹೋಗಿರುತ್ತದೆ. ಸತ್ಯಕ್ಕೆ ತಪ್ಪುವುದಿಲ್ಲ. ನೀನೇ ನನ್ನ ಸಂಪತ್ತನ್ನು ಅನುಭವಿಸು ಎಂದು ಕಣ್ಣೀರಿಡಲು ಆ ಕಣ್ಣೀರೇ ಮಡುವಾಗಿ ಅದರಲ್ಲಿಯೇ ಆತ ಐಕ್ಯನಾಗುತ್ತಾನೆ. ಹೀಗೆ ತವರಿನಿಂದ ದಾನ ಸಾಲಿಗೆ ಬರಬೇಕಾಗಿದ್ದ ಆಸ್ತಿ. ಆಕೆಯ ಗಂಡನ ವಶಕ್ಕೆ ಬರುತ್ತದೆ. ದಾನಸಾಲಿ ಮತ್ತು ಮಕ್ಕಳಿಗೆ ಅದರ ಒಡೆತನ ಅನುಭವಿಸುವ ಹಕ್ಕು ಸಿಗುವುದಿಲ್ಲ. ಮುಂದೆ ರಾಯಮ್ಮನ ಪೋಷಣೆಯಲ್ಲಿ ಬೆಳೆದ ಮಕ್ಕಳು ಅಕ್ಕನ ಪ್ರೋತ್ಸಾಹ, ಪ್ರೇರಣೆಗಳಿಂದ ಶಕ್ತಿ, ಸಾಮರ್ಥ್ಯ ಪಡೆದು ಬಂಗಾರು ಭಾನುಕೋಟೆಗೆ ಬಂದು ತಂದೆಯ ವಿರುದ್ಧ ಹೋರಾಡಿ ಆತ ಒಡ್ಡಿದ ಪರೀಕ್ಷೆಗಳನ್ನೆಲ್ಲಾ ಜಯಿಸಿ ತಾಯಿ ಮೂಲದಿಂದ ತಮಗೆ ಬರಬೇಕಾಗಿದ್ದ ಆಸ್ತಿಯನ್ನು ಪಡೆಯುತ್ತಾರೆ. ನಂತರವೂ ದಾನಸಾಲಿ ಬೆಳಕಿಗೆ ಬರದೆ ಮೌನವಾಗಿಯೇ ಅದೃಶ್ಯಳಾಗುತ್ತಾಳೆ. ಅಂದರೆ ಬಂಗಾರು ಬೂದಿಕೋಟೆಯಲ್ಲಿ ಗಂಡನ ಅಂಕೆಯಲ್ಲೇ ಬದುಕನ್ನು ಮುಗಿಸುತ್ತಾಳೆ.

"ತಾಯಿ ನೀನನಲೇನೆ ತಾಯಮ್ಮ ಅನಲೇನೆ, ತಾಯಿದಾನ ಸಾಲಿ ಅನಲೇನೆ ॥, ತಾಯಿದಾನ ಸಾಲಿ ಅನಲೇನೆ ಬಂಗಾರಗೋಟೆ, ತೂಗಿದ ಗರತಿ ಅನಲೇನೆ ॥

"ಕಾಗೆ ಸುಳಿಯದ ಬೆಟ್ಟ ಗೂಗೆ ಸುಳಿಯದಬೆಟ್ಟ, ಹೋಗಿ ಮಾನವರು ಸುಳಿಯಾರು ॥, ಹೋಗಿ ಮಾನವರು ಸುಳಿಯದ ಬೆಟ್ಟದ ಮೇಲೆ, ತಾಯಿ ದಾನ ಸಾಲಿ ಅರಮನೆ ॥

ತಾಯಿ ದಾನಸಾಲಿ ಇದ್ದ ಸ್ಥಿತಿಯನ್ನು ಈ ಸಮುದಾಯ ಆಕೆಯನ್ನು ಸ್ಮರಿಸುವ ವಿಧಾನವನ್ನು ಈ ತ್ರಿಪದಿಗಳು ಸ್ಪಷ್ಟ ಪಡಿಸುತ್ತವೆ.

**ಪುರಾಣ-೨ : ಹೆಳವರು ಹೇಳುವ ಪುರಾಣ :**

ಕುಲದ ಬಳಿಗಳನ್ನು ಹೇಳುತ್ತಾ ತಮ್ಮ ನೆನಪಿನ ಶಕ್ತಿಯ ಮೂಲಕವಾಗಿಯೇ ನಾಡಿನ ಎಷ್ಟೋ ದೇಸೀಯ ಕಥನಗಳನ್ನು ಹಾಡುತ್ತಾ, ಹೇಳುತ್ತಾ ಉಳಿಸಿಕೊಂಡು ಬಂದಿರುವ ಸಮುದಾಯ 'ಹೆಳವರು' ಅಕ್ಷರ ಜ್ಞಾನ ವಿಲ್ಲದಾಗ್ಯೂ ಇವರು ಕಥನ ವನ್ನು ಗದ್ಯ ಅಥವಾ ಪದ್ಯ ರೂಪದಲ್ಲಿ ಹೇಳುವ ಕ್ರಮವೇ

ವಿಶಿಷ್ಟವಾದುದು. ವ್ಯಾಸಬೇಡರನ್ನು ಕುರಿತು ಸಾಕಷ್ಟು ವಿವರಗಳನ್ನು ಇವರು ತಮ್ಮ ನೆನಪಿನ ಸಂಪುಟದಲ್ಲಿ ಜತನದಿಂದ ಕಾಪಾಡಿಕೊಂಡು ಬಂದಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಗೋಪನಹಳ್ಳಿ ಗ್ರಾಮದಲ್ಲಿ ಕೆಲವು ಹೆಳವರ ಕುಟುಂಬಗಳಿದ್ದು ಅದರಲ್ಲಿ ಒಂದೊಂದು ಮನೆತನದವರು ಒಂದೊಂದು ಬೆಡಗಿನ ಒಕ್ಕಲುಗಳಾಗಿ ಅವರ ಬಳಿಯನ್ನು ಹೇಳುತ್ತಾ ಬಂದಿದ್ದಾರೆ. 'ಹೆಳವರ ನಾಗಪ್ಪ' ಎಂಬ ಹಿರಿಯರಿಂದ ಸಂಗ್ರಹಿಸಿದ ದಾನಸಾಲಿಯಮ್ಮನ ಬಗೆಗಿನ ವಿವರ ಹೀಗಿದೆ.

ಈಶ್ವರ ನಾಮ ಸಂವತ್ಸರ ಆಶ್ವೀಜ ಶುದ್ಧ ಹತ್ತಿರದಲ್ಲಿ ತ್ರೈಲೋಕ್ಯ ಮೂಲಸ್ತಂಭ ಶಾಂಭವಿ ಮತ್ತು ಮಹದೇವನ ಅನುಗ್ರಹದಿಂದ ಕಸ್ತೂರಿಭೂಪ ಕೌತಾರಿ, ಚೆಲುವರಗಂಡ, ವೀರಮುನಿವಂಶೋಕ್ತ ವಾಲ್ಮುನಿವಂಶ, ಅಚ್ಯುತ ದಾಮೋದರನ ಅಂಶದಿಂದ ದೇವ ಮಹಾರಾಜ ಹುಟ್ಟಿದನು. ಈತನ ಗರ್ಭದಲ್ಲಿ ಶೌನಿಕಾದಿ ಋಷಿ ಹುಟ್ಟಿದನು. ಈತನ ಗರ್ಭದಲ್ಲಿ ಮಂದಲ ಮುತ್ತಿ ಮಹದೇವರಾಜು ಹುಟ್ಟಿದನು. ಈತನ ಗರ್ಭದಲ್ಲಿ ದನಗೊಂಡ ರಾಜನು ಜನಿಸಿದನು. ತರುವಾಯ ಈತನ ಮಕ್ಕಳೇ ವೀರವೆಂಕಟೋಬರಾಜು, ದೊಡ್ಡೋಬರಾಜು, ಸಣ್ಣೋಬರಾಜು, ನಾರಚಿಪ್ಪಲ ಬೋಡಿ ದಾಸರಿ ಮತ್ತು ದಾನಸಾಲಮ್ಮನೆಂಬ ಹೆಣ್ಣು ಕೂಸು.

ದಾನಸಾಲಮ್ಮನು ವಯಸ್ಸಿಗೆ ಬಂದ ಮೇಲೆ ದನಗೊಂಡರಾಜನು ಆಕೆಗೆ ವರನನ್ನು ಹುಡಕಲು ಹೊರಟನು. ಬ್ರಹ್ಮನ ಇಷ್ಟಾರ್ಥದಿಂದ ಹುಟ್ಟಿದ ಶರಣೆಯಾದ ದಾಲಸಾಲಮ್ಮನು ದನಗೊಂಡ ರಾಜನಿಗೆ ನಾನು ಶಿವನನ್ನಲ್ಲದೆ ಬೇರೆ ಯಾರನ್ನು ಲಗ್ನವಾಗುವುದಿಲ್ಲ. ವೃಥಾ ಶ್ರಮ ಪಟ್ಟು ವರನನ್ನು ಹುಡುಕಬೇಡ ಎಂದು ಹೇಳಿದಳು. ಅದಕ್ಕೆ ಅವನು 'ನನ್ನ ಇಷ್ಟಕ್ಕೆ ತಕ್ಕಂತೆ ಮದುವೆಯಾದರೆ ಸರಿ, ಇಲ್ಲವಾದರೆ ನನ್ನ ಮನೆಯನ್ನು ಬಿಟ್ಟು ನಿನ್ನ ಇಷ್ಟದಂತೆ ಹೋಗಬಹುದು ಎಂದು ಗದರಿಸಿದನು. ಆಗ ದಾನಸಾಲಿಯು ತನ್ನ ಇಷ್ಟಾನುಸಾರ ಹೊರಟು ಸೀಯೇಟಿ ಸಿಂಗನ ಮಲೆಯನ್ನು ಬಿಟ್ಟು ಬಂದು ಲಂಕಾದ್ರಿ ಮಲೆಯನ್ನು ಸೇರಿ ವಜ್ರಕೋಟ ಸ್ಥಾನದಲ್ಲಿ ಹರಿಯುತ್ತಿರುವ ಸತ್ಯವಾದ ನಂದಿ, ಭೃಂಗಿ ಎಂಬ ಎರಡು ನದಿಗಳು ಸೇರಿ ಚಕ್ರದಂತೆ ತಿರುಗಿ ಮುಂದಕ್ಕೆ ಹರಿಯುತ್ತಿರುವ ಪುಣ್ಯ ಭೂಮಿಯನ್ನು ಕಂಡು ಸಂತೋಷಪಟ್ಟು ಇದು ನನ್ನ ತಪಸ್ಸಿಗೆ ಸರಿಯಾದ ಸ್ಥಾನವೆಂದು ತಿಳಿದು ಆ ನದಿಯಲ್ಲಿ ಶುಚಿರ್ಭೂತಳಾಗಿ ನದಿಯ ದಡದಲ್ಲಿದ್ದ ಭೂತದ ಮರದ ಕೆಳಗೆ ಕುಳಿತುಕೊಂಡು ತಪಸ್ಸನ್ನು ಆರಂಭಿಸಿದಳು. ಈಕೆಯ ತಪೋಮಹಿಮೆ ಕೈಲಾಸದವರೆಗೆ ವ್ಯಾಪಿಸಿತು. ಆ ಕಾಲದಲ್ಲಿ ಶಿವನ ಅನುಗ್ರಹದಿಂದ ಜನಿಸಿದ್ದ ದನಗೊಂಡರಾಜ ಅಂದರೆ ದಾನಸಾಲಿಯ ತಂದೆ ೭೦೦ ಸಲಗೆತ್ತು, ೭೦೦ ಬೂದೆತ್ತು ೭೦೦ ಜನ್ನಿಗೆ ಹಸುಗಳು, ಕಾಮಧೇನು, ಕಲ್ಪವೃಕ್ಷ, ಅಮೃತಕೋಡು, ಚಿಂತಾಮಣಿ ಇವುಗಳನ್ನು ಇಟ್ಟುಕೊಂಡು ಬಿದಿರಿನ ಅಕ್ಕಿ, ಜೇನುತುಪ್ಪ, ಕಳ್ಳೇ ಮೇಗಳಸೊಪ್ಪು, ಪುಳ್ಳೆ ಬಗ್ಗಿ (ಕಡ್ಡಿ ಪುಳ್ಳೆ ಉರಿಸಿ ಮಾಡಿದ ಬೆಂಕಿ) ಇವುಗಳನ್ನು ಆಹಾರ ಮಾಡಿಕೊಂಡು ತ್ಯಾಗದೆಲೆ ಹೊದ್ದು ತ್ಯಾಗದೆಲೆಯನ್ನು ಹಾಸಿಕೊಂಡು ಕೋಳಿಯ ಶಬ್ದ ಕೇಳಕೂಡದೆಂದು ಕಾಡಿನಲ್ಲಿ ವಾಸವಾಗಿದ್ದು ಸ್ವಲ್ಪ ಸಮಯದಲ್ಲಿಯೇ ಮಳೆಯಿಲ್ಲದೆ ತಿನ್ನಲು ಅನ್ನವಿಲ್ಲದೆ, ಮೇಯುವುದಕ್ಕೆ ದನಗಳಿಗೆ ಹುಲ್ಲು ನೀರು ಇಲ್ಲದೆ ತುಂಬಾ ಕಷ್ಟದ ದಿನಗಳನ್ನು ಕಾಣಬೇಕಾಯಿತು. ದೈವಾನುಗ್ರಹದಿಂದ

ದೊರಕಿಸಿಕೊಂಡ ೭೭ ಸಾವಿರ ಕಂಪಳವು ಉಳಿಯುವ ಹಾಗಿಲ್ಲ, ಮುಂದಲ ದನಗಳಿಗೆ ಹುಲ್ಲು ಸಿಕ್ಕರೆ ಹಿಂದಲ ದನಗಳಿಗೆ ಸಗಣಿಯೂ ಕೂಡ ಸಿಗದಂತಾಯಿತು. ಮುಂದಲ ದನಗಳಿಗೆ ನೀರು ಸಿಕ್ಕರೆ ಹಿಂದಲ ದನಗಳಿಗೆ ಗೋತ್ರವು ಸಹ ಸಿಗದಂತಾಯಿತು. ಆಗ ದನಗೊಂಡರಾಜ ತನ್ನ ಮಕ್ಕಳಾದ ದೊಡ್ಡೋಬರಾಜು, ನಾರಸೆಪ್ಪಲ ಬೋಡಿದಾಸರಿಯರೊಂದಿಗೆ ತನ್ನ ಕಂಪಳವನ್ನು ಸಾಗಿಸಿಕೊಂಡು ಲಂಕಾದ್ರಿ ಮಲೆಗೆ ಬರುತ್ತಾನೆ. ದಾನಸಾಲಮ್ಮನ ತಪೋಮಹಿಮೆ ಕಾರಣವಾಗಿ ಆ ಮಲೆಯಲ್ಲಿ ಪಚ್ಚೆಯಂತಹ ಹುಲ್ಲು, ಸಕ್ಕರೆಯಂತಹ ನೀರು ತುಂಬಿ ತುಳುಕುತ್ತಿತ್ತು. ಅಲ್ಲಿ ಕಂಪಳವು ಮೇದು ಮನದಣಿಯೆ ನೀರು ಕುಡಿದು ಮಲಗಿದವು. ಹೀಗೆ ತಮಗೆ ಬಂದ ಕಷ್ಟದಿಂದ ಪಾರಾಗಿ ನೆಮ್ಮದಿಯ ನೆಲೆ ಸಿಕ್ಕಿತೆಂದು ಗೂಡುಗಳನ್ನು ಹಾಕಿಕೊಂಡು ಕಾಲ ಕಳೆಯುತ್ತಿದ್ದರು. ದಾನಸಾಲಮ್ಮನ ತಪಸ್ಸಿನ ಮಹಿಮೆ ಕೈಲಾಸದವರೆಗೂ ಹಬ್ಬಿತು. ಶಿವ ಪಾರ್ವತಿಯರಿಬ್ಬರು ನಂದಿವಾಹನ ರೂಢರಾಗಿ ಭೂಲೋಕದ ಕಡೆ ಸಂಚಾರ ಹೊರಟರು. ಶಿವ, ಪಾರ್ವತಿ ಎಂದು ಧ್ಯಾನಿಸುತ್ತಿದ್ದ ಶಬ್ಧವನ್ನು ಕೇಳಿ ಆಗ ಪಾರ್ವತಿಯು ಸ್ವಾಮಿ, ಯಾರೋ ಒಬ್ಬ ಭಕ್ತರು ನಿಮ್ಮನ್ನು ಸ್ಮರಿಸುತ್ತಿರುವರು. ನಂದಿಯನ್ನು ನಿಲ್ಲಿಸು ಆ ಭಕ್ತರನ್ನು ನೋಡಿಕೊಂಡು ಹೋಗೋಣ ಎಂದಳು. ಶರಣೆಯಾದ ದಾನಸಾಲಿ ಕಣ್ಣಿಗೆ ಬೀಳಲು ಆಕೆಯ ಬಳಿ ಹೋಗಿ ನಮ್ಮನ್ನು ನೀನು ಧ್ಯಾನಿಸಿದ ಕಾರಣವೇನು? ಎಂದು ಕೇಳಿದಳು. ಆಗ ಶರಣೆಯು ತಾಯಿ ನಾನು ಶಿವನನ್ನು ಮದುವೆಯಾಗಬೇಕೆಂದು ತಪಸ್ಸು ಮಾಡಿದೆ. ಇಲ್ಲಿಗೆ ನನ್ನ ಕೋರಿಕೆ ಪೂರೈಸಿತು. ಶಿವನ ದರ್ಶನವಾಯಿತು. ನಾನು ಧನ್ಯಳಾದೆ ಎಂದು ಪಾದಗಳಿಗೆ ನಮಸ್ಕರಿಸಿದಳು. ಆಗ ಶಿವ ಪಾರ್ವತಿಯರಿಬ್ಬರು ಒಂದು ಚಿಲುಮೆಯನ್ನು ತೆಗೆಸಿ ವಿಭೂತಿಯೊಂದಿಗೆ ತನ್ನ ಹಣೆಗಣ್ಣಿನ ತೇಜಸ್ಸನ್ನು ತುಂಬಿ ಚಿಲುಮೆಯಲ್ಲಿ ಬಿಟ್ಟು ತಾಯಿ ನೀನು ಇಲ್ಲಿಯೇ ಕಾದಿರು. ನಾವು ೧೨ ತಿಂಗಳು ಕಳೆದ ನಂತರ ಬರುತ್ತೇವೆ. ಬಂದ ಮೇಲೆ ನಾವು ನಿನಗೆ ಶಿವನನ್ನು ಲಗ್ನ ಮಾಡುತ್ತೇವೆ. ಶಿವನು ಈ ಚಿಲುಮೆಯಲ್ಲಿ ಜನಿಸುತ್ತಾನೆ ಎಂದು ಹೇಳಿ ಹೊರಟು ಹೋದರು. ಶರಣೆ ದಾನಸಾಲಿ ಅಲ್ಲಿಯೇ ಕಾದು ಕುಳಿತಳು. ನವಮಾಸಗಳು ಕಳೆದ ನಂತರ ಸೂರ್ಯನ ಛಾಯೆಯುಳ್ಳ ಪುರುಷನು ಆ ಚಿಲುಮೆಯಲ್ಲಿ ಹುಟ್ಟಿದನು. ಆ ಕಾಲಕ್ಕೆ ಸರಿಯಾಗಿ ಶಿವ ಪಾರ್ವತಿ ಬಂದು ತ್ರಿಶೂಲಧರಿಸಿ ತ್ರಿಪುಂಡ್ರವ ಧರಿಸಿದ ಈತನಿಗೆ ಸುಕ್ಕುಲ ಮಲ್ಲನಾಯಕ ಎಂದು ಹೆಸರಿಟ್ಟು ದಾನಸಾಲಿಯೊಂದಿಗೆ ಲಗ್ನ ಮಾಡುತ್ತಾರೆ. ಸಾಕಷ್ಟು ಹಸು, ಎತ್ತುಗಳನ್ನು ಇವರಿಗೆ ಕೊಟ್ಟು ಶಿವ ಪಾರ್ವತಿ ಹೊರಡಲು ಪಾರ್ವತಿಯ ಪಾದಗಳಿಗೆ ನಮಸ್ಕರಿಸಿದ ದಾನಸಾಲಿ. ತಾಯೆ, ನಮಗೆ ಇಷ್ಟು ಭಾಗಗಳು ಬೇಡ. ನಾವು ನಿಮ್ಮ ಸೇವೆ ಮಾಡಿಕೊಂಡಿರುತ್ತೇವೆ. ಈ ಸಂಪತ್ತನ್ನು ಯಾರಿಗಾದರೂ ಕೊಟ್ಟು ನಮ್ಮನ್ನು ಬಿಡುಗಡೆ ಮಾಡು ಎಂದು ಕೇಳಿಕೊಳ್ಳಲು ಪಾರ್ವತಿ ದಾನಸಾಲಮ್ಮನ ಸತ್ಯಕ್ಕೆ ಮೆಚ್ಚಿ ಒಂದು ಕುಂಬಳದ ಬೀಜವನ್ನು ಕೊಟ್ಟು ಅದನ್ನು ನಿನ್ನ ಮನಸ್ಸು ಬಂದ ಕಡೆಗೆ ಹಾಕು. ಅದರಲ್ಲಿ ಆರು ಗಂಡು ಶಿಶುಗಳು ಹುಟ್ಟುವರು. ಮತ್ತು ನಿನಗೆ ಮಗಳಾಗಿ ಶಕ್ತಿ ಸ್ವರೂಪಿಣಿಯಾದ ಒಂದು ಹೆಣ್ಣುಕೂಸು ಹುಟ್ಟುವಳು. ಇವರೇ ಮುಂದಿನ ಕಲಿಯುಗ ಕರ್ತರು. ಈ ದನಕರು ನೋಡಿಕೊಳ್ಳಲು ಇವರನ್ನು ನೇಮಿಸಿ ನೀನು ಬಿಡುಗಡೆ ಪಡೆ ಎಂದು ಹೇಳಿ ಅದೃಶ್ಯಳಾದಳು. ನಂತರ ದೈವಾನುಗ್ರಹದಿಂದ ದೊರೆತ ಈ ಪಶುಸಂಪತ್ತಿನೊಂದಿಗೆ ಈ ದಂಪತಿಗಳು ಕಾಲ

ಹಾಕುತ್ತಿದ್ದರು. ದನಗಳನ್ನು ಮೇಯಿಸುತ್ತಾ ಇವರ ಹಟ್ಟಿಯ ಕಡೆ ಬಂದ ಬೋಡಿದಾಸರಿ ತನ್ನ ತಂಗಿಯಾದ ದಾಲಸಾಲಮ್ಮನನ್ನು ಕಂಡು ಸಂತೋಷಗೊಂಡು ಪರಸ್ಪರ ಉಭಯ ಕುಶಲೋಪರಿ ವಿಚಾರಿಸುತ್ತಾ ಮಾತಿಗೆ ಕುಳಿತಿರುವಾಗ ಬಿದಿರಿನ ಅಕ್ಕಿ ಜೇನುತುಪ್ಪ ಸಂಗ್ರಹಿಸಿಕೊಂಡು ಮಲ್ಲನಾಯಕನು ಅಲ್ಲಿಗೆ ಬರುತ್ತಾನೆ. ದಾನಸಾಲಿ ತನ್ನ ಗಂಡನಿಗೆ ತಮ್ಮನಾದ ಬೋಡಿದಾಸರಿಯ ಪರಿಚಯ ಮಾಡಿಕೊಡುತ್ತಾಳೆ. ಈ ದಿನ ಇಲ್ಲಿಯೇ ಇದ್ದು ಮರುದಿನ ಹೋಗಲು ಮಲ್ಲನಾಯಕ ಭಾವ ಮೈದುನನನ್ನು ಒತ್ತಾಯಿಸುತ್ತಾನೆ. ಆದಿನ ಅಲ್ಲಿಯೇ ಕಳೆದು ಶನಿವಾರದ ನೇಮವನ್ನು ಅಲ್ಲಿಯೇ ಆಚರಿಸಿ ನೀನು ಒಪ್ಪಿದರೆ ನಾನು ಇಲ್ಲಿಗೆ ಬಂದು ರೊಪ್ಪ ಹಾಕಿಕೊಳ್ಳುತ್ತೇನೆ ಎಂದು ಕೇಳುತ್ತಾನೆ. ಆಗಲಿ ಎಂದು ಮಲ್ಲಿನಾಯಕ ಒಪ್ಪಿಗೆ ಸೂಚಿಸಿದನು. ತನ್ನ ಹಟ್ಟಿಗೆ ಹಿಂತಿರುಗಿ, ತಂದೆಯಾದ ದನಗೊಂಡನಿಗೆ ತಾನು ತಂಗಿಯನ್ನು ಆಕೆಯ ಗಂಡನನ್ನು ಕಂಡ ಸುದ್ದಿ ತಿಳಿಸಿ, ಇನ್ನು ತಾವೆಲ್ಲರೂ ಅವರ ಬಳಿಯೇ ಹೋಗೋಣ ಎನ್ನುತ್ತಾನೆ. ರೊಪ್ಪವನ್ನು ಕಿತ್ತು ಕಂಪಳವನ್ನು ಸಾಗಿಸಿಕೊಂಡು ವಜ್ರಕೂಟಕ್ಕೆ ಬರುತ್ತಾರೆ. ಮಗಳು ಅಳಿಯನನ್ನು ಕಂಡು ದನಗೊಂಡ ರಾಜ ಸಂತೋಷ ಪಡುತ್ತಾನೆ. ಮಗಳ ಗೂಡಿಗೆ ಒಂದು ಮೈಲಿ ದೂರದ ಅಂತರದಲ್ಲಿ ತಮ್ಮ ಗೂಡನ್ನು ತಿರುವಿಕೊಂಡು ನೆಲೆಸುತ್ತಾರೆ. ಸುತ್ತಲ ಯರ್ರಮಲೆ, ನಲ್ಲಮಲೆ, ಸಿಯೇಟಿ ಸಿಂಗನ ಮಲೆಯಲ್ಲಿ ಬೇಟೆಯಾಡಿ ಬರುತ್ತಿದ್ದರು. ಸುಖದಿಂದ ಕಾಲ ಕಳೆಯುತ್ತಿದ್ದರು. ಮೇಯುವುದಕ್ಕೆಂದು ಹೋಗಿದ್ದ ಸಲಗೆತ್ತು, ಬೂದೆತ್ತು ಒಮ್ಮೆ ಕೋಳಿಯ ಶಬ್ದ ಕೇಳಿ ಕೂಡಲೇ ರಂಕೆ ಹೊಡೆದು ಕೊಂಬನ್ನೇ ಬಾಣ ಮಾಡಿ, ಬಾಲವನ್ನು ಪಟ್ಟಿ ಮಾಡಿ ಲಂಕಾದ್ರಿ ಹಟ್ಟಿಯನ್ನು ಹೊಕ್ಕು ಹಾಳು ಮಾಡಿದವು. ಸುಮಾರು ಆ ಹಟ್ಟಿಯಲ್ಲಿದ್ದ ೩೦೦ ಬ್ರಾಹ್ಮಣರ ಮನೆಗಳನ್ನು ಹಾಳುಮಾಡಿದವು. ಇದನ್ನು ನೋಡಿ, ಹೆದರಿ ಇವರ ಹಿಂದೆ ಯಾವುದೋ ಸೈನ್ಯ ಬಂದು ಹಟ್ಟಿಯನ್ನು ಮುತ್ತಿ ದರೋಡೆ ಮಾಡುತ್ತಾರೆಂಬ ಭಯದಿಂದ ಬ್ರಾಹ್ಮಣರ ಮಗಳಾದ ನಾಂದಮ್ಮನು ಸ್ವಾಮಿಯ ಒಡವೆಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ಹಾಕಿ ಹೊತ್ತುಕೊಂಡು ಹೋಗಿ ಮಡುವಿನಲ್ಲಿ ಹಾಕಿ ಯಾರಾದರೂ ಬಂದು ಈ ನೀರನ್ನು ಸೋಕಿದರೆ ಕೂಡಲೆ ವಿಷಮಯವಾಗಲೆಂದು ಶಾಪವನ್ನು ಕೊಟ್ಟಳು. ಇತ್ತ ದನಗೊಂಡ ಮತ್ತು ದಾನಸಾಲಿಯ ಪಶುಗಂಪಳ ಬಾಯಾರಿ ಅ ಮಡುವಿಗೆ ನೀರು ಕುಡಿಯಲು ಬರುತ್ತವೆ. ಒಂದು ಸಲಗೆತ್ತು ನೀರು ಕುಡಿಯದಂತೆ ಎಲ್ಲಾ ಹಸು ಮತ್ತು ಎತ್ತುಗಳನ್ನು ತಡೆದಿರುತ್ತದೆ. ಆಗ ದನಗೊಂಡ, ಆತನ ಮಕ್ಕಳು ಮತ್ತು ದಾನಸಾಲಮ್ಮ ಅಲ್ಲಿಗೆ ಬರುತ್ತಾರೆ. ಸಲಗೆತ್ತು, ಬೂದೆತ್ತುಗಳಿಗೆ ಕೈಮುಗಿದು ಕಂಬಳಿ ಹಾಸಿ, ಅದರ ಮೇಲೆ ಸೂಜಿಯನ್ನಿಟ್ಟು, ಅದರ ಮೇಲೆ ಮಲ್ಲಿಗೆ ಅರಳಿಟ್ಟು ಅದರ ಮೇಲೆ ನಿಂತು ಬೋಡಿದಾಸರಿ ಮತ್ತು ದಾನಸಾಲಮ್ಮ ಧ್ಯಾನ ಮಾಡುತ್ತಾರೆ. ಭಕ್ತಿಗೆ ಮೆಚ್ಚಿದ ಸೂರ್ಯನಾರಾಯಣ ಪ್ರಸನ್ನನಾಗುತ್ತಾನೆ. ತಿರುಗುವ ಮಡುವಿನಲ್ಲಿ ಹಾಕಿದ್ದ ಪೆಟ್ಟಿಗೆ ತಾನಾಗಿಯೇ ಮೇಲೆ ಬರುತ್ತದೆ. ದನಕರುಗಳು ವಿಷಮುಕ್ತವಾದ ನೀರನ್ನು ಕುಡಿಯುತ್ತವೆ. ಎಲ್ಲರಿಗೂ ಸಂತೋಷವಾಗುತ್ತದೆ. ನಂತರ ಪೆಟ್ಟಿಗೆಯನ್ನು ತೆರೆದು ನೋಡಲು ಅದರಲ್ಲಿ ಬಲಮುರಿ ಶಂಖ, ನಾಗಮುರಿಬೆತ್ತ, ಮುತ್ತಿನ ಕಾಲು ಪೆಂಡೆಯ, ಚಿನ್ನದ ಬಾಸಿಂಗ, ರತ್ನಗಂಬಳಿ, ಭೂಚಕ್ರದ ಗೊಡುಗು, ಬಂಗಾರುಲಿಂಗ, ಸಾಲಿಗ್ರಾಮ, ಬೆಳ್ಳಿಯ ಚೀಲ, ಬವನಾಸಿ, ಮಣತೂಕದ ಜಾಗಟಗಳೆಲ್ಲಾ ಇದ್ದವು. ಇದನ್ನು ಪರಿಪಾಲಿಸಬೇಕಾದವರು ಯಾರು

ಎಂಬ ಜಿಜ್ಞಾಸೆ ಹುಟ್ಟಲು ನಾರಾಯಣನು ಕಲಿಕಾಲ ಬರುತ್ತಿದೆ. ಕಾಲ ಬದಲಾಗುತ್ತಿದೆ. ಇದುವರೆಗೆ ಬ್ರಾಹ್ಮಣರ ಮಗಳು ಇದರ ರಕ್ಷಣೆ ಮಾಡಿದಳು. ಇನ್ನು ದಾನಸಾಲಿಗೆ ಇದನ್ನು ವಹಿಸಿಕೊಡಿ ಎಂದನು. ನಾವೇ ನಿಮಗೆ ಆಶ್ರಿತರಾಗುತ್ತೇವೆ ಎಂದರು ಆ ಬ್ರಾಹ್ಮಣರು. ಆಗ ನಾರಾಯಣನು ಇದುವರೆಗೂ ನಾವೆಲ್ಲರೂ ಭೇದವಿಲ್ಲದಂತೆ ಇದ್ದೆವು. ಇನ್ನು ಕಲಿ ಪ್ರಭಾವದಿಂದ ಎಡರು ತೊಡರಾಗುವ ಪ್ರಸಂಗ ಬಂದಿದೆ. ಆದ್ದರಿಂದ ಭಾಗವಾಗುವ ಪ್ರಸಂಗ ಬಂದಿದೆ. ಇದು ಆಗಲೇ ಬೇಕು, ಶಿವನ ಅಂಶದಿಂದ ಹುಟ್ಟಿದವರು ಸಿಂಹಾಸನ ಹೊಂದಲಿ ನನ್ನ ಅಂಶದಿಂದ ಹುಟ್ಟಿದವರಿಗೆ ಪೂಜಾಕ್ರಮಾದಿಗಳಿರಲಿ. ಇಲ್ಲಿಂದ ಈ ಕಾಪು ಕಂಪಳಕ್ಕೆ ದಾನಸಾಲಮ್ಮನ 'ಗಂಡ ಮಲ್ಲಿನಾಯಕನು ಅಧಿಕಾರಿಯಾಗಲಿ ಇದಕ್ಕೆಲ್ಲಾ ಆತನ ಪತ್ನಿ ದಾನಸಾಲಮ್ಮನ ತಪಸ್ಸು, ಭಕ್ತಿಯೇ ಕಾರಣ. ಆಕೆಯೇ ಮುಂದಿನ ಎಲ್ಲಾ ವ್ಯಾಸಮಂಡಲಕ್ಕೆ ತಾಯಿ ಎಂದು ಆಶೀರ್ವದಿಸಿ ಅಂತರ್ಧಾನನಾದನು. ನಂತರ ಕಾಪುಕಂಪಳದೊಂದಿಗೆ ಈ ವ್ಯಾಸರು ಅಲ್ಲಿಯೇ ಕಾಲ ಕಳೆದರು. ಭೀಕರ ಬರಗಾಲಗಳನ್ನು ದಾಟಿದರು. ಒಮ್ಮೆ ದಾಲಸಾಲಮ್ಮ ಶಿವಪಾರ್ವತಿ ಕೊಟ್ಟ ಕುಂಬಳ ಬೀಜಗಳನ್ನು ನೆಟ್ಟಳು. ನೆಟ್ಟ ಏಳು ದಿನಗಳೊಳಗಾಗಿ ಕೋಟೆ ಸುತ್ತಿ ಊರ ಬಾಗಿಲವರೆಗೆ ಬಳ್ಳಿ ಹರಡಿತು. ಬ್ರಾಹ್ಮಣರ ಮುಪ್ಪಿನ ಮುದುಕಿಯು ಬ್ರಹ್ಮದೇವರ ಗುಡಿಗೆ ಹೋಗುತ್ತಿರಲು ಬಳ್ಳಿ ಕಾಲಿಗೆ ತೊಡರಿ ಬೀಳುತ್ತಾಳೆ. ಯಾವ ಬಂಜೆ ಮುಂಡೆ ಇದನ್ನು ಹಾಕಿದಳೋ, ಹೂವಿಲ್ಲ, ಕಾಯಿಲ್ಲ ಎಂದು ಶಪಿಸಿದಳು. ದಾನಸಾಲಮ್ಮನಿಗೆ ಈ ಸಂಗತಿ ತಿಳಿದು ತಾಪಗೊಂಡು ಬಳ್ಳಿಯನ್ನು ಕಿತ್ತು ಬಿಸುಟಳು. ಅದರ ಬುಡದಲ್ಲಿ ಒಂದೇ ಒಂದು ಕಾಯಿಬಿಟ್ಟಿತ್ತು. ತಂದು ಗಂಡನಿಗೆ ತೋರಿಸಿದಳು. ಮೊದಲ ಫಲ ಬ್ರಾಹ್ಮಣರಿಗೆ ದಾನ ಮಾಡು ಎನ್ನಲು ಲಂಕಾದ್ರಿ ಹಟ್ಟಿಯ ನಾಂದ್ಯಮ್ಮನಿಗೇ ಕೊಟ್ಟಳು. ಅದು ಎಷ್ಟು ಎತ್ತಿ ಹಾಕಿದರೂ ಒಡೆಯದಿದ್ದಾಗ ತನ್ನ ಮಗನ ಕೈಯಲ್ಲಿ ದಾನಸಾಲಿಗೇ ಹಿಂತಿರುಗಿಸಲು ಕಳಿಸಿದಳು. ಮತ್ತೆ ಸಂಕಟ, ಬೇಸರದಿಂದ ಬೆನ್ನಿನ ಹಿಂದೆ ಬಿಸಾಡಲು ಅದು ಒಡೆಯುತ್ತದೆ. ತಿಪ್ಪೆ, ಬಾನಿ, ಕಲ್ಲು ಪೊಟರೆ, ಕಳ್ಳೆಯಲ್ಲೆಲ್ಲಾ ಈ ಹೋಳನ್ನು ಬಿಸುಟು ಉಳಿದಿದ್ದನ್ನು ಪಾತ್ರೆಗೆ ತುಂಬಿ ಬಾಗಿಲ ಮೇಲಿಟ್ಟು ಗಂಡ ಬರುವ ವೇಳೆಗೆ ನೀರು ತರಲೆಂದು ಹೋಗುತ್ತಾಳೆ. ನೀರು ತುಂಬುವಾಗ ಎದೆ ಜುಮ್ಮೆಂದಿತು. ನೀರಿನಲ್ಲಿ ಎದೆಹಾಲು ಮಿಶ್ರಗೊಂಡವು. ಗಾಬರಿಯಿಂದ ದಿಕ್ಕು ತೋಚದೆ ನೀರಿನ ಬಿಂದಿಗೆ ಹೊತ್ತು ಹಟ್ಟಿಗೆ ಬರುತ್ತಾಳೆ. ಬರುವ ವೇಳೆಗೆ ಎಸೆದ ಆ ಆರು ಚೂರು ಆರು ಗಂಡು ಶಿಶುಗಳಾಗಿ ಹಣ್ಣಿನ ತುಂಬು ಹೆಣ್ಣುಮಗುವಾಗಿ ಆ ಹೆಣ್ಣು ಶಿಶು ಅರು ಶಿಶುಗಳಿಗೂ ತೊಟ್ಟಿಲು ಕಟ್ಟಿ ಜೋಗುಳ ಹಾಡುತ್ತಾ ತೂಗುತ್ತಿರುತ್ತದೆ. ಅ ಶಬ್ದ ಕೇಳಿ ನೀರಿನ ಬಿಂದಿಗೆಯನ್ನು ಇಳಿಸಿ ಗಂಡನ ದಾರಿ ಕಾಯುತ್ತಿದ್ದಳು. ಆಹಾರ ಸಂಗ್ರಹಿಸಿಕೊಂಡು ಕಾಡಿನಿಂದ ಬಂದ ಅವನಿಗೆ ನಡೆದ ಸಂಗತಿಯನ್ನು ವಿವರಿಸುತ್ತಾಳೆ. ಹೆಣ್ಣುಮಗುವನ್ನು ಕರೆದು ಈ ಶಿಶುಗಳು ನಮಗೆ ಬೇಡ. ನೀನು ಇವುಗಳನ್ನು ಪೋಷಿಸು ಎಂದು ಹೇಳಿ ಮಗಳೊಂದಿಗೆ ಆ ಶಿಶುಗಳನ್ನು ನೆಲಮಾಳಿಗೆಯಲ್ಲಿಡಿ ಎಂದು ಆಜ್ಞೆ ಮಾಡಿದನು. ಆಳುಗಳು ಅಂತೆಯೇ ಮಾಡಿದರು. ಹೆಂಡತಿಯೊಂದಿಗೆ ತಾನು ಅಲ್ಲಿಂದ ಬಂಗಾರುಭಾನುಗೋಟೆಗೆ ಬರುತ್ತಾನೆ. ಅಕ್ಕನಿಂದ ಸಾಕಲ್ಪಟ್ಟ ತಮ್ಮಂದಿರು ಆಕೆಗೆ ಹೇಳದೆ ಒಮ್ಮೆ ಹೊರಬಂದು ಸೂರ್ಯನನ್ನು ನೋಡಿ ಹಣ್ಣೆಂದು ತಿಳಿದು

ಸೂರ್ಯಮಂಡಲದ ಕಡೆ ಹಾರುತ್ತಾರೆ. ಸುಟ್ಟು ಹೋಗುವರೆಂದು ತಿಳಿದು ಶ್ರೀಮನ್ನಾರಾಯಣ ತಾನೇ ಪ್ರತ್ಯಕ್ಷವಾಗಿ ಅವರು ಬಂದ ಕಾರಣ ವಿಚಾರಿಸಿ ನಕ್ಕು ಒಂದಷ್ಟು ಉಡುಗೊರೆಗಳನ್ನು ಕೊಟ್ಟು ಕಳುಹಿಸುತ್ತಾನೆ. 'ಸೂರ್ಯ ನಂದನ ಅಲಗು', ಸಿಡಿಲ ಮಿಂಚಿನ ಅಲಗು, ಮುಕ್ಕೊಡಲಿ ಎಂಬ ಮೂರು ಆಯುಧಗಳನ್ನು ಕೊಟ್ಟು ಕಲಿಯುಗದಲ್ಲಿ ಕೀರ್ತಿಯನ್ನು ಪಡೆದು ಬಾ ಬಂದು ಹಾರೈಸಿದನು. ಈ ಸಹೋದರರಲ್ಲಿ ಗೋರ್ಲು ಬೈಯಿಣ್ಣ ಇದ್ದಾನಲ್ಲ ಅವನು ಅಲ್ಲಿಯೇ ಉಳಿದು, ಉಳಿದಿದ್ದವರು ಭೂಲೋಕಕ್ಕೆ ಹಿಂತಿರುಗಿ ಅಕ್ಕನ ಬಳಿ ಬರುತ್ತಾರೆ. ಬೈಯ್ಯಣ್ಣ ಅಲ್ಲಿಯೇ ಉಳಿದ ಎಂಬ ಸಂಗತಿಯನ್ನು ತಿಳಿಸುತ್ತಾರೆ.

ಕಲಿಯ ಪ್ರಭಾವ ಹೆಚ್ಚಾಗುತ್ತಿದೆ. ನಾವಿನ್ನು ಇಲ್ಲಿ ಇರುವುದು ಬೇಡ ಎಂದು ನಿರ್ಧರಿಸುತ್ತಾರೆ, ದಾನಸಾಲಮ್ಮ ಮತ್ತು ಮಲ್ಲನಾಯಕ. ಹೋಗುವುದಾದರೆ ನಾವಿಬ್ಬರೇ ಹೋಗುವುದು ಬೇಡ. ಇಡೀ ಕಾಪುಕಂಪಳದೊಂದಿಗೆ ಹೊರಡೋಣ ಎಂದು ದಾನಸಾಲಮ್ಮ ಹೇಳಲು ದನಗೊಂಡನ ಕಂಪಳವನ್ನು ಸೇರಿಸುತ್ತಾರೆ. ವಿಜಯನಗರವನ್ನು ಆಳುತ್ತಿದ್ದ ರಾಮರಾಯನ ಬಳಿ ಬಂದು ಆತನಿಗೆ ಸಹಾಯ ಮಾಡಿ, ಅಲ್ಲಿಂದ ಕುಮಾರ ಗುಮ್ಮಟಕ್ಕೆ ಬರುತ್ತಾರೆ. ರಾಯಮ್ಮ ಮತ್ತು ಆಕೆಯ ತಮ್ಮಂದಿರನ್ನು ಅಲ್ಲಿಗೆ ಕರೆಸಿಕೊಳ್ಳುತ್ತಾರೆ. ಮತ್ತೊಂದು ಮಗು ಎಲ್ಲಿ ಎಂದು ದಾನಸಾಲಿ ಕೇಳಲು ಆತ ಸೂರ್ಯನ ಬಳಿಯೇ ಉಳಿದಿದ್ದಾರೆ ಎಂದು ಹೇಳುತ್ತಾಳೆ. ಇವರು ಮಹಾತ್ಮರೆಂದು ಪೋಷಿಸಿದೆ. ನಿನ್ನನ್ನು ಮತ್ತೆ ನೋಡಿ ಧನ್ಯಳಾದೆ. ನಿನ್ನ ಮಕ್ಕಳನ್ನು ನೀನು ಸ್ವೀಕರಿಸು ಎನ್ನುತ್ತಾಳೆ. ಆಗ ಕಾಪು ಕಂಪಳ ಉಳಿದದ್ದೇ ದಾನಸಾಲಮ್ಮ, ನಂದಮ್ಮ ಮತ್ತು ರಾಯಮ್ಮನಿಂದ ನಮ್ಮ ಪಾತ್ರ ಇದ್ರಲ್ಲೇನೂ ಇಲ್ಲ. ನೀವೇ ಇದಕ್ಕೆ ಭಾದ್ಯಸ್ಥರು ಎಂದು ಬೋಡಿ ದಾಸರಿ ಹೇಳುತ್ತಾನೆ. ಆಗ ದಾನಸಾಲಮ್ಮ ಮುಂದೆ ಈ ಕಂಪಳವನ್ನು ಮುನ್ನಡೆಸುವ ಹೊಣೆಗರಿಕೆ ರಾಯಮ್ಮನದು ಎಂದು ಹೇಳಲು ರಾಯಮ್ಮ ಒಪ್ಪಿಕೊಳ್ಳುತ್ತಾಳೆ. ಎಲ್ಲವನ್ನು ರಾಯಮ್ಮನಿಗೆ ಒಪ್ಪಿಸಿಕೊಡುತ್ತಾಳೆ. ದನಗೊಂಡರಾಜ, ಮಲ್ಲಿನಾಯಕ, ದಾನಸಾಲಿಯಮ್ಮ ಎಲ್ಲರೂ ಅಲ್ಲಿಂದ ಹಿಂತಿರುಗುತ್ತಾರೆ. ರಾಯಮ್ಮ ಮತ್ತು ತಮ್ಮಂದಿರು ತಮ್ಮ ಪಶುಸಂಪತ್ತು, ಬಿರುದುಗಳೊಂದಿಗೆ ಹಂಪೆಯ ಮಾರ್ಗವಾಗಿ ಉಜ್ಜಿನಿ ಕಾನಮಡುಗು ಮೂಲಕ ಇಂದಿನ ನಾಯಕನ ಹಟ್ಟಿ ಎಂದು ಕರೆಯಲ್ಪಡುವ ಪ್ರಾಂತ್ಯಕ್ಕೆ ಬರುತ್ತಾರೆ.

**ಪುರಾಣ – ೩ ನಿಡುಗಲ್ಲು ಮೂಲದಿಂದ :**

ಈ ಸ್ಥಳದಲ್ಲಿ ಒಂದು ಬಾವಿಯ ಹತ್ತಿರ ಜನಸಂಚಾರ ಅಷ್ಟಾಗಿ ಇಲ್ಲದ ಸ್ಥಳದಲ್ಲಿ ೭ ಮಂದಿ ದೇವಗನ್ನಿಕೆಯರು ದೇವಲೋಕದಿಂದ ಬಂದು ಪ್ರತಿದಿನ ಸ್ನಾನ ಮಾಡಿ ಹೋಗುತ್ತಿದ್ದರು. ಈ ಬಾವಿಗೆ ಈಗಲೂ ಅಕ್ಕತಂಗಿಯರ ಬಾವಿಯೆಂದು ಕರೆಯುತ್ತಾರೆ. ಹೀಗಿರಲು ಒಮ್ಮೆ ಇವರಲ್ಲಿ ಚಿಕ್ಕವಳು ಗರ್ಭವತಿಯಾದಳು. ಸ್ನಾನ ಮುಗಿಸಿ ಆಕಾಶಕ್ಕೆ ಹೋಗುವಾಗ ಒಂದು ನದಿಯಲ್ಲಿಬೆಸ್ತರವಸು ಮೀನು ಹಿಡಿಯಲು ಬಲೆ ಹಾಕಿದ್ದನು. ಆಗ ಗರ್ಭವತಿಯಾದ ಇವಳಿಂದ ಪಿಂಡ ಜಾರಿ ಈ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿತು. ಮೀನುಗಾರ ಮೀನು ಬಲೆಯಲ್ಲಿ ಸಿಕ್ಕಿಕೊಂಡಿದೆ ಎಂದು ಬಲೆಯನ್ನು ತೆಗೆಯಲು

ಮೀನಿಗೆ ಬದಲಾಗಿ ಅಲ್ಲಿ ಹೆಣ್ಣು ಶಿಶುವಿರುವುದನ್ನು ಕಂಡನು. ಆಗ ಈ ಪ್ರಾಂತ್ಯದಲ್ಲಿ ಮಂದಲ ಮಹದೇವರಾಯ ಬಹಳ ಪ್ರಭಾವಶಾಲಿಯಾಗಿದ್ದುದರಿಂದ ಅದನ್ನು ಆತನಿಗೆ ಬೆಸ್ತರವನು ಕೊಟ್ಟನು. ಹೀಗೆ ಬೆಸ್ತನಿಂದ ದಾನ ಪಡೆದ ಎಂಬ ಕಾರಣಕ್ಕಾಗಿ ಈ ಮಗುವಿಗೆ ದಾನಸಾಲಮ್ಮ ಎಂದು ಕರೆದರು. ಹೀಗೆ ದಾನಸಾಲಮ್ಮ ಮಂದಲ ಮಹದೇವರಾಯನ ಮಗಳಾದಳು. ನಂತರ ಈತನಿಗೆ ಎರಿಪೋತು ಕರಿಬೊಮ್ಮ ಮಗನಾಗಿ ಜನಿಸಿದನು.

ದಾನಸಾಲಮ್ಮ ಮಂದಲ ಮಹದೇವಯ್ಯನ ಮಗಳಾಗಿದ್ದು ಈಕೆ ಪಾಪ್ತ ವಯಸ್ಸಿಗೆ ಬಂದಾಗ ಬಹಳ ಪ್ರೀತಿಯಿಂದ ಸಾಕಿದ್ದ ತನ್ನ ಮಗಳ ಏಳಿಗೆಯನ್ನು ಬಯಸುತ್ತಿದ್ದ ಈತ ತುಂಬಾ ಜಾಗರೂಕತೆಯಿಂದ ಮಗಳ ಪಾಲನೆ ಮಾಡುತ್ತಿದ್ದ. ಪ್ರತಿದಿನ ಈಕೆಯನ್ನು ತೂಕ ಮಾಡುತ್ತಿರುತ್ತಾನೆ. ಏಳು ಮಲ್ಲಿಗೆ ತೂಕವಿರುತ್ತಾಳೆ. ಪ್ರತಿದಿನ ತೂಗುವಾಗಲೂ ಅಷ್ಟೇ ತೂಕವಿರುತ್ತಾಳೆ. ಹೀಗಿರುವಾಗ ಸೂರ್ಯ ಉದಯವಾಗುವುದಕ್ಕೆ ಮುಂಚೆ ಅಂತಃಪುರದ ಉದ್ಯಾನವನದಲ್ಲಿ ಸಂಚರಿಸುತ್ತಿರುತ್ತಾಳೆ. ಸೂರ್ಯನ ಹೊಂಗಿರಣಗಳು ಹೂವು, ಎಲೆಬಳ್ಳಿಗಳ ಮೇಲೆ ಬಿದ್ದು ಪ್ರತಿಫಲಿಸಿ ಸುಂದರವಾಗಿ ಕಾಣುತ್ತಿವೆ. ಆಗ ಸಂತೋಷದಿಂದ ಸೂರ್ಯೋದಯದ ಈ ದೃಶ್ಯ ನೋಡಿ ಪುಳಕಿತಳಾಗುತ್ತಾಳೆ. ಈ ಸೃಷ್ಟಿಯಲ್ಲಿ ಸೂರ್ಯನಿಗಿಂತ ಸುಂದರವಾಗಿರುವುದು ಯಾವುದೂ ಇಲ್ಲ ಎಂದು ಮನಸ್ಸಿನಲ್ಲಿ ಆಸೆ ಹುಟ್ಟಿ ಮಗು ಹುಟ್ಟಿದರೆ ಸೂರ್ಯನ ಹಾಗೆಯೇ ಇರಬೇಕು. ಇಂತಹ ಮಗುವನ್ನೇ ತಾನು ಪಡೆಯಬೇಕು ಎಂದು ಮನಸ್ಸು ಮಾಡಿ ಧ್ಯಾನಾಸಕ್ತಳಾಗಿ ಮೈಮೇಲೆ ಪರಿವೆ ಇಲ್ಲದಂತೆ ಕುಳಿತು ಬಿಡುತ್ತಾಳೆ. ಸೂರ್ಯನ ಹೊಂಗಿರಣಗಳು ಮೈಮೇಲೆ ಬಿದ್ದು ಸೂರ್ಯನೇ ಅವಳನ್ನು ಅಪ್ಪಿಕೊಂಡಂತಾಗುತ್ತದೆ. ಅಂದಿನಿಂದ ಆಕೆಯ ದೇಹದಲ್ಲಿ ಬದಲಾವಣೆಯಾಗುತ್ತದೆ. ಈ ವಿಷಯವನ್ನು ಯಾರ ಹತ್ತಿರವೂ ತಿಳಿಸದೆ ತಾನೇ ಮನಸ್ಸಿನಲ್ಲಿ ಆನಂದಿಸುತ್ತಾ ಕಾಲ ಕಳೆಯುತ್ತಾಳೆ.

ಪ್ರತಿದಿನ ಹೂವಿನ ತೂಕ ಮಾಡುತ್ತಿದ್ದು ಕ್ರಮೇಣ ತೂಕದಲ್ಲಿ ಬದಲಾವಣೆಯಾಗುತ್ತದೆ. ಅನುಮಾನ ಬಂದು ಮಂದಲ ಮಹದೇವಯ್ಯ ಮಗಳನ್ನು ಕೇಳಿದಾಗ ಮೌನವೇ ಅವಳ ಉತ್ತರವಾಗುತ್ತದೆ. ಹೆದರಿಸಿ ಬೆದರಿಸಿದರೂ ಪ್ರಯೋಜನವಾಗುವುದಿಲ್ಲ. ಕೊನೆಗೆ ತನ್ನ ಮಗಳು ಗರ್ಭವತಿಯಾಗಿರುವುದು ಖಚಿತ ಎಂದು ತಿಳಿದು ಒತ್ತಾಯ ಪಡಿಸಿ ಇದಕ್ಕೆ ಕಾರಣ ಯಾರು ಎಂದು ಕೇಳುತ್ತಾನೆ. ನಾನು ಯಾವ ಪುರುಷನ ಸಂಪರ್ಕವನ್ನು ಹೊಂದಿಲ್ಲ. ಸೂರ್ಯನ ಬಗ್ಗೆ ಮಾತ್ರ ವ್ಯಾಮೋಹಿತಳಾದದ್ದು ನಿಜ ಎಂದು ಹೇಳುತ್ತಾಳೆ. ವ್ಯಥೆಯಿಂದ ಮಹದೇವಯ್ಯ ಆಕೆಯನ್ನು ನೆಲಮಾಳಿಗೆಯಲ್ಲಿಟ್ಟು ಯಾರಿಗೂ ತಿಳಿಯದಂತೆ ಸಾಕುತ್ತಾನೆ. ನವಮಾಸ ತುಂಬಿದಾಗ ಈಕೆ ಗಂಡು ಶಿಶುವಿಗೆ ಜನ್ಮಕೊಡುತ್ತಾಳೆ. ಈ ಶಿಶುವನ್ನು ಯಾರಿಗೂ ಕಾಣದಂತೆ ತಿಪ್ಪೆಯಲ್ಲಿ ಹೂಳುತ್ತಾರೆ. ಮಂದಲ ಮಹದೇವಯ್ಯನ ಎಮ್ಮೆಗಳ ಪೈಕಿ ಒಂದು ಎಮ್ಮೆ ಆ ತಿಪ್ಪೆಯ ಬಳಿ ಬಂದು ಹಾಲು ಕರೆದು ಹೋಗುತ್ತಿತ್ತು. ಇದನ್ನು ಕುಡಿದೇ ಆ ಕೂಸು ಬೆಳೆಯುತ್ತಿತ್ತು. ಪ್ರತಿದಿನ ಈ ಎಮ್ಮೆ ಆ ತಿಪ್ಪೆಯ ಬಳಿ ಬರುತ್ತಿದ್ದುದನ್ನು ಕಂಡು ಅನುಮಾನಿಸಿ ಆ ಜಾಗವನ್ನು ಅಗೆದು ನೊಡಲು ಒಂದು ಗಂಡು ಮಗು ಸಿಕ್ಕಿತು. ಹೀಗೆ ಅಗೆದು ನೋಡಿದವನು ಗೋಪಾಲಕನಾದ ಯರಗೊಲ್ಲ. ಈತ ಈ ಮಗುವನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಒಂದು

ನೆಲಮಾಳಿಗೆಯಲ್ಲಿಟ್ಟು ಪೋಷಿಸುತ್ತಾನೆ. ಇದು ಮಂದಲ ಮಹದೇವಯ್ಯನಿಗೆ ತಿಳಿದಿರುವುದಿಲ್ಲ. ಮುಂದೆ ದಾನಸಾಲಮ್ಮನನ್ನು ಮಹದೇವಯ್ಯ ಕಣ್ಣುಕಟ್ಟಿ ಕಾಡಿಗೆ ಬಿಡುತ್ತಾನೆ. ಅಲ್ಲಿ ಈಕೆಯನ್ನು ಕಂಡ ಯರಗೊಲ್ಲ ಕರೆದೊಯ್ದು ತಾಯಿಮಗುವನ್ನು ನೆಲಮಾಳಿಗೆಯಲ್ಲಿಟ್ಟು ಕಾಪಾಡುತ್ತಾನೆ.

ಮಂದಲ ಮಹದೇವಯ್ಯನ ಉದ್ಯಾನವನಕ್ಕೆ ೨ ಹಂದಿಗಳು ಬಂದು ಹಾಳು ಮಾಡುತ್ತಿರುತ್ತವೆ. ಆ ಹಂದಿಗಳು ಬಹಳ ಕ್ರೂರಸ್ವಭಾವದವಾಗಿದ್ದು ಯಾರಿಂದಲೂ ನಿಗ್ರಹಿಸಲು ಸಾಧ್ಯವಾಗುವುದಿಲ್ಲ. ಆಗ ಮಂದಲ ಮಹದೇವಯ್ಯ ಈ ಹಂದಿಗಳನ್ನು ಯಾರು ಸಾಯಿಸುತ್ತಾರೋ ಅವರಿಗೆ ಅರ್ಧ ರಾಜ್ಯ ಕೊಡುವುದಾಗಿ ಡಂಗುರ ಹೊಡೆಸುತ್ತಾನೆ. ಈ ವಿಷಯ ನೆಲಮಾಳಿಗೆಯಲ್ಲಿದ್ದ ಹುಡುಗನ ಕಿವಿಗೆ ಬೀಳುತ್ತದೆ. ಈ ವೇಳೆಗಾಗಲೇ ಪ್ರಾಪ್ತ ವಯಸ್ಸಿಗೆ ಬಂದಿದ್ದ ಈತ ಹಂದಿಗಳನ್ನು ತಾನು ನಿಗ್ರಹಿಸುತ್ತೇನೆ. ಇದಕ್ಕೆ ಅಪ್ಪಣೆಕೊಡು ಎಂದು ತಾಯಿಯನ್ನು ಕೇಳುತ್ತಾನೆ. ತಾಯಿ ಒಪ್ಪುವುದಿಲ್ಲ. ಆಗ ಅಮ್ಮ ನಾನು ಪ್ರಸಿದ್ಧಿಗೆ ಬರಲು ಇದೇ ಸುಸಮಯ ನನಗೆ ಆಶೀರ್ವದಿಸಿ ಕಳುಹಿಸಿಕೊಡು ಎಂದು ಬೇಡಿ ಆಶೀರ್ವಾದ ಪಡೆದು ಬಂದು ಮಂದಲ ಮಹದೇವರಾಯನ ಉದ್ಯಾನವನಕ್ಕೆ ಹೋಗಿ ಅಲ್ಲಿ ಕಾಟ ಕೊಡುತ್ತಿದ್ದ ಹಂದಿಗಳನ್ನು ಹೊಡೆದು ಸಾಯಿಸುತ್ತಾನೆ. ಅವುಗಳ ಬಾಲದ ಕೊನೆ, ಕಿವಿ, ಮೂಗುಗಳನ್ನು ಕೊಯ್ದು ಬಟ್ಟೆಯ ಸೆರಗಿನಲ್ಲಿ ಕಟ್ಟಿಕೊಂಡುಬರುತ್ತಾನೆ.

ಮಹದೇವಯ್ಯನಿಗೆ ಇದು ತಿಳಿಯದು. ಹಂದಿಗಳನ್ನು ಹೊಡೆಯಲು ಇವನ ದಂಡು ಬರುತ್ತದೆ. ಸತ್ತುಬಿದ್ದಿರುವ ಹಂದಿಗಳನ್ನು ನೋಡಿ ಮೊಂಡಬಾಲ, ಕಿವಿ, ಮೂಗುಗಳನ್ನು ಕತ್ತರಿಸಿಕೊಂಡು ಬಂದು ತಾವೇ ಹಂದಿಯನ್ನು ಹೊಡೆದೆವು ಎಂದು ರಾಜನಿಗೆ ತೋರಿಸುತ್ತಾರೆ. ನಂಬಿ ಸಂತೋಷಪಟ್ಟ ದೊರೆ ಇವರಿಗಾಗಿ ಔತಣಕೂಟ ಏರ್ಪಡಿಸುತ್ತಾನೆ. ತಾಯಿಯ ಅಪ್ಪಣೆ ಪಡೆದು ಬಂದ ಹುಡುಗ ಎಲ್ಲರೂ ಊಟಮಾಡುತ್ತಿರುವಾಗ ಅಲ್ಲಿಗೆ ಬರುತ್ತಾನೆ. ದೊರೆ ಮಹದೇವರಾಯ ಊಟ ಮಾಡುತ್ತಿರುವಾಗ ಬಂದು ಅವನ ಎಲೆಗೇ ತಾನೂ ಕೈಹಾಕಿ ತಿನ್ನುತ್ತಾನೆ. ಆಗ ದೊರೆ ತನ್ನ ಎಲೆಯಲ್ಲಿ ಕೈಯಿಡಲು ಇವನಿಗೆಷ್ಟು ಧೈರ್ಯ, ಯಾರಿವನು ಎಂದು ಸಿಟ್ಟಿಗೇಳುವ ಸಮಯದಲ್ಲಿ ತಕ್ಷಣವೇ ಈ ಹುಡುಗ ಎಲ್ಲರೂ ನೋಡುತ್ತಿದ್ದಂತೆಯೇ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಾನೆ. ಈ ಉದ್ಧಟತನವನ್ನು ಕಂಡು ಕೋಪಗೊಂಡು ನೀನು ಯಾರೆಂದು ಕೇಳಲು ಹಿಂದೆ ಜರುಗಿದ ತನ್ನ ಜನ್ಮ ವೃತ್ತಾಂತವನ್ನು ತಿಳಿಸುತ್ತಾನೆ. ಹಂದಿಯನ್ನು ತಾನು ಕೊಂದಿದ್ದಾಗಿಯೂ, ಅದಕ್ಕೆ ಸಾಕ್ಷಿಯಾಗಿ ತನ್ನ ಬಳಿ ಇದ್ದ ಪ್ರಾಣಿಯ ಗುರುತುಗಳನ್ನು ತೋರಿಸುತ್ತಾನೆ. ಆಗ ಮಹದೇವಯ್ಯ ಮೆಚ್ಚಿ ನೀನು ನನ್ನ ಸಿಂಹಾಸನವನ್ನು ಹತ್ತಿರುವೆ, ಇನ್ನು ನಾನು ಇದನ್ನು ಹತ್ತಲಾರೆ, ಇನ್ನು ನಿನ್ನದೇ ಈ ಸಿಂಹಾಸನ ಎಂದು ಹೇಳಿ ಅವನಿಗೆ ರಾಜ್ಯವನ್ನು ಒಪ್ಪಿಸುತ್ತಾನೆ. ಎಮ್ಮೆಯ ಹಾಲನ್ನು ಕುಡಿದು ಬದುಕಿದ್ದ ಇವನಿಗೆ 'ಎನುಮಲವನು' ಎಂದೂ ಮುಂದೆ ಈತನ ಸಂತತಿಗೆ ಎನುಮಲವರು' ಎಂದೂ ಕರೆಯಲಾಗುತ್ತದೆ. ಮಹದೇವಯ್ಯನ ಸಂತತಿಯನ್ನು ಈ ಮೊದಲು 'ಮಂದಲವರು' ಎಂದು ಕರೆಯುತ್ತಿದ್ದರು. ಈ ಎರಡು ಬೆಡಗುಗಳವರು ಮುಂದೆ ನೆಂಟರಾಗಿ ಸಂಬಂಧಬೆಳೆಸುತ್ತಾ ಬಂದಿದ್ದು ಇಂದಿಗೂ ಇದೇ ಕ್ರಮ ಈ ಸಮುದಾಯದಲ್ಲಿ ಬಳಕೆಯಲ್ಲಿದೆ.

**ದಾನಸಾಲಿಯಮ್ಮ ಪುರಾಣದ ವಿಶ್ಲೇಷಣೆ :**

ಈ ಹಿಂದೆ ಕೊಡಲಾದ ಮೂರೂ ಪುರಾಣಗಳನ್ನು ಗಮನಿಸಿದಾಗ ದಾನಸಾಲಿಯಮ್ಮನ ಜನನ ಮತ್ತು ಆಕೆಗೆ ಇಟ್ಟಿರುವ ಹೆಸರು ಇಲ್ಲಿ ಮುಖ್ಯವಾಗಿ ವಿಶ್ಲೇಷಣೆಗೆ ಒಳಪಡುತ್ತದೆ. ಹೆಳವರು ಹೇಳುವ ಪುರಾಣ ಹೆಚ್ಚು ಮೂಲಕ್ಕೆ ಹತ್ತಿರದಲ್ಲಿದೆ ಎನಿಸುತ್ತದೆ. ಮೊದಲನೆಯ ಕತೆಯೂ ಇದೇ ಕತೆಯನ್ನು ಹೇಳುತ್ತಿದ್ದರೂ ಸ್ವಲ್ಪ ಮಟ್ಟಿನ ಶಿಷ್ಟತೆ ಅಲ್ಲಿ ಕಂಡುಬರುತ್ತದೆ. ಈ ಎಲ್ಲಾ ವಿವರಗಳಲ್ಲಿ ಸಾಮಾನ್ಯವಾಗಿರುವ ಸಂಗತಿಯೆಂದರೆ, ದಾನಸಾಲಿಯಮ್ಮ ಮಂದಲರಾಜನ ಪರಂಪರೆಯಲ್ಲಿ ಬರುವ ಒಬ್ಬಳೇ ಮಗಳು. ತಂದೆ ತೋರಿಸಿದ ವರನನ್ನು ನಿರಾಕರಿಸಿದವಳು. ಅಲೌಕಿಕ ಶಕ್ತಿಯನ್ನು ಮೆಚ್ಚಿ ಆ ವರದಿಂದ ಮಕ್ಕಳನ್ನು ಪಡೆದವಳು ಎಂಬುದಾಗಿದೆ. ಇವಳಿಂದಲೇ ಪಶುಸಂಪತ್ತು ಇವಳ ಮಕ್ಕಳಿಗೆ ಬಂದಿತು ಎಂಬುದಾಗಿದೆ. ಮಂದರಾಜನ ಮಗನಾದ ಅಂಬೇರಾಯನಿಗೆ ಜನಿಸಿದ ಮಗುವೇ ದಾನಸಾಲಿಯಮ್ಮ. ಹುಟ್ಟಿದ ನಕ್ಷತ್ರ ಮೂಲನಕ್ಷತ್ರ ಯಾರಿಗಾದರೂ ದಾನ ಮಾಡಿಬಿಡಿ ಎಂದು ಪುರೋಹಿತರು ಸೂಚಿಸಲು ಆತ ತನ್ನ ತಮ್ಮನಿಗೇ ದಾನ ಮಾಡಿದನಂತೆ. ಹಾಗಾಗಿ ಇವಳಿಗೆ 'ದಾನಸಾಲಿ' ಎಂಬ ಹೆಸರು ಬಂದಿತು ಎನ್ನುತ್ತಾರೆ. ಬುಡಕಟ್ಟು ಸಮುದಾಯವೊಂದರಲ್ಲಿ ಮಗು ಜನಿಸಿದಾಗ ನಕ್ಷತ್ರ, ತಿಥಿ ಎಂದು ಪಂಚಾಂಗ ತೆರೆಸಿ ನೋಡುವ ಪದ್ಧತಿ ಇತ್ತೇ ಎಂಬುದು ಇಲ್ಲಿ ಪ್ರಶ್ನೆಯಾಗುತ್ತದೆ. ಪ್ರಾಯಶಃ ಇದು ವೈದಿಕ ಮೂಲದ ಜ್ಯೋತಿಷ್ಯವಾಗದೆ, ಅದಕ್ಕಿಂತ ಭಿನ್ನವಾದ ಗಿರಿಜನರ ರೂಢಿಗಳೂಇರಬಹುದು.

ಮತ್ತೊಂದು ಮೂಲದ ಪ್ರಕಾರ ಮುಂದೆ ಈಕೆ ತಾನು ಬೆಳೆದ ಕುಂಬಳ ಕಾಯಿಯನ್ನು ಹಲವರಿಗೆ ದಾನ ಮಾಡಿದ್ದರಿಂದ ಈ ಹೆಸರು ಬಂದಿರಬಹುದು ಎಂಬುದಾಗಿದೆ. ಮತ್ತೊಂದು ಮೂಲದ ಪ್ರಕಾರ ದೇವಲೋಕದ ಅಪ್ಸರೆಯರು ಭೂಲೋಕಕ್ಕೆ ಬಂದು ಸರೋವರದಲ್ಲಿ ಸ್ನಾನ ಮಾಡಿ ವಿಹರಿಸಿ ಆಕಾಶಕ್ಕೆ ಮರಳಿ ಹೋಗುವಾಗ ಪಿಂಡ ಜಾರಿ ಆ ಸರೋವರದಲ್ಲಿ ಬೆಸ್ತರವನು ಮೀನಿಗೆ ಬಲೆ ಹಾಕಿದ್ದು ಅದರಲ್ಲಿ ಬಿದ್ದು ಆತ ಅದನ್ನು ತೆಗೆದು ನೋಡಲು ಒಂದು ಹೆಣ್ಣು ಶಿಶುವಾಗಿತ್ತು. ತನ್ನ ಪ್ರಾಂತ್ಯವನ್ನು ಆಳುತ್ತಿದ್ದ ಮಂದಲ ಮಹದೇವರಾಯ ಬಹಳ ಪ್ರಭಾವಶಾಲಿಯಾಗಿದ್ದುದರಿಂದ ಅ ಮಗುವನ್ನು ಆತನಿಗೆ ಕೊಟ್ಟನು. ಹೀಗೆ ಬೆಸ್ತರವನಿಂದ ದಾನ ಪಡೆದ ಮಗು ಎಂಬ ಕಾರಣಕ್ಕಾಗಿ ಇವಳಿಗೆ ಈ ಹೆಸರು ಬಂದಿತು ಎಂಬುದಾಗಿದೆ. ಹೀಗೆ ಆಕೆಯ ಹೆಸರಿನ ಸುತ್ತ ವಿಶೇಷವಾದ ವಿವರಗಳು ದೊರಕುತ್ತವೆ. ಬಹುಶಃ 'ಧನಸ್ಸು' ಎಂಬ ಮೂಲದಿಂದ ಈ ಹೆಸರನ್ನು ನಿಷ್ಪನ್ನ ಮಾಡ ಹೊರಟರೆ ಧನಸ್ಸುಶಾಲಿ ಅಂದರೆ ಧನಸ್ಸನ್ನು ಧರಿಸಿದವಳು ಎಂದು ಊಹೆ ಮಾಡಬಹುದೆನಿಸುತ್ತದೆ. ಏಕೆಂದರೆ ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದ ಬೇಡತಿಯರ ಸಾಮಾನ್ಯ ಲಕ್ಷಣವಿದು. ಧನಸ್ಸುಶಾಲಿ ದನಸಾಲಿ ಆಗಿರಲೂ ಸಾಧ್ಯವಿದೆ. Dana =feed for domestic animals ಸಾಕು ಪ್ರಾಣಿಗಳಿಗೆ ಆಹಾರವನ್ನು ಕೊಡುತ್ತಿದ್ದವರು ಎಂಬ ಅರ್ಥ ತೆಲುಗಿನ ಪದಕೋಶದಲ್ಲಿದೆ. ಈ ಹಿನ್ನೆಲೆಯಿಂದಲೂ ಈಕೆಯ ಹೆಸರನ್ನು ಅರ್ಥೈಸಬಹುದಾಗಿದೆ.[೫೦] ಇದೇ ಸರಿಯಾದ

---

[೫೦] Digital Dictionary of South Asia, A Telugu English Dictionary by J.P.L. Gwynn (www.v.chicago.edu).

ವಿವರಣೆ.ಮುಂದೆ ತಂದೆ-ತಾಯಿಯಿಂದ ದೂರವಾದ ನತದೃಷ್ಟಳೀಕೆ ಎಂಬುದಂತೂ ಸತ್ಯ. ಸಾಕಿದ ತಂದೆಗೆ ಮತ್ತೊಬ್ಬ ಮಗನಿರುತ್ತಾನೆ. ಅತನ ಹೆಸರು ಕರಿಬೊಮ್ಮಂತರಾಜು. ಅವನನ್ನೇ ಮದುವೆ ಮಾಡಿಕೊಳ್ಳಲು ತಂದೆ ಆಕೆಗೆ ಸೂಚಿಸುತ್ತಾನೆ.[೫೧] ಇಷ್ಟಪಡದ ಆಕೆ ತನ್ನ ಹಟ್ಟಿಯಿಂದ ಹೊರಬೀಳುತ್ತಾಳೆ. ಈಕೆ ವರಿಸಿದ್ದು ಅನಾಥನಾದ ಸಂಚರಿಂದ ಪೋಷಿಸಲ್ಪಟ್ಟ ಮಲ್ಲನಾಯಕನನ್ನು. ಆದರೆ ಮಕ್ಕಳನ್ನು ಪಡೆದದ್ದು ಮಾತ್ರ ಸೂರ್ಯನಿಂದ. ಇಲ್ಲಿ ಮಹಾಭಾರತದ ಕುಂತಿಯು ವಿವಾಹಪೂರ್ವದಲ್ಲಿಯೇ ಸೂರ್ಯನನ್ನು ಇಷ್ಟಪಟ್ಟು ಅವನಿಂದಲೇ ಕರ್ಣನನ್ನು ಪಡೆದುದನ್ನು ನೆನಪು ಮಾಡಿಕೊಳ್ಳಬಹುದು. ಕೃಷ್ಣನ ಸೋದರತ್ತೆಯಾದ ಕುಂತಿಯು ಪಶುಪಾಲಕರ ವಂಶದವಳೂ ಇರಬಹುದು.(ಯಾದವರು) ಜಂಗಮಕೊಟ್ಟ ಕುಂಬಳ ಬೀಜದಿಂದ ಬೆಳೆದ ಕುಂಬಳದ. ಹಣ್ಣಿನಿಂದ ಹೀಗೆಲ್ಲಾ ವಿವರಗಳು ಸಿಗುತ್ತವೆ. ಆದಿವಾಸೀ ಸಮುದಾಯಗಳಲ್ಲಿ ಮೂಲದಲ್ಲಿ ಬಹುಶಃ ಸಾಮೂಹಿಕ ಜೀವನಪದ್ಧತಿ ಇತ್ತು. ಮಕ್ಕಳು ಇಡೀ ಸಮುದಾಯದ ಎಲ್ಲಾ ಸ್ತ್ರೀಯರ ಮಕ್ಕಳೆಂದು ಪರಿಗಣಿಸಲ್ಪಡುತ್ತಿದ್ದರು. ಕ್ರಮೇಣ ನಿರ್ದಿಷ್ಟ ಹೆಂಗಸಿನ ಮಗು ಎಂದು ಗುರುತಿಸುವ ವ್ಯವಸ್ಥೆ ಪ್ರಾರಂಭಗೊಂಡಿತು. ತಂದೆಯ ಸ್ಥಾನ ತುಂಬಾ ಗೌಣವಾಗಿತ್ತು. ಮಾತೆಯ ಮೂಲಕ ಮಕ್ಕಳನ್ನು ಗುರುತಿಸುವುದರಲ್ಲಿ ಮಾತೃಪ್ರಧಾನತೆ ನಿಚ್ಚಳವಾಗಿ ಕಂಡುಬರುತ್ತದೆ. ಪ್ರಕೃತಿಯಲ್ಲಿ ತಂದೆಯ ಸ್ಥಾನಕ್ಕಿಂತ ತಾಯಿಯ ಸ್ಥಾನ ಹೆಚ್ಚು ಖಚಿತವಾದದ್ದು. ಮೊದ ಮೊದಲು ತಾಯಿಯ ಹೆಸರಿನ ಮೂಲಕ ಮಕ್ಕಳನ್ನು ಗುರುತಿಸುತ್ತಿದ್ದುದ್ದೂ ಉಂಟು. ಆದಿತಿಯ ಮಗ ಆದಿತ್ಯ, ಕೃತ್ತಿಕೆಯ ಮಗ ಕಾರ್ತಿಕೇಯ, ಗೌತಮ ಪುತ್ರ 'ಶಾತಕರ್ಣಿ ಇತ್ಯಾದಿ[೫೨] ಮ್ಯಾಸಬೇಡರಲ್ಲಿಯೂ ಕೆಲವು ಬೆಡಗುಗಳು ಮಾತೃಮೂಲೀಯ ವ್ಯವಸ್ಥೆಯು ತಮ್ಮಲ್ಲಿದ್ದುದ್ದನ್ನು ಸೂಚಿಸುತ್ತವೆ. ನಲಟಬ್ಬನವರು, ಅರುವಬ್ಬನವರು, ಅಬ್ಬನದು, ಪಾಲಬ್ಬನಡು ಇತ್ಯಾದಿ 'ಅಬ್ಬ' ಎಂಬ ತೆಲುಗುಪದ ಕನ್ನಡದಲ್ಲಿ ಅಮ್ಮ, ಅಜ್ಜಿ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. 'ದಾನಸಾಲಿಯ ಕಂದಲು' ಎಂದು ಹೇಳುವ ಕ್ರಮ ರೂಢಿಯಲ್ಲಿದೆಯೇ ಹೊರತಾಗಿ ಶುಕ್ಲಮಲ್ಲನಾಯಕನ ಮಕ್ಕಳು ಎನ್ನುವುದು ಅಪರೂಪವೇ. ಹೀಗಿದ್ದ ವ್ಯವಸ್ಥೆಯಿಂದ ಪಿತೃಪ್ರಧಾನ್ಯತೆಯ ಕಡೆ ಪಲ್ಲಟವಾಗುತ್ತಿದ್ದ ಸಂದರ್ಭವನ್ನು ನಾವು ದಾನಸಾಲಿಯ ಬದುಕಿನ ಮೂಲಕ ಕಾಣಬಹುದು. ಆದಿಮ ಸಂಸ್ಕೃತಿಯಲ್ಲಿ ರಕ್ತಶುದ್ಧಿಯನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ಮತ್ತು ಆಸ್ತಿ ಪಾಲಾಗದಿರಲೆಂದೂ ಅಕ್ಕ ತಮ್ಮ, ಅಣ್ಣ ತಂಗಿ ಮದುವೆಯಾಗುವ ಪದ್ಧತಿಗಳಿದ್ದವು. ಬಹುಶಃ ಈ ಬಗೆಯ ವಿವಾಹಕ್ಕೆ ದಾನಸಾಲಿಯ ಮನಸ್ಸು ಒಪ್ಪುವುದಿಲ್ಲ. ಸೂರ್ಯನ ಮೇಲೆ ವ್ಯಾಮೋಹವನ್ನು ಬೆಳೆಸಿಕೊಂಡಿದ್ದ ಈಕೆ ಸೂರ್ಯನನ್ನೇ ವರಿಸುತ್ತೇನೆ ಎನ್ನುತ್ತಾಳೆ. ಸೂರ್ಯನ ಜಪತಪದಲ್ಲಿದ್ದ ಈಕೆ ಪಾರ್ವತಿ, ಪರಮೇಶ್ವರನಿಂದ ಅನುಗ್ರಹಿಸಲ್ಪಟ್ಟ ಒಂಟಿಕೊಂಬು ಬಲ್ಲಾವಿನ ಗೊರಸಿನಲ್ಲಿ ಜನಿಸಿದ 'ಚೆಟ್ಲು ಪಟ್ಲಪ್ಪ' ರಾಜನನ್ನು ವರಿಸುತ್ತಾಳೆ. ಗಿಡಗಂಟೆಗಳ

---

[೫೧] ಈಜಿಪ್ಟಿನ ಸಂಸ್ಕೃತಿಯಲ್ಲಿ ಕ್ಲಿಯೋಪಾತ್ರ ಮದುವೆಯಾದದ್ದು ಯುವರಾಜನಾಗಿದ್ದ ತನ್ನ ತಮ್ಮನನ್ನು (ಎ) ಅವಧೇಶ್ವರಿಯ ಸಹೋದರನೊಂದಿಗೆ ವಿವಾಹ - 'ಅವಧೇಶ್ವರಿ' ಕಾದಂಬರಿ, ಲೇ. ಶಂಕರ ಮೊಕಾಶಿ ಪುಣೇಕರ; (ಬಿ) ಮ್ಯಾಸಬೇಡರಲ್ಲಿ 'ಮಂದನಾನ ಮಂದ ತಿರುಗಮಂದ' ಎಂದರೇ ಸಗೋತ್ರ ವಿವಾಹವಿತ್ತು.

[೫೨] ಧರ್ಮಶಾಸ್ತ್ರಗಳು, ಸ್ತ್ರೀ ಹಾಗೂ ಶೋಷಣೆ, ಲೇ. ಡಾ. ನಿರುಪಮಾ, ಆರತಿ ಪಬ್ಲಿಕೇಷನ್ಸ್, ೧೯೯೬, ಬೆಂಗಳೂರು, ಪು.೩.

ರಾಜನಾದ ಇವನನ್ನು ಅಡವಿ ಚೆಂಚರು ಸಾಕಿದ್ದ ಕಾರಣ 'ಸಂಚುಸಿಕಾನಾಯಕ' ಎಂದೂ, ಶ್ರೀಶೈಲ ಮಲ್ಲಿಕಾರ್ಜುನನ ಭಕ್ತನಾದ್ದರಿಂದ 'ಸುಕ್ಕಲು ಮಲ್ಲಿನಾಯಕ' ಎಂದೂ ಈತನಿಗೆ ಹೆಸರು. ಬಹುಕಾಲದ ನಂತರ ಈಕೆ ಮಕ್ಕಳನ್ನು ಪಡೆಯುತ್ತಾಳೆ. ಈ ಹಿಂದೆ ವಿವರಿಸಿರುವ ಕಥೆಗಳ ಆಧಾರದ ಮೇಲೆ ಹೇಳುವುದಾದರೆ ಈಕೆ ಮಕ್ಕಳನ್ನು ಪಡೆದ ರೀತಿಯೂ ನಿಗೂಢವೇ. ಹಂಬಲಿಸಿ ಮಕ್ಕಳನ್ನು ಪಡೆದ ತಾಯಿ ತನ್ನ ಆ ಮಕ್ಕಳಿಗೇ ಕದ್ದು ಹಾಲೂಡಿಸಬೇಕಾದ ಅನಿವಾರ್ಯತೆ ಅಲ್ಲಿ ಆರಂಭಗೊಂಡ ಸ್ತ್ರೀಶೋಷಣೆಯನ್ನು ಸಂಕೇತಿಸುತ್ತದೆ. ಮಾನವೀಯ ನೆಲೆಯಿಂದ ಒಬ್ಬ ತಾಯಿಯನ್ನು ಗ್ರಹಿಸದ ಪುರುಷ ಪ್ರಧಾನ ಸಮಾಜದ ದೃಷ್ಟಿಕೋನಕ್ಕೆ ಇದು ಪುರಾವೆಯಾಗುತ್ತದೆ. ಆಕೆಯ ಮಕ್ಕಳನ್ನು ತನ್ನ ಮಕ್ಕಳು ಎಂದು ಒಪ್ಪಿಕೊಳ್ಳದೆ ಆಕೆಯ ಗಂಡ ನೀನು ನಿನ್ನ ಮಕ್ಕಳ ಬಳಿ ಹೋದರೆ ಸತ್ಯಭಂಗವಾಗುತ್ತದೆ. ನೀನು ನನ್ನ ಹೆಂಡತಿ ಎಂಬ ಸತ್ಯವನ್ನು ಬಿಟ್ಟಂತೆಯೇ ಎನ್ನುತ್ತಾನೆ. ತಾನು ಅಲ್ಲಿರುವುದೇ ಬೇಡವೆಂದು ಚಂದ್ರಗಿರಿ ಬೂದಾಳುಕೋಟೆಗೆ ಹೊರಡುತ್ತಾನೆ. ದಾನಸಾಲಿಯೂ ಈತನನ್ನು ಅನುಸರಿಸಿ ಹೊರಡುವಂತೆ ಮಾಡುತ್ತಾನೆ. ಇಲ್ಲಿ ದಾನಸಾಲಿಯ ಮುಂದೆ ಎರಡು ಆಯ್ಕೆಗಳಿವೆ. ಒಂದು ಮಕ್ಕಳು, ಮತ್ತೊಂದು ಗಂಡ, ತಾಯ್ತನಕ್ಕಾಗಿ ಅಷ್ಟೊಂದು ಹಂಬಲಿಸಿದ ಜೀವ ಅಷ್ಟು ಸುಲಭವಾಗಿ ಮಕ್ಕಳನ್ನು ಬಿಟ್ಟು ಹೊರಟದ್ದೇಕೆ. ಅದೇಗೆ ಸಾಧ್ಯವಾಯಿತು? ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ಅದಕ್ಕೆ ಉತ್ತರವನ್ನು ಬಹುಶಃ ನಾವು ಹೀಗೆ ಕಂಡುಕೊಳ್ಳಬಹುದೇನೋ. ಸದಾ ಹೊಂದಾಣಿಕೆ ಮಾಡಿಕೊಳ್ಳುತ್ತಲೇ ಬದುಕುವ ಗುಣ ಹೆಣ್ಣಿನದು. ಈ ಮೂಲಕವಾಗಿಯೇ ಒಂದು ವ್ಯವಸ್ಥೆಯನ್ನು ಉಳಿಸಿಕೊಳ್ಳುವ, ನಿಧಾನವಾಗಿಯಾದರೂ ನಿರೀಕ್ಷಿತ ಫಲ ಪಡೆಯಬಹುದೇನೋ ಎಂಬ ಆಶಯ ಆಕೆಯ ಮನದಲ್ಲಿರಬಹುದು. ಬಹುಶಃ ಈ ಕಾರಣವಾಗಿಯೇ ದಾನಸಾಲಿಯಮ್ಮ ಈಗಾಗಲೇ ತನ್ನ ಪುಟ್ಟ ಮಕ್ಕಳನ್ನು ಆರೈಕೆ ಮಾಡುವಷ್ಟು ಸ್ವಲ್ಪ ಹಿರಿಯವಳಾಗಿದ್ದ ಮಗಳು ಹೇಗೋ ಪೋಷಿಸಬಲ್ಲಳು. ಗಂಡನ ಜೊತೆ ನಡೆದರೆ ಮುಂದೆ ಎಂದಾದರೂ ಒಂದು ದಿನ ಅವನ ಮನಸ್ಸು ಬದಲಾಯಿಸಬಹುದೇನೋ ಎಂಬ ಆಸೆಯೇ ಕಾರಣವಾಗಿ ಆತನ ಹಿಂದೆ ಹೆಜ್ಜೆ ಹಾಕಿರುವ ಸಾಧ್ಯತೆಗಳೂ ಇವೆ. ನಾವು ಹೀಗೆ ಭಾವಿಸಿಕೊಳ್ಳದಿದ್ದರೆ ದಾನಸಾಲಿಯಮ್ಮ ತನ್ನ ಒಡಲ ಕಳವಳ ನೀಗಿಸಿಕೊಳ್ಳಲು ತಾಯ್ತನದ ಅಭೀಪ್ಸೆಯನ್ನು ಪೂರೈಸಿಕೊಳ್ಳಲು ಮಕ್ಕಳನ್ನು ಪಡೆದದ್ದೇ ಅರ್ಥಹೀನವೆನ್ನಿಸುತ್ತದೆ. ಮಕ್ಕಳನ್ನು ನಿರಾಕರಿಸಿ ಪತಿಯನ್ನು ಆರಿಸಿಕೊಂಡಳು ಎಂದುಕೊಂಡರೆ ಪಡೆದ ತಾಯ್ತನವನ್ನು ಆಕೆ ನಿರಾಕರಿಸಿದಂತಾಗುತ್ತದೆ. ತಾಯ್ತನ ಒಂದು ಚಿರಂತನ ಸತ್ಯ. ತಾಯಿ ಮತ್ತು ಮಕ್ಕಳ ಮಧ್ಯೆ ಆಳವಾದ ಭಾವನಾತ್ಮಕ ಸಂಬಂಧವಿರುತ್ತದೆ. ಮಕ್ಕಳಿಲ್ಲದ ತನ್ನ ಬದುಕು 'ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದ್ಹಾಂಗ' ಎಂದು ವ್ಯಥೆ ಪಡುತ್ತಾ ಹಂಗಿನ ಬಾನ ಉಣ್ಣುವ ಸ್ಥಿತಿಯದು ಎಂದು ಕೊರಗುತ್ತಾಳೆ. ಹೆಣ್ಣು ಹೀಗಿರುವಾಗ ಇಂತಹ ವ್ಯಥೆಗೆ ಕಾರಣವಾಗಿರುವ ಬಂಜೆತನದ ಅಭಿಶಾಪದಿಂದ ಪಾರಾಗಬೇಕೆಂಬ ಬಯಕೆಯೊಂದಿಗೆ ಆ ಮಕ್ಕಳನ್ನು ರಮಿಸಿ ಲಾಲಿಸುವ ಅನುಭವವನ್ನು ಹೊಂದುವುದೂ ಆಕೆಯ ಆಸೆಯಾಗಿದ್ದು ಇದೇ ದಾನಸಾಲಿಯೂ ಕೂಡ ಮಕ್ಕಳನ್ನು ಪಡೆಯುವಿಕೆಯ ಹಿಂದಿರಬಹುದಾದ ಒತ್ತಡ. ಅವಳು ಕದ್ದು ಮುಚ್ಚಿ ಮಕ್ಕಳಿಗೆ ಹಾಲೂಡಿಸುತ್ತಿದ್ದಳೆಂಬುದೇ ಅವಳಿಗೆ ಮಕ್ಕಳ ಮೇಲಿರುವ ಮಮತೆಗೆ ಸಾಕ್ಷಿಯಾಗುತ್ತದೆ. ಮಲೆ ಮಹದೇಶ್ವರ ಕಾವ್ಯದಲ್ಲಿ ಬರುವ ಸಂಕಮ್ಮ ಬೇಟೆಯಿಂದ ತನ್ನ ಗಂಡ ಮರಳಿ

ಬಂದಾಗ ದಿಟ್ಟತನದಿಂದ ಆತನನ್ನು ಎದುರಿಸುತ್ತಾಳೆ. ಆದರೆ ಆ ಎದೆಗಾರಿಕೆ ಇಲ್ಲಿ ದಾನಸಾಲಿಗೆ ಇಲ್ಲ. ಇಲ್ಲದಿರಲು ಕಾರಣವಾದ ಸಂದರ್ಭ, ಆ ಪರಿಸರ ಇದಕ್ಕೆ ಕಾರಣ. ಶಿಷ್ಟ ಪುರಾಣಗಳ ಸ್ತ್ರೀಮಾದರಿಯಂತೆ ತಾಳ್ಮೆ, ಸಹಿಷ್ಣುತೆ, ವಿಧೇಯತೆಯನ್ನು ಮೈಗೂಡಿಸಿಕೊಂಡಿರುವಳೇ ವಿನಃ ಈಕೆಯಲ್ಲಿ ಬಂಡುಕೋರತನ ಇಲ್ಲ. ಸದ್ದಿಲ್ಲದೆ ಗಂಡನನ್ನು ಅನುಸರಿಸಿ ಹೊರಡುತ್ತಾಳೆ. ಅವಳು ಆತನನ್ನು ಹಿಂಬಾಲಿಸಿದರೂ ಆ ನಿಶ್ಶಬ್ದ ಹಲವು ಧ್ವನಿಗಳನ್ನು ಹೊರಡಿಸುವುದು ಸತ್ಯ. ಈ ಮೌನದಲ್ಲಿ ಪ್ರಶಾಂತತೆ ಇಲ್ಲ ಬದಲಾಗಿ ಪ್ರಕ್ಷುಬ್ಧತೆ ಇದೆ. ಬುಡಕಟ್ಟಿನ ಒಂದು ಜೀವನ ಕ್ರಮ ಮತ್ತೊಂದು ತಿರುವನ್ನು ಪಡೆದುಕೊಳ್ಳುತ್ತಿರುವ ಸಂದರ್ಭವಿದು. ಬೇಟೆಯ ಹಂತದಿಂದ ಪಶುಪಾಲನಾ ಹಂತಕ್ಕೆ ಬಂದಾಗಲೇ ನಮ್ಮ ಆದಿಮ ಸಂಸ್ಕೃತಿಗಳಲ್ಲಿ ಪುರುಷ ರಾಜಕಾರಣ ಆರಂಭವಾಯಿತು. ಮುಕ್ತವಾಗಿದ್ದ ಮಾತೃಪ್ರಧಾನವಾಗಿದ್ದ ವ್ಯವಸ್ಥೆ ಬದಲಾಗತೊಡಗಿತು. ಒಂದು ಕೌಟುಂಬಿಕ ವ್ಯವಸ್ಥೆ ಎಂದಾಗ ಅಲ್ಲಿ ಯಾರೂ ಪ್ರಧಾನರಾಗಬೇಕಾದ ಅಗತ್ಯವಿಲ್ಲ. ಪರಸ್ಪರರಲ್ಲಿರುವ ಪ್ರೀತಿ, ಗೌರವ, ನಂಬಿಕೆ, ಜೀವಪರ ಕಾಳಜಿಗಳೇ ಆ ಕುಟುಂಬಕ್ಕೆ ಒಂದು ಬಿಗಿಯಾದ ನೆಲೆಗಟ್ಟನ್ನೂ, ಸಾಮರಸ್ಯವನ್ನೂ ತಂದುಕೊಡುತ್ತದೆ. ಆಳುವ ಅಧೀನವಾಗಿಸಿಕೊಳ್ಳುವ ಹಂಬಲ ಬಂದಾಗ ಅಲ್ಲಿ ಸಾಮರಸ್ಯಕ್ಕಿಂತ ಒಡೆಯ, ಆಳು ಎಂಬಂತಹ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಇಲ್ಲಿ ದಾನಸಾಲಿಯು ಪತಿಯ ಒಡೆತನವನ್ನು ಭಂಜಿಸಿ ತನ್ನದೇ ಆದ ಸ್ವತಂತ್ರನೆಲೆಯನ್ನು ಕಟ್ಟಿಕೊಂಡು ತಾಯ್ತನ ಪಡೆಯುತ್ತಾಳೆ. ತಾಯ್ತನದ ಹಂಬಲವೇ ಇವಳನ್ನು ಅಲ್ಲಿಗೆ ಕೊಂಡೊಯ್ಯುತ್ತದೆ. ಪುರುಷಪ್ರಾಧಾನ್ಯತೆಯನ್ನು ಮುರಿಯುವವಳಂತೆ ಇವಳು ಕಂಡು ಬಂದರೂ ಕೊನೆಗೆ ಒಡೆಯನ ಅಧಿಕಾರ ಶಕ್ತಿಗೆ ಅಧೀನಳಾಗುತ್ತಾಳೆ. ಇಲ್ಲಿಯ ಸುಕ್ಕಲು ಮಲ್ಲನಾಯಕನ ಆಲೋಚನೆ ಸಂಪೂರ್ಣವಾಗಿ ಆರ್ಯ ಮೂಲದ ಪುರುಷ ಪ್ರಧಾನ ದೃಷ್ಟಿಕೋನದಿಂದ ಪ್ರಭಾವಿತವಾದದ್ದು. ಸ್ತ್ರೀಯನ್ನು ತನ್ನ ಅಂಕೆಯಲ್ಲಿರಿಸಿಕೊಳ್ಳುವ ಆಶಯದಿಂದ ಕೂಡಿದ್ದು ಇಂತಹ ಪುರುಷ ರಾಜಕಾರಣದಲ್ಲಿ ಈಕೆ ಅದೃಶ್ಯಳಾಗುತ್ತಾಳೆ. ಅಗಾಧವಾದ ಮೌನ ಅಲ್ಲಿ ಮುಡುಗಟ್ಟಿದೆ. ಹೆಂಡತಿಯೊಂದಿಗೆ ಮಲ್ಲನಾಯಕ ಬಂಗಾರು ಭಾನುಕೋಟೆಗೆ ಬರುತ್ತಾನೆ. ಈತ ಅಲ್ಲಿ ಪಡೆಯುವುದು ತನ್ನ ಹೆಂಡತಿಯ ತಾತನ ಆಸ್ತಿಯನ್ನು ಮಾತೃರೂಪೀ ಕುಟುಂಬ ವ್ಯವಸ್ಥೆಯಲ್ಲಿ ಆ ಮನೆತನದ ಆಸ್ತಿ ಮಹಿಳೆಗೆ ಸಂಬಂಧಿಸಿದುದಾಗಿರುತ್ತದೆ. ಇನ್ನೂ ಸಂಪೂರ್ಣವಾಗಿ ಪಿತೃರೂಪಿಯಾಗದ ಮಾತೃರೂಪವಲ್ಲದ ಸಂಕ್ರಮಣ ಸಂದರ್ಭ ಅದಾಗಿರಬಹುದು. ಹಾಗಿರದಿದ್ದರೂ ತವರಿನಿಂದ ಹೆಣ್ಣಿಗೆ ಆಸ್ತಿ ಬಂದರೆ ಅದು ಅವಳ ಒಡೆತನದಲ್ಲಿರಬೇಕಲ್ಲವೇ? ಆದರೆ ಇಲ್ಲಿ ಆದದ್ದೇ ಬೇರೆ. ಇಲ್ಲಿ ಆಸ್ತಿ ಅಂದರೆ ಪಶುಸಂಪತ್ತು. ಈ ಮೂಲಕ ತಾನು ಸಂಪಾದಿಸದ ಇತರ ಸಂಪತ್ತು ಮಲ್ಲನಾಯಕನ ಕೈ ಸೇರಿತು. ಇದನ್ನು ಗಮನಿಸಿದರೆ ಈತ ನಮಗೆ ಹೀಗೆ ಕಂಡುಬರುತ್ತಾನೆ. ಹೆಂಡತಿ ಬೇಕು ಈತನಿಗೆ. ಏಕೆಂದರೆ ಆಕೆಯ ಮೂಲಕ ಆಕೆಯ ತವರಿನ ಆಸ್ತಿಯನ್ನು ಕಬಳಿಸಲು ಇದು ತನ್ನದಾಗಬೇಕಾದರೆ ಅವಳು ತನ್ನೊಂದಿಗೆ ಇರಬೇಕು. ಆದರೆ ಆಕೆಯ ಮಕ್ಕಳನ್ನು ಸಾಕುವ ಹೊಣೆಗಾರಿಕೆ, ಕನಿಷ್ಟ ಜೀವಪರ ಕಾಳಜಿ ಇಲ್ಲದ ವ್ಯಕ್ತಿಯಾಗುತ್ತಾನೆ ಈತ. ಈ ವಿವರಗಳನ್ನು ಸ್ತ್ರೀವಾದಿ ನೆಲೆಯಿಂದ ಗಮನಿಸಬೇಕಾದ ಅಗತ್ಯವಿದೆ. 'ಸ್ತ್ರೀವಾದ' ಎಂದ ಕೂಡಲೆ ಪುರುಷರಿಂದ ವಿಮೋಚನೆ ಪಡೆದು ತಮ್ಮದೇ ಆದ ಪ್ರತ್ಯೇಕ ಅಸ್ತಿತ್ವವನ್ನು ನಿರ್ಮಾಣ ಮಾಡಿಕೊಳ್ಳುವುದು ಎಂದಲ್ಲ. ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಸಾವಿರಾರು ವರ್ಷಗಳಿಂದ ಸ್ತ್ರೀಯರಿಗೆ ಸಹಜ ಜೀವನವನ್ನು

ನೀಡದೆ ಅವಳಿಗೆ ತಂದಿತ್ತಿರುವ ಪಶು ಅವಸ್ಥೆಯಿಂದ ಹೊರಬರುವುದು ಹಾಗೂ ತಮ್ಮ ಹಕ್ಕುಗಳನ್ನು ಪ್ರಸ್ತಾವನೆ ಮಾಡಿಕೊಳ್ಳುವುದಕ್ಕಾಗಿ ನಿರ್ಮಾಣಗೊಂಡಿರುವ ವ್ಯಾಸಪೀಠವಿದು."[೫೪] ಈ ಮಾತಿನ ಹಿನ್ನೆಲೆಯಲ್ಲಿ ಕನಿಷ್ಟ ಮಾನವೀಯ ಗುಣ ಇಲ್ಲದ ಮಲ್ಲಿನಾಯಕನ ವರ್ತನೆ ಅಸಹಜ ಅಸಹನೀಯವಾದುದು ಎನಿಸುತ್ತದೆ.

(ಈ ಬುಡಕಟ್ಟಿನ ಬಗ್ಗೆ ವಿಚಾರ ಮಾಡುವಾಗ ಈಗ ಪಿತೃಪ್ರಧಾನ ವ್ಯವಸ್ಥೆಯ ಮೂಲಕವಾಗಿಯೇ ನೋಡುವ ಕ್ರಮ ಬಳಕೆಯಲ್ಲಿದ್ದು ಮ್ಯಾಸಬೇಡರು ಎಂದಾಕ್ಷಣ ಮಂದರಾಜ. ಆತನ ಮೊಮ್ಮಗಳನ್ನು ವರಿಸಿದ ಸುಕ್ಕಲು ಮಲ್ಲಿನಾಯಕ ಅವನ ಪರಂಪರೆಯಿಂದ ಬಂದವನೇ ಕಾಟನಾಯಕನ ಮಲ್ಲಯ್ಯ, ಗಾದ್ರಿಪಾಲನಾಯಕ ಎಂಬ ಆಲೋಚನಾ ವಿಧಾನವೇ ಪ್ರಧಾನವಾಗಿದೆ. ಬೇಟೆಯ ಹಂತದಿಂದ ಪಶುಪಾಲನಾ ಹಂತಕ್ಕೆ ಬಂದಾಗಲೇ ನಮ್ಮ ಆದಿಮ ಸಂಸ್ಕೃತಿಗಳಲ್ಲಿ ಪುರುಷ ರಾಜಕಾರಣ ಪ್ರಾರಂಭವಾಯಿತು. ಮಹದೇಶ್ವರ ಕಾವ್ಯದಲ್ಲಿ ಬರುವ ಸಂಕಮ್ಮನನ್ನು ಸೋಲಿಗರು ತಮ್ಮ ಬುಡಕಟ್ಟಿನ 'ತಾಯಿ' ಎಂದು ಗುರುತಿಸುತ್ತಾರೆ. 'ಸಂಕಮ್ಮನ ಹಬ್ಬ' ಎಂದು ಈ ಸೋಲಿಗರು ಆಚರಿಸುತ್ತಾರೆ. ಇದು ಈ ಸಮುದಾಯಕ್ಕೆ ಹಿರಿಮೆಯ ಸಂಗತಿಯೂ ಹೌದು. ಆದರೆ ಮ್ಯಾಸಬೇಡರ ಬುಡಕಟ್ಟಿನಲ್ಲಿ ಇಂತಹ ಆಚರಣೆ ಇಲ್ಲ . ಕಾಲಾಂತರದಲ್ಲಿ ಪುರುಷ ಪ್ರಾಧಾನ್ಯತೆಗೆ ಒತ್ತು ಕೊಟ್ಟ ಸಾಮಾಜಿಕ ವ್ಯವಸ್ಥೆಯೊಂದು ಈ ಬಗೆಯ ನಿರ್ಲಕ್ಷ್ಯ ತಳೆದಿರುವುದರಲ್ಲಿ ಅಚ್ಚರಿಯೇನೂ ಇಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶವು ಮಾತೃಪ್ರಾಧಾನಯತೆಯನ್ನು ಸ್ಪಷ್ಟ ಪಡಿಸುವ ಅನೇಕ ಜನಪದ ಕಥನಗಳನ್ನು ಹೊಂದಿದೆ. ಸಿರಿ, ಕಲ್ಲುರ್ಟಿ, ಮಾನಿನಿಯರೇ ಅಲ್ಲಿಯ ಪಾಡ್ದನಗಳ ನಾಯಕಿಯರು. ದಾನಸಾಲಿಯಮ್ಮನಿಗೆ ಸಂಬಂಧಿಸಿದ ಯಾವ ಆಚರಣೆಯೂ ಈ ಸಮುದಾಯದಲ್ಲಿಲ್ಲ. ಸಂಬಂಧಿಸಿದ ದೇವಾಲಯವೂ ಇಲ್ಲ. ಡಾ. ವಿರೂಪಾಕ್ಷ ಪೂಜಾರಹಳ್ಳಿಯವರು ತಮ್ಮ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಕೃತಿಯಲ್ಲಿ ಪುಟ ಸಂಖ್ಯೆ ೨೨೦ ಚಿತ್ರದುರ್ಗ ಜಿಲ್ಲೆಯ ಮಲ್ಲೂರಹಳ್ಳಿಯ ಪರಿಸರದಲ್ಲಿ ಪಿಲ್ಲಗುಂಡ್ಲು ಅರಣ್ಯದಲ್ಲಿ ದಾನಸಾಲಮ್ಮನ ಎತ್ತುಗಳಿವೆ ಎಂದು ತಿಳಿಸಿರುತ್ತಾರೆ. ಆದರೆ ಸಮುದಾಯದ ಬಹುಮಂದಿಯ ಅಭಿಪ್ರಾಯದಂತೆ ಅವು 'ಒಡೆಯರ ಎತ್ತುಗಳು ಎಂದರೆ ರೊಪ್ಪಲ ಸೂರಿಯ ಒಡೆತನದಲ್ಲಿದ್ದ ಎತ್ತುಗಳು. ಮ್ಯಾಸಬೇಡರ ಎಲ್ಲಾ ದೇವರ ಎತ್ತಿನ ಗೂಡುಗಳಲ್ಲಿಯೂ ಅಕ್ಕರಾಯಮ್ಮನನ್ನು ಪೂಜಿಸುತ್ತಾರೆ. ಮುತ್ತಿಗಾರರ ಮಾರಿ, ವಡೇಲು ಮಾರಿ ಇತ್ಯಾದಿ ಇಲ್ಲಿ ಪೂಜೆಗೊಳ್ಳುತ್ತಿರುವವಳು ಅಕ್ಕರಾಯಮ್ಮ. ಯರಗಾಟನಾಯಕನ ಪರಂಪರೆಯವರಿಗೆ ಸೇರಿದ ಎತ್ತುಗಳಿವು. ದಾನಸಾಲಿಯಮ್ಮ ಅಲ್ಲ. ಆದರೆ ಒಂದು ಅಂಶ ಖಚಿತವಾಗುತ್ತದೆ. ತಮ್ಮ ಸಂಪತ್ತಿನ ಅಧಿದೇವತೆಯಾದ ದಾನಸಾಲಿಯಮ್ಮನನ್ನು ಜನ ಅರಾಧನಾ ಸ್ವರೂಪದಲ್ಲಿ ಉಳಿಸಿಕೊಂಡಿಲ್ಲವಾದರೂ, ಸ್ಮರಣೆಯಲ್ಲಂತೂ ಉಳಿಸಿಕೊಂಡಿದ್ದಾರೆ. ಹೀಗಾಗಿಯೇ ಈಕೆಗೆ ಸಂಬಂಧಿಸಿದ ಪುರಾಣ-೩ನೇಯ ಭಾಗದಲ್ಲಿ ಬಂದಿರುವ ಕಥೆ 'ಎನುಮುಲವರು' ಎಂಬುದು ಮ್ಯಾಸನಾಯಕರಲ್ಲಿ ಪ್ರಮುಖವಾದ ಬೆಡಗು. ಈ ಎನುಮಲವರ ಒಟ್ಟು ಕುಲಕ್ಕೆ ತಾಯಿ ಸ್ಥಾನಕ್ಕೆ ಸಲ್ಲುವವಳೇ ದಾನಸಾಲಿಯಮ್ಮ. ಹಾಗಾಗಿ ತಮಗೆ

---

[೫೪] ಉಲ್ಲೇಖ : ಡಾ. ವಿಠಲರಾವ್ ಗಾಯಕವಾಡ್, ಸ್ತ್ರೀವಾದಿ ವಿಮರ್ಶೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೧, ಹಂಪಿ, ಮೂಲ ಹೇಳಿಕೆ : ಅಶ್ವಿನಿ ಧೋಂಗಡೆ, ಸ್ತ್ರೀವಾದಿ ಸಮೀಕ್ಷಾ.

'ಎನುಮಲವರ' ಎಂಬ ಪದ ಹೇಗೆ ಸಲ್ಲುತ್ತದೆ ಎಂಬುದಕ್ಕೆ ಅವರು ಕಟ್ಟಿಕೊಂಡಿರುವ ಕಥೆಯಿದು. ಮೂಲದ ಕಥೆಯನ್ನು ಉಳಿಸಿಕೊಂಡು ಸೂರ್ಯನ ವರದಿಂದ ಆಕೆ ಮಕ್ಕಳನ್ನು ಪಡೆದಳು. ಆ ಮಗುವನ್ನು ತಿಪ್ಪೆಯಲ್ಲಿ ಹೂಳಲು ಅದಕ್ಕೆ ಪ್ರತಿದಿನ ಎಮ್ಮೆ ಹಾಲು ಕರೆದು ಬರುತ್ತಿದ್ದುದಾದ ಕಾರಣ ಅವನ ಪರಂಪರೆಗೆ ಈ ಹೆಸರು ಬಂದಿತು ಎಂದು ಹೇಳಿಕೊಳ್ಳುತ್ತಾ ಒಟ್ಟು ತಾವು ಈ ದಾನಸಾಲಿಯ ಪರಂಪರೆಯವರು ಎಂದು ಹೇಳಿಕೊಂಡು ಸ್ಮರಣೆಯಲ್ಲಿ ಉಳಿಸಿಕೊಂಡಿದ್ದಾರೆ.

ಇಷ್ಟೇ ಅಲ್ಲದೆ ಈಕೆ ನಿಡುಗಲ್ಲು ಮೂಲದಿಂದ ಬಂದವಳೆಂದೂ ಆಕೆಯ ಮಗನೇ ಈಗ ಶರಣನೆಂದು ಪ್ರಸಿದ್ಧಿಯಾಗಿರುವವ ನಾಯಕನ ಹಟ್ಟಿ ತಿಪ್ಪೇಸ್ವಾಮಿಯೆಂದೂ ಹೇಳುತ್ತಾರೆ. ಹೀಗೆ ಆಕೆ ಸಮುದಾಯದ ಸ್ಮರಣೆಯಲ್ಲಿ ಉಳಿದಿದ್ದಾಳೆ. ಆಕೆಯನ್ನು ತಮ್ಮ ತಾಯಿ ಎಂದು ಹೇಳಿಕೊಳ್ಳಲು ಎಲ್ಲರಿಗೂ ಹೆಮ್ಮೆ. ಪೂಜೆ. ಆಚರಣೆಗಳು ಮಾತ್ರ ಇಲ್ಲ ಮತ್ತು ಸಾಮಾನ್ಯವಾಗಿ 'ಎನುಮಲವರು' ಬೆಡಗಿಗೆ ಸೇರಿದ ಈ ದಾನಸಾಲಿಯಮ್ಮನ ಮಕ್ಕಳಾದ ಐದೂ ಜನರ ಪರಂಪರೆಯಲ್ಲಿ ಈಗಲೂ ದಾನಸಾಲಿಯಮ್ಮ ಎಂದು ತಮ್ಮ ಹೆಣ್ಣುಮಕ್ಕಳಿಗೆ ನಾಮಕರಣ ಮಾಡುವ ಪದ್ಧತಿ ಇದೆ.

ಆಕೆ ಅರಾಧನೆ, ಆಚರಣೆಯ ಸ್ವರೂಪದಲ್ಲಿ ಉಳಿಯದಿರಲು ಆಕೆ ತನ್ನ ಮಕ್ಕಳನ್ನು ಪೋಷಿಸಲಿಲ್ಲ ಎಂಬ ಕಾರಣವಿರಬಹುದೇ ಎಂಬೆನ್ನಿಸಿದರೂ ಇದಕ್ಕೆ ಆಕೆ ಕಾರಣಳಲ್ಲ. ಅವಳ ಸಂದರ್ಭ ಹಾಗಿತ್ತಷ್ಟೆ. ಅಸಹಾಯಕತೆಯ ಕಡೆ ತಳ್ಳಿತು. ಆದರೆ ಈ ಮಕ್ಕಳನ್ನು ಪೋಷಿಸುತ್ತಿದ್ದ ಆಕೆಯ ಹಿರಿಯ ಮಗಳಾದ ರಾಯಮ್ಮನಿಗೆ ಅವಶ್ಯಕವೆನಿಸಿದ ಸಂದರ್ಭಗಳೆಲ್ಲೆಲ್ಲಾ ಈಕೆಯ ತಮ್ಮನಾದ ಕರಿಬೊಮ್ಮಂತರಾಜು ಬಂದು ಸಹಾಯ ಮಾಡುತ್ತಾನೆ. ಅಕ್ಕನಾದ ದಾನಸಾಲಿಯ ಮೇಲಿನ ಅಕ್ಕರೆಯೇ ಆಕೆಯ ಮಕ್ಕಳಿಗೆ ಅವನು ಆಸರೆಯಾಗುವಂತೆ ಮಾಡುತ್ತದೆ. ಅಂದರೆ ಇಲ್ಲಿ ಪರೋಕ್ಷವಾಗಿ ದಾನಸಾಲಿಯ ಪಾತ್ರವಿದೆ. ಮುಂದೆ ಮಕ್ಕಳು ದೊಡ್ಡವರಾಗಿ ಸುಕ್ಕಲು ಮಲ್ಲಿನಾಯಕನನ್ನು ಮಣಿಸಿ ಆತ ತಂದೆಯೆಂದು ಒಪ್ಪಿಸಿಕೊಳ್ಳುವ ಹಾಗೆ ಮಾಡಿ ಆತನಿಂದ ಪಶು ಸಂಪತ್ತನ್ನೂ, ಆಯುಧಗಳನ್ನೂ ಪಡೆದು ಬರುತ್ತಾರೆ. ಅಂದರೆ ಇವರು ಪಡೆದ ಸಂಪತ್ತು ಇವರ ತಾಯಿಯಾದ ದಾನಸಾಲಿಗೆ ಸೇರಿದುದಾಗಿತ್ತು. ಈ ಸಂಪತ್ತಿನ ಮೂಲಕವೇ ಮುಂದೆ ತಮ್ಮದೇ ಆದ ಸಂಸ್ಕೃತಿಯನ್ನು ಕಟ್ಟಿ ಬೆಳೆಸಲು ಅವರಿಗೆ ಸಾಧ್ಯವಾಯಿತು. ಹೀಗೆ ನೇರವಾಗಿ ಅಲ್ಲದಿದ್ದರೂ ಅವಳೇ ಕಾರಣವಾಗಿ ಆ ಸಮುದಾಯ ತನ್ನದೇ ಆದ ರೀತಿಯಲ್ಲಿ ಶ್ರೀಮಂತ ಸಂಸ್ಕೃತಿಯೆನಿಸಿತು. ಈ ಎಲ್ಲಾ ಹಿನ್ನೆಲೆಯನ್ನು ಬಳಸಿಕೊಂಡು ದಾನಸಾಲಿಯಮ್ಮನನ್ನು ಈ ಸಮುದಾಯ ತಮ್ಮ ಸಮುದಾಯದ ನಾಯಕಿ ಎಂದೇ ಕರೆಯುವ ಸೌಜನ್ಯವನ್ನು ತೋರಿಸಬೇಕಾಗಿದೆ.

**ಉ) ಗೌರಸಮುದ್ರದ ಮಾರಮ್ಮ ಪುರಾಣ :**

**೧) ಉಪ್ಪಾರರ ಪುರಾಣ:**

ಇಂದು ಮಲಸಮುದ್ರ ಎಂದು ಕರೆಯಲಾಗುತ್ತಿರುವ ಪ್ರದೇಶ ಹಿಂದೆ ದಟ್ಟವಾದ ಕಾಡುಗಳಿಂದಲೂ, ಕ್ರೂರಮೃಗಗಳಿಂದಲೂ ಕೂಡಿದ್ದು ಇದಕ್ಕೆ ಹೊಂದಿಕೊಂಡಂತೆ ಉಪ್ಪಿನ ಗದ್ದೆಗಳನ್ನು ಕಟ್ಟಿಕೊಂಡು ಕೆಲವು ಮಂದಿ ಉಪ್ಪಾರರು ಉಪ್ಪನ್ನು ತಯಾರಿಸುತ್ತಿದ್ದರು. ಅವರಲ್ಲಿ ಗಿರಿತಿಮ್ಮಪ್ಪ ಎಂಬ ವ್ಯಕ್ತಿ ಇದೇ ವೃತ್ತಿಯನ್ನು

ಮಾಡಿಕೊಂಡು ಈ ಮೂಲಕವೇ ಜೀವನ ಸಾಗಿಸುತ್ತಿದ್ದನು. ಈ ಉಪ್ಪಿನ ಮಾಳಿಗಳು ತಾನು ನೆಲೆಸಲು ಸರಿಯಾದ ಸ್ಥಳವೆಂದು ಮಾರಮ್ಮ ಯೋಚಿಸಿದಳು, ನೆಲೆಸಿದಳು. ಈ ಕಾರಣದಿಂದಾಗಿ ಉಪ್ಪಿನ ಗದ್ದೆಗಳಲ್ಲಿ ಗೆದ್ದಲು ಕಾಣಿಸಿಕೊಂಡಿತು. ಅದರಲ್ಲಿ ರಂಧ್ರಗಳೂ ಕಾಣಿಸಿಕೊಂಡವು. ಇದನ್ನು ನೋಡಿದ ಗಿರಿತಿಮ್ಮಪ್ಪನು ಮತ್ತು ಆತನ ತಮ್ಮಂದಿರು ಅದಕ್ಕೆ ಗಾರೆ ಹಾಕಿ ಉಪ್ಪಿನ ನೀರನ್ನು ಹೊಯ್ದು ಮನೆಗೆ ಹಿಂದಿರುಗುತ್ತಾರೆ. ಮರುದಿನ ಬಂದು ನೋಡಿದಾಗ ಹಿಂದಿನ ದಿನಕ್ಕಿಂತಲೂ ದೊಡ್ಡ ರಂಧ್ರ ಬಿದ್ದಿತು. ಹಿರಿಯವನಾದ ಗಿರಿತಿಮ್ಮಪ್ಪ ತಮ್ಮಂದಿರಿಗೆ ನೀವು ಸರಿಯಾಗಿ ಗಾರೆ ಹಾಕಿಲ್ಲ. ಗೆದ್ದಲನ್ನು ಪೂರ್ತಿ ಅಗೆದು ಗಾರೆ ಹಾಕಿ ಉಪ್ಪಿನ ರಸ ಹಾಕಿ ಎಂದು ಹೇಳಲು ಹಾಗೆಯೇ ಮಾಡುತ್ತಾರೆ. ಮರುದಿನ ಬಂದು ನೋಡಿದರೆ ಜಾಗದಲ್ಲಿ ದೊಡ್ಡ ಹುತ್ತವೇ ಬೆಳೆದಿತ್ತು. ಆಶ್ಚರ್ಯಪಟ್ಟ ಅವರು ಅಣ್ಣನ ಬಳಿ ಹೋಗಿ ತಿಳಿಸಲು ನೀವು ಸರಿಯಾಗಿ ಗಾರೆ ಹಾಕಿಲ್ಲ. ನಾನೇ ಹೋಗಿ ಅಗೆದು ಚೆನ್ನಾಗಿ ಗಾರೆ ಹಾಕಿ ಬರುತ್ತೇನೆ ಎಂದು ಹೇಳಿ ತಾನೇ ಸ್ವತಃ ಚೆನ್ನಾಗಿ ಅಗೆದು ಗೆದ್ದಲು ಮಣ್ಣನ್ನು ಪೂರ್ತಿ ತೆಗೆದು ಆಳವಾದ ಗುಣಿಗೆ ಕಲ್ಲುಗಳನ್ನು ತುಂಬಿ ನೆಲಸಮಕ್ಕೆ ಬಂದಾಗ ಗಾರೆ ಹಾಕಿ ಭರ್ತಿ ಮಾಡಿ ಒಣಗಿದ ನಂತರ ಉಪ್ಪುನೀರನ್ನು ಹಾರಿ ಮನೆಗೆ ಬರುತ್ತಾನೆ. ಮರುದಿನ ಬಂದು ನೋಡಲು ಹಿಂದಿನ ದಿನಕ್ಕಿಂತಲೂ ದೊಡ್ಡ ಹುತ್ತ ಬೆಳೆದಿತ್ತು. ಇದೇನೋ ಸೋಜಿಗ. ಶಾಸ್ತ್ರವನ್ನಾದರೂ ಕೇಳಿಸೋಣ ಎಂದು ಐವೋದಿಸಿದ್ದಿಹಳ್ಳಿಗೆ ಬಂದು ಅಲ್ಲಿಯ ಐವೋದಿ ಮಠಕ್ಕೆ ಬಂದು ಹತ್ತಿಮರದ ತಿಮ್ಮಪ್ಪ ಎಂಬ ಅಲ್ಲಿದ್ದ ಜೋತಿಷಿಯನ್ನು ಈ ಕುರಿತು ಕೇಳುತ್ತಾರೆ. ಆಗ ಆತ "ಅಲ್ಲಿ ಒಬ್ಬ ಹೆಣ್ಣುದೇವತೆ ಅಂದರೆ ಮಾರಮ್ಮ ನೆಲೆಸಿದ್ದಾಳೆ. ನೀವು ಪ್ರತಿನಿತ್ಯ ಆ ಹುತ್ತಕ್ಕೆ ಪೂಜೆ ಮಾಡಿ ಹೀಗೆ ಭಕ್ತಿಯಿಂದ ಪೂಜಿಸಿದರೆ ನಿಮಗೆ ಈಗಾಗಲೇ ಒಲಿದಿರುವ ಅವಳು ನಿಮ್ಮನ್ನು ಅನುಗ್ರಹಿಸುತ್ತಾಳೆ" ಎಂದು ಹೇಳುತ್ತಾನೆ. ಅಲ್ಲಿಂದ ಗಿರಿತಿಮ್ಮಪ್ಪ ಮನೆಗೆ ಹಿಂದಿರುಗುವಾಗ ದಾರಿಯಲ್ಲಿ ಮಾರಮ್ಮ ಹಣ್ಣು ಹಣ್ಣು ಮುದುಕಿಯಾಗಿ ದನಕಾಯುವವಳಂತೆ ಕಾಣಿಸಿಕೊಂಡು ಗಿರಿಯಪ್ಪನನ್ನು ಎಲ್ಲಿಗೆ ಹೋಗಿದ್ದೆ ಎಂದು ಕೇಳುತ್ತಾಳೆ. ಆಗ ಆತ ಅಜ್ಜಿ, ನಮ್ಮ ಉಪ್ಪಿನ ಮಾಳೆಯ ಗದ್ದೆಗಳಲ್ಲಿ ಹುತ್ತ ಬೆಳೆಯುತ್ತಿತ್ತು. ಎಷ್ಟು ಅಗೆದು ಗಾರೆ ಹಾಕಿದರೂ ಮತ್ತೆ ಮತ್ತೆ ಗೆದ್ದಲು ಕಾಣಿಸಿಕೊಂಡು ಕೊನೆಗೆ ದೊಡ್ಡ ಹುತ್ತವೇ ಆಯಿತು. ಅದಕ್ಕಾಗಿ ಶಾಸ್ತ್ರ ಕೇಳಲು ಹೋಗಿದ್ದೆ. ಜ್ಯೋತಿಷಿ ಹೀಗೆ ಎಂದೆಲ್ಲಾ ಹೇಳಿದ್ದಾರೆ ಎಂದು ನಡೆದ ಸಂಗತಿಯನ್ನು ತಿಳಿಸುತ್ತಾನೆ. ಆಗ ಆ ಮುದುಕಿ ರೂಪದ ಮಾರಮ್ಮನು ಹಾಗೆಯೇ ಮಾಡಿ ನಿಮಗೆ ಒಳ್ಳೆಯದಾಗುತ್ತದೆ ಎಂದು ಹೇಳಿ ಅದೃಶ್ಯಳಾಗುತ್ತಾಳೆ. ಪ್ರತಿ ದಿನ ನೇಮ, ನಿಷ್ಠೆಯಿಂದ ತಮಗೆ ಪೂಜೆ ಮಾಡಲು ಸಾಧ್ಯವಾಗದು ಎಂದು ಆಲೋಚಿಸಿದ ತಿಮ್ಮಪ್ಪ ತನ್ನ ತಂಗಿಯಾದ ಕೆಂಚಮ್ಮನನ್ನು ಈ ಕೆಲಸಕ್ಕೆ ನೇಮಿಸುತ್ತಾನೆ. ಆಕೆ ಪ್ರತಿದಿನ ಭಯಭಕ್ತಿಯಿಂದ ಪೂಜೆ ಮಾಡಿ ಬರುತ್ತಿದ್ದಳು. ಒಮ್ಮೊಮ್ಮೆ ಆಕೆಯ ಭಕ್ತಿಗೆ ಮೆಚ್ಚಿದ ಮಾರಮ್ಮ ತನ್ನ ನಿಜರೂಪ ತೋರಿಸುತ್ತಿದ್ದಳು. ಕ್ರಮೇಣ ಈ ಮಾರಮ್ಮ ಕೆಂಚಮ್ಮನ ಮೈಮೇಲೆ ಅವಾಹನೆಯಾಗುತ್ತಿದ್ದಳು. ಆಗ ತಮ್ಮ ಜನ ಸಮಸ್ಯೆ ಹೇಳಿಕೊಂಡರೆ ಬೇವಿನ ಸೊಪ್ಪು, ಭಂಡಾರ ಕೊಟ್ಟು ಅನುಗ್ರಹಿಸುತ್ತಿದ್ದಳು. ಇದರಿಂದಲೇ ಜನರ ಸಮಸ್ಯೆ ಪರಿಹಾರವಾಗುತ್ತಿದ್ದವು. ಕೆಂಚಮ್ಮ ಪ್ರಾಪ್ತವಯಸ್ಸಿಗೆ ಬರಲು ಆಕೆಯನ್ನು ಐವೋದಿಸಿದ್ಧಿಹಳ್ಳಿಯ ನಿಂಗಪ್ಪನಿಗೆ ಕೊಟ್ಟು ಲಗ್ನ ಮಾಡಿದರು. ಇನ್ನು ತನಗೆ ಹುತ್ತದ ಪೂಜೆ ಮಾಡಲು ಸಾಧ್ಯವಾಗುವುದಿಲ್ಲ ಎಂದು ಚಿಂತೆ ಮಾಡುತ್ತಾ ಕೆಂಚಮ್ಮ ಮಲಗಿರುವಾಗ

ಸ್ವಪ್ನದಲ್ಲಿ ಮಾರಮ್ಮ ಕಾಣಿಸಿಕೊಂಡು ನೀನು ದುಃಖ ಮಾಡಬೇಡ, ವಿವಾಹವಾಗಿ ನೀನು ಗಂಡನ ಮನೆಗೆ ಹೋಗುವಾಗ ಒಂದು ಪೆಟ್ಟಿಗೆಯಲ್ಲಿ ಹುತ್ತದ ಮಣ್ಣನ್ನೂ, ಸಾಲಿಗ್ರಾಮವನ್ನು ಒಂದು ಪುಟ್ಟ ಸಸಿಕೆಯನ್ನು ತೆಗೆದುಕೊಂಡು ಹೋಗಿ ನಿನ್ನ ಹತ್ತಿರ ಇಟ್ಟುಕೊಂಡು ಪೂಜೆ ಮುಂದುವರಿಸು ಎಂದು ಹೇಳಿದಂತಾಗುತ್ತದೆ. ಮರುದಿನ ಹುತ್ತದ ಪೂಜೆಗೆ ಹೋದಾಗ ಅಲ್ಲಿ ಒಂದು ಸಾಲಿಗ್ರಾಮ ಇರುತ್ತದೆ. ಮಾರಮ್ಮ ಹೇಳಿದಂತೆ ಇದನ್ನು ಸ್ವಲ್ಪ ಹುತ್ತದ ಮಣ್ಣನ್ನು, ಸನಿಕೆಯನ್ನು ತೆಗೆದುಕೊಂಡು ಒಂದು ಪೆಟ್ಟಿಗೆಯಲ್ಲಿಟ್ಟು ವಿವಾಹಾನಂತರ ಐವೋದಿ ಸಿದ್ದಿಹಳ್ಳಿಗೆ ಈಕೆ ತರುತ್ತಾಳೆ. ತನ್ನ ಮನೆಯ ಪಕ್ಕದಲ್ಲಿಯೇ ಒಂದು ಗುಡಿಸಿಲಿನಲ್ಲಿಟ್ಟು ಇದನ್ನು ಪೂಜಿಸಲು ಪ್ರಾರಂಭಿಸುತ್ತಾಳೆ. ಒಮ್ಮೊಮ್ಮೆ ಮಾರಮ್ಮ ಪ್ರತ್ಯಕ್ಷವಾಗಿ ಕೆಂಚಮ್ಮನೊಂದಿಗೆ ಮಾತನಾಡುತ್ತಿದ್ದಳು. ಒಬ್ಬರಿಗೊಬ್ಬರು ತಲೆಯಲ್ಲಿ ಹೇನು ನೋಡಿಕೊಳ್ಳುತ್ತಿದ್ದರು. ಆದರೆ ಬೇರೆಯಾರಾದರೂ ಬಂದ ಕೂಡಲೇ ಅದೃಶ್ಯಳಾಗುತ್ತಿದ್ದಳು.



*ಅವಸ್ಥಾಂತರಗೊಂಡ ಗೌರಸಮುದ್ರದ ಮಾರಮ್ಮ – ಬೆಳ್ಳಿಯ ಮುಖವನ್ನು ಹೊಂದಿರುವ ದೇವತೆ.*

ಕೆಂಚಮ್ಮ ಪ್ರತಿದಿನ ಮನೆ ಕೆಲಸ ಮುಗಿಸಿ ಹುಲ್ಲು ತರಲು ಹೋಗುತ್ತಿದ್ದಳು. ಇವಳು ಬರುವ ವೇಳೆಗಾಗಲೇ ಮಾರಮ್ಮ ಹುಲ್ಲನ್ನು ಕಿತ್ತು ಹೊರೆಗಟ್ಟಿ ಇಟ್ಟಿರುತ್ತಿದ್ದಳು. ಕೆಂಚಮ್ಮ ಬಂದ ನಂತರ ಪ್ರೀತಿಯಿಂದ ಮಾತನಾಡಿಸಿ ಹುಲ್ಲಿನ ಹೊರೆ ಹೊರಿಸಿ ಕಳುಹಿಸುತ್ತಿದ್ದಳು. ಹೀಗೆ ಸುಮಾರು ದಿನ ನಡೆಯಿತು. ಹೀಗೆ ಹೋಗಿ ಹಾಗೆಯೇ ಇಷ್ಟು ದೊಡ್ಡ ಹುಲ್ಲಿನ ಹೊರೆ ತರುವಳಲ್ಲ ಏನಿರಬಹುದು ಎಂದು ಅನುಮಾನಿಸಿ ಆಕೆಯ ಗಂಡ ಒಂದು ದಿನ ಆಕೆಗೆ ತಿಳಿಯದಂತೆ ಹಿಂಬಾಲಿಸಿಕೊಂಡು ಹೋಗಿ ಮರದ ಮರೆಯಲ್ಲಿ ನಿಲ್ಲುತ್ತಾನೆ. ಕೆಂಚಮ್ಮ ಬರುವ ವೇಳೆಗೆ ಅಲ್ಲಾಗಲೇ ಹುಲ್ಲಿನ ಹೊರೆ ಸಿದ್ಧವಾಗಿತ್ತು. ಹೊರೆಯನ್ನು ಹೊರಿಸಿದ ಮಾರಮ್ಮ ನಿನ್ನನ್ನು ನಿನ್ನ ಗಂಡನು ಹಿಂಬಾಲಿಸಿ ಬಂದಿದ್ದಾನೆ. ಜಾಗ್ರತೆಯಾಗಿ ಹೊರಡು ಎಂದು ಹೇಳಿ ತಾನು ಒಂದು ಮರ ಹತ್ತಿ ಕುಳಿತುಕೊಳ್ಳುತ್ತಾಳೆ. ಕೆಂಚಮ್ಮನ ಗಂಡ ತನ್ನ ಈ ಹೆಂಡತಿಯ ಬಳಿ ಬಂದು ನಿನ್ನ ಹತ್ತಿರ ಈಗ ಮಾತನಾಡಿದವರು ಯಾರು ಎಂದು ಕೇಳುತ್ತಾನೆ. ಕೆಂಚಮ್ಮ ಮರದ ಕಡೆ ತೋರಿಸುತ್ತಾಳೆ. ನೋಡಿದರೆ ಮೈಯೆಲ್ಲಾ ಕಣ್ಣುಗಳಿದ್ದ ಮುದುಕಿ. ಭಯಪಟ್ಟು ಯಾರೋ ಹೆಣ್ಣುದೇವತೆ ಇರಬಹುದು ಎಂದು ನಮಸ್ಕರಿಸುತ್ತಾನೆ. ಅಂದಿನಿಂದ ಕೆಂಚಮ್ಮನ ಮೇಲೆ

ಅನುಮಾನಿಸುವುದನ್ನು ಬಿಡುತ್ತಾನೆ. ಕೆಂಚಮ್ಮ ಭಕ್ತಿಯಿಂದ ಪೂಜೆ ಮುಂದುವರಿಸಲು ಅನೇಕರು ಬಂದು ತಮ್ಮ ಕಷ್ಟಸುಖ ಹೇಳಿಕೊಂಡು ಈಕೆ ಕೊಟ್ಟ ಬೇವು ಭಂಡಾರ ಬಳಸಿ ತಮ್ಮ ಸಮಸ್ಯೆ ನಿವಾರಿಸಿಕೊಳ್ಳುತ್ತಿದ್ದರು. ಈ ಕೆಂಚಮ್ಮನಿಗೆ ಮಕ್ಕಳಿರುವುದಿಲ್ಲ. ಆಕೆ ಮತ್ತು ಆಕೆಯ ಗಂಡ ಯೋಚಿಸಿ ದೊಡ್ಡರುದ್ರಪ್ಪ ಎಂಬಾತನನ್ನು ದತ್ತು ತೆಗೆದುಕೊಳ್ಳುತ್ತಾರೆ. ಆತನ ಮಗನೇ ಶಿರಗಪ್ಪ. ಈಗ ಈ ಸಂತತಿಯವರೇ ಈ ಮಾರಮ್ಮನನ್ನು ಪೂಜಿಸುವ ಹಕ್ಕುಗಾರಿಕೆಯನ್ನು ಪಡೆದಿರುತ್ತಾರೆ.

**೨) ಊರುಗೊಲ್ಲರಲ್ಲಿ ಪ್ರಚಲಿತವಾಗಿರುವ ಪುರಾಣ :**

ಗೌರಸಮುದ್ರಕ್ಕೆ ಸ್ವಲ್ಪ ಹತ್ತಿರದ ಹಳ್ಳಿಯಲ್ಲಿ ಊರಗೊಲ್ಲರ ಸಮುದಾಯಕ್ಕೆ ಸೇರಿದ ತಿಮ್ಮಪ್ಪ ಎಂಬ ವ್ಯಕ್ತಿ ವ್ಯವಸಾಯವನ್ನು ವೃತ್ತಿಯನ್ನಾಗಿ ಮಾಡಿಕೊಂಡು ಜೀವನ ಮಾಡುತ್ತಿದ್ದ. ಜೊತೆಗೆ ಕುರಿಸಾಕಾಣಿಕೆಯನ್ನು ಆ ಕುಟುಂಬ ಮಾಡುತ್ತಿತ್ತು. ಕುರಿಮಂದೆ ಹೊಲದಲ್ಲಿತ್ತು. ತಿಮ್ಮಪ್ಪನ ತಂಗಿಯಾದ ನಾಗಮ್ಮ ಪ್ರತಿದಿನ ಕುರಿಮಂದಿಯ ಬಳಿಗೆ ಹೋಗಿ ಹಾಲನ್ನು ತರುತ್ತಿದ್ದಳು. ಬರುವಾಗ ದಾರಿಯಲ್ಲಿದ್ದ ಹುತ್ತವೊಂದಕ್ಕೆ ಹಾಲನ್ನು ಹಾಕಿಬರುತ್ತಿದ್ದಳು. ಇದನ್ನು ಗಮನಿಸಿದ ಕೆಲವರು ಆಕೆಯ ಮನೆಗೆ ಹೋಗಿ ನಿಮ್ಮ ಹುಡುಗಿ ಹೀಗೆ ಪ್ರತಿದಿನ ಹುತ್ತಕ್ಕೆ ಹಾಲನ್ನು ಸುರಿದು ಬರುತ್ತಾಳೆ ಎಂದು ಹೇಳುತ್ತಾರೆ. ಆದರೆ ನಾಗಮ್ಮ ಮನೆಗೆ ಎಂದೂ ಹಾಲು ತರುವುದನ್ನು ತಪ್ಪಿಸಿರುವುದಿಲ್ಲ. ಆಶ್ಚರ್ಯಗೊಂಡ ಆಕೆಯ ಅಣ್ಣ ತಿಮ್ಮಪ್ಪ ಆದಿನ ಆಕೆಯು ಬರುವ ದಾರಿಯಲ್ಲಿ ಆಕೆಗೆ ಗೊತ್ತಾಗದಂತೆ ಕುಳಿತುಕೊಳ್ಳುತ್ತಾನೆ. ಎಂದಿನಂತೆ ಮುಂದೆಯಿಂದ ಹಿಂದಿರುಗುತ್ತಾ ನಾಗಮ್ಮ ಹುತ್ತಕ್ಕೆ ಹಾಲನ್ನು ಸುರಿದು ನಮಸ್ಕರಿಸಿ ಮನೆಯ ಕಡೆ ಹೊರಡುತ್ತಾಳೆ. ಮನೆಗೆ ಬರುವ ವೇಳೆಗೆ ಮತ್ತೆ ಕೈಯಲ್ಲಿ ಹಾಲು ತುಂಬಿದ ಬಿಂದಿಗೆ. ಇದೇನು ಸೋಜಿಗ ಎಂದು ಆತ ವಿಚಾರ ಮಾಡುತ್ತಿರಲು ನಾಗಮ್ಮ ಮಾರಮ್ಮನಾಗಿ ತಿಮ್ಮಪ್ಪನಿಗೆ ಶರೀರವೆಲ್ಲ ಕಣ್ಣುಳ್ಳುವಳಾಗಿ ಕಾಣಿಸಿಕೊಳ್ಳುತ್ತಾಳೆ. ಇದನ್ನು ಕಂಡು ತಿಮ್ಮಪ್ಪ ಆಶ್ಚರ್ಯ ಮತ್ತು ಭಕ್ತಿಭಾವದಿಂದ ಆಕೆಗೆ ನಮಸ್ಕರಿಸಿ ಪರೀಕ್ಷೆ ಮಾಡಿದ್ದಕ್ಕೆ ಕ್ಷಮೆಯಾಚಿಸುತ್ತಾನೆ. ಮಾರಮ್ಮನ ರೂಪಿನ ನಾಗಮ್ಮ ನನ್ನನ್ನು ನೀನು ಹೀಗೆ ಪರೀಕ್ಷೆ ಮಾಡಿದ ಮೇಲೆ ನಾನು ಮನೆಯಲ್ಲಿರುವುದಿಲ್ಲ. ನಾನು ಹೋಗುತ್ತೇನೆ ಎಂದು ಹೇಳಿ ಈಗಿನ ಗೌರಸಮುದ್ರದ ಬಳಿ ಇರುವ 'ತುಮ್ಮಲು'ವಿನಲ್ಲಿರುವ ಹುತ್ತದ ಬಳಿ ಬಂದು ಅಲ್ಲಿಯೇ ಐಕ್ಯಳಾಗುತ್ತಾಳೆ.

**೩) ಕಾಡುಗೊಲ್ಲರ ಪುರಾಣ :**

ಜುಂಜಪ್ಪನನ್ನು ಕುರಿತು ಹಾಡುವ ಕಾವ್ಯ ಕಾಡುಗೊಲ್ಲರ ಕಾವ್ಯ, ಸಂಶೋಧಕರಾದ ಡಾ. ತೀ.ನಂ. ಶಂಕರನಾರಾಯಣರವರು, ಡಾ. ಮೀರಸಾಬಿಹಳ್ಳಿ ಶಿವಣ್ಣನವರು ಇದನ್ನು ಸಂಪಾದಿಸಿ ಈ ಮೂಲಕ ಕಾಡುಗೊಲ್ಲರ ಬಗ್ಗೆ ವಿವರವಾದ ಅಧ್ಯಯನವನ್ನು ಮಾಡಿರುತ್ತಾರೆ. ಇವರೆಲ್ಲರ ಅಭಿಪ್ರಾಯದಂತೆ ಜುಂಜಪ್ಪನಿಗೆ ಗೌರಸಂದ್ರದ ಮಾರಿ ಸಹಾಯ ಮಾಡಿದಳು. ಮಲೆಗೊಂಡ ಮತ್ತು ಕಂಬೇರ ಚಿನ್ನಮ್ಮನಿಗೆ ಶಿವನ ಮಗನಾದ ವೀರಭದ್ರನೇ ಜುಂಜಪ್ಪ ಎಂಬ ಹೆಸರಿನಲ್ಲಿ ಮಗನಾಗಿ ಜನಿಸುವಂತೆ ಮಾಡುತ್ತಾಳೆ. ನಂತರ ಜುಂಜಪ್ಪನಿಗೆ ಸೋದರ ಮಾವಂದಿರು ಪದೇ ಪದೇ ಕಿರುಕುಳ ಕೊಟ್ಟ ಮಾಟ, ಮಂತ್ರಗಳ

ಮೂಲಕ ಆತನನ್ನು ಕೊನೆಗಾಣಿಸಲು ಪ್ರಯತ್ನಿಸುತ್ತಿದ್ದರು. ಆಗಲೂ ಗೌರಸಂದ್ರದ ಮಾರಮ್ಮನ ಸಹಾಯದಿಂದಲೇ ಜುಂಜಪ್ಪ ಈ ಎಲ್ಲಾ ಕಷ್ಟಗಳನ್ನು ಪರಿಹರಿಸಿಕೊಂಡು ಏಳಿಗೆಯನ್ನು ಪಡೆಯುತ್ತಾನೆ.

**೪) ಮ್ಯಾಸಬೇಡರ ಪುರಾಣ :**

ನೆರೆಯ ಆಂಧ್ರದಿಂದ ಕೆಲವು ತಂಡಗಳಾಗಿ ಮ್ಯಾಸಬೇಡರು ಮಧ್ಯ ಕರ್ನಾಟಕದ ಕಡೆ ಬಂದರು ಎಂಬುದು ನಮಗೆ ಈಗಾಗಲೇ ಸ್ಪಷ್ಟವಾಗಿರುವ ಸಂಗತಿ. ಹೀಗೆ ಬಂದ ಒಂದು ತಂಡ ಕ್ರಮೇಣ ಹುಲ್ಲು ನೀರನ್ನು ಅರಸುತ್ತಾ ತಮ್ಮ ಪಶುಸಂಪತ್ತಿನೊಂದಿಗೆ ಮಾಪಲ್ಲಿ, ರೇಪಲ್ಲಿ, ಎನ್ನಮುದ್ದಲಪಲ್ಲಿ ಪ್ರಾಂತ್ಯದಲ್ಲಿ ಅಲೆದು ನಂತರ ನಿಡುಗಲ್ಲು ಬೆಟ್ಟದ ಕಡೆ ಹೋಗಿ ಸುಮಾರು ಕಾಲ ಅಲ್ಲಿ ನೆಲೆಸಿತು.

"ಆರು ಸಾವಿರ ಕೈಲಿ ದೇವರ ಬಿದಿರು ಕೋಲು , ಕಾಸೆದಟ್ಟೆಯವರ ನಡುವೀಗೆ, ಕಾಸೆದಟ್ಟೀಯವರ ನಡುವೀಗೆ ಮಲ್ಲಯ್ಯ, ಆವೆಲ್ಲ ನೀರು ಸಲ್ಲಿಸ್ಯಾವೆ ॥"(ಆಕಳು)

"ನೀರಡಿಸಿ ನಿಲ್ಲುತ್ತ ನಿಡುಗಲ್ಲಿಗೇರ್ಯಾವೆ, ಯಾರೇ ಕೂಗಿದರೂ ತಿರಗಾವು, ಯಾರೇನೆ ಕೂಗಿದರು ತಿರುಗಾವು ಮಲ್ಲಯ್ಯ, ತೋರೀಸೋ ನಿಮ್ಮ ದನಿಗಾಳಾ"

ಹೀಗೆ ನಿಡುಗಲ್ಲು ಪ್ರಾಂತ್ಯಕ್ಕೆ ಮ್ಯಾಸಬೇಡರ ತಂಡವೊಂದು ಹೋಗಿ ನೆಲೆಸಿದ್ದುಂಟು. ಈ ತಂಡದಲ್ಲಿದ್ದ ಒಬ್ಬ ಅಸಾಮಾನ್ಯ ಮಹಿಳೆಯೇ ಈಗ ಗೌರಸಮುದ್ರದ ಮಾರಮ್ಮ ಎಂದು ಪ್ರಖ್ಯಾತಳಾಗಿರುವಳು.

ನರಪತಿರಾಜನ ಸೆರೆಯಲ್ಲಿದ್ದ ಮ್ಯಾಸಗಂಪಳನ್ನು ಬಿಡುಗಡೆ ಮಾಡಿ ತನ್ನ ಸಮುದಾಯವನ್ನು ರಕ್ಷಿಸಿದ ಕೊಳುಗುಳದ ಬೊಮ್ಮ ನಂತರ ತನ್ನ ಸಮುದಾಯಕ್ಕೆ ಕಿರಿಕಿರಿಯಾಗುವಂತೆ ಮಾಡುತ್ತಾನೆ. ಅವನ ಅಸಹಜವಾದ ಬೇಡಿಕೆಗಳನ್ನು ಪೂರೈಸಿ ರೋಸಿಹೋದ ಈ ಮ್ಯಾಸಬೇಡರು ಅವನಿಗೆ ತಿಳಿಯದಂತೆ ಯರಮಂಚಿನಾಯಕನ ನೇತೃತ್ವದಲ್ಲಿ ತಮ್ಮ ಪಶು ಸಂಪತ್ತು ಮತ್ತು ಪೆಟ್ಟಿಗೆ ದೇವರುಗಳೊಂದಿಗೆ ಇಂದಿನ ಮುತ್ತಿಗಾರಹಳ್ಳಿ ಕಮರದ ಕಾನಿನಿಂದ ವೇದವತಿ ನದಿ ಉಪನದಿಯ ಬಯಲಿಗೆ ಇಂದಿನ ನಾಯಕನಹಟ್ಟಿ ಪ್ರಾಂತ್ಯಕ್ಕೆ ಬರುತ್ತಾರೆ. ಎಲ್ಲರೂ ಸೇರಿ ಬೋರೆ ದೇವರಿಗೆ ಹರಕೆ ಮಾಡಿಕೊಳ್ಳುತ್ತಾರೆ. ತಮಗೆ ಕಾಟ ಕೊಡುತ್ತಿರುವ ಬೊಮ್ಮನ ಸಂಹಾರವಾದರೆ ನಿನಗೆ 'ವಾಸೆ'[೫೫] ಕೊಯ್ಯುತ್ತೇವೆ ಎಂದು ಇವರು ಬಯಸಿದಂತೆಯೇ ಕೊಳುಗುಳದ ಬೊಮ್ಮನ ಸಂಹಾರವಾಗುತ್ತದೆ. ಮ್ಯಾಸಮಂಡಲಕ್ಕೆ ಆವರಿಸಿದ್ದ ಕತ್ತಲು ನಿವಾರಣೆಯಾದಂತಾಗಿ ಬರುವ ಸೋಮವಾರ ಹರಕೆ ತೀರಿಸಬೇಕು. ದೊರೆಯಾದ ಯರ ಮಂಚಿನಾಯಕ ಇದನ್ನು ನೆರವೇರಿಸಬೇಕು ಎಂದು ತೀರ್ಮಾನಿಸುತ್ತಾರೆ. ಮರುವಾರ ನಿಗದಿತ ದಿನದಂದು ಎಲ್ಲರೂ ಈ ಹರಕೆ ತೀರಿಸಲು ದೇವಾಲಯದಲ್ಲಿ ಸೇರುತ್ತಾರೆ. ಸೂರ್ಯೋದಯದ ಒಳಗೇ ಹರಕೆ ತೀರಿಸಬೇಕು.

---

[೫೫] ವಾಸೆ ಸಂಸ್ಕೃತದಲ್ಲಿ 'ವಾಸ್' ಎಂದರೆ ಕೊಲ್ಲು, ಕತ್ತರಿಸು ಎಂದರ್ಥವಿದೆ. ಮ್ಯಾಸರಲ್ಲಿ ಅಂಬು ವಾಸು ಕೊಯ್ಯುವುದು ಎಂಬ ಪದ್ಧತಿ ಇದೆ. ಚೂಪಾದ ಆಯುಧವೇ ಅಂಬು. ಇದರಿಂದ ಕಲ್ಲಿನ ಮೇಲೆ ಕುರಿಯ ಕತ್ತನ್ನಿರಿಸಿ ಕೊಯ್ಯುತ್ತಾರೆ. ಇಂದಿಗೂ ಈ ಬಗೆಯ ಹರಕೆ ಸಲ್ಲಿಸುವ ಕ್ರಮ ಇದೆ.

ಆದರೆ ನಿಗದಿತ ವೇಳೆಗೆ ದೊರೆ ಬರಲಿಲ್ಲ. ಕಾದು ಕಾದು ಸಾಕಾದ ಮ್ಯಾಸರಿಗೆ ದೇವರ ಸೇವೆಯ ಸಂದರ್ಭದಲ್ಲಿ ದೊರೆಯ ವರ್ತನೆ ಉದ್ಧಟತನದ್ದೆನಿಸಿ ದೊರೆಗಿಂತ ದೇವರು ದೊಡ್ಡವನು ಎಂದು ನಲಮಂಚಿನಾಯಕನನ್ನು ದೊರೆಸ್ಥಾನದಲ್ಲಿ ನಿಲ್ಲಿಸಿ ವಾಸುಕೊಯ್ಯುತ್ತಾರೆ. ತಮ್ಮ ಹರಕೆ ತಿರಿಸುತ್ತಾರೆ. ಈ ನಲಮಂಚಿನಾಯಕ ಯರಮಂಚಿನಾಯಕನ ತಮ್ಮನೇ ಆಗಿರುತ್ತಾನೆ. ಇದೆಲ್ಲಾ ಮುಗಿದ ಮೇಲೆ ಯರಮಂಚಿನಾಯಕ ಬರುತ್ತಾನೆ. ದೊರೆಯಾಗಿದ್ದ ತನ್ನನ್ನು ತನ್ನ ಸಮುದಾಯ ನಿರ್ಲಕ್ಷಿಸಿತು ಎಂದು ಬೇಸರ ಪಟ್ಟುಕೊಳ್ಳುತ್ತಾನೆ. ನನಗೂ ದೇವರ ಮೇಲೆ ಭಕ್ತಿ ಇದೆ. ಕಾರಣಾಂತರಗಳಿಂದ ತಡವಾಯಿತು ನೀವು ಕುರಿಯನ್ನು ವಾಸು ಕೊಯ್ದಿರಬಹುದು. ನಾನು ನನ್ನ ಮಗನನ್ನೇ ಬಲಿಕೊಡುತ್ತೇನೆ ಎಂದು ಮಗನ ಬಲಿಯನ್ನೇ ಕೊಡುತ್ತಾನೆ. ದೇವರೇ ಈತನ ಸತ್ಯಕ್ಕೆ ಮೆಚ್ಚಿ ಮಗನನ್ನು ಬದುಕಿಸಿಕೊಡುತ್ತಾನೆ. ನಂತರ ಈತ ಮತ್ತು ಈತನನ್ನು ದೊರೆಯೆಂದು ತಿರಸ್ಕರಿಸಿದ ನಲಕುಲ ಎಂದು ಈಗ ಕರೆಯಲ್ಪಡುತ್ತಿರುವ ಅಲ್ಲಿಯ ಮ್ಯಾಸಮಂಡಲದ ಮಧ್ಯೆ ಘರ್ಷಣೆಯುಂಟಾಗುತ್ತದೆ. ಈತನ ಕಡೆ ಬಲವಿಲ್ಲದಂತಾಗುತ್ತದೆ. ಕೊನೆಗೆ ತಾನು ಬದುಕಿ ಉಳಿದರೆ ಸಾಕೆಂದು ಅಲ್ಲಿಂದ ಆತ ಓಡುತ್ತಾನೆ. ಮಾರ್ಗದಲ್ಲಿ ಒಂದು ಕಡೆ 'ಮಾದಿಗ ಸಮುದಾಯದವರು ಒಟ್ಟಾಗಿ ಕೂತು ಒಂದೇ ಎಲೆಯಲ್ಲಿ 'ಭೂಮದ ಊಟ'ವನ್ನು ಮಾಡುತ್ತಿರುತ್ತಾರೆ. ಈತ ಅವರ ಮಧ್ಯೆ ಹೋಗಿ ಕುಳಿತು ಎಲೆಯಲ್ಲಿ ತಾನೂ ಕೈಯಿಡುತ್ತಾನೆ. ಅಟ್ಟಿಸಿಕೊಂಡು ಬಂದ ನಲಕುಲದವರು ಮಾದಿಗರನ್ನು ಇಲ್ಲಿ ಯಾರಾದರೂ ಬಂದರೇ ಎಂದು ಕೇಳಲು ನಾವು ಕಾಣೆವು. ಇಲ್ಲಿರುವವರೆಲ್ಲಾ ನಾವೇ. ನಮ್ಮ ಮಕ್ಕಳು ಕೂಡಿ ಊಟ ಮಾಡುತ್ತಿದ್ದೇವೆ ಎಂದು ಹಿರಿಯ ಯಜಮಾನ ಹೇಳುತ್ತಾನೆ. ಹೀಗೆ ತಮ್ಮ ಮೊರೆ ಹೊಕ್ಕ ಯರಮಂಚಿನಾಯಕನನ್ನು ಇವರು ಸಂರಕ್ಷಿಸುತ್ತಾರೆ. ಆವೇಳೆಗೆ ಯರಮಂಚಿನಾಯಕನನ್ನು ನಲಕುಲದವರು ಗುರುತಿಸುತ್ತಾರಾದರೂ ಮಾದಿಗರ ಮಧ್ಯೆ ಬೆರೆತಿದ್ದಾನೆ. ಇನ್ನು ಈತ ಸಂಪೂರ್ಣ ನಮಗೆ ದೂರವಾದಂತೆಯೇ ಎಂದು ಅಲ್ಲಿಗೇ ಬಿಟ್ಟು ಹೋಗುತ್ತಾರೆ. ಈಗಲೂ ರೆಡ್ಡಿಹಳ್ಳಿ (ಚಿತ್ರದುರ್ಗಜಿಲ್ಲೆ) ಯಲ್ಲಿ ನಡೆಯುವ ಯರಮಂಚಿ ನಾಯಕನಿಗೆ ಸಂಬಂಧಿಸಿದ ಆರಾಧನೆಯಲ್ಲಿ ಇದನ್ನು ಒಂದು ಆಚರಣೆಯನ್ನಾಗಿ ಉಳಿಸಿಕೊಂಡು ಬಂದಿದ್ದಾರೆ. ತನ್ನನ್ನು ಅಂದು ರಕ್ಷಣೆ ಮಾಡಿದ 'ಮಾದಿಗ' ಸಮುದಾಯದ ಬಗ್ಗೆ ತನಗಿದ್ದ ಗೌರವ, ಅಭಿಮಾನ ಕಾರಣವಾಗಿ ಅವರಿಗೆ ಸ್ಥಾನಮಾನ ಕೊಟ್ಟಿದ್ದಾನೆ. ಈ ಹಬ್ಬದ ಆಚರಣೆಯ ದಿನ ಇಂದಿಗೂ ಸಂಬಂಧಿಸಿದ ಸಮುದಾಯದಿಂದ ಮೀಸಲು ಬರುತ್ತದೆ. (ಹಾಲು, ಮೊಸರು) ಅದನ್ನು ಜಾತಿಬೇಧವಿಲ್ಲದೆ ದೇವಾಲಯದೊಳಗೆ ಸ್ವೀಕರಿಸಲಾಗುತ್ತದೆ. ಅಷ್ಟೇ ಅಲ್ಲ ಪೂಜೆಯ ಪ್ರಸಾದವನ್ನು ಒಂದು ಎಲೆಯಲ್ಲಿ ಬಡಿಸಿರಲು ನಾಯಕನ ಪರಂಪರೆಯವರು ಮತ್ತು ಸಂಬಂಧಿಸಿದ 'ಮಾದಿಗ' ಸಮುದಾಯದ ವ್ಯಕ್ತಿ ಆ ಎಲೆಯಲ್ಲಿ ಕೈಯಿಟ್ಟು ಊಟಮಾಡುವ ನೇಮವಿದೆ ಇದರಿಂದ ಯರಮಂಚಿನಾಯಕ ಅಸ್ಪೃಶ್ಯತಾ ವಿರೋಧಿಮನಸ್ಸು, ಜಾತ್ಯಾತೀತತನ. ತನಗೆ ಸಹಾಯ ಮಾಡಿದವರನ್ನು ತನ್ನ ತಂದೆ ಸಹೋದರರು ಎಂದು ಭಾವಿಸಿದ ದೊಡ್ಡತನ ಸ್ಪಷ್ಟವಾಗುತ್ತದೆ.

ತನ್ನ ನಲಕುಲದಿಂದ ಪ್ರತ್ಯೇಕಗೊಂಡ ಯರಮಂಚಿನಾಯಕ ಮುಂದೆ ನಲಮಲೆ ಪ್ರಾಂತ್ಯಕ್ಕೆ ಹೋಗಿ ಕಾಲ ಕಳೆಯುತ್ತಾ ಇರುತ್ತಾನೆ. ಆ ವೇಳೆಗೆ ನಿಡುಗಲ್ಲು ಪ್ರಾಂತ್ಯದ ಕಡೆ ಚಲಿಸಿಹೋಗಿದ್ದ ಮ್ಯಾಸರ ಗುಂಪು ಇಂದಿನ ಗೌರಸಮುದ್ರ ಅಂದಿನ ಐವೋದಿಸಿದ್ದಿಹಳ್ಳಿ ಪ್ರಾಂತ್ಯಕ್ಕೆ ಬರುತ್ತದೆ. ಆ ತಂಡದಲ್ಲಿ ಇಂದು

'ಮಾರಮ್ಮ' ಎಂದು ಪೂಜಿಸಲ್ಪಡುತ್ತಿರುವ ಮಹಿಳೆ ಇರುತ್ತಾಳೆ. ಬುಟ್ಟುಗಲವರು ಅಂದರೆ ಕೊಳುಗುಳದ ಬೊಮ್ಮನ ಬೆಡಗಿಗೆ ಸೇರಿದವರೂ ಈ ಗುಂಪಿನಲ್ಲಿ ಇರುತ್ತಾರೆ. ಇವರಿಗೆಲ್ಲಾ ಮಾರಮ್ಮ ಹೆಣ್ಣುಮಗಳು.

ಯರಮಂಚಿನಾಯಕನ ಮಗಳು ಯರಮಂಚಿಪಾಲಮ್ಮ, ಈಕೆ ಅತ್ಯಂತ ಸಾಹಸೀ ಮತ್ತು ಬೇಟೆಗಾರಿಕೆಯಲ್ಲಿ ನಿಪುಣೆ. ಈಕೆಯನ್ನು ವಿವಾಹವಾಗುವ ಧೈರ್ಯವೇ ಅಂದು ಯಾರಿಗೂ ಇರಲಿಲ್ಲವಂತೆ. ಹಿಂದೆ ಯರಮಂಚಿನಾಯಕ ಮತ್ತು ಕೊಳುಗುಳದ ಬೊಮ್ಮನ ಬಾಂಧವ್ಯ ಉತ್ತಮವಾಗಿದ್ದ ಸಂದರ್ಭದಲ್ಲಿ ದೊರೆ ಈ ತನ್ನ ಮಗಳನ್ನು ಇವನಿಗೆ ವಿವಾಹ ಮಾಡಿಕೊಟ್ಟಿದ್ದನು. ಕಾಲಾಂತರದಲ್ಲಿ ಬೊಮ್ಮನ ಉಪಟಳ ಹೆಚ್ಚಾದಾಗ ತನ್ನ ಅಳಿಯನ ಉಳಿವಿಗಿಂತ, ಮಗಳ ಭವಿಷ್ಯಕ್ಕಿಂತ ಸಮುದಾಯದ ಏಳಿಗೆ ಮುಖ್ಯ ಎಂದು ಆತನನ್ನು ಅಂತ್ಯಗೊಳಿಸಿದ್ದ. ತನ್ನ ಮಗಳನ್ನು ಈ ಬೊಮ್ಮನಿಗೆ ಮದುವೆ ಮಾಡಿಕೊಟ್ಟಿದ್ದ ಕಾರಣದಿಂದಾಗಿ ಬೊಮ್ಮನ ಪರಂಪರೆಯವರೆಲ್ಲಾ ಈತನಿಗೆ ನೆಂಟರಾಗಬೇಕು. ಬೊಮ್ಮನ ಉಪಟಳದಿಂದ ರೋಸಿದ್ದ ಅವರಿಗೂ ಅವನನ್ನು ಕೊನೆಗಾಣಿಸಿದ ಯರಮಂಚಿನಾಯಕನ ಮೇಲೆ ಸ್ವಲ್ಪ ಕೋಪ ಇದ್ದೇ ಇತ್ತು. ಮಾರಮ್ಮ ಇವರಿಗೆ ಯರಮಂಚಿ ನಾಯಕನ ಸದುದ್ದೇಶ. ಹಿಂದೆ ವ್ಯಾಸಮಂಡಳ ರಕ್ಷಿಸಿದ್ದು, ಬೊಮ್ಮನನ್ನು ಕೊಂದ ಕಾರಣ ಎಲ್ಲವನ್ನೂ ಇವರೊಂದಿಗೆ ಚರ್ಚಿಸಿ ಜನಪರ ವ್ಯಕ್ತಿಯಾಗಿದ್ದ ಈತನನ್ನು ಈಗ ನೀವೇ ಕರೆತಂದು ರಕ್ಷಣೆ ಕೊಡಿ. ಆತ ಅನಾಥಸ್ಥಿತಿಯಲ್ಲಿದ್ದಾನೆ ಎಂದು ಹೇಳುತ್ತಾಳೆ. ಈಕೆಯ ಮಾರ್ಗದರ್ಶನದ ಮೇರೆಗೆ ಇವರೆಲ್ಲಾ ಹೋಗಿ ಈತನನ್ನು ಐವೋದಿಗೆ ಹತ್ತಿರದಲ್ಲಿರುವ ಮಲಸಮುದ್ರ ಪ್ರಶಸ್ತ ಸ್ಥಳಎಂದು ಮಾರಮ್ಮ ನಿರ್ದೇಶಿಸಲು ಅಲ್ಲಿಯೇ ಗೂಡುಗಳನ್ನಿಟ್ಟಿಕೊಂಡಿರುತ್ತಾರೆ. ಈ ವ್ಯಾಸರು ಇದನ್ನೇ ಈ ಸಮುದಾಯ ಮಾರಮ್ಮ ಗಟ್ಟಿ ಭೂಮಿ ಎಲ್ಲಿದೆ ಎಂದು ತುಳಿಯುತ್ತಾ ಬಂದಳು. ಮಲಸಮುದ್ರ, ತುಮ್ಮಲು ಪ್ರಾಂತ್ಯ ಗಟ್ಟಿಯಾಗಿದೆ ಎನಿಸಿ ಅಲ್ಲಿ ನೆಲೆಸಿದಳು ತನ್ನ ಕಂಪಳದೊಂದಿಗೆ ಎಂದು ಹೇಳುತ್ತಾರೆ. ಯರಮಂಚಿ ನಾಯಕನನ್ನು ತನ್ನ ಬಂಧುಗಳು ಅಲ್ಲಿಗೆ ಕರೆತಂದಾಗ ಆತನಿಗೆ ಧೈರ್ಯತುಂಬಿ ನೀನು ನಿನ್ನದೇ ಆದ ವ್ಯಾಸಗಂಪಳವನ್ನು ಕಟ್ಟು, ಕುಲ ಇಲ್ಲದವರಿಗೆ ಕುಲಕೊಡು, ಎಲ್ಲರೂ ಸಮಾನರು ಎಂದು ಹೇಳಿ ಐವೋದಿ ಸಿದ್ದಿಹಳ್ಳಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳಲು ತಿಳಿಸುತ್ತಾಳೆ. ನಿಡುಗಲ್ಲು ಕಡೆಯ ಹೊಟ್ಟಣ್ಣ ನಾಯಕ ಕಾಟ ಕೊಟ್ಟಾಗ ತಾನೇ ಆಸರೆಯಾಗಿ ನಿಂತು ರಕ್ಷಣೆ ಮಾಡುತ್ತಾಳೆ. ಹೀಗೆ ನೆಲೆ ಕಳೆದುಕೊಂಡಿದ್ದ ಯರಮಂಚಿನಾಯಕನಿಗೆ ನೆಲೆಯನ್ನು ಕಲ್ಪಿಸಿಕೊಟ್ಟವಳೇ ಈ ಮಾರಮ್ಮ. ಬುಡಕಟ್ಟಿನ ಮಹಿಳೆಯಲ್ಲಿ ಇಂತಹ ಜಾತ್ಯತೀತನ ವಿಶೇಷವೆನಿಸುತ್ತದೆ. ಗೌರಸಮುದ್ರಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿ 'ತುಮ್ಮಲು' ಎಂಬ ಪ್ರದೇಶವಿದೆ. ಮಲಸಮುದ್ರ ಮತ್ತು ಗೌರಸಮುದ್ರದ ಮಧ್ಯೆ ಬರುವ ಪ್ರದೇಶವಿದು. 'ತುಮ್ಮೆ' ಜಾತಿಯ ಮರಗಳು ಹೆಚ್ಚಾಗಿರುವುದರಿಂದ ಇದನ್ನು ತುಮ್ಮಲು ಎಂದು ಕರೆಯುತ್ತಾರೆ. 'ಬನ್ನಿ' ಮರವನ್ನು ಹೋಲುವ ಮರವಿದು' ಇಲ್ಲಿ ಒಂದು ಆವರಣವಿದ್ದು ಒಳಗಡೆ ಎರಡು ಕಟ್ಟೆಗಳಿವೆ. ಸುಮಾರು ೨೫-೩೦ ಅಡಿಗಳಷ್ಟು ಎತ್ತರವಾದ ಕಲ್ಲುಕಂಬವಿದ್ದು ಇದರ ಮೇಲೆ ಜಾತ್ರೆಯಲ್ಲಿ ದೀಪ ಹಚ್ಚುತ್ತಾರೆ. ಇಲ್ಲಿ ಮಾರಮ್ಮನ ಸಮಾಧಿ ಇದೆ ಎಂದು ಪ್ರತೀತಿ. ಕೊ.ಶ. ವಿಶ್ವನಾಥರವರೂ ಇಲ್ಲಿ ಮಾರಮ್ಮನ ಸಮಾಧಿ ಇದೆ ಎಂದು ತಮ್ಮ ಮಾರಿ ಮಾಹೇಶ್ವರಿ ಕೃತಿಯಲ್ಲಿ ಹೇಳುತ್ತಾರಾದರೂ ಈಗ ಅದರ ಕುರುಹುಗಳು ಸ್ಪಷ್ಟವಾಗಿ ಇಲ್ಲ. ಇದೆಲ್ಲಾ ಈ ಬೇಡಗಂಪಳ ಓಡಾಡಿದ್ದ, ನೆಲೆಯೂರಿದ್ದ ಸ್ಥಳ.

ಇಲ್ಲಿಂದ ಸುಮಾರು ಒಂದು ಕಿ.ಮೀ. ಅಂತರದಲ್ಲಿ 'ಲಿಂಗದಗುಡಿ' ಇದೆ. ೧೦೧ ಲಿಂಗಗಳು ಇಲ್ಲಿವೆ ಎಂಬುದು ಪ್ರತೀತಿ. ಹಿಂದೆ ಯರಮಂಚಿನಾಯಕನೇ ಮಾರಮ್ಮನ ಸೂಚನೆಯಮೇರೆಗೆ ಇದನ್ನು ಪ್ರತಿಷ್ಠಾಪಿಸಿದ ಎಂದು ಹೇಳುತ್ತಾರೆ. ನಾಯಕನಹಟ್ಟಿ ಬಳಿ ಇರುವ ಬೋರೇದೇವರ ಹಟ್ಟಿ ಅಥವಾ 'ಖುದಾಪುರ' ಗ್ರಾಮದಲ್ಲಿ ಬೋರೆದೇವರ ದೇವಸ್ಥಾನವಿದೆ. ಇದನ್ನು ಚಿಂತಗುಟ್ಲು ಬೋರುವ ಎಂದು ಕರೆಯುತ್ತಾರೆ. ಇಲ್ಲಿಂದಲೇ ಯರಮಂಚಿನಾಯಕ ತನ್ನ ಬಂಧುಗಳಿಂದ ಪ್ರತ್ಯೇಕಗೊಂಡದ್ದು. ಪ್ರತ್ಯೇಕಗೊಂಡ ಮೇಲೆ ತಾನಿನ್ನೊಂದೂ ಅಲ್ಲಿಗೆ ಹೋಗುವುದಿಲ್ಲ ಎಂದು ಪ್ರತಿಜ್ಞೆ ಮಾಡುತ್ತಾನೆ. ಹೀಗಾಗಿ ತಾನೂ ಮೂಲತಃ ಶೈವರಾಧಕನಾದ್ದರಿಂದ ತಾನು ಮತ್ತೆ ಐವೋದಿಯಿಂದ ಮರು ಅಧಿಪತ್ಯ ಪ್ರಾರಂಭಿಸಿದಾಗ ತನ್ನ ಶೈವಾರಾಧನೆಗಾಗಿ ಲಿಂಗದ ಗುಡಿಯನ್ನು ಮಾರಮ್ಮನ ಸೂಚನೆಯ ಮೇರೆಗೆ ಸ್ಥಾಪಿಸುತ್ತಾನೆ. ಇದೇ ಪರಿಸರದಲ್ಲಿ ಮಾರಮ್ಮ ಮತ್ತು ಆಕೆಯ ತಮ್ಮನಾದ ಬೊಮ್ಮ ವಾಸವಾಗಿರುತ್ತಾರೆ. ಅಂದು ಗುಡಿಸಲು ವಾಸಿಗಳಾಗಿದ್ದ ಇವರಿಗೆ ಮನೆಯ ಕಲ್ಪನೆಯೇ ವಿಶೇಷವಾದುದು. ಇಂತಹ ಸಂದರ್ಭದಲ್ಲಿ ಎಕ್ಕೆ ಗಿಡದಿಂದ ಕಂಬ, ತೊಲೆ ಮಾಡಿಕೊಂಡು ಈ ಅಕ್ಕ ತಮ್ಮ ಮನೆಯೊಂದನ್ನು ಕಟ್ಟಿಕೊಂಡಿರುತ್ತಾರೆ. ಮಾರಮ್ಮ ಬೇಟೆಯಾಡಲು ಹೋಗಿರುತ್ತಾಳೆ. ಬೊಮ್ಮ ಮನೆಯಲ್ಲಿರುತ್ತಾನೆ. ಹತ್ತಿರದ ರಾಯದುರ್ಗದ ಪ್ರಾಂತ್ಯವನ್ನು ಆಳುತ್ತಿದ್ದ ಯರಬೊಮ್ಮಳ ನಾಯಕ ಒಮ್ಮೆ ಈ ಮಾರ್ಗವಾಗಿ ಬರುತ್ತಾನೆ. ಬೊಮ್ಮನ ಮನೆಯನ್ನು ನೋಡಿ ಈ ಯರಬೊಮ್ಮಳ ನಾಯಕ ಕೊಳುಗುಳುದ ಬೊಮ್ಮನ ವಂಶದವನು. ಹಾಗಾಗಿ ತನ್ನ ಪೂರ್ವಿಕರನ್ನು ಕೊನೆಗಾಣಿಸಿದ ಯರಮಂಚಿನಾಯಕನ ಅಧಿಪತ್ಯವನ್ನು ನಾಶ ಮಾಡುವುದು ಆತನ ಉದ್ದೇಶವಾಗಿತ್ತು. ಇವನಿಗೀಕೆ ಇಂಥಾ ಮನೆ ಎಂದು ಅದನ್ನು ಕಿತ್ತು ತೊಲೆ ಕಂಬ ತೆಗೆದುಕೊಂಡು ಹೋಗುತ್ತಾನೆ. ಲಿಂಗದ ಗುಡಿಯನ್ನು ನಾಶ ಮಾಡುತ್ತಾನೆ. ಬೊಮ್ಮನಿಗೆ ಈತನನ್ನು ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ. ಸೋಲೊಪ್ಪಿಕೊಳ್ಳುತ್ತಾನೆ. ತನ್ನ ಅಕ್ಕ ಮಾರಮ್ಮ ಹಿಂತಿರುಗಿದಾಗ ಆಕೆಯ ಬಳಿ ನಡೆದ ಸಂಗತಿಯನ್ನು ತಿಳಿಸುತ್ತಾನೆ. ಆಕೆ ಅಯ್ಯೋ ಪೆಟ್ಟಬೊಮ್ಮ ನೀನೆಂಥ ಹೇಡಿ ಎಂದು ಬೈಯುತ್ತಾಳೆ. (ಪೆಟ್ಟಬೊಮ್ಮ - ಹೆಂಗಸಿನಂತೆ ಕೈಲಾಗದೆ ಅಳುತ್ತೀಯಲ್ಲಾ ಎಂಬರ್ಥ). ಸೇಡು ತೀರಿಸಿಕೊಳ್ಳಲು ಹೊರಟ ಯರಮಂಚಿನಾಯಕನನ್ನು ತಡೆದು ತಾನೇ ಆ ದೊರೆಯ ಮೇಲೆ ಸೇಡು ತೀರಿಸಿಕೊಳ್ಳಲು, ರಾಯದುರ್ಗದ ಕಡೆ ಹೊರಡುತ್ತಾಳೆ. ಅಡಗುಪ್ಪೆ ಮಾರ್ಗವಾಗಿ ಹೋಗುತ್ತಾಳೆ. ಹೋಗುವಾಗ ದಾರಿಯಲ್ಲಿ ದನಕಾಯುವ ಹುಡುಗರಿಂದ ಹುಣಸೆಕಾಯಿ ಕೀಳಿಸಿಕೊಂಡು ಪುಟ್ಟಿಯಲ್ಲಿ ತುಂಬಿಕೊಂಡು ರಾಯದುರ್ಗದ ಸಂತೆ ಬಜಾರದ ಬಳಿ ಕುಳಿತುಕೊಳ್ಳುತ್ತಾಳೆ. (ಹುಣಸೆಕಾಯಿ ಕಿತ್ತುಕೊಟ್ಟ ಹುಡುಗನಿಗೆ ನಿಮ್ಮೂರಿಗೆ ಯಾವುದೇ ಸಾಂಕ್ರಾಮಿಕ ಕಾಯಿಲೆ ಬರದಿರಲಿ ಎಂದು ಹರಸುತ್ತಾಳೆ) ದೊರೆ ಮತ್ತು ದೊರೆ ಹೆಂಡತಿ ಸಂತೆಗೆ ಬರುತ್ತಾರೆ. ಈಕೆಯ ಬಳಿಯೇ ಹುಣಸೇಹಣ್ಣು ಕೊಂಡು ಕೊಳ್ಳುತ್ತಾರೆ. ಅವರನ್ನು ನೋಡಿ ಮನಸ್ಸಿನಲ್ಲೇ ಗುರುತಿಸಿಕೊಳ್ಳುತ್ತಾಳೆ. ಕತ್ತಲಾಗುತ್ತಿದ್ದಂತೆ ದೊರೆಯ ಮನೆ ಬಳಿ ಹೋಗಿ ಇನ್ನೂ ಸ್ವಲ್ಪ ಹಣ್ಣು ಉಳಿದಿದೆ. ನಾಳೆ ಮಾರಿಕೊಂಡು ನಮ್ಮೂರಿಗೆ ಹಿಂದಿರುಗುತ್ತೇನೆ. ಈ ದಿನ ರಾತ್ರಿ ಉಳಿಯಲು ಸ್ವಲ್ಪ ಜಾಗ ಕೊಡಿ ಎಂದು ಬೇಡಿಕೊಳ್ಳುತ್ತಾಳೆ. ಜಾಗಕೊಟ್ಟರು. ಅಲ್ಲಿಯೇ ಉಂಡು ಮಲಗಿದಳು. ಮಧ್ಯರಾತ್ರಿ ವೇಳೆಗೆ ದೊರೆಯ ಮಂಚದ ಬಳಿ ಹೋಗಿ ಆತನನ್ನು ಕೊಂದು ಕರುಳನ್ನು ಕಿತ್ತು

ಮಾಲೆಯನ್ನಾಗಿ ಹಾಕಿಕೊಂಡು ಬೆಟ್ಟದ ಮೇಲಿನ ಅರಮನೆಯಿಂದ ಕೆಳಗಿಳಿದು ಬರುತ್ತಾಳೆ. ಕೋಟೆಯ ಬಾಗಿಲಿನಲ್ಲಿ ಒಂದು ಗುಂಡಿನ ಮೇಲೆ ನಿಂತು ನನ್ನ ಮನೆಯನ್ನು ಲಿಂಗದ ಗುಡಿಯನ್ನು ನಾಶಮಾಡಿದ್ದಕ್ಕಾಗಿ ಸೇಡು ತೀರಿಸಿಕೊಂಡಿದ್ದೇನೆ. ನಾನೇ ಮಾರಮ್ಮ ಈ ಕೆಲಸ ಮಾಡಿದ್ದವಳು. ಬೇರೆ ಯಾರ ಮೇಲೂ ಅಪವಾದ ಹೊರಿಸಬೇಡಿ ಎಂದು ಮೂರುಬಾರಿ ಕೂಗಿ ಲಿಂಗದ ಗುಡಿ ಬಳಿಗೆ ತಮ್ಮ ಹಟ್ಟಿಗಳಿದ್ದ ಕಡೆಗೆ ಬರುತ್ತಾಳೆ.

ಹೀಗೆ ಯರಮಂಚನಾಯಕನಿಗೆ ಧೈರ್ಯ ತುಂಬಿ ನೆಲೆ ಕಲ್ಪಿಸಿಕೊಟ್ಟು ತನ್ನ ನೆಲೆಯನ್ನು ನಾಶ ಮಾಡಿದ ದೊರೆಯನ್ನು ಕೊಲ್ಲುವುದರ ಮೂಲಕ ಆತನ ದೌರ್ಜನ್ಯವನ್ನು ಪ್ರತಿಭಟಿಸಿದ ಈ ಸಾಹಸೀ ಮಹಿಳೆಯು ಮ್ಯಾಸರ ನೆನಪಿನಲ್ಲಿ ಉಳಿಯುತ್ತಾಳೆ. ಆಕೆಯ ಕಾಲಾನಂತರ ಆಕೆಯನ್ನು ತುಮ್ಮಲು ಪ್ರಾಂತ್ಯದಲ್ಲಿ ಸಮಾಧಿ ಮಾಡಿದರು ಎಂಬುದು ಪ್ರತೀತಿ. ನಂತರ ಹೀಗೆ ತಮಗೆ ಸಹಕಾರ ನೀಡಿ ಅಸ್ತಿತ್ವ ದೊರಕಿಸಿಕೊಟ್ಟ ಮಾರಮ್ಮನನ್ನು ಯರಮಂಚಿನಾಯಕ ಮರೆಯುವುದಿಲ್ಲ. ಐವೋದಿ ಮಠದಲ್ಲಿ ಈಕೆಯನ್ನು ಸ್ಥಾಪನೆ ಮಾಡುತ್ತಾನೆ. ನಲಕುಲದವರಿಗೆ ಅಕ್ಕರಾಯಮ್ಮ ಮನೆ ದೇವತೆಯೆನಿಸಿದ್ದಾಳೆ. ತನಗೂ ಆಕೆ ಮನೆದೇವತೆಯೇ. ಆಕೆಯೇ ಈ ಮಾರಮ್ಮನ ರೂಪದಲ್ಲಿ ತನಗೆ ಆಸರೆಯಾಗಿ ನಿಂತಳು. ನಮ್ಮ ಮ್ಯಾಸಗಂಪಳವನ್ನು ಯಾವತ್ತು ಕಾಪಾಡಿಕೊಂಡು ಬಂದವರು ಮಹಿಳೆಯರೇ. ಹಾಗಾಗಿ ಈಕೆ ಶಕ್ತಿ ಸ್ವರೂಪಿಣಿಯಾಗಿ ನೆಲೆಗೊಳ್ಳಲಿ ಎಂದು ಬಯಸಿ ನೆಲೆಗೊಳಿಸಿ ಪೂಜಾಕಾರ್ಯಗಳನ್ನು ನಿರಂತರವಾಗಿ ನಡೆಸಿಕೊಂಡು ಬರಬೇಕೆಂದು ಆದೇಶಿಸುತ್ತಾನೆ. ವರ್ಷಕ್ಕೊಮ್ಮೆ ಗುಗ್ಗರಿಹಬ್ಬ, ತುಮ್ಮಲು ಪ್ರಾಂತ್ಯದಲ್ಲಿ ಜಾತ್ರೆ, ಮಾಡಬೇಕೆಂದು ಹೇಳುತ್ತಾನೆ. ಆಕೆಗೆ ಗೌರವಪೂರ್ವಕವಾಗಿ ಛತ್ರಿ, ಚಾಮರ, ಭೇರಿ. 'ಕೋರಿ ನಿಶಾನೆ' ಅರ್ಪಿಸುತ್ತಾನೆ. ವಾಸೆ ಕೊಯ್ದು ಕೋಟಿಒಂದು ಪ್ರಜೆಗಳನ್ನು ಕಾಪಾಡುವ ಹೊಣೆಗಾರಿಕೆ ಇನ್ನು ನಿನ್ನದೆ ತಾಯಿ ಎಂದು ನಮಸ್ಕರಿಸಿ ತನ್ನ ಇಡೀ ಸಮುದಾಯದ ಜೊತೆ 'ಸೂರ್ಯನ ಮೊಕ್ಕು' ಮುಗಿಯುತ್ತಾನೆ. ಮ್ಯಾಸರು ಸದಾ ಹೆಗಲ ಮೇಲೆ ಕಂಬಳಿಯನ್ನು ಮಡಚಿ ಹಾಕಿಕೊಳ್ಳುತ್ತಿದ್ದರು. ಈಗಲೂ ಮದುವೆಯ ದಿನ ಮದುಮಗ ಹೀಗೆ ಹಾಕಿಕೊಳ್ಳುತ್ತಾನೆ. ಸಾಂಸ್ಕೃತಿಕ ನಾಯಕನ ಆರಾಧನೆ, ಆಚರಣೆಗಳಲ್ಲಿ ಸಂಪ್ರದಾಯಸ್ಥರು ಹಾಕಿಕೊಳ್ಳುತ್ತಾರೆ. ಒಂದು ಆಚರಣೆಯ ರೂಪದಲ್ಲಿ ಇದು ಉಳಿದಿದೆ. ಹಾಗಾಗಿ ಇವರ ಲಾಂಛನವೇ ಇದು. ಕಂಬಳಿಯ ತುಂಡೊಂದನ್ನು ಕಟ್ಟಿದ ಎತ್ತರವಾದ ಧ್ವಜವೇ ಕೋರಿ ನಿಶಾನೆ. ಇಂದಿಗೂ ಅತ್ಯಂತ ಶ್ರದ್ಧೆಯಿಂದ ಯರಮಂಚಿನಾಯಕನ ವಂಶಸ್ಥರು ಈಕೆಯ ಆರಾಧನೆಯಲ್ಲಿ ಪಾಲ್ಗೊಳ್ಳುತ್ತಾರೆ.

ಮ್ಯಾಸರ ಹಟ್ಟಿಗಳ ಬಳಿಯೇ ಉಪ್ಪಾರರು ಹಿಂದೆ ಉಪ್ಪು ತಯಾರಿಸುತ್ತಿದ್ದು ಈ ಎರಡೂ ಸಮುದಾಯಗಳ ಮಧ್ಯೆ ಆಪ್ತತೆ ಬೆಳೆಯುತ್ತದೆ. ಹೀಗಾಗಿ ತಮ್ಮೊಂದಿಗೆ ಸಾಗಿಬಂದ ತಮ್ಮ ಈ ಸ್ನೇಹ ಬಂಧುಗಳಿಗೆ ತಮ್ಮ ಧಾರ್ಮಿಕ ನೆಲೆಗಳಲ್ಲೂ ಅವಕಾಶ ಕಲ್ಪಿಸಿಕೊಡಬೇಕೆಂದು ಉಪ್ಪಾರರಿಗೆ ಪೂಜೆಯ ಮತ್ತು ಮಾರಮ್ಮನನ್ನು ಹೊರುವ ಹೊಣೆಗಾರಿಕೆಯನ್ನು ಅಂದು ವಹಿಸಿಕೊಟ್ಟಿದ್ದು ಇಂದಿಗೂ ಅದೇ ಸಂಪ್ರದಾಯ ಉಳಿದುಬಂದಿದೆ. ಮ್ಯಾಸಬೇಡರ ಅನೇಕ ಆರಾಧನೆಯ ನೆಲೆಗಳಲ್ಲಿ ಇಂತಹ ಸ್ನೇಹ-

ಸೌಹಾರ್ದಯುತವಾದ ಬಾಂಧವ್ಯಗಳಿದ್ದು ಅವರ ಜಾತ್ಯಾತೀತ ಮನೋಭಾವನೆಯನ್ನು ಇದು ಸ್ಪಷ್ಟಪಡಿಸುತ್ತದೆ.

**ಆ) ವರವು ತುಮ್ಮಲಯ್ಯ ಮತ್ತು ಮಾರಮ್ಮ :**

ವರವು ತುಮ್ಮಲಯ್ಯ ಛಲವಾದಿ ವಂಶದವ. ಈತ ಮತ್ತು ಈತನ ಮಗ ಬಟ್ಟೆ ನೇಯ್ದು ಮಾರಾಟ ಮಾಡಿ ಜೀವನ ಮಾಡುತ್ತಿದ್ದರು. ದೇವರಹಳ್ಳಿ, (ಗೌರಸಮುದ್ರಕ್ಕೆ ಎರಡು ಮೈಲಿ ಅಂತರದಲ್ಲಿದೆ). ಹಾಗೂ ಸುತ್ತಮುತ್ತಲ ಹಳ್ಳಿಗಳಲ್ಲಿ ಬಟ್ಟೆ ಮಾರಾಟ ಮಾಡಿಕೊಂಡು ಜೀವಿಸುತ್ತಿದ್ದರು. ಬಟ್ಟೆ ವ್ಯಾಪಾರ ಮಾಡಿಕೊಂಡು ಈತ ಒಮ್ಮೆ ತನ್ನ ಮಗನ ಜೊತೆ ಬರುತ್ತಿದ್ದ ಮಗ ಹಸಿದು ಊಟಕ್ಕಾಗಿ ತುಂಬಾ ಅಳುತ್ತಿದ್ದ. ಮಾರಮ್ಮ ತುಮ್ಮಲಿನಲ್ಲಿ ಎದುರಾಗುತ್ತಾಳೆ ಏಕೆ ಹೀಗೆ ಅಳುತ್ತಿದ್ದಾನೆ ಎಂದು ಕೇಳುತ್ತಾಳೆ. ಹಸಿವಿನ ಕಾರಣದಿಂದಾಗಿ ಅಳುತ್ತಿದ್ದಾನೆ. ಈ ಕಾಡಿನಲ್ಲಿ ನಾನೆಲ್ಲಿ ಊಟ ತರಲಿ ಎನ್ನುತ್ತಾನೆ. 'ಬನ್ನಿ' ಮರದ ಎಲೆ ತೆಗೆದುಕೊಂಡು ಬಾ ಎನ್ನುತ್ತಾಳೆ ತರುತ್ತಾನೆ. ತನ್ನ ಮಹಿಮೆಯಿಂದ ಅದನ್ನೇ ಅಗಲವಾದ ಎಲೆಯನ್ನಾಗಿ ಮಾಡಿ ಹಾಸಿ, ಪಂಚಾಮೃತ, ಪಂಚಭಕ್ಷ್ಯಗಳೇ ಎಲೆ ತುಂಬಾ ತುಂಬಿಕೊಳ್ಳುವಂತೆ ಮಾಡುತ್ತಾಳೆ. ಬಹು ರುಚಿಯಾದ ಈ ಆಹಾರವನ್ನು ಹಸಿದ ಮಗ ಊಟ ಮಾಡಿದ. ಉಳಿದಿದ್ದನ್ನು ತಂದೆಯೂ ಊಟ ಮಾಡಿ ಸಂತೋಷಪಟ್ಟ. ನಿನ್ನ ಮಹಿಮೆ ಅಪಾರವಾದುದು ತಾಯಿ, ನಾನು, ನಿನಗೆ ಪ್ರತಿಯಾಗಿ ಯಾವ ಸೇವೆ ಸಲ್ಲಿಸಲಿ ಎಂದು ತಮ್ಮಲಯ್ಯ ಕೇಳುತ್ತಾನೆ. ಈ ಪ್ರಾಂತ್ಯದಲ್ಲಿ ಒಂದು ಅಸಾಧಾರಣವಾದ ಕೋಣ ಇದೆ. ಅದನ್ನು ನೀನು ಹಿಡಿದು ತಂದು ನನಗೆ ಒಪ್ಪಿಸಬೇಕು. ಅದನ್ನು ನಾನು ನಿಗ್ರಹಿಸುತ್ತೇನೆ. ನಂತರ ನನ್ನ ಹೆಸರಿನಲ್ಲಿ ಜಾತ್ರೆ ಮಾಡಬೇಕೆಂದು ಊರಲ್ಲಿ ಡಂಗುರ ಹೊಡೆಸಬೇಕು ಎನ್ನುತ್ತಾಳೆ. ತುಮ್ಮಲಯ್ಯ ಈ ಮಾತನ್ನು ಊರಿನಲ್ಲಿ ಹೇಳುತ್ತಾನೆ. ಜಾತ್ರೆ ಮಾಡಲು ಊರವರೆಲ್ಲಾ ಒಪ್ಪುತ್ತಾರೆ. ತುಮ್ಮಲುವಿನಲ್ಲಿಯೇ ಜಾತ್ರೆಯ ಏರ್ಪಾಡು ಮಾಡುತ್ತಾರೆ. ಸುತ್ತಲ ಮೂಲೆಗಳಲ್ಲಿ, ಕಾಡಿನಲ್ಲಿ ಮೇಯ್ದು ಕೊಬ್ಬಿದ್ದ ಕೋಣವೊಂದು ಜನರಿಗೆ ತುಂಬಾ ತೊಂದರೆ ಕೊಡುತ್ತಿತ್ತು. ಆ ಕೋಣವನ್ನು ಯಾರಿಗೂ ನಿಗ್ರಹಿಸಲು ಸಾಧ್ಯವಾಗಿರಲಿಲ್ಲ. ಆ ಕೆಲಸ ಈಗ ತುಮ್ಮಲಯ್ಯನ ಪಾಲಿಗೆ ಬಂದಿದೆ. ಅದನ್ನು ಹಿಡಿದು ತರಲು ನನಗೆ ಮಾರ್ಗದರ್ಶನ ಮಾಡು ಎಂದು ಕೇಳುತ್ತಾನೆ. ಒಂದು ತಾಳೆಮರವನ್ನು ಕಡಿದು ಅದನ್ನು ಕೊರೆದು ಬಾಳೆಯ ಎಲೆಯಿಂದ ಅವರ ಎರಡೂ ಭಾಗ ಮುಚ್ಚಿ 'ಉರುಮೆ' ಎಂಬ ವಾದ್ಯ ಮಾಡಿಕೋ. ಈ ಉರುಮೆಯನ್ನು ಬಾರಿಸುತ್ತಾ ಹೊಗು. ಅದರ ಕತ್ತಿಗೆ ಒಂದು ಅಂಗು ನೂಲನ್ನು ಹಾಕು ಎಂದು ಹೇಳುತ್ತಾಳೆ. ಅದೇ ಪ್ರಕಾರ ತುಮ್ಮಲಯ್ಯ ಉರುಮೆ ಮಾಡಿಕೊಂಡು ತನ್ನ ಮಗನೊಂದಿಗೆ ಕಾಡಿನಲ್ಲಿ ಮೇಯುತ್ತಿದ್ದ ಕೋಣದ ಬಳಿ ಹೋಗುತ್ತಾನೆ. ಮಾರಮ್ಮನ ಸೂಚನೆಯಂತೆ ಉರುಮೆ ಬಡಿಯುತ್ತಾ ಹೋಗಲು ಆರ್ಭಟಿಸಿಕೊಂಡು ಇವನನ್ನು ಇರಿಯಲು ಬಂದ ಕೋಣ ಉರುಮೆ ಶಬ್ದವನ್ನು ಕೇಳಿ ನಿಧಾನವಾಗಿ ತಲೆದೂಗುತ್ತಾ ಇರಿಯುವುದನ್ನೇ ಮರೆತು ಉರುಮೆ ಮೇಲೆ ತಲೆಯನ್ನಿಟ್ಟು ಸುಮ್ಮನಾಯಿತು. ಆಗ ಉರುಮೆಗೆ ಕಟ್ಟಿಕೊಂಡಿದ್ದ ಅಂಗುನೂಲನ್ನು ಕೋಣನ ಕುತ್ತಿಗೆಗೆ ಹಾಕುತ್ತಾನೆ. ಅದು ತಲೆದೂಗಿದಂತೆಲ್ಲಾ ಉರುಮೆಯನ್ನು ನಿಧಾನಗತಿಯಲ್ಲಿ ಬಾರಿಸುತ್ತಾ ಬಾರಿಸುತ್ತಾ ಹಿಂದಕ್ಕೆ ಸರಿಯುತ್ತಾ ಬಂದಂತೆಲ್ಲಾ ಕೋಣ ಹಾಗೆಯೇ ಬರುತ್ತದೆ. ಜನರ ಬಳಿ ಬರಲು

ಸೇರಿದ ಜನ ಆ ಕೋಣನನ್ನು ಹಿಡಿದು ಮಚ್ಚು, ಕೊಡಲಿಗಳಿಂದ ಕಡಿಯಲು ಮುನ್ನುಗ್ಗುತ್ತಾರೆ. ಆದರೆ ಮಾರಮ್ಮ ನೀನೇ ಕಡಿ ಎಂದು ತುಮ್ಮಲಯ್ಯನಿಗೆ ಆದೇಶಿಸುತ್ತಾಳೆ, ಹಿಂಜರಿಯುತ್ತಾನೆ. ನಾಸಿದ್ದೇನೆ ಕಡಿ ಎನ್ನುತ್ತಾಳೆ. ಒಂದೇ ಕೋಣ ಆಯಿತಲ್ಲ. ಜೊತೆ ಬೇಕಲ್ಲ ಎನ್ನುತ್ತಾಳೆ. ನಾನೇನು ಮಾಡಲಿ ಎಂದ ತುಮ್ಮಲಯ್ಯನಿಗೆ ನಿನ್ನ ಮಗನನ್ನೇ ಕೋಣನ ಜೊತೆಯಲ್ಲಿ ಬಲಿಕೊಡು ಎನ್ನುತ್ತಾಳೆ. ಅನುಮಾನಿಸುತ್ತಾನೆ. ನೀನು ಕೊಡಲೇಬೇಕು. ನಿನ್ನ ಕಯ್ಯಿಂದಲೇ ಈ ಎರಡೂ ಬಲಿ ನಡೆಯಬೇಕು ಎನ್ನುತ್ತಾಳೆ. ಕೊನೆಗೆ ಧೈರ್ಯ ಮಾಡಿದ ತುಮ್ಮಲಯ್ಯ ತನ್ನ ಮಗನನ್ನು ಮತ್ತು ಕೋಣನನ್ನು ಕಡಿಯುತ್ತಾನೆ. ಸಂಪ್ರೀತಳಾದ ಮಾರಮ್ಮ ನಿನ್ನ ಭಕ್ತಿಗೆ ಮೆಚ್ಚಿದೆ. ನಿನಗಾಗಿ ನಾನೇನು ಮಾಡಲಿ, ಏನನ್ನು ಕೊಡಲಿ, ಏನು ವರಬೇಕು ಎಂದು ಕೇಳುತ್ತಾಳೆ. ಮೊದಲ ಪೂಜೆ, ಘಟ, ಗಂಧಾದೀಪ ನನಗೆ ಕೊಡು ಎನ್ನುತ್ತಾನೆ. ವರ ಕೇಳಿದರೂ ನನ್ನ ಸೇವೆಯನ್ನೇ ಬಯಸಿದೆ ಹೊರತು ಯಾವ ಸುಖ ಸಂಪತ್ತನ್ನು ಬೇಡಲಿಲ್ಲ. ಹೀಗಾಗಿ ನೀನು ನನಗಿಂತ ಎತ್ತರವಾಗಿಬಿಟ್ಟೆ. ನಾನೇಗೆ ನಿನಗೆ ಆಶೀರ್ವದಿಸಲಿ ಎನ್ನುತ್ತಾಳೆ. ನನ್ನ ತಲೆ ಮೇಲೆ ನಿನ್ನ ಪಾದ ಇಟ್ಟು ಅನುಗ್ರಹಿಸು ಎಂದು ಬಾಗಲು ತಲೆಯ ಮೇಲೆ ಕಾಲಿಟ್ಟು ಆಕೆ ಆತನನ್ನು ಭೂಮಿಗೆ ತುಳಿದುಬಿಡುತ್ತಾಳೆ. ಮಗನನ್ನು ಕಡಿದ ಸ್ಥಳದಲ್ಲೇ ಆತನೂ ಸಮಾಧಿಯಾಗುತ್ತಾನೆ. ಇನ್ನು ನನ್ನ ಸೇವೆ ಮಾಡುವವರಾರು ಎಂದು ಯೋಚಿಸಿ, ಆತನ ಸತ್ಯಕ್ಕೆ ಮೆಚ್ಚಿ ತನ್ನ ಚೆವರನ್ನು ಆ ಸ್ಥಳಕ್ಕೆ ಹಾಕುತ್ತಾಳೆ. ಆಕೆಯ ಮಹಿಮೆಯಿಂದ ತಂದೆ, ಮಗ ಇಬ್ಬರಿಗೂ ಪುನಃ ಜೀವನ ಬರುತ್ತದೆ. ಈ ಕಾರಣದಿಂದಾಗಿಯೇ ಈಗಲೂ ಮೊದಲ ಪೂಜೆ ಆ ಜಾಗಕ್ಕೇ ಸಲ್ಲುತ್ತದೆ.

**೬) ಪ್ರಕಟಿತ ಕೃತಿ : ಮಾರಿಯಕತೆ :**

ಕ್ರಿ.ಶ.೧೯೭೦ ದಶಕದಲ್ಲಿಯೇ ಶ್ರೀ ಕೊ.ಶ. ವಿಶ್ವನಾಥ ಮತ್ತು ಶ್ರೀ ಕೆ.ಎಸ್. ಲಿಂಗಣ್ಣನವರು ಗೌರಸಮುದ್ರದ ಮಾರಮ್ಮನ ಬಗೆಗೆ ಅಲ್ಲಿಯ ಜನಪದರು ಹಾಡುವ ಗೀತೆಗಳನ್ನು ಸಂಗ್ರಹಿಸಿ, ಐತಿಹ್ಯಗಳನ್ನು ಉಲ್ಲೇಖಿಸುತ್ತಾ ಮ್ಯಾಸ ನಾಯಕರ ಮತ್ತು ಇತರ ಸಮುದಾಯದವರ ಸ್ಮರಣೆಯಲ್ಲಿ ಮಾರಮ್ಮ ಹೇಗೆ ಉಳಿದುಬಂದಿದ್ದಾಳೆ ಎಂಬುದನ್ನು ತಮ್ಮ 'ಮಾರಿಯಕತೆ' ಎಂಬ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಉಪ್ಪಾರ ಕೆಂಚಮ್ಮ ಮತ್ತು ಮಾರಮ್ಮನಿಗೆ ಸಂಬಂಧಿಸಿದ ಕತೆ, ಗೊಲ್ಲರ ನಾಗಮ್ಮನಿಗೆ ಮಾರಮ್ಮ ಒಲಿದ ಕತೆ. ಬಳೆಗಾರ ಮತ್ತು ಮಾರಮ್ಮನಿಗೆ ಸಂಬಂಧಿಸಿದ ಕತೆ ಇವೆಲ್ಲವುಗಳನ್ನು ವಿವರಿಸಿದ್ದಾರೆ.

ಮ್ಯಾಸ ಮಂಡಲದಲ್ಲಿ ನಾಯಕಿಸ್ಥಾನದಲ್ಲಿರುವ ಮಹಿಳೆ ಅಕ್ಕ ರಾಯಮ್ಮ, ದಾಲಸಾಲಿಯಮ್ಮ ಮತ್ತು ಸಂಚುಶಿಖಾನಾಯಕನ ಮಗಳೀಕೆ. ಸಹೋದರರನ್ನು ಸಲಹಿ ಅವರಿಗೆ ಸ್ಥಾನಮಾನ ದೊರಕಿಸಿಕೊಟ್ಟವಳು. ಈಕೆಯೇ ಮಾರಮ್ಮ ಎಂದು ಹೇಳಿ ಈಕೆ ಮಾಡಿದ ಸಾಹಸ ಸಾಧನೆಗಳನ್ನು ತಿಳಿಸುತ್ತಾ ಯರಮಂಚಿ ನಾಯಕನನ್ನು ಹೊಟ್ಟಣ್ಣ ನಾಯಕನಿಂದ ರಕ್ಷಿಸಿದವಳು. ಇವಳೇ ಲಂಕಿಣಿ ದೊಣೆಯ ಬಳಿ ಹೊಟ್ಟಣ್ಣನಾಯಕ ಇವರಿಗೆ ಮೋಸದಿಂದ ಇವರಿಗೆ ನಿಷೇಧವಾಗಿರುವ ಕೋಳಿಯನ್ನು ತಿನ್ನಿಸಲು ಪ್ರಯತ್ನಿಸಿ ತೊಂದರೆ ಕೊಟ್ಟಾಗ ಅವರನ್ನು ಕಾಪಾಡಿದ್ದವಳೇ ಮಾರಮ್ಮ ಎಂದು ಹೇಳುತ್ತಾರೆ. ಸೇಡು ತೀರಿಸಿಕೊಳ್ಳಲೆಂದು ಮ್ಯಾಸರೆಲ್ಲಾ ನಿಡುಗಲ್ಲಿಗೆ ಹೋಗಿ ಹುಟ್ಟಣ್ಣನಾಯಕನಿಗೆ ತಿಳಿಯದಂತೆ ಆತನಿಗೆ

ಸೇರಿದ ಎಮ್ಮೆಗಳನ್ನು ಹೊಡೆದುಕೊಂಡು ಬಂದು 'ಎನಮಲುದೊಡ್ಡಿ' ಎಂದು ಹೆಸರಿಟ್ಟು ಅದರಲ್ಲಿ ಇವುಗಳನ್ನು ಕೂಡಿ ಒಂದು ಎಮ್ಮೆಯನ್ನು ಕೊಯ್ದು ಬೇಯಿಸಲು ಇಟ್ಟಿರುವಾಗ ಹೊಟ್ಟಣ್ಣ ನಾಯಕ ಬಂದು ಹೀಗೆ ಕಳ್ಳತನ ಮಾಡಬಹುದೇ? ನನ್ನ ಎಮ್ಮೆಯನ್ನು ಕೊಲ್ಲುವುದು ಸರಿಯೇ ಎಂದು ಕೇಳಲು ನಾವು ಎಮ್ಮೆಯನ್ನು ಕೊಯ್ದಿಲ್ಲ, ಬೇಯಿಸುತ್ತಿಲ್ಲ. ಬೇಯಿಸುತ್ತಿರುವುದು ಕುಂಬಳದ ಹೋಳುಗಳನ್ನು ಎಂದು ಹೇಳಿ ತೋರಿಸುತ್ತಾರೆ. ಮಾರಮ್ಮನ ಪವಾಡವೇ ಕಾರಣವಾಗಿ ಆ ಮಾಂಸದ ಚೂರುಗಳು ಕುಂಬಳದ ಹಣ್ಣಿನ ಚೂರುಗಳಾಗಿ ಮಾರ್ಪಾಡಾಗಿರುತ್ತವೆ. ಆಗ ಹೊಟ್ಟಣ್ಣನಾಯಕ ಮಾರಮ್ಮನಿಗೂ, ಯರಮಂಚಿ ನಾಯಕನಿಗೂ ಶರಣಾಗಿ ಇನ್ನು ನನ್ನ ವಂಶವಿರುವ ತನಕ ನಿಡುಗಲ್ಲಿನಿಂದ ನಿನಗೆ ಮೀಸಲು ತೆಗೆದುಕೊಂಡು ಬಂದು ಒಪ್ಪಿಸುತ್ತೇವೆ ಎಂದು ತನ್ನ ಎಮ್ಮೆಗಳನ್ನು ಬಿಡಿಸಿಕೊಂಡು ಹರಕೆ ಮಾಡಿಕೊಂಡು ಹೋಗುತ್ತಾನೆ ಎಂದು ಹೇಳುತ್ತಾರೆ.)

ವಿಶ್ಲೇಷಣೆ :

ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳು ಅಲ್ಲಿ ನಡೆಯುವ ಆರಾಧನೆ, ಆಚರಣೆಗಳು ಬಹಳ ವಿಶಿಷ್ಟವಾದವುಗಳು. ಅದರ ಸುತ್ತ ಹೆಣೆಯಲ್ಪಟ್ಟಿರುವ ಕತೆಗಳೂ ವಿಶೇಷವಾದವುಗಳೇ ಈ ಮೂಲಕವಾಗಿ ಅಲ್ಲಿದ್ದಿರಬಹುದಾದ ಐತಿಹಾಸಿಕ ಸಂಗತಿಯನ್ನು ಗುರುತಿಸಲು ಸಾಧ್ಯವಿದೆ.

ಯರಮಂಚಿನಾಯಕ ಐವೋದಿಮಠದಲ್ಲಿ ತನ್ನ ಸಮುದಾಯಕ್ಕೆ ರಕ್ಷಕಳಾಗಿದ್ದು, ತನಗೂ ಒಂದು ಅಸ್ತಿತ್ವ ದೊರೆಯುವಂತೆ ಮಾಡಿದ ಮಾರಮ್ಮನನ್ನು ಸ್ಥಾಪನೆ ಮಾಡಿದ ನಂತರ ಆಕೆಯನ್ನು ಪವಾಡ ಸದೃಶ ದೇವಿಯನ್ನಾಗಿ ಜನತೆ ಆರಾಧಿಸುವ ಮನಸ್ಸನ್ನು ಬೆಳೆಸಿಕೊಂಡಿರಬಹುದು. ಇಂತಹ ಆಕೆಯ ಒಂದು ಮಹಿಮೆಯನ್ನು ತೋರುವ ಕತೆಯೇ ಕೆಂಚಮ್ಮನಿಗೆ ಮಾರಮ್ಮ ಒಲಿದ ಕತೆಯಲ್ಲದೆ ಬೇರೇನೂ ಅಲ್ಲ. ಡಾ. ಮೀರಸಾಬಿಹಳ್ಳಿ ಶಿವಣ್ಣನವರು ಉಪ್ಪಾರರ ಮೂಲದ ಮೂಲಕ ಪ್ರಚಲಿತವಾಗಿರುವ ಮಾರಮ್ಮನ ಕಥೆಯನ್ನು ಪ್ರಸ್ತಾಪಿಸುತ್ತಾ ಹಿಂದೆ ಸಿಡುಬು, ಅಮ್ಮ ಎದ್ದವರನ್ನು ಉಪ್ಪಿನ ಹಾಸಿಗೆಯ ಮೇಲೆ ಮಲಗಿಸಿ ಬೇವಿನ ಸೊಪ್ಪಿನಿಂದ ಮುಚ್ಚುತ್ತಿದ್ದರಂತೆ. ಹೀಗೆ ಉಪ್ಪು ತಯಾರಿಸುವವರೇ ಬಹಳಷ್ಟು ಕಡೆ ಮಾರಿಯ ಪೂಜಾರಿಗಳೂ ಆಗಿರುವುದು ಆಕಸ್ಮಿಕವಲ್ಲ. ಅವರ ಉದ್ಯೋಗದ ಸಂಕೇತವಾದ ಸನಿಕೆ ಮತ್ತು ಕುರ್ಪಿ ಮಾರಮ್ಮನ ಪುಟ್ಟಿಯಲ್ಲಿವೆ ಎಂದು ಹೇಳುತ್ತಾರೆ.[೫೬] ಆದರೆ ಮ್ಯಾಸಬೇಡ ಸಮುದಾಯದಲ್ಲಿ ಪ್ರಚಲಿತವಾಗಿರುವ ವಿವರಗಳ ಪ್ರಕಾರ ಉಪ್ಪಾರರಿಗೂ ಮತ್ತು ಮ್ಯಾಸಬೇಡರಿಗೂ ಆ ಪರಿಸರದಲ್ಲಿ ಇದ್ದ ಅನ್ಯೋನ್ಯತೆಯೇ ಕಾರಣವಾಗಿ ಅವರು ಪೂಜಾರಿಗಳಾದರು. ಇದು ಎಂದಿಗೂ ತಪ್ಪದಿರಲಿ ಎಂದು ಸಾಂಕೇತಿಕವಾಗಿ ಚಿನ್ನದ ಕುರ್ಪಿ ಮತ್ತು ಸನಿಕೆಯನ್ನು ಮಾರಮ್ಮನ ಬುಟ್ಟಿಯಲ್ಲಿ ಸಂರಕ್ಷಿಸಿ ಇಡಲಾಗುತ್ತದೆ ಎನ್ನುತ್ತಾರೆ. ಈ ಎರಡು ಸಮುದಾಯಗಳ ಮಧ್ಯೆ ಇದ್ದ ಅನ್ಯೋನ್ಯತೆ ಯಾವುದು ಎಂದಾಗ ಹಾಗೆಲ್ಲಾ 'ಹೊಟ್ಟೆ ಬಗೆಯಬೇಡಿ' ಅವೆಲ್ಲಾ ಗುಟ್ಟಿನ ಸಂಗತಿಗಳು ಎನ್ನುತ್ತಾರೆ. ಮ್ಯಾಸಬೇಡರ ಅನೇಕ ಸಾಂಸ್ಕೃತಿಕ

---

೫೬ ಡಾ.ಮೀರಸಾಬಿಹಳ್ಳಿ ಶಿವಣ್ಣ. ಕೃತಿ–ಮ್ಯಾಸ ಮಂಡಲ. ಲೇಖನ–ಚಳ್ಳಕೆರೆ ತಾಲ್ಲೂಕಿನ ಸಾಂಸ್ಕೃತಿಕ ಮಹತ್ವದ ತಾಣಗಳು.

ನಾಯಕರ ಆರಾಧನಾ ನೆಲೆಗಳಲ್ಲಿ, ಆಚರಣೆಗಳಲ್ಲಿ ಈ ಬಗೆಯ ಜಾತಿ ಸಂಕರವನ್ನು ಗುರುತಿಸಲು ಸಾಧ್ಯವಿದೆ. ಹಾಗಾಗಿ ಮಾರಮ್ಮ ಐವೋದಿ ಮಠದಲ್ಲಿ ಸ್ಥಾಪನೆಗೊಂಡನಂತರ ಉಪ್ಪಾರರ ಕತೆ ಸೇರ್ಪಡೆಯಾಗಿದೆಯೇ ಹೊರತು ಮೂಲವೇ ಅವರಿಂದಾದುದಲ್ಲ.

ಊರುಗೊಲ್ಲರಲ್ಲಿ ಪ್ರಚಲಿತವಾಗಿರುವ ಕತೆಯೂ ಸಹ ಮಾರಮ್ಮನನ್ನು ಮುಗ್ಧತೆಯಿಂದ ಆರಾಧಿಸುವ ಮನಸ್ಸೊಂದು ಕಟ್ಟಿಕೊಂಡದ್ದು. ಮಾತೃರೂಪೀ ಸಂಸ್ಕೃತಿಯಲ್ಲಿ ಹುತ್ತದ ಆರಾಧನೆ ಚಾಲ್ತಿಯಲ್ಲಿ ಇದ್ದೇ ಇದೆ. ಯಾವುದೇ ಮಾರಮ್ಮನ ಪೂಜೆ ಎಂದಾಗ ಹುತ್ತದ ಪೂಜೆಯನ್ನು ಇದರೊಂದಿಗೆ ಸಮೀಕರಿಸುವ ಸಂಪ್ರದಾಯಗಳು ನಮ್ಮಲ್ಲಿವೆ. ಹೀಗಾಗಿ ಮಾರಮ್ಮ ನಾಗಮ್ಮನಿಗೆ ಒಲಿದಿದ್ದ ಕತೆಯಿದು. ನಾಗಮ್ಮನಿಂದಲೇ ಮಾರಮ್ಮನಾಗಿಲ್ಲ.

ಇನ್ನು ಕಾಡುಗೊಲ್ಲರಲ್ಲಿಯೂ ಗೌರಸಮುದ್ರದ ಮಾರಮ್ಮನನ್ನು ಆರಾಧಿಸುವ, ವಿವರಗಳಿವೆ.[೫೭] ಸಮುದಾಯದ ಕಾವ್ಯ ಜುಂಜಪ್ಪನನ್ನು ಕುರಿತದ್ದೇ ಆಗಿದೆ. ಈತ ಈ ಸಮುದಾಯದ ಸಾಂಸ್ಕೃತಿಕ ನಾಯಕ. ಈತನ ಜನನ ಗೌರಸಂದ್ರದ ಮಾರಿ ಈಶ್ವರನನ್ನು ಬೇಡಿ ಆತನ ಮಗ ವೀರಭದ್ರನ ಅಂಶದಿಂದಲೇ ಆಗಿದ್ದು ಮತ್ತು ಈ ಜುಂಜಪ್ಪನಿಗೆ ಅನೇಕ ಬಗೆಯ ಕಷ್ಟಗಳು ಬಂದಾಗ ಕಾಪಾಡಿದವಳೇ ಈಕೆ ಎಂಬುದು ಅಲ್ಲಿಯ ನಂಬಿಕೆಯಾಗಿದೆ.

"ದ್ರಾವಿಡರಲ್ಲಿ ವಲಸೆಗಾರ ಗಂಡುದೇವರುಗಳಿಗೆ ಸಹಾಯ ಮಾಡುವವಳು ಮಾರಮ್ಮ" ಎಂದು ಶ್ರೀಎಸ್.ಎಸ್. ಹಿರೇಮಠ್ ತಮ್ಮ 'ಜಾತ್ರೆಗಳು' ಕೃತಿಯಲ್ಲಿ ಅಭಿಪ್ರಾಯಪಡುತ್ತಾರೆ. ಇಲ್ಲಿ ಜುಂಜಪ್ಪನೂ ಪಶುಪಾಲಕನಾಗಿದ್ದು ವಲಸೆಗಾರನಾಗಿರುತ್ತಾನೆ. ಮಾರಿಯ ಆರಾಧನೆ ಈ ಸಮುದಾಯದಲ್ಲಿ ಉಂಟು. ಹಾಗಾಗಿ ಗೌರಸಂದ್ರದ ಮಾರಿ ಈತನಿಗೆ ಸಹಾಯ ಮಾಡಿದಳು ಎಂಬ ಕತೆ ಇಲ್ಲಿ ಸೇರಿರಬಹುದು.

ಜನಪದ ಕಥನಗಳ ಪುನರ್‌ಸೃಷ್ಟಿಗೊಳ್ಳುವ ತಮ್ಮ ಗುಣವೇ ಕಾರಣವಾಗಿ ಬೇರೆ ಬೇರೆ ಸಮುದಾಯದಲ್ಲೂ ಕಥನದ ನಾಯಕ ಅಥವಾ ನಾಯಕಿ ತಿರುಗಾಡಿ ಬರುತ್ತಾರೆ. ಹಾಗಾಗಿ ಇಲ್ಲಿ ಮ್ಯಾಸಬೇಡರ ನಾಯಕಿಯಾದ ಮಾರಮ್ಮ ಉಪ್ಪಾರರಿಗೂ, ಕಾಡುಗೊಲ್ಲರಿಗು ಊರುಗೊಲ್ಲರಿಗೂ ನಾಯಕಿಯಾಗುತ್ತಾಳೆ. ಅಷ್ಟೇ ಅಲ್ಲ ಜನಪ್ರಿಯ ಮಾರಿ ಪುರಾಣದ ಮಾರಿಯೂ ಆಗುತ್ತಾಳೆ. ಈಕೆ ಮಾರಿ ಎಂಬ ವಿವರ ಇದೆಯೇ ಹೊರತಾಗಿ ನಿಗದಿತ ಸಮುದಾಯಕ್ಕೆ ಸೇರಿದವಳು ಎಂಬ ವಿವರ ಆ ಕಾವ್ಯದಲ್ಲಿ ಬರುವುದೇ ಇಲ್ಲ. ಅಂಬೆರಾಯ ತುಂಬೆರಾಯ ತಮಗೆ ಗೌರಸಮುದ್ರದ ಮಾರಿ ಎತ್ತು ಕಾಯಲು ಎತ್ತಪ್ಪನನ್ನು ಕೈಲಾಸದಿಂದ ಕರೆ ತಂದು ಕೊಟ್ಟಿದ್ದಕ್ಕೆ ಏಳು ದಿನದ ತನಕ ಕುರಿಕ್ಪಾಣ ಕಡಿಸಿ ಆಕೆಗೆ ಜಾತ್ರೆ ಮಾಡುತ್ತಾರೆ ಎಂದು ಡಾ. ಮೀರಸಾಬಿಹಳ್ಳಿ ಶಿವಣ್ಣನವರು ತಮ್ಮ 'ಕಾಡುಗೊಲ್ಲ ಬುಡಕಟ್ಟು ವೀರರು' ಕೃತಿಯಲ್ಲಿ ಹೇಳುತ್ತಾ್ತರೆ. ಕಾಲಾನಂತರ ಮ್ಯಾಸಬೇಡರ ಮಾರಮ್ಮ ದೈವೀಕ ಸ್ಥಾನವನ್ನು ಪಡೆದಿದ್ದು, ಈ ಕಾಡುಗೊಲ್ಲರು ಈಕೆಗೆ ಕುರಿಕೋಣ ಬಲಿಕೊಟ್ಟು ಆರಾಧಿಸುತ್ತಾರೆ. ಜೊತೆಗೆ ಈ ಕಾಡುಗೊಲ್ಲರ ಪ್ರಕಾರ

---

[೫೭] ಡಾ. ತೀ.ನಂ. ಶಂಕರನಾರಾಯಣ, ಡಾ ಮೀರಸಾಬಿ ಹಳ್ಳಿ, ಶಿವಣ್ಣ.

ಮಾರಮ್ಮ ಕೈಲಾಸಕ್ಕೆ ಹೋಗಿಬರುವ ದೇವತೆ. ಆದರೆ ಮ್ಯಾಸಬೇಡರಲ್ಲಿ ನೆಲದ ಮೇಲೆ ನಡೆದಾಡಿದ ಮಾನವಿ ಈಕೆ. ಕಥನದಲ್ಲಿ ಈಕೆ 'ಹೆಣಗಳ ತಿಂಬೋಳಲ್ಲ ರಣಚಂಡಿ ಇವಳಲ್ಲ

"ರಣರಣಗುಟ್ಟುವ ಹದ್ದಲ್ಲ ಮಾರಮ್ಮ, ಮುದ್ದಿನ ತಾಯಿ ಭಕ್ತರಿಗೆ ॥"

ಎಂಬ ವರ್ಣನೆಯು ಬರುತ್ತದೆ. ತಮ್ಮ ಮಾರಿ ಮಹೇಶ್ವರಿ ಕೃತಿಯಲ್ಲಿಯೂ ಕೋ.ಶ.ವಿಶ್ವನಾಥರು ಇದನ್ನು ಉಲ್ಲೇಖಿಸಿದ್ದಾರೆ. ಈ ವಿವರಗಳು ಮೂಲತಃ ಮ್ಯಾಸಬೇಡರ ನಾಯಕಿ ನಂತರ ಕಾಡುಗೊಲ್ಲರಲ್ಲಿ ದೈವೀಕ ನೆಲೆಯಲ್ಲಿ ಭಾವಿಸಲ್ಪಟ್ಟಿದ್ದಾಳೆ ಎನ್ನುವುದನ್ನು ಸ್ಪಷ್ಟೀಕರಿಸುತ್ತದೆ. ಆದರೆ ಈಕೆ ಮ್ಯಾಸಬೇಡ ಸಮುದಾಯಕ್ಕೆ ಸೇರಿದ ಐತಿಹಾಸಿಕ ಮಹಿಳೆ ಎಂದು ಹೇಳಹೊರಟಾಗ ಈಕೆ ಯರಮಂಚಿನಾಯಕನಿಗೆ ಸಹಾಯ, ಸಹಕಾರ, ನೀಡಿದ್ದು ಇದೇ ಬಗೆಯ ಕತೆಯಾಗಿರಬಹುದು ಎಂಬ ಅನುಮಾನ ಬರುತ್ತದೆ. ಆದರೆ ಈ ಅನುಮಾನ ಬಗೆಹರಿಸಿಕೊಳ್ಳಲು ಅಲ್ಲಿರುವ ಆರಾಧನೆ, ಆಚರಣೆಗಳು ಸಹಕರಿಸುತ್ತವೆ. ಪೂಜೆ ಮಾಡುವವರು ಉಪ್ಪಾರರು ಎಂಬುದನ್ನು ಬಿಟ್ಟರೆ ಇತರೆ ಆರಾಧನೆ, ಆಚರಣೆಗಳನ್ನು ನಡೆಸುವವರು ಅಲ್ಲಿ ಮ್ಯಾಸಬೇಡರಾಗಿದ್ದಾರೆ. ಅಲ್ಲಿ ದೇವರ ಎತ್ತುಗಳು ಇದ್ದು - ಇಲ್ಲಿ ಮಾರಮ್ಮನವು, ಬೊಮ್ಮದೇವರದು ಎಂಬ ಬೇದ ಇಲ್ಲ. ಇವರಿಬ್ಬರಿಗೂ ಇವು ಸಲ್ಲುತ್ತವೆ. ಹಾಗಾಗಿ ಈಕೆ ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿ ಎಂದು ಹೇಳಲು ಸಾಧ್ಯವಾಗುತ್ತದೆ.)

ಕೋ.ಶ. ವಿಶ್ವನಾಥ ಮತ್ತು ಲಿಂಗಪ್ಪನವರು ಬಹಳ ಹಿಂದೆಯೇ ಈ ಮಾರಿಯ ಕತೆಯನ್ನು ಕುರಿತು ಕೃತಿರಚನೆ ಮಾಡಿದ್ದಾರೆ. ನಾಗಮ್ಮ, ಕೆಂಚಮ್ಮನ ವಿವರಗಳನ್ನು ಕೊಡುತ್ತಾ ದಾನಶಾಲಿಯಮ್ಮ ಮತ್ತು ಸುಕ್ಕಲುಮಲ್ಲಿನಾಯಕನ ಮಗಳೇ ಈ ಮಾರಮ್ಮ ಈಕೆ ಯರಮಂಚಿನಾಯಕನಿಗೆ ಸಹಕಾರ ನೀಡಿದಳು ಎನ್ನುತ್ತಾರೆ. ದಾನಶಾಲಿಯಮ್ಮನ ಮಗಳು ಅಕ್ಕರಾಯಮ್ಮನೇ ಹೊರತು ಮಾರಮ್ಮನಲ್ಲ ಈಕೆ ದಾನಸಾಲಿಯ ಮಗಳಾದ ಅಕ್ಕರಾಯಮ್ಮನಲ್ಲ. ನಂತರದ ಪೀಳಿಗೆಗೆ ಸೇರುವ ಮಹಿಳೆ ಈಕೆ. ಶ್ರೀಶೈಲಪ್ರಾಂತ್ಯದಿಂದ ತಂಡಗಳಾಗಿ ಇವರು ಮಧ್ಯ ಕರ್ನಾಟಕದ ಕಡೆ ಬಂದವರೆಂಬುದು ಐತಿಹಾಸಿಕ ಸತ್ಯ. ಹೀಗೆ ಬಂದ ಎರಡನೆಯ ತಂಡದಲ್ಲಿದ್ದವಳೇ ಈಕೆ. ಮುತ್ತಿಗಾರರ ಮೇಲೆ ಈಕೆ ಮುನಿಸಿಕೊಂಡು ಹೋದಳು. ನಿಡುಗಲ್ಲಿನ ಕಡೆ ಹೋದವಳು ತಿರುಗಿ ಇಲ್ಲಿಗೆ ಬರದೆ ಅಪ್ರಾಂತ್ಯದಲ್ಲಿಯೇ ನೆಲೆಸಿದಳು ಎಂದು ಅಭಿಪ್ರಾಯಪಡುತ್ತಾರೆ. ಈಕೆ ಕಾಟಮಲ್ಲನಾಯಕನ ಸೋದರಿಯರಲ್ಲಿ ಒಬ್ಬಳು ಎಂಬ ಅಭಿಪ್ರಾಯವೂ ಈ ಸಮುದಾಯದಲ್ಲಿದೆ. ರಾಯದುರ್ಗದ ದೊರೆ ತಮ್ಮ ಮನೆಯನ್ನು ನಾಶಮಾಡುವುದರ ಮೂಲಕ ತಮ್ಮನ್ನು ಅಧೀನರಾಗಿಸಿಕೊಳ್ಳುವ ಪ್ರಯತ್ನ ಮಾಡಿದಾಗ ಈಕೆ ಮಾರು ವೇಷದಲ್ಲಿ ಹೋಗಿ ಆತನನ್ನು ಕೊಂದು ಬಂದಳೆಂಬುದಕ್ಕೆ ಸಾಕ್ಷಿಯಾಗಿ ಆ ಕೋಟೆಯ ಬಾಗಿಲಲ್ಲಿ ಇಂದಿಗೂ ಗೌರಸಮುದ್ರದ ಮಾರಮ್ಮನ ದೇವಾಲಯವನ್ನು ಕಟ್ಟಿ ಆರಾಧನೆ ಮಾಡಲಾಗುತ್ತದೆ. ಅಡಗುಪ್ಪೆಯ ಮಾರ್ಗದಲ್ಲಿ ಈಕೆ ಪ್ರಯಾಣ ಮಾಡಿದಳು ಎನ್ನುವುದಕ್ಕೆ ಐತಿಹ್ಯವಿದೆ. ಅಡಗುಪ್ಪೆ ಅರಣ್ಯದಲ್ಲಿ ಒಂದು ಬಂಡೆಯ ಮೇಲೆ ಕೆಂಪು ಕಲೆಗಳಿದ್ದು ಮಾರಮ್ಮ ಯರಬೊಮ್ಮಳ ನಾಯಕನನ್ನು ಕೊಲ್ಲಲು ಹೋಗುವಾಗ ದಾರಿಯಲ್ಲಿ ಎಲೆ ಅಡಿಕೆ ಹಾಕಿಕೊಂಡು ಉಗುಳಿದ ಗುರುತು ಎನ್ನುತ್ತಾರೆ. ಈಕೆಯನ್ನು ಕುರಿತಾದ ಐತಿಹ್ಯಗಳು 'ತುಮ್ಮಲು'

ಪ್ರಾಂತ್ಯದಲ್ಲಿಯೂ ಇದ್ದು ಸಮಾಧಿ ಆದರಲ್ಲಿ ಒಂದು ಹೇಳಲಾಗುತ್ತದೆ. ಆದರೆ ಈಗ ಅದರ ಕುರುಹುಗಳು ಉಳಿದಿಲ್ಲ. ಬದಲಾಗಿ ಮಾರಮ್ಮನ ಪುಟ್ಟಿಯನ್ನಿರಿಸಲು ಕಟ್ಟೆಯನ್ನು ಕಟ್ಟಿದ್ದಾರೆ. ಬಂಡೆಯ ಮೇಲೆ ಒಂದು ಚಿತ್ರವನ್ನು ಕೆತ್ತಿದ್ದು ಮಹಿಳೆ ಪುರುಷನ ಕರುಳನ್ನು ಬಗೆಯುವ ಹಾಗೆ ಆ ಚಿತ್ರವಿದೆ. ರಾಯದುರ್ಗದ ದೊರೆಯ ಹೊಟ್ಟೆಯನ್ನು ಬಗಿದ ಸಂಕೇತ ಈ ಚಿತ್ರ ಎಂದು ಹೇಳುತ್ತಾರೆ.

ಆದರೆ ಯರಮಂಚಿನಾಯಕ ಈಕೆಯ ಮಾರ್ಗದರ್ಶನದ ಮೇರೆಗೆ ಅಲ್ಲಿಯ ಒಂದು ಕಿ.ಮೀ. ದೂರದಲ್ಲಿ ಲಿಂಗದ ಗುಡಿಯನ್ನು ಕಟ್ಟಿಸಿ ನೂರೊಂದು ಲಿಂಗಗಳನ್ನು ಪ್ರತಿಷ್ಠಾಪಿಸಿದ ಎಂಬುದು ಐತಿಹಾಸಿಕ ಸತ್ಯವಾಗಿದ್ದು ಈಗಲೂ ಈ ಗುಡಿ ಅಲ್ಲದೆ ಮತ್ತು ಸಂಬಂಧಿಸಿದ ವಿಧಿ ಆರಾಧನೆಗಳೂ ಅಲ್ಲಿ ಪ್ರತಿವರ್ಷ ನಡೆಯುತ್ತವೆ. ಈ ಮೂಲಗಳ ಮೂಲಕ ಈಕೆ ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿ ಎಂದು ಸ್ಪಷ್ಟೀಕರಿಸಲು ಸಾಧ್ಯವಾಗುತ್ತದೆ ಮತ್ತು ಮಾರಿಯ ಪುರಾಣದ ಕತೆಗಿಂತ ಈಕೆಯ ಕತೆ ಭಿನ್ನವಾಗುತ್ತದೆ. ಇದೇ ಗ್ರಾಮದಲ್ಲಿ ಊರುಮಾರಮ್ಮನ ದೇವಾಲಯ ಬೇರೆ ಇದ್ದು ಅಪರೂಪಕ್ಕೆ ಅಲ್ಲಿ ಊರುಮಾರಮ್ಮನ ಜಾತ್ರೆಯನ್ನು ಹಮ್ಮಿಕೊಳ್ಳಲಾಗುತ್ತದೆ. 'ಊರುಮಾರಮ್ಮನ ಕೋಣ' ಎಂದು ನಿರ್ದಿಷ್ಟವಾಗಿ ಹೆಸರಿಸಿ ಅದನ್ನು ತೊಂಡು ಮೇಯಲು ಬಿಟ್ಟು ಅದನ್ನು ಬಲಿಕೊಟ್ಟು ಪೂಜೆ ಮಾಡಲಾಗುತ್ತದೆ. ಈ ಮಾರಮ್ಮನನ್ನು ಪೂಜೆ ಮಾಡುವವರು ಅಕ್ಕಸಾಲಿಗರು. ಹಾಗಾಗಿ ಗೌರಸಮುದ್ರದ ಮಾರಿ ಊರಮಾರಿ ಅಲ್ಲ ಬದಲಾಗಿ ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿ ಈಕೆ ಎಂದು ಹೇಳಲು ಸಾಧ್ಯವಾಗುತ್ತದೆ.

ವರವು ತುಮ್ಮಲಯ್ಯ ಮಾರಮ್ಮನಿಗೆ ಕೋಣ ಮತ್ತು ಮಗನನ್ನು ಬಲಿಕೊಟ್ಟ ಪ್ರಸಂಗ ಈ ಪ್ರಾಂತ್ಯದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಕಥೆಯಾಗಿದೆ. ಇದೂ ಸಹ ಮಾರಮ್ಮನ ವಿಶೇಷ ಶಕ್ತಿಯನ್ನು ಹೇಳಲು ಹುಟ್ಟಿಕೊಂಡ ಕತೆ. ಹಸಿದ ಮಗನಿಗೆ ಅರಣ್ಯದಲ್ಲಿ ಪವಾಡ ಸದೃಶವಾಗಿ ಬನ್ನಿಯ ಎಲೆಯಮೇಲೆ ಪಂಚಭಕ್ಷ್ಯ, ಪರಮಾನ್ನಗಳನ್ನು ಬಡಿಸಿ ಹಸಿವು ನೀಗಿಸಿದ್ದಾಗಲೀ, ನಂತರ ತಂದೆ ಮತ್ತು ಮಗ ಇಬ್ಬರನ್ನು ಬಲಿತೆಗೆದುಕೊಂಡು ಮತ್ತೆ ಬದುಕಿಸಿಕೊಂಡದ್ದಾಗಲೀ ಆಕೆಯ ಶಕ್ತಿ, ಸಾಮಾರ್ಥ್ಯಗಳನ್ನು ಹೊಗಳಲು ಹುಟ್ಟಿಕೊಂಡ ಕತೆಯೇ ಹೊರತು ಬೇರೇನೂ ಅಲ್ಲ. ಇಲ್ಲಿ ಮತ್ತೊಂದು ವಿಚಾರವನ್ನು ನಾವು ಗಮನಿಸಿಸಲು ಸಾಧ್ಯವಿದೆ. ಸಾಮಾನ್ಯವಾಗಿ 'ಮಾರಿಯ ಪುರಾಣ' ವೆಂದರೆ ಬಲಿಯಾಗುವ ಕೋಣ' ಮಾರಮ್ಮನಿಗೆ ಗಂಡನಾಗಬೇಕು. ಬ್ರಾಹ್ಮಣರ ಮಹಿಳೆ ಹೊಲೆಯನನ್ನ ಮದುವೆಯಾಗಿ ನಂತರ ವಿಷಯ ತಿಳಿದು ಆತನ ಮೋಸಕ್ಕೆ ಪ್ರತಿಯಾಗಿ ಆತನನ್ನು ಅಂತ್ಯಗೊಳಿಸಿದಳು. ಅದರ ಪ್ರತೀಕವೇ ಈ ಕೋಣನ ಬಲಿ ಎಂಬ ಅಭಿಪ್ರಾಯವಿದೆ. ಆದರೆ ಇಲ್ಲಿ ಆ ಬಗೆಯ ಮಾರಿಯ ಪುರಾಣ ಪ್ರಚಲಿತವಿಲ್ಲ. ಬದಲಾಗಿ ಆ ದಿನ ಮಾರಮ್ಮ ತುಮ್ಮಲಯ್ಯನಿಗೆ ಹೇಳಿದ್ದು. ಈ ಕಾಡು ಬೆಟ್ಟದಲ್ಲಿ ಭಯಂಕರವಾದ ಕೋಣವೊಂದಿದೆ. ಅದನ್ನು ಯಾರಿಗೂ ನಿಗ್ರಹಿಸಲು ಸಾಧ್ಯವಾಗುತ್ತಿಲ್ಲ. ನೀನು ಹಿಡಿದು ತಾ ಎಂದು ಹೇಳುತ್ತಾಳೆ. ಅಂದರೆ ಇದು ನಂತರದಲ್ಲಿ ಹುಟ್ಟಿದ ಕತೆ ಎಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ 'ಕೋಣ' ಇಲ್ಲಿ ರೈತಾಪಿ ಸಮುದಾಯಕ್ಕೆ ಹೊಲಗದ್ದೆಗಳನ್ನು ಹಾಳು ಮಾಡುತ್ತಾ ತೊಂದರೆ ಕೊಡುತ್ತಿದ್ದ ಕಾರಣ ಅದನ್ನು ಹಿಡಿದು ತಂದು ಕೊಲ್ಲಬೇಕಾಗಿತ್ತು. ಕೊಲ್ಲುವ ಧೈರ್ಯ ಯಾರಿಗೂ ಇರಲಿಲ್ಲ. ಕಾರಣ ತಾವೇ ಅದರಿಂದ ಕೊಲ್ಲಲ್ಪಟ್ಟರೆ ಎಂಬ ಭಯ. ಹಾಗಾಗಿ ತಮ್ಮ ಅಂಕೆಯಲ್ಲಿ ಬಾಳುತ್ತಿರುವ ಶೋಷಿತ ಸಮುದಾಯವನ್ನು

ಇಂತಹ ಅಪಾಯಕ್ಕೆ ತಳ್ಳಲು ಸದಾ ಸಿದ್ಧವಾಗಿರುವ ಬಲಿಷ್ಟರು ಈತಸಿಂದ ಈ ಕೆಲಸ ಮಾಡಿದ್ದಾರೆ. ಮಾಡದಿದ್ದರೆ ನಿನ್ನ ಮಗನನ್ನೆ ಮಾರಮ್ಮನಿಗೆ ಬಲಿಕೊಡಬೇಕಾಗುತ್ತದೆ. ಎಂಬ ಎಚ್ಚರಿಕೆಯ ಪ್ರತೀಕವೇ ಆತ ಮಗನನ್ನು ಬಲಿಕೊಟ್ಟ ಪ್ರಸಂಗ ಎನಿಸುತ್ತದೆ.[೫೮] ಗೌರಸಮುದ್ರಕ್ಕೆ ಸಮೀಪದ ಹೊಸಹಳ್ಳಿಯ ಬಳಿ ಪೆಂಡೆಂಡು ಹಳ್ಳದ ಬಂಡೆ ಎಂಬ ಪ್ರದೇಶದಲ್ಲಿ ಬಂಡೆಯ ಮೇಲೆ ಕೋಣದ ಹೆಜ್ಜೆಗಳನ್ನು ಕೆತ್ತಲಾಗಿದೆ. ಅಲ್ಲಿ ಪಾದಗಳ ಗುರುತಿದ್ದು ಇದನ್ನು ಮಾರಮ್ಮನ ಹೆಜ್ಜೆಗಳು ಎಂದು ಹೇಳಲಾಗುತ್ತದೆ. ಜನಪದರು ಹೀಗೆ ಪುರಾಣ ಮತ್ತು ಐತಿಹ್ಯಗಳ ಮೂಲಕ ಗತವನ್ನು ಹಿಡಿದಿಟ್ಟುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಇವುಗಳೊಂದಿಗೆ ಆಚರಣೆಯೂ ಸೇರಿಕೊಂಡು ಒಟ್ಟು ನಂಬಿಕೆ ಇಲ್ಲಿ ಕೆಲಸ ಮಾಡುತ್ತದೆ.

**ಮಾರಮ್ಮನ ಬಗೆಗೆ ಇರುವ ಐತಿಹ್ಯಗಳು :**

**ತುಮ್ಮಲು**

ಮಾರಮ್ಮ ಹಿಂದೆ ನೆಲೆಸಿದ್ದ ಪ್ರಾಂತ್ಯ ಗೌರಸಮುದ್ರಕ್ಕೆ ಒಂದು ಕಿ.ಮೀ. ದೂರದಲ್ಲಿದೆ. ಇಲ್ಲಿ ಒಂದು ಆವರಣವಿದ್ದು ಇದರ ಒಳಗೆ ಮಾರಮ್ಮನ ಸಮಾಧಿ ಇತ್ತು ಎಂದು ಹೇಳುತ್ತಾರೆ. ಕುರುಹುಗಳಿಲ್ಲ. ಬದಲಾಗಿ ಎರಡು ಕಟ್ಟೆಗಳಿವೆ. ಈ ಕಟ್ಟೆಯ ಮೇಲೆ ಮಾರಮ್ಮನ ಪುಟ್ಟಿಯನ್ನು ಇಡಲಾಗುತ್ತದೆ. ಇಲ್ಲಿ ಒಂದು ಬಂಡೆಯ ಮೇಲೆ ಮಹಿಳೆ ಪುರುಷನ ಹೊಟ್ಟೆಯನ್ನು ಬಗೆಯುತ್ತಿರುವ ಚಿತ್ರವಿದೆ. ರಾಯದುರ್ಗದ ದೊರೆಯ ಹೊಟ್ಟೆಯನ್ನು ಬಗೆದ ದೃಶ್ಯವಿದು ಎಂದು ಹೇಳಲಾಗುತ್ತದೆ.

**ಪೆಂಡೆಂಡುಹಳ್ಳ :**

ತುಮ್ಮಲುವಿಗೆ ಒಂದು ಕಿ.ಮೀ. ವ್ಯಾಪ್ತಿಯ ಒಳಗೇ ಹೊಸಹಳ್ಳಿ ಎಂಬ ಗ್ರಾಮವಿದೆ. ಇದರ ಬಳಿ ಸ್ವಲ್ಪ ಎತ್ತರವಾದ ಒಂದು ವಿಶಾಲವಾದ ಬಂಡೆ ಅಲ್ಲಿದ್ದು ಅದರ ಮೇಲೆ ಕೋಣನ ಹೆಜ್ಜೆಯ ಗುರುತುಗಳಿದ್ದು ಅವು ಪಕ್ಕದಲ್ಲಿರುವ ದೊಣೆ (ಚಿಕ್ಕ ಸರೋವರ)ಯ ಕಡೆ ಚಲಿಸುತ್ತಿರುವಂತಿದೆ. ಇವು ಮಾರಮ್ಮನಿಗೆ ವರವು ತುಮ್ಮಯ್ಯ ಬಲಿಕೊಟ್ಟ ಕೋಣನ ಹೆಜ್ಜೆಗುರುತುಗಳು ಎಂದು ಹೇಳುತ್ತಾರೆ. ಕೆಲವರ ಪ್ರಕಾರ ಹೊಟ್ಟೆಣ್ಣನಾಯಕ ಯರಮಂಚನಾಯಕನ ಗುಂಪಿನವರಿಗೆ ಮೋಸದಿಂದ ಕೋಳಿಸಾರಿನ ಊಟ ಹಾಕಿದ ಲಂಕಿಣಿ ದೊಣೆ ಇದೆ. ಮತ್ತೆ ಅಲ್ಲಿಂದ ಮ್ಯಾಸಬೇಡರು ಎಮ್ಮೆಗಳನ್ನು ತಂದು ಅದರಲ್ಲಿ ಒಂದು ಎಮ್ಮೆಯನ್ನು ಕೊಯ್ದು ಸೇಡು ತೀರಿಸಿಕೊಂಡ ಪ್ರಸಂಗ ಇಲ್ಲಿಯೇ ನಡೆದದ್ದು ಎಂಬುದಾಗಿದೆ.

**ಅಡಗುಪ್ಪೆ ಅರಣ್ಯದಲ್ಲಿ :**

ರಾಯದುರ್ಗಕ್ಕೆ ಮಾರಮ್ಮ ಯರಬೊಮ್ಮಳ ನಾಯಕನನ್ನು ಕೊಲ್ಲಲೆಂದು ಹೋಗುವಾಗ ದಾರಿಯಲ್ಲಿ ಈ ಅರಣ್ಯದಲ್ಲಿ ವಿಶ್ರಮಿಸಿಕೊಳ್ಳಲು ಒಂದು ಬಂಡೆಯ ಮೇಲೆ ಕುಳಿತು ಕೊಳ್ಳುತ್ತಾಳೆ. ಎಲೆ ಅಡಿಕೆ ಅಗಿದು ಅಲ್ಲಿ ಉಗುಳುತ್ತಾಳೆ. ಆ ರಸ ಬಿದ್ದ ಸ್ಥಳ ಕೆಂಪಗಾಗಿದೆ ಎಂದು ಪ್ರತೀತಿ.

---

[೫೮] ಡಾ. ಹಿರೆಮಠ್‌ರು ನರಬಲಿ ಇರುವ ಪ್ರಚಲಿತ ಕತೆಗಳ ಬಗ್ಗೆ ಉಲ್ಲೇಖ ಮಾಡುತ್ತಾರೆ. ಪು.೨೩೪,೨೩೫, ಕೃತಿ-ಜಾತ್ರೆಗಳು.

**ಬಳೆಗಾರಜ್ಜನ ಗುಡ್ಡೆ :**

ತುಮ್ಮಲುವಿನಲ್ಲಿ ರಾತ್ರಿಯಾದ ಮೇಲೆ ಉಳಿಯಬಾರದು ಎಂದು ಇಂದಿಗೂ ಪ್ರತೀತಿ ಇದೆ. ಒಂದೆ ದಟ್ಟವಾದ ಕಾನಿದ್ದು, ಕುರಿಕೋಣ, ಕೋಳಿ ಬಲಿಕೊಟ್ಟ ಸ್ಥಳದಲ್ಲಿ ಜಾತ್ರೆಯ ದಿನ ಕ್ರೂರಪ್ರಾಣಿಗಳು ರಾತ್ರಿಯ ವೇಳೆಬರುತ್ತಿದ್ದಿರಬಹುದು. ಆದರೆ ಅಲ್ಲಿ ರಾಕ್ಷಸಿಯ ಅವತಾರದಲ್ಲಿ ಮಾರಮ್ಮ ತಿರುಗುತ್ತಾಳೆ ಎಂಬ ನಂಬಿಕೆ ಇದೆ. ಒಬ್ಬ ಬಳೆಗಾರ ಸಂಜೆಯಾದರೂ ಅಲ್ಲಿಯೇ ಇದ್ದ. ಮಾರಮ್ಮನೇ ಮತ್ತೆ ಬಳೆ ತೊಟ್ಟುಕೊಳ್ಳುವವಳಂತೆ ಬಂದು ಇಲ್ಲಿರಬೇಡ ಹೋಗು ಎಂದಳಂತೆ. ಹೊರಟ ಆತ, ಕುತೂಹಲ ತಾಳಲಾರದೆ ಮಾರ್ಗಮಧ್ಯೆ ಹಿಂದಿರುಗಿ ನೊಡಲು ಅಲ್ಲಿಯೇ ರಕ್ತಕಾರಿ ಪ್ರಾಣಬಿಟ್ಟ. ಅದೇ ಸ್ಥಳದಲ್ಲಿ ಆತನನ್ನು ಸಮಾಧಿ ಮಾಡಿದರು ಎನ್ನುತ್ತಾರೆ. ಕಾವ್ಯ ಆಚರಣೆ ಐತಿಹ್ಯ, ನಂಬಿಕೆಗಳು ಒಟ್ಟಾರೆ ಈಕೆ ಮೂಲತಃ ಒಬ್ಬ ಮಾನವಿ, ಜೀವಿತಕಾಲ ದನಂತರ ಜನಮನದಲ್ಲಿ ದೈವೀಕ ಸ್ಥಾನವನ್ನು ಪಡೆದವಳು ಎಂಬುದನ್ನು ಸಮರ್ಥಿಸುತ್ತವೆ.

**೩.೫ ಸಮುದಾಯದ ಸ್ಮರಣೆಯಲ್ಲಿ ಉಳಿದಿರುವ ಇನ್ನಿತರ ಮಹಿಳೆಯರು :**

ಇಂದಿನ ಸಂದರ್ಭದಲ್ಲಿ ಇಲ್ಲಿ ಪರಿಚಯಿಸಲಾಗುವ ಮಹಿಳೆಯರು ಹಿಂದೆ ಮಾಡಿದ್ದ ಕೆಲಸಕಾರ್ಯಗಳನ್ನು ಗಮನಿಸಿದಾಗ ಅವು ಅತೀ ಮಹತ್ವ ಪೂರ್ಣವಾದ ಕಾರ್ಯಗಳೇನಲ್ಲ ಎನಿಸಬಹುದು. ಆದರೆ ಅವರ ಅಂದಿನ ಪರಿಸರದಲ್ಲಿ ಅಷ್ಟೇ ಮಹತ್ವ ಅವರ ಆ ಕೆಲಸ ಕಾರ್ಯಗಳಿಗೆ ಇತ್ತು. ಬಹುಶಃ ಈ ಹಿನ್ನೆಲೆಯಿಂದಲೇ ಇವರನ್ನು ಗತಕ್ಕೆ ತಳ್ಳದೆ ವರ್ತಮಾನದಲ್ಲು ಸ್ಮರಣೆ, ಆರಾಧನೆಗಳ ಮೂಲಕ ಉಳಿಸಿಕೊಂಡು ಬಂದಿರುವಲ್ಲಿ ಅವರ ಅನನ್ಯತೆ ಮತ್ತು ಮಹಿಳೆಗೆ ಸಮುದಾಯ ತೋರುತ್ತಿದ್ದ ಗೌರವ, ಪ್ರಾಧಾನ್ಯತೆಯನ್ನು ಗುರುತಿಬಹುದಾಗಿದೆ.

**ತಮ್ಮಟಕಲ್ಲಿನ ಓಬವ್ವ :**

ಅಕ್ಕರಾಯಮ್ಮನ ಸೋದರರ ಸಂತತಿಯಲ್ಲಿ ಬರುವ ಒಬ್ಬ ವ್ಯಕ್ತಿ ಯರಗಾಟನಾಯಕ ಈತ ಗೋಣೂರು ಕಟ್ಟೆ ಮನೆಗೆ ದೊರೆಯೆಂದು ಪರಿಗಣಿಸಲ್ಪಟ್ಟಿದ್ದ. ಈತನ ಸಾವಿನ ಹಿಂದೆ ಒಂದು ಘಟನೆ ಇದ್ದು ಅದು ತಮ್ಮಟಗಲ್ಲಿನ ಓಬವ್ವನಿಗೆ ಸಂಬಂಧಿಸಿದುದಾಗಿದೆ. ಈಕೆ ಅಪ್ರತಿಮ ಚೆಲುವೆಯಾಗಿದ್ದಳು. ಮ್ಯಾಸ ಮಂಡಲದಾದ್ಯಂತ ಈಕೆಯ ಸೌಂದರ್ಯದ ಪ್ರಶಂಸೆ ನಡೆಯುತ್ತಿತ್ತು. ಈಕೆಯನ್ನು ವಿವಾಹವಾಗಲು ಅನೇಕ ಜನ ಬಯಸಿದ್ದರು. ಹೀಗಿರುವಾಗ ನಿಡುಗಲ್ಲಿನ ಪಾಳೆಯಗಾರನಾದ ಹೊಟ್ಟೆಣ್ಣನಾಯಕನ ಸ್ನೇಹಿತ ಬಾಗೇನಾಳು ಕಾಮನಾಯಕ ಈಕೆಯನ್ನು ವರಿಸಲು ಬಂದು ಅವಳು ಇಷ್ಟಪಡದಿರಲು ಅವಮಾನಿತನಾಗಿ ಹಿಂದಿರುಗಿರುತ್ತಾನೆ. ಆಕೆ ಅವನನ್ನು ನಿರಾಕರಿಸಲು ಕಾರಣವೂ ಇರುತ್ತದೆ. ಮ್ಯಾಸಬೇಡರ ಪಶುಗಂಪಳನ್ನು ಹೇಗಾದರೂ ತನ್ನದಾಗಿಸಿಕೊಳ್ಳಬೇಕೆಂದು ಪದೇ ಪದೇ ಕಾಟ ಕೊಡುತ್ತಿದ್ದ ಹೊಟ್ಟಣ್ಣನಾಯಕನಿಗೆ ಈ ಕಾಮನಾಯಕ ಸಹಾಯಕನಾಗಿದ್ದ. ಹಿಂದೆ 'ರಣಗಂಬ'ಗಳ ಬಳಿ ಅಕ್ಕರಾಯಮ್ಮನ ಮಾರ್ಗದರ್ಶನದಲ್ಲಿಯೇ

ಮ್ಯಾಸಬೇಡರು ಹೊಟ್ಟೆಣ್ಣನಾಯಕನನ್ನು ಹಿಮ್ಮೆಟ್ಟಿಸಿದ್ದರು. ಇಂತಹವನ ಸ್ನೇಹಿತನನ್ನು ಮದುವೆಯಾಗಲು ಇವಳ ಮನಸ್ಸು ಒಪ್ಪುವುದಿಲ್ಲ. ಈ ಕಾಮನಾಯಕನ ಬಳಿ 'ಗೊಡ್ಡುಗಾಳಿ;' ಎಂಬ ಕೊಬ್ಬಿದ ಹಸುವಿರುತ್ತದೆ. ಇದರ ಕತ್ತಿಗೆ ಇವನು ಚಿನ್ನದ ಬೃಹತ್ ಗಂಟೆಯನ್ನು ಕಟ್ಟಿದ್ದ. ಇದು ಆತನ ಪ್ರತಿಷ್ಠೆಯನ್ನು ಹೆಚ್ಚಿಸಿದ ಹಸುವಾಗಿತ್ತು. ತನ್ನಲ್ಲಿರುವ ವಿಶೇಷವಾದ ಹಸು, ಎತ್ತುಗಳ ಮೂಲಕವೆ ಹಿಂದೆ ಸಮುದಾಯಗಳು ಪ್ರತಿಷ್ಠೆ ಪಡೆಯುತ್ತಿದ್ದದ್ದೂ ಉಂಟು. ಈ ಹಸುವಿನ ಮಾಂಸವನ್ನು ಸುಟ್ಟು ನನಗೆ ತಂದು ಕೊಟ್ಟರೆ ಅವರನ್ನು ಮದುವೆಯಾಗುತ್ತೇನೆ ಎಂದು ಓಬವ್ವ ತನ್ನನ್ನು ಬಯಸಿ ಬಂದವರಿಗೆ ಷರತ್ತು ಹಾಕುತ್ತಾಳೆ. ಅಂದರೆ ಆತನ ಹಸುವನ್ನು ಹಿಡಿದು ತಂದು ಕೊಂದು ತಿನ್ನುವುದು ಆತನಿಗೆ ಮಾಡುವ ಅವಮಾನದ ಒಂದು ವಿಧಾನ ಎಂದು ಆಕೆ ತೀರ್ಮಾನಿಸಿದ್ದಳು. ಗೋಣೂರಿನ ದೊರೆಯಾದ ಶೂರಯರಗಾಟನಾಯಕ ಈ ಷರತ್ತಿಗೆ ಒಪ್ಪಿಕೊಂಡು ಬಾಗೇನಾಳಿಗೆ ಹೋಗುತ್ತಾನೆ. ಒಂದು ದೊಡ್ಡ ಬಟ್ಟೆಯ ಗಂಟನ್ನು ಹಸುವಿಗೆ ಕಟ್ಟಿದ್ದ ಗಂಟೆಯ ಬಾಯಿಗೆ ತುರುಕಿ ಅದನ್ನು ಹಿಡಿದು ಹೊರಗೆ ತರುತ್ತಿರುವಾಗ ಅದರ ಗೊರಸು ಬಾಗಿಲಿಗೆ ತಗುಲಿ ಶಬ್ದವಾಗುತ್ತದೆ. ಅಲ್ಲಿಗೂ ಬಿಡದೆ ಧೈರ್ಯದಿಂದ ಓಡಿ ಬಂದು ಒಂದು ಬಂಡೆಯ ಮೇಲೆ ಹಸುವನ್ನು ಕೊಯ್ದು ಅದರ ಸತುವಿನ ಭಾಗ ಸುಟ್ಟು ಒಂದು ಕಡ್ಡಿಗೇರಿಸಿ ತಂದು ಓಬವ್ವನಿಗೆ ಕೊಡುವುದರ ಮೂಲಕ ಆಕೆಯ ವಿಶ್ವಾಸಕ್ಕೆ ಪಾತ್ರನಾಗಿ ಆಕೆಯೊಂದಿಗೆ ಸಂಬಂಧ ಬೆಳೆಸುತ್ತಾನೆ. ನಿಡುಗಲ್ಲಿನಲ್ಲಿದ್ದ ಕಾಮನಾಯಕ ಗಂಟೆಯ ಶಬ್ಧ ಕೇಳಿ ಏನು ಅನಾಹುತವಾಯಿತು ಎಂದು ಹಿಂಬಾಲಿಸಿಕೊಂಡು ಬರುವ ವೇಳೆಗೆ ಯರಗಾಟನಾಯಕ ಆಗಲೇ ಓಬವ್ವನ ಬಳಿ ಇರುತ್ತಾನೆ. ಯರಗಾಟನಾಯಕ ಈಕೆಯನ್ನು ಪಡೆಯಲೇ ಬೇಕೆಂಬ ಆಸೆಯಿಂದ ಈ ಸಾಹಸಕ್ಕೆ ಕೈಹಾಕುತ್ತಾನೆ. ಯಶಸ್ವಿಯಾಗುತ್ತಾನೆ. ಒಮ್ಮೆ ಯರಗಾಟನಾಯಕ ಈಕೆಯ ಮನೆಗೆ ಬಂದು ಹಿಂತಿರುಗುತ್ತಿರುವಾಗ ಹೊಂಚು ಹಾಕಿ ಕಾದು ಕುಳಿತಿದ್ದ ಗುಜಗುತ್ತಲ ಕ್ಯಾಸಯ್ಯ ಎಂಬಾತ (ಈತನೂ ಓಬವ್ವನಿಗೆ ಆಸೆಪಟ್ಟು, ಪಡೆಯಲಾರದೆ ನಿರಾಶನಾಗಿದ್ದ). ಬಾಣ ಬಿಡಲು ಇದೇ ಕಾರಣದಿಂದ ಈ ಯರಗಾಟನಾಯಕ ಮರಣ ಹೊಂದುತ್ತಾನೆ.

ಇಲ್ಲಿ ನಮಗೆ ಮುಖ್ಯವಾಗಿ ಬೇಕಾದುದು ಓಬವ್ವನ ಆಲೋಚನೆ. ತನ್ನ ಸೌಂದರ್ಯವನ್ನೆ ಒಂದು ಅಸ್ತ್ರವನ್ನಾಗಿ ಬಳಸಿಕೊಂಡು ತನ್ನ ಸಮುದಾಯಕ್ಕೆ ಕಂಟಕನಾಗಿದ್ದ ಹೊಟ್ಟಣ್ಣ ನಾಯಕನಿಗೆ ಸಹಾಯ ಮಾಡುತ್ತಿದ್ದ ಮತ್ತೊಬ್ಬ ಪಾಳೆಯಗಾರ ಕಾಮನಾಯಕನನ್ನು ಹಿಮ್ಮೆಟ್ಟಿಸಲು ಪ್ರಯತ್ನ ಮಾಡಿದವಳೀಕೆ. ಸೋಮಾರಿತನ ಮೈಗೂಡಿಸಿಕೊಳ್ಳುತ್ತಿದ್ದ ಮ್ಯಾಸರ ಯುವಶಕ್ತಿಯ ಮನಸ್ಸಿನಲ್ಲಿ ಛಲವನ್ನು ತುಂಬಿದ ಅವಳಿಗೆ ಸಮುದಾಯದ ಮೇಲಿದ್ದ ಅಭಿಮಾನ, ಅದರ ಪ್ರತಿಷ್ಠೆಯನ್ನು ಉಳಿಸಬೇಕೆಂಬ ಆಸೆಯೇ ಕಾರಣವಾಗಿ ನಿಬಂದನೆ ಒಡ್ಡಿದ್ದಳೇ ಹೊರತು ಮಾಂಸ ತಿನ್ನುವ ಆಸೆಯಿಂದಲ್ಲ. ಹಿಂದೆ ಅಕ್ಕರಾಯಮ್ಮ ಈ ಹೊಟ್ಟೆಣ್ಣನಾಯಕನನ್ನು ರಣಗಂಬಗಳ ಬಳಿ ನಡೆದ ಹೋರಾಟದಲ್ಲಿ ಹಿಮ್ಮೆಟ್ಟಿಸಿದ್ದಳು. ಈ ಹಿರಿಯಳನ್ನೇ ಮಾದರಿಯನ್ನಾಗಿರಿಸಿಕೊಂಡು ತನ್ನ ಸಮುದಾಯದ ಘನತೆಯನ್ನು ಉಳಿಸಲು ಪ್ರಯತ್ನಿಸುತ್ತಿದ್ದ ಈಕೆ ಈ ಮೂಲಕ ಹೊಟ್ಟಣ್ಣನಾಯಕನಿಗೂ ಅವಮಾನ ಮಾಡುತ್ತಾಳೆ. ಹಿಂದೆ ಪಶುಸಂಪತ್ತೆ ತಮ್ಮ ಪ್ರತಿಷ್ಠೆಗೆ ಕಾರಣವಾಗಿದ್ದ ಸಂದರ್ಭದಲ್ಲಿ ತಮ್ಮ ವೈರಿಗಳು ತಮ್ಮ ದನಕರುವಶಪಡಿಸಿಕೊಂಡರೆ, ಕೊಂದರೆ ದೊಡ್ಡ

ಅವಮಾನ ಎಂದು ಭಾವಿಸುತ್ತಿದ್ದ ಸಂದರ್ಭವದು. ಹೀಗೆ ತಮ್ಮ ಶತ್ರುವಿಗೆ ಅವಮಾನ ಮಾಡಿ ತನ್ನ ಸಮುದಾಯದ ಘನತೆ ಕಾಪಾಡಲು ಪ್ರಯತ್ನಿಸಿದ ಮಹಿಳೆ ಈ ಒಬವ್ವ.

**ಅರವಜ್ಜ :**

ಮ್ಯಾಸಬೇಡರಲ್ಲಿ ವಿಶೇಷವಾಗಿ ಪೂಜೆಯನ್ನು ಪಡೆಯುತ್ತಿರುವ ಮಹಿಳೆ ಈಕೆ. ನನ್ನಿವಾಳ (ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಬಳಿ)ದ ಹತ್ತಿರ ಈಕೆಯ ಸಮಾಧಿ ಇದ್ದು ಇದನ್ನೇ ಪೂಜಿಸುತ್ತಾರೆ. ಈ ಸಮಾಧಿ ಇರುವ ಸ್ಥಳವನ್ನು 'ಅರವಬ್ಬವಿಣು'ಎನ್ನುತ್ತಾರೆ. 'ವಿಣು ಎಂದರೆ 'ದಿನ್ನೆ' ಎಂದರ್ಥ. ಇದರ ಪಕ್ಕದಲ್ಲೆ ಮುದ್ದಕ್ಕ ರಾಯಲ ಬಂಡೆ ಇದೆ. ನಾಯಕನಹಟ್ಟಿಯ ಬಳಿ ಇರುವ ಹೊಸಗುಡ್ಡದ ಆಸುಪಾಸಿನ ಪ್ರದೇಶವನ್ನು 'ಪೆದ್ದ ತಿಪ್ಪಲು' ಅಂದರೆ ಹಿರಿತಿಪ್ಪೆ – ತಿಪ್ಪೆ ಅಂದರೆ ಇಲ್ಲಿ 'ಮಟ್ಟಿ' ಎಂದರ್ಥ. ಕಾವಲಿನಲ್ಲಿ ಅಕ್ಕರಾಯಮ್ಮನೊಂದಿಗೆ ಮ್ಯಾಸಗಂಪಳ ನೆಲೆಸಿರುತ್ತದೆ. ನಂತರ ಇದೇ ಸಮುದಾಯದ ಉಳಿದ ಗುಂಪುಗಳೂ ಬಂದು ಸುತ್ತಮುತ್ತ ನೆಲೆಸುತ್ತವೆ. ರಾಯಮ್ಮನ ತಂಡದವರು ಬೇಟೆಗೆ ಹೊದಾಗ ಅರವಜ್ಜಿಯ ಪರಿಚಯವಾಗುತ್ತದೆ. ಒಮ್ಮೆ ಅನಾಥ ಹುಡುಗನೊಬ್ಬ ಇವರಿಗೆ ಸಿಕ್ಕುತ್ತಾನೆ. ತಮ್ಮದೇ ಹೋಲಿಕೆ ಇದ್ದ ಆತ ತನ್ನನ್ನು ಅರವಜ್ಜ ಸಾಕಿದ್ದಾಳೆ ಎಂದು ಹೇಳುತ್ತಾನೆ. ಬೈಗೊಂಡರಾಜ ಸೂರ್ಯನ ದಾಳಿಗೆ ಹೋಗಿ ಅಂದ ನಂತರ ಕಾಣೆಯಾಗಿರುತ್ತಾನೆ. ರಾಯಮ್ಮ ಈ ಹುಡುಗನನ್ನು ನೋಡಿ ತನ್ನ ತಮ್ಮನಾದ ಬೈಗೊಂಡ ರಾಜನ ಹಾಗೆಯೇ ಇದ್ದಾನೆ. ಈ ಅರವಜ್ಜಿ ತಮ್ಮವಳೇ ಎಂದು ಗುರುತಿಸುತ್ತಾಳೆ. ಈ ಹುಡುಗನೆ ಮುಂದೆ ಹಟ್ಟಿಯ ದೊರೆಯಾಗುತ್ತಾನೆ.

ಈಕೆ ತುಂಬಾ ಜಾಣೆಯಾಗಿದ್ದಳು. ಮತ್ತು ಗಾದ್ರಿಪಾಲನಾಯಕನ ಸೋದರತ್ತೆ ಈಕೆ ಎಂಬ ಅಭಿಪ್ರಾಯವು ಸಮುದಾಯದಲ್ಲಿದೆ. ಈಕೆಯೊಬ್ಬ ಪ್ರಭಾವಿ ಹೆಂಗಸಾಗಿದ್ದು ಅಕ್ಕರಾಯಮ್ಮನ ಜೊತೆ ಪ್ರಮುಖ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದಳು ಎಂದು ಹೇಳಲಾಗುತ್ತದೆ.

ಅರ[೫೯] ಎಂದರೆ ತೆಲುಗು ಪದಕೋಶದ ಪ್ರಕಾರ ಪೂಜಾರಿ, ಶಿಕ್ಷಕಿ, ಅಡಿಗೆ ಮಾಡುವವರು, ಹಸುಗಳಿಗೆ ಆಹಾರ ಪೂರೈಸುವ ಕೆಲಸದ ಮೇಲ್ವಿಚಾರಣೆಯನ್ನು ತಾನೇ ಸ್ವತಃ ಮಾಡುವವಳು ಎಂದು ಅರ್ಥವಿದೆ. ಪಶುಪಾಲಕತನದ ಹಿನ್ನೆಲೆಯಲ್ಲಿ ನೋಡಿದಾಗ ಈ ಕೊನೆಯ ಅರ್ಥವೆ ಸಮಂಜಸವಾದುದೆನಿಸುತ್ತದೆ. ಹೀಗೆ ಸ್ವತಃ ಪಶುಪಾಲನೆಯ ಕಡೆ ಶ್ರದ್ಧೆಯಿಂದ ಗಮನಹರಿಸಿದ್ದ ಮಹಿಳೆ ಈಕೆ ಎಂಬುದಂತೂ ಸ್ಪಷ್ಟವಾಗುತ್ತದೆ. ನನ್ನಿವಾಳ ಒಂದು ಕಟ್ಟಿಮನೆಯಾಗಿದ್ದು ಇಲ್ಲೊಬ್ಬ ದೊರೆಯೂ ಇರುತ್ತಾನೆ. ಈ ಊರಿನ ಸುತ್ತ ಮುತ್ತ ಅನೇಕ ಮ್ಯಾಸಬೇಡರ ಹಟ್ಟಿಗಳಿದ್ದು ಇವರೆಲ್ಲಾ ಸೇರಿ ಅರವಜ್ಜಿ ಜಾತ್ರೆ ಮಾಡುತ್ತಾರೆ.

ನನ್ನಿವಾಳದ ಸುತ್ತಮುತ್ತಲ ಹಟ್ಟಿಗಳವರು ತಮ್ಮ ತಮ್ಮ ದೇವರುಗಳನ್ನು ಹಟ್ಟಿಯಲ್ಲೆ ಅಲಂಕರಿಸಿ ಪೂಜಿಸುತ್ತಾರೆ. ಎರಡನೆಯ ದಿನ ನನ್ನಿವಾಳದ ಕಟ್ಟಿ ಮನೆ ದೇವರಿಗೆ ಅಂದರೆ ಕಟ್ಟಿಮನೆಯ ಒಳಗೆ

---

[೫೯] Digital Dictionery of South Asia, A Telugu English Dictionary by JPL Gwyann (www.uchicago.edn.).

ಗುಡುಸಲಿನಲ್ಲಿರುವ ಮುತ್ತಿಗಾರರ ದೇವರಿಗೆ ಪೂಜೆ ಸಲ್ಲುತ್ತದೆ. ಮಾರನೆಯ ದಿನ ಸುತ್ತಲಿನ ಹಟ್ಟಿಗಳ ಜನ ತಮ್ಮ ದೇವರುಗಳೊಂದಿಗೆ ಕಟ್ಟೆಮನೆಯ ಬಳಿ ಬಂದು ಉದಿ-ಪದಿ (ಸೊಪ್ಪಿನ ಗುಡಿಸಲು -ಸುತ್ತ ಆವರಣ) ಕಟ್ಟಿಕೊಂಡು ಅದರಲ್ಲಿ ತಮ್ಮ ದೇವರನ್ನಿಟ್ಟು ಪೂಜೆ ಸಲ್ಲಿಸುತ್ತಾರೆ. ಒಬ್ಬರು ಮತ್ತೊಬ್ಬರ 'ಪದಿ'ಗೆ ಹೋಗುವುದಿಲ್ಲ.

ಆದಿನ ಸಾಯಂಕಾಲ ಕಾಸು-ಮೀಸಲು ಅರ್ಪಿಸಿ ಪಂಜು ಹಚ್ಚುವ ಕಾರ್ಯಕ್ರಮ ಮರುದಿನ ಬೆಳಗಿನ ಜಾವದ ವೇಳೆಗೆ ಮುಗಿಸುತ್ತಾರೆ. ನಂತರ ಈ ಪಂಜಿನ ದಾಸಯ್ಯಗಳು ಕುಣಿಯುತ್ತಾರೆ. ನಂತರ ಪಂಜು ನುಂಗುವ ಕಾರ್ಯಕ್ರಮ ನಡೆಯುತ್ತದೆ. ಆನೇಯ ದಿನ ಜಾತ್ರೆಗೆ ಬಂದ ದೇವರುಗಳಿಗೆ ಪೂಜೆ ಮಾಡಿ ದೇವರ ಪ್ರಸಾದ ಎಂದು ಮಜ್ಜಿಗೆ ಅಂಬಲಿ ಹಂಚುತ್ತಾರೆ. ಇಲ್ಲಿಂದ ಹೊರಟ ದೊರೆ ಛತ್ರಿ-ಚಾಮರಗಳ ಸೇವೆಯ ಮಧ್ಯೆ ಕಟ್ಟೇಮನೆಗೆ ಬಂದ ಎಲ್ಲಾ ದೇವರುಗಳಿಗೂ ಪೂಜೆ ಸಲ್ಲಿಸಿ ತನ್ನ ಸಿಂಹಾಸನದ ಮೇಲೆ (ಒಂದು ಕಟ್ಟೆ) ಕುಳಿತುಕೊಳ್ಳುತ್ತಾನೆ. ಕಟ್ಟೆ ಮನೆಗೆ ಸೇರಿದವರೆಲ್ಲಾ ನಮಸ್ಕರಿಸುತ್ತಾರೆ. ದೊರೆ ಎಲ್ಲರ ಸಮಸ್ಯೆ, ಪರಿಹಾರ ಕಾಣುವ ಸಮಸ್ಯೆಗಳಿಗೆ ಪರಿಹಾರ ಹೇಳಿ ಆ ವರ್ಷ ನಡೆಸಬೇಕಾದ ಕಾರ್ಯಕ್ರಮಗಳ ಬಗ್ಗೆ ತಿಳಿಸುತ್ತಾನೆ. ನಂತರ ಜಾತ್ರೆಗೆ ಸೇರಿದ ಎಲ್ಲರೂ ಎದ್ದು ನಿಂತು ತಲೆಬಾಗಿಸಿ ಕೈಯನ್ನು ಮುಂದೆ ಚಾಚಿ ಬಗ್ಗಿ ದೊರೆಗೆ ನಮಸ್ಕರಿಸುತ್ತಾರೆ. ಈ ದೊರೆಯ ತಾಯಿ ಹಿಂದೆ ಇಸ್ಲಾಂ ಧರ್ಮದ ಮಹಿಳೆಯಾದ ಕಾರಣ ಈ ಬಗೆಯ ಆಚರಣೆ ಇದೆ. ನಂತರ ಎತ್ತುಗಳನ್ನು ಹರಿಯಿಸಿ ಆದ ಮೇಲೆ ಎತ್ತುಗಳು ಗೂಡು ಸೇರುತ್ತವೆ. ಮರುದಿನ ದೇವರುಗಳು ತಮ್ಮ ಹಟ್ಟಿ ಸೇರಿ ಕೊಳ್ಳುತ್ತವೆ. ಆರನೆಯ ದಿನ ನನ್ನಿವಾಳದಿಂದ ಗಾದರಿಪಾಲ ನಾಯಕ ದೇವರನ್ನು ಹೊರಡಿಸಿಕೊಂಡು ಛತ್ರಿ ಚಾಮರಗಳ ಮಧ್ಯೆ ದೊರೆ ನಿಲುವಂಗಿ ಧರಿಸಿ ಜನ ಸಮುದಾಯದೊಂದಿಗೆ ಅರವಜ್ಜಿಯ ಸಮಾಧಿಯ ಬಳಿ ಬರುತ್ತಾನೆ. ಇದಕ್ಕೆ ಹತ್ತಿರದಲ್ಲಿರುವ ಸೂರೇ ಯರಗಾಟ ನಾಯಕನ ಗುಡಿ ಹತ್ತಿರಆ ರಾತ್ರಿ ಮುತ್ತಿಗಾರರ ೭ ಮಂದಿ ಹಿರಿಯರು ಯಾರಿಗೂ ಕಾಣದಂತೆ ಎಣ್ಣೆ ಕುಡಿಯುತ್ತಾರೆ. ಇದೊಂದು ಬಗೆಯ ಶಿಕ್ಷೆ, ಅರವಜ್ಜಿಗೆ ವಿರೋಧವಾಗಿ ನಡೆದುಕೊಂಡದ್ದು ಕಾರಣವಾಗಿ ಶಿಕ್ಷೆ ರೂಪದಲ್ಲಿ ಈ ಆಚರಣೆಬಂದಿರಬಹುದು. ನಂತರ ಎಲ್ಲರೂ ಸಮಾಧಿಗೆ ಕಾಸು ಮೀಸಲು ಅರ್ಪಿಸುತ್ತಾರೆ. ಪೂಜೆ ಪ್ರಾರಂಭವಾಗಿ ರಾತ್ರಿಯೆಲ್ಲಾ ನಡೆದು ಬೆಳಗಿನ ಜಾವ ಅರವಜ್ಜಿ ಸಮಾಧಿಗೆ ವಾಸೆ ಕೊಯ್ಯುತ್ತಾರೆ. ಸುಮಾರು೮-೧೦ ಕುರಿ ಬಲಿ ಕೊಡುತ್ತಾರೆ. ಇದೂ ವಿಶೇಷವೇ.

ದೊಮ್ಮಲವರು - ಎಂಬ ಬೆಡಗಿನವರು ಕುರಿಯ ಗುಂಡಿಗೆಗೆ ತಿವಿಯುತ್ತಾನೆ.

ಇರುವೆ - ಶ್ವಾಸಕೋಶಕ್ಕೆ ತಿವಿಯುತ್ತಾನೆ.

ಚರ್ಮ - ಚರ್ಮ ಸುಲಿಯುತ್ತಾನೆ. (ತೋಲವರು).

ಪಚ್ಚಿ - ಪಚ್ಚಿಲರು ಕರುಳು ಪಚ್ಚಿ ಬಗೆಯುತ್ತಾರೆ.

ಇದೇ ವಿಧಾನದಲ್ಲಿ ಆಯಾ ಭಾಗ ತಿವಿದವರಿಗೇ ಅದನ್ನು ಹಂಚಲಾಗುತ್ತದೆ. ಉಳಿದದ್ದನ್ನು ಅಡಿಗೆ ಮಾಡಿ ಅರವಜ್ಜಿಗೆ ಎಡೆ ಹಾಕುತ್ತಾರೆ. ಮರುದಿನ ದೇವರ ಎತ್ತುಗಳನ್ನು ಓಡಿಸಿ ಭಕ್ತಾದಿಗಳು

ಕಾಸು–ಮೀಸಲು ಅರ್ಪಿಸುತ್ತಾರೆ. ಮಾಡಿದ ಮಾಂಸದ ಅಡಿಗೆಯನ್ನು ಎಲ್ಲರಿಗೂ ಬಡಿಸುತ್ತಾರೆ. ಓಗೆ ಇದು ಒಟ್ಟು ೭ ದಿನಗಳ ಆಚರಣೆಯಾಗಿದೆ. ಆಕ್ರಮಣ ಮಾಡಿದ ಹುಲಿಗೆ ಓಂದೆ ಗಾದ್ರಿಪಾಲಕನಾಯಕನೇ ಹೆದರಿ ಬೇರೆ ದಾರಿ ಹುಡುಕಿ ಹೊರಗೆ ಹೊರಟ. ಆಗ ಈತನ ಜೊತೆಯಲ್ಲಿ ಈತನ ಸೋದರತ್ತೆಯಾದ ಅರವಬ್ಬ ಇದ್ದಳು. ಜೊತೆಗೆ ಜಜ್ಜಲಬ್ಬ, ಯರದಾಯಬ್ಬ, ಗುಡ್ಡೆಬ್ಬ, ಕಡಸಲಬ್ಬ ಗಟ್ಟಿಮೀದಬ್ಬ ಎಂಬ ಮಹಿಳೆಯರಿದ್ದು ವಯಸ್ಸಾದ ಮಹಿಳೆಯಾಗಿದ್ದಕಾರಣ ಮಾರ್ಗಮಧ್ಯದಲ್ಲಿ ಒಬ್ಬೊಬ್ಬರಾಗಿ ಅಸುನೀಗುತ್ತಾರೆ. ಇವರನ್ನೆಲ್ಲಾ ಅಲ್ಲಲ್ಲಿಯೇ ಸಮಾಧಿ ಮಾಡಿ ಮುಂದೆ ಹೋಗುತ್ತಾನೆ. ಅರವಜ್ಜಿ ಸತ್ತಾಗ ಸಮಾಧಿ ಮಾಡಿ ಸ್ವತಃ ತಾನೇ ಪೂಜೆ ಮಾಡಿ ತನ್ನ ಪ್ರಯಾಣ ಮುಂದುವರಿಸುತ್ತಾನೆ. ಆತನೇ ಪೂಜೆ ಸಲ್ಲಿಸಿದ್ದ ಕಾರಣವಾಗಿ ಮತ್ತು ಆಕೆ ಈ ಗಾದರಿಪಾಲನಾಯಕನಿಗೆ ಸೋದರತ್ತೆಯಾದ ಕಾರಣ ಆತನ ಪರಂಪರೆಯವರು ಶ್ರದ್ಧೆಯಿಂದ ಪೂಜಿಸುತ್ತಾ ಬರುತ್ತಿದ್ದಾರೆ. ಉಳಿದ ಮಹಿಳೆಯರಿಗೆ ವಿಶೇಷವಾದ ಆರಾಧನಾ ವಿಧಿಗಳಿಲ್ಲದಿದ್ದರೂ ಸುತ್ತಮುತ್ತಲ ಹಟ್ಟಿಗಳವರು ಬಿತ್ತನೆ, ಕೊಯ್ಲು, ಯುಗಾದಿ, ಶ್ರಾವಣದಲ್ಲಿ ಪೂಜೆ ಮಾಡಿಕೊಂಡು ಹೋಗುತ್ತಾರೆ.

**ನಲಟಬ್ಬ :**



*ನಲಟಬ್ಬ (ಸೊನ್ನಲಬ್ಬ)*

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಕೆರೆಯಾಗಳಹಳ್ಳಿ (ಗರಣಿ ಸಮೀಪ) ಹೊರವಲಯದಲ್ಲಿ ಒಂದು ಪುಟ್ಟ ಗುಡಿ ಇದ್ದು ಇದರಲ್ಲಿ ಒಂದು ಸ್ತ್ರೀದೇವತೆಯ ಪ್ರತಿಮೆ ಇದೆ. ಸಮುದಾಯದಲ್ಲಿ ಈ ಪ್ರದೇಶವನ್ನು ಜಂಬು ದ್ವೀಪದ ಗಡ್ಡೆ ಎಂದು ಕರೆಯುತ್ತಾರೆ. ಮೊದಲು ಬಯಲಲ್ಲಿಯೇ ಈ ಪ್ರತಿಮೆ ಇದ್ದುದಾಗಿಯೂ ಇತ್ತೀಚೆಗೆ ಈ ಚಿಕ್ಕ ಗುಡಿ ಕಟ್ಟಿರುವುದಾಗಿಯೂ ವಕ್ತೃಗಳು ತಿಳಿಸಿದ್ದಾರೆ. ಇದನ್ನು 'ಸೊನ್ನಲಬ್ಬ' ಎಂದು ಕರೆಯುವುದೇ ಸಾಮಾನ್ಯ ಹಿರಿಯರು ಹೇಳುವ ಪ್ರಕಾರ ಪ್ರತಿಮೆಯಲ್ಲಿ ಸ್ತನಗಳೇ ಎದ್ದು ಕಾಣುವ ಭಾಗವಾದ್ದರಿಂದ ಸ್ತನಗಳ ಅಬ್ಬ ಎಂಬರ್ಥಬರುವ ತೆಲುಗಿನ 'ಸೊನ್ನಲಬ್ಬ' ಎಂದು ಕರೆಯಲಾಗುತ್ತದೆ. ಅಬ್ಬ–ಅಮ್ಮ–ಅಜ್ಜಿ ಎಂದರ್ಥ. ಆದರೆ ಈಕೆಯ ಮೂಲ ಹೆಸರು 'ನಲಟಬ್ಬ'' ಎಂಬುದಾಗಿದೆ. 'ನಲ್ಲ' ಎಂಬ ತೆಲುಗು ಪದಕ್ಕೆ ಮ್ಯಾಸಬೇಡರಲ್ಲಿ 'ಕಪ್ಪು'

ಎಂಬರ್ಥವಿದ್ದು ಒಟ್ಟಾರೆ ಈಕೆ 'ಕಪ್ಪುಬಣ್ಣದ ಅಜ್ಜಿ ಎಂದು ಕರೆಯಲ್ಪಡುತ್ತಿದ್ದವಳು ಸಂತತಿಯವರು ತಮ್ಮನ್ನು 'ನಲಟಬ್ಬನವ್ರು' ಎಂಬ ಬೆಡಗಿನ ಮೂಲಕ ಗುರುತಿಸಿಕೊಳ್ಳುತ್ತಾರೆ. ಚಳ್ಳಕೆರೆಯ ಕಾಟಪ್ಪನ ಹಟ್ಟಿಯಲ್ಲಿರುವ 'ಕಾಟಪ್ಪ'ನ ದೇವಸ್ಥಾನದಲ್ಲಿ ಇವರೆ ಪೂಜೆ ಮಾಡುವರು. ವರ್ಷಕ್ಕೊಮ್ಮೆ ಇವರು ಈ ನಲ್ಲಟಬ್ಬ-ಸೊನ್ನಲಬ್ಬ ಪ್ರತಿಮೆಯ ಬಳಿ ಬಂದು ವಿಶೇಷವಾದ ಪೂಜೆ ಸಲ್ಲಿಸುತ್ತಾರೆ. ಪೂಜೆ ಮುಗಿದ ಮೇಲೆ ಈ ಪ್ರತಿಮೆಯನ್ನೇ ಹೊತ್ತು ಕುಣಿದಾಡುತ್ತಾರೆ.

ರೊಪ್ಪಲ ಸೂರಿಯ ಮಕ್ಕಳಾದ ದಡ್ಡಿಸೂರನಾಯಕ, ದಡ್ಡಿ ಕಾಮನಾಯಕ, ದಡ್ಡಿ ಯರಪಾಲನಾಯಕ ತಾವು ಪರಸ್ಪರ ಬೇರೆಯಾಗುವಾಗ ತಮ್ಮ ಪಶುಸಂಪತ್ತನ್ನು, ಶಸ್ತ್ರಾಸ್ತ್ರಗಳನ್ನು ಹಂಚಿಕೊಳ್ಳುವ ಸಂದರ್ಭದಲ್ಲಿ ಮೂರು ದಿನಗಳ ಕಾಲ ಈ ಕುರಿತ ಪಂಚಾಯಿತಿ ನಡೆಯುತ್ತದೆ. ದೀಪದ ಎಣ್ಣೆ ಮುಗಿಯಲು ತಿಪ್ಪಯ್ಯನ ಕೋಟೆ ಹತ್ತಿರ ವಿರುವ ತಿರುಗುವ ಮಡುವಿನಲ್ಲಿ ಈ ನಲ್ಲಟಬ್ಬ ನೀರು ತಂದು ಅದನ್ನೇ ಹಾಕಿ ದೀಪ ಉರಿಸಿದಳು ಎಂದು ಸ್ಮರಿಸುತ್ತದೆ. ಸಮುದಾಯ ಅಂದರೆ ನ್ಯಾಯ ಪಂಚಾಯಿತಿ ಬಗೆಹರಿಯದಿದ್ದಾಗ ತಾನೇ ನಿರ್ಣಯ ಕೊಡುವುದರ ಮೂಲಕ ಸಭೆಗೆ ಬೆಳಕು ತೋರಿ ಸಂಪತ್ತನ್ನು ಹಂಚಿದವಳು ಈಕೆ. ಈಕೆಗೆ ಸಹಾಯಕರಾಗಿದ್ದವರು ತರಟಬ್ಬ, ಮತ್ತು ಅರವಬ್ಬ ಎಂದೂ ಹೇಳುತ್ತಾರೆ. ರೊಪ್ಪಲಸೂರಿಯ ಸಂತತಿಯವರು ಅಪರೂಪಕ್ಕೊಮ್ಮೆ ಇಲ್ಲಿ 'ವಾಸು' ಕೊಯ್ಯುವ ಸಂಪ್ರದಾಯ ವಿರಿಸಿಕೊಂಡಿದ್ದಾರೆ. ಮ್ಯಾಸ ಬೇಡರ ೧೨ ಪೆಟ್ಟಿಗೆ ದೇವರುಗಳು ಆಗಾಗ್ಗೆ ಇಲ್ಲಿ ಸೇರುತ್ತವೆ. ತಮ್ಮಲ್ಲಿ ಐಕ್ಯಮತ್ಯ ಕಾಯ್ದುಕೊಳ್ಳುವುದಕ್ಕಾಗಿ ತಾವೆಲ್ಲಾ ಒಂದೇ ಮೂಲದಲ್ಲಿದ್ದು ಬೇರೆಯಾದವರು ಎಂಬುದನ್ನು ನೆನಪಿಸಿಕೊಂಡು ಮತ್ತೆ ಒಂದುಗೂಡುವ ಪ್ರಯತ್ನವಿದು. ಆಹಾರ ಸಂಗ್ರಹಕ್ಕಾಗಿ ಗುಂಪುಗಳಲ್ಲಿ ಸಂಚರಿಸುವ ಸಮುದಾಯಗಳು ತಾವು ಸಂಗ್ರಹಿಸಿದ ಅಹಾರವನ್ನು ಹಂಚಿಕೊಳ್ಳಲು ಆಗಾಗ್ಗೆ ಸೇರುತ್ತಿದ್ದವು. ಹೀಗೆ ಸೇರುವ ಸ್ಥಳಗಳನ್ನೆ ಸಂಗಮ ಎಂದು ಕರೆದು ಇಲ್ಲಿರುವ ದೇವತೆಯನ್ನು ಕೂಡಲೀ ದೇವತೆ ಎಂದು ಕರೆಯುತ್ತಿದ್ದಾಗಿ ಈ ಹಂಚಿಕೊಳ್ಳುವುದನ್ನು ಪರಿವೀಕ್ಷಿಸುವ ಹೊಣೆ ಈ ಕೂಡಲದೇವತೆಗಳದೇ ಆಗಿರುತ್ತವೆ ಎಂದು ಹೇಳುತ್ತಾರೆ.[೬೦] ಈ ವಿಚಾರದ ಹಿನ್ನೆಲೆಯಲ್ಲಿ ಈ ನಲಟಬ್ಬನನ್ನು ಅಲ್ಲಿ ನಡೆಯುವ ಆಚರಣೆಗಳನ್ನು ಗಮನಿಸಿದಾಗ ಕೊಸಾಂಬಿಯವರ ಚಿಂತನೆಯ ಜಾಡಿನಲ್ಲೇ ಈ ಸಮುದಾಯದ ನಡೆ ಇರುವುದನ್ನು ಗಮನಿಸಬಹುದಾಗಿದೆ.)

**ಹಿಡಾಲಗಂಗಿ-ಗದಾಲಗಂಗಿ :**

ಅಕ್ಕರಾಯಮ್ಮನ ತಮ್ಮನಾದ ಬೈಗೊಂಡರಾಜ ಈತನನ್ನು ಗೋರ್ಲು ಬೈಯ್ಯಣ್ಣ ಎಂದೂ ಕರೆಯುತ್ತಾರೆ. 'ಗೋರ್ಲು' ಎಂಬ ತೆಲುಗು ಪದಕ್ಕೆ ಕನ್ನಡದಲ್ಲಿ ಕಲ್ಲುಗಳು ಎಂದರ್ಥವಾಗುತ್ತದೆ. ಉಗುರು ಎಂದೂ ಅರ್ಥವಾಗುತ್ತದೆ. ಈತ ಒಮ್ಮೆ ಬೇಟೆಗಾಗಿ ಹೋಗಿರುತ್ತಾನೆ. ಕಾಡಿನ ಒಂದು ಗವಿಯಲ್ಲಿ 'ಹಿಡಾಲ ಗಂಗಿ' ಇರುತ್ತಾಳೆ'' ಈಕೆ ಚೆಲುವೆ. ಈಕೆಯ ತಾಯಿ ಗಡಾಲಗಂಗಿ ಆಹಾರ ಸಂಪಾದನೆಗಾಗಿ ಹೊರಗೆ ಹೋಗಿರುತ್ತಾಳೆ. ಕಾಡಿನಲ್ಲಿ ಅಲೆದ ಬೈಯ್ಯಣ್ಣ ಬಾಯರಿಕೆಯಿಂದ ಬಳಲಿ ಗವಿಯ ಬಳಿ ಹೋಗಿ ನೀರು ಕೇಳಿದಾಗ ಹಿಡಾಲಗಂಗಿ ನೀರು ಕೊಡುತ್ತಾಳೆ. ಇವಳ ಚೆಲುವಿಗೆ ಮಾರು ಹೋದ ಈತ ಗವಿಯೊಳಗೆ

---

೬೦ At the Cross Roads, A Study of Mother Godess Cultsites, p.೮೨-೧೦೯.
ಉಲ್ಲೇಖ: ಕೊಸಾಂಬಿ.ಡಿ.ಡಿ; ಪ್ರಾಚೀನ ಭಾರತದ ಚರಿತ್ರೆ. ಪು. ೨೪

ಹೋಗಿ ಆಕೆಯೊಂದಿಗೆ ಸ್ನೇಹ ಬೆಳೆಸುತ್ತಾನೆ. ಅಲ್ಲಿ ಸ್ವಲ್ಪ ಕಾಲ ಕಳೆಯುತ್ತಿರುವಾಗಲೇ ಯುವತಿಯ ತಾಯಿ ಬರುತ್ತಾಳೆ. ಬರುತ್ತಲೇ ಏನೋ ಹೊಸ ವಾಸನೆ ಹೊಸ ಗೌಲು ಎಂದು ಕೊಳ್ಳುತ್ತಾ ಬರಲು ಭಯಗೊಂಡ ಹಿಡಾಲಗಂಗಿ ತನ್ನ ಪ್ರಿಯನಾಗಿದ್ದ ಬೈಯಿಣ್ಣನನ್ನು ಹಲ್ಲಿ ಮಾಡಿ ಹಾಕುತ್ತಾಳೆ. ತಾಯಿಯ ಬಳಿ ಇಲ್ಲಿಯಾರೂ ಬಂದಿಲ್ಲ ಎಂದು ಸುಳ್ಳು ಹೇಳುತ್ತಾಳೆ. ಚೆನ್ನಾಗಿ ತಿಂದು ಬಂದಿದ್ದ ತಾಯಿ ವೈಮರೆತು ಮಲಗುತ್ತಾಳೆ. ಮರುದಿನ ಮತ್ತೆ ಆಹಾರ ಸಂಪಾದನೆಗಾಗಿ ಸಂಚಾರ ಹೊರಡುತ್ತಾಳೆ. ಇತ್ತ ಮಗಳು ತನ್ನ ಪ್ರಿಯಕರನಾದ ಬೈಯಣ್ಣನೊಂದಿಗೆ ಹೊರಟು ಬಿಡುತ್ತಾಳೆ. ದಾರಿಯಲ್ಲಿ ಅವರ ಬಟ್ಟೆ ಹರಿದು ಪೊದೆ ಮುಳ್ಳುಗಳಿಗೆ ಸಿಕ್ಕಿ ಹಾಕಿಕೊಂಡಿರುತ್ತದೆ. ಮನೆಗೆ ಮರಳಿದ ತಾಯಿ ಮಗಳು ಇಲ್ಲದಿರುವುದನ್ನು ಗಮನಿಸಿ ಯಾರೋ ಕದ್ದೊಯ್ದಿದ್ದಾರೆ. ನಿನ್ನೆಯೇ ಅನುಮಾನ ಬಂದಿತ್ತು. ಮೋಸವಾಯಿತು ಎಂದು ದಾರಿ ಗುರುತಿಸಿಕೊಂಡು ಹಿಂಬಾಲಿಸಿ ಬರುತ್ತಾಳೆ. ಬೈಯಣ್ಣ ಈ ವೇಳೆಗೆ ಸುಮಾರು ದೂರ ಬಂದಿರುತ್ತಾನೆ. ಯಾರೋ ರೈತರು ಬೇಸಾಯ ಮಾಡುತ್ತಾ ಇರುತ್ತಾರೆ. ನೀವು ಬರುವವರೆಗೆ ನಾನು ಬೇಸಾಯ ಮಾಡುತ್ತೇನೆ. ನಿಮ್ಮ ಮನೆಯಿಂದ ನಮಗೆ ಊಟ ತಂದು ಕೊಡಿ ಎಂದು ಕೇಳುತ್ತಾನೆ. ಹೀಗೆ ಆಹಾರ ಪಡೆದು ತಿಂದು ಮುಂದುವರೆಯುತ್ತಾನೆ. ಮಾರ್ಗಮಧ್ಯೆ ತಿಪ್ಪಯ್ಯನ ಕೋಟೆ ಹಳ್ಳದಲ್ಲಿ ಬಟ್ಟೆ ಒಗೆಯುತ್ತಿರುವ ಅಗಸರಬಳಿ ಹೋಗಿ ನಮ್ಮನ್ನು ನಿಮ್ಮ 'ಉಬ್ಬಿ'ಯಲ್ಲಿ ಸುತ್ತಿ ಮುಚ್ಚಾಡಿ. ಒಬ್ಬ ರಾಕ್ಷಸಿ ಹಿಂಬಾಲಿಸಿಕೊಂಡು ಬರುತ್ತಿದ್ದಾಳೆ ಎಂದು ಕೇಳಿಕೊಳ್ಳುತ್ತಾನೆ. ತಮ್ಮನ್ನು ಗಡಾಲಗಂಗಿ ಹಿಂಬಾಲಿಸುತ್ತಿರುವುದು ಅವರಿಗೆ ಗೊತ್ತಾಗಿರುತ್ತದೆ. ಉಬ್ಬೆಯಲ್ಲಿ ಬೈಯ್ಯಣ್ಣನನ್ನು ಬಟ್ಟೆಗಳ ಮಧ್ಯೆ ಸುತ್ತಿಟ್ಟು, ಹಿಡಾಲಗಂಗಿಯನ್ನು ಮನೆ ಒಳಗೆ ಮುಚ್ಚಿಡುತ್ತಾರೆ. ಗಡಾಲಗಂಗಿ ಇಲ್ಲಿಗೆ ಬಂದು ಇಲ್ಲಿಗೆ ಯಾರಾದರೂ ಒಬ್ಬ ಯುವಕ ಮತ್ತು ಹುಡುಗಿ ಬಂದರೇ ಎಂದು ಕೇಳಲು ನಮಗೆ ಗೊತ್ತಿಲ್ಲ ಎಂದು ಅಗಸರು ತಿಳಿಸುತ್ತಾರೆ. ಅಲ್ಲಿಂದ ಮುಂದುವರಿದು ಊರೊಳಗೆ ಹೋದ ಈಕೆ ಈ ಊರ 'ಬಂಡೆ ಕಲ್ಲಿ'ಗೆ ಮುತ್ತುರತ್ನ ಹೊಯಿಸುತ್ತೇನೆ. ತಳ ಇಲ್ಲದ ಸೇರಲ್ಲಿ ಯಾವ ಗಂಡಸು ಬಂದು ಇದನ್ನು ಅಳೆಯುತ್ತಾನೋ ಅವನೇ ಧೀರ ಎಂದು ಡಂಗುರ ಹೊಡೆಸುತ್ತಾಳೆ. ತನ್ನ ಮಗಳನ್ನು ಕರೆದುಕೊಂಡು ಹೋದವ ವೀರನಾಗಿದ್ದು ಅವನು ಈ ಮೂಲಕ ಬಯಲಿಗೆ ಬಂದೇ ಬರುತ್ತಾನೆ ಎಂಬ ನಿರೀಕ್ಷೆ ಅವಳದು. ಅವಳ ಈ ನಿರೀಕ್ಷೆಯಂತೆಯೇ ಬೈಯ್ಯಣ್ಣ ಬಂದು ಮುತ್ತುರತ್ನ ಅಳೆಯುತ್ತಾನೆ. ಇವನೇ ತನ್ನ ಮಗಳನ್ನು ಕರೆದೊಯ್ದವ ಎಂದು ಅವಳಿಗೆ ಸ್ಪಷ್ಟವಾಗುತ್ತದೆ. ಗುರುತಿಟ್ಟುಕೊಳ್ಳುತ್ತಾಳೆ. ಅಲ್ಲಿಂದ ಬಂದು ಬೈಯಣ್ಣ ಕೆರೆ ಕಟ್ಟೆಯ ಮೇಲೆ ನಿಂತು ಅಲ್ಲಿ ಭತ್ತದ ಮಧ್ಯೆ ಬೆಳೆದ ಕಳ್ಳೆ[೬೧] ಕೀಳುತ್ತಿದ್ದ ಮಹಿಳೆಯರನ್ನು ಹಾಸ್ಯ ಮಾಡುತ್ತಾ ಒಂದೇ ಗಂಟೆಯನ್ನು ಇಬ್ಬರು ಕೀಳುತ್ತಿದ್ದೀರಿ ಎಂದು ಹೇಳಲು ನೀನು ಒಬ್ಬನೇ ಕಿತ್ತು ತೋರಿಸು ಎಂದು ಅವರು ಪ್ರತಿಹಾಸ್ಯ ಮಾಡುತ್ತಾ ಸವಾಲು ಹಾಕುತ್ತಾರೆ. ಆಗ 'ಬೈಯಣ್ಣ' ಗದ್ದೆಯಲ್ಲಿ ಬಗ್ಗಿ ಕೀಳುತ್ತಿರುವಾಗ ಇದೇ ಗದ್ದೆಯಲ್ಲಿ ಅಡಗಿ ಹೊಂಚು ಹಾಕಿ ಕಾಯುತ್ತಿದ್ದ ಗಡಾಲ ಗಂಗಿ ಅವನನ್ನು ಬಿಗಿಯಾಗಿ ಹಿಡಿದು ಆತನ ಕೈಯ ಉಗುರುಗಳನ್ನು ಕಿತ್ತುಬಿಡುತ್ತಾಳೆ. ಆತನೂ ಪ್ರತಿಯಾಗಿ ಹೊಡೆಯಲು ಆಕೆ ಪ್ರಾಣಾಂತಿಕ ಸ್ಥಿತಿ ತಲುಪುತ್ತಾಳೆ. ಆಗ ವ್ಯಥೆಯಿಂದ ಶಪಿಸುತ್ತಾಳೆ. ನನ್ನ ಮಗಳನ್ನು ಅಪಹರಿಸಿದ

---

[೬೧] ಊದಿರಿ ಹುಲ್ಲಿನ ಗಂಟೆ.

ನಿನ್ನ ವಂಶ ಎಂದಿಗೂ ಉದ್ಧಾರವಾಗದಿರಲಿ, ಹೆಣ್ಣು ಹೆಚ್ಚದಿರಲಿ, ಗಂಡು ಬೆಳೆಯದಿರಲಿ ಎಂದು ಶಾಪ ಕೊಡುತ್ತಾಳೆ. ತನ್ನ ಮಗಳನ್ನು ಮತ್ತೆ ತನ್ನ ಮನೆಗೆ ಕರೆದೊಯ್ಯಲು ಸಾಧ್ಯವಾಗದೇ ಅಲ್ಲಿಯೇ ಮರಣಹೊಂದುತ್ತಾಳೆ. ಮಗಳೂ ಆಘಾತದಿಂದ ಅಲ್ಲಿಯೇ ಶಿಲೆಯಾಗುತ್ತಾಳೆ. ಬೈಯ್ಯಣ್ಣ ಹೋಗಿ ಗುಡೇಕೋಟೆ ಬಳಿ ಇರುವ ಶರಣರ ಗುಡ್ಡ ಸೇರಿಕೊಳ್ಳುತ್ತಾನೆ. ಇಲ್ಲಿ ತಾಯಿಯಾದ ಗಡಾಲ ಗಂಗಿಯ ಗಂಡ ಯಾರೆಂದು ಗೊತ್ತಿಲ್ಲ. ಮುಕ್ತವಾಗಿ ಬದುಕಿದವಳೋ, ಇಲ್ಲವೇ ಗಂಡಿನ ಕ್ರೌರ್ಯಕ್ಕೆ ಬಲಿಯಾದವಳೋ ಇರಬೇಕು. ಮುಗ್ಧೆಯಾದ ತನ್ನ ಮಗಳನ್ನು ತಾನಿಲ್ಲದಿದ್ದಾಗ ಬೈಯ್ಯಣ್ಣ ಕರೆದೊಯ್ದಾಗ ಆತನ ಬೆನ್ನಟ್ಟಿ ಆತನನ್ನೇ ಇಲ್ಲವಾಗಿಸುವಷ್ಟು ಆಕೆಗೆ ಸಿಟ್ಟು, ಅಮಾಯಕಳಾದ ಮಗಳು ಆತನ ಪ್ರೀತಿಯ ನಟನೆಗೆ ಮರುಳಾಗಿ ತನ್ನ ಅಸ್ತಿತ್ವ ಕಳೆದುಕೊಳ್ಳುವಳೇನೋ ಎಂಬ ಭಯ ಆಕೆಯನ್ನು ಕಾಡಿರಬಹುದು. ಬಹುಶಃ ಈ ಕಾರಣದಿಂದಾಗಿಯೇ ಆತನ ಬೆನ್ನಟ್ಟುತ್ತಾಳೆ. ಕೊನೆಗೆ ಆತನಿಂದ ಹತನಾಗುವಾಗ ಅವನ ವಂಶಕ್ಕೆ ಶಾಪ ಕೊಡುತ್ತಾಳೆ.

ತುಳು ಮಹಾಕಾವ್ಯದಲ್ಲಿ ಬರುವ 'ಸಿರಿ' ತನ್ನ ಮನಸ್ಸಿಗೆ ನೋವು ಕೊಟ್ಟ ವ್ಯವಸ್ಥೆಯ ವಿರುದ್ಧ ಕಿಡಿಕಾರುತ್ತಾಳೆ. ಅರಮನೆ ಮತ್ತು ಪುರುಷ ಪ್ರಭುತ್ವಗಳು ನಾಶವಾಗಲೆಂದು ಶಾಪ ಕೊಡುತ್ತಾಳೆ. ಅಸಹಾಯಕ ಹೆಣ್ಣು ತನ್ನ ಪ್ರಯತ್ನ ವಿಫಲವಾದಾಗ ಕೊನೆಗೆ ಶಾಪ ಹಾಕುವುದನ್ನು ಬಿಟ್ಟು ಇನ್ನೇನು ಮಾಡಲು ಸಾಧ್ಯ, ನೊಂದ ಧ್ವನಿಯದು. ಇಂದಿಗೂ ಈ ವಂಶದವರಲ್ಲಿ ಏನಾದರೂ ಕಷ್ಟ ಕಾರ್ಪಣ್ಯಗಳು ಕಾಡಿದಾಗ, ಏಳಿಗೆ ಕುಂಠಿತವಾದಾಗ ಇದಕ್ಕೆ ಆಕೆಯ ಶಾಪವೇ ಕಾರಣ ಎಂದು ದುಃಸ್ವಪ್ನದಂತೆ ನೆನೆಯುತ್ತಾರೆ. ಈಕೆ ಇವರಿಗೆ ಒಬ್ಬ ರಾಕ್ಷಸಿಯಂತೆ ಕಂಡುಬರುತಿದ್ದಾಳೆ. ಮಗಳ ಮೇಲಿನ ಪ್ರೀತಿ, ಅವಳ ಬದುಕು ದುಷ್ಟನಿಂದ ಹಾಳಾಗಬಾರದೆನ್ನುವ ಕಾಳಜಿ, ತನ್ನ ಪ್ರಯತ್ನದಲ್ಲಿ ವಿಫಲಳಾದಾಗ ಅಸಹಾಯಕತೆಯಿಂದ ನೊಂದು ಹೇಳುವ ನುಡಿ ಇವೆಲ್ಲಾ ಈ ಸಮುದಾಯದಲ್ಲಿದ್ದ ಹೆಣ್ಣು ಮತ್ತೊಬ್ಬರ ಖಾಸಗಿ ಆಸ್ತಿಯಾಗುವುದನ್ನು ಒಪ್ಪದೇ ಇರುವ ಒಂದು ಬಗೆಯ ಆಲೊಚನೆಯೇನೋ ಎನಿಸುತ್ತದೆ. ಈಕೆಯನ್ನು ರಾಕ್ಷಸಿಯನ್ನಾಗಿ ಪರಿಗಣಿಸಿರುವುದಿಲ್ಲ. ಹೆಣ್ಣನ್ನು ತನಗೆ ಅಧೀನ ಮಾಡಿಕೊಳ್ಳುವ ಸಂದರ್ಭದಲ್ಲಿ ಆಕೆಯನ್ನು ದೈವೀಕರಣಗೊಳಿಸುವ, ಹಾಗೆ ಅಧೀನಕ್ಕೊಳಪಡದೆ ಇದ್ದಾಗ ರಾಕ್ಷಸಿಯನ್ನಾಗಿ ಕಾಣುವ ಸಿದ್ಧ ಮಾದರಿ ಇಲ್ಲಿಯೂ ಇದೆ ಎನಿಸುತ್ತದೆ.

**ಸಾಂಸ್ಕೃತಿಕ ಪಳೆಯುಳಿಕೆಗಳು :**

ಒಟ್ಟಾರೆ ಈ ನಾಯಕಿಯರನ್ನು ಕುರಿತಾದ ಈ ಎಲ್ಲಾ ಪಠ್ಯಗಳನ್ನು ಗಮನಿಸಿದಾಗ ಈ ಬುಡಕಟ್ಟಿನಲ್ಲಿದ್ದ ಮಹಿಳೆಯರ ನೆಲೆಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಯಾವುದೇ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದೇ ಬಗೆಯ ವ್ಯವಸ್ಥೆ ನಿರಂತವಾಗಿ ನೆಲೆಗೊಂಡಿರಲು ಅಷ್ಟಾಗಿ ಸಾಧ್ಯವಿಲ್ಲ. ಇದು ಸಂದರ್ಭದ ಒತ್ತಡಗಳೇ, ಕಾರಣವಾಗಿ ಬದಲಾವಣೆಗೆ ಒಳಗಾಗುತ್ತಲೇ ಇರುತ್ತದೆ. ಈ ಸಮುದಾಯವೂ ಇದರಿಂದ ಹೊರತಾಗಿಲ್ಲ. ಕಾಲಘಟ್ಟಗಳಲ್ಲಿ ಆದ ಬದಲಾವಣೆಗಳು ಮೂಲದ ಸಮುದಾಯಿಕ ಜೀವನ ಪದ್ಧತಿಯ ಮೇಲೆ ಬೀರಿದ ಪ್ರಭಾವ ಇಲ್ಲಿ ಕೆಲವು ತಿರುವುಗಳಿಗೆ ಕಾರಣವಾಗಿದೆ.

ಈ ಹಿಂದೆ ವಿವರಿಸಲಾಗಿರುವ ಪಠ್ಯಗಳು ಹಿಂದೆ ಇದ್ದ ಸ್ತ್ರೀರೂಪಿ ನೆಲೆಗಳ ಚರಿತ್ರೆಯನ್ನು ಹೇಳುತ್ತವೆ. ಆದರೊಂದಿಗೆ ಈ ಸಮುದಾಯದ ಸಮಷ್ಟಿಯ ಸುಪ್ತ ಪ್ರಜ್ಞೆಯ ಮೊತ್ತವು ಆಗಿವೆ ಎಂಬ ಹಿನ್ನೆಲೆಯಲ್ಲಿಯೇ ನಾವು ಅದನ್ನು ಗ್ರಹಿಸುವಂತೆ ಮಾಡುತ್ತವೆ. ಮ್ಯಾಸಬೇಡ ಸಮುದಾಯ ಪಶುಪಾಲಕತನದ ಹಂತದಲ್ಲಿದ್ದಾಗ ರೂಪುಗೊಂಡ ಕಥನಗಳಿವು. ಪಶುಪಾಲಕತನ ಎಂದಾಗ ದನಕರುಗಳಿಗೆ ಹುಲ್ಲು ನೀರನ್ನು ಅರಸುತ್ತಾ ಅಲೆದಾಡುವುದೂ ಅನಿವಾರ್ಯವಾಗಿತ್ತು. ವೃತ್ತಿಗನುಗುಣವಾಗಿ ಬಾಳಬೇಕಾದ ಈ ಅನಿವಾರ್ಯವೇ ಮೂಲತಃ ಬೇಟೆಗಾರರಾಗಿದ್ದು ಆಮೂಲಕವಾಗಿ ತಮ್ಮನ್ನು ಗುರುತಿಸಿಕೊಳ್ಳುವ ಈ ಬೇಡನಾಯಕರಿಗೆ ವಿಶೇಷಣವಾಗಿ ಸೇರಿಕೊಂಡಿತು. ಹಾಗಾಗಿಯೇ ಇವರು ಮ್ಯಾಸಬೇಡರು, ಮ್ಯಾಸನಾಯಕರು ಎಂದು ಕರೆಯಲ್ಪಟ್ಟರು. 'ಮ್ಯಾಸಲು' ಎಂಬ ಪದದ ಅರ್ಥವೇ ಅಲ್ಲಲ್ಲಿಯೇ ಸುತ್ತಾಡುವುದು ಎಂದಾಗುತ್ತದೆ. ಈ ಅಲೆಮಾರಿತನ ಕಾರಣವಾಗಿ ಮತ್ತು ಕೆಲವು ತಂಡಗಳಾಗಿ ಇವರು ಅಲೆಯುತ್ತಿದ್ದುದ್ದೇ ಕಾರಣವಾಗಿ ಒಟ್ಟು ಮೂಲತಃ ಅಕ್ಕರಾಯಮ್ಮನಿಗೆ ಸಂಬಂಧಿಸಿದ ಕಾವ್ಯವೇ ಮೂಲ ಕಾವ್ಯವಾಗಿದ್ದು ಇದು ಆದಷ್ಟು ಸಮಗ್ರವಾಗಿದೆ. ನಂತರ ಬೇರ್ಪಟ್ಟ ತಂಡಗಳು, ಅಲ್ಲಿಯ ಸಾಂಸ್ಕೃತಿಕ ಸಂದರ್ಭಗಳು ಕಾರಣವಾಗಿ ಬಿಡಿಬಿಡಿಯಾಗಿ ಕಥನಗಳೂ ಈ ಸಮುದಾಯದಲ್ಲಿ ರೂಪುಗೊಂಡಿವೆ. ಇದರ ಹಿಂದೆಯೂ ಆಯಾ ತಂಡದ ಸಮಷ್ಠಿ ಗುಣವೇ ಕೆಲಸ ಮಾಡಿದೆ. ಆದರೆ ಮೂಲದ ಬಂಧುತ್ವ ಕಾರಣವಾಗಿ, ಮತ್ತು ತಮ್ಮ ಮೂಲದ ಬಗ್ಗೆ ತಮಗಿರುವ ಅಭಿಮಾನ, ಗೌರವ, ಶ್ರದ್ಧೆ ಕಾರಣವಾಗಿ ಪರಸ್ಪರರ ಮಧ್ಯೆ ಬಂಧುತ್ವದ ಬೆಸುಗೆ ಗಾಢವಾಗಿರುವುದನ್ನು ಸಂಬಂಧಿಸಿದ ಕಥನಗಳು ಮತ್ತು ಆಚರಣೆಗಳ ಮುಲಕ ಗ್ರಹಿಸಬಹುದಾಗಿದೆ. ಸಮುದಾಯದ ಸಾಂಸ್ಕೃತಿಕ ಬಂಧುತ್ವಕ್ಕೆ ಇದು ಸಾಕ್ಷಿಯಾಗುತ್ತದೆ.

ಪಠ್ಯಗಳು ಕೊಡುವ ವಿವರಗಳ ಮೂಲಕ ಈ ಸಮುದಾಯವನ್ನು ಮಾತೃರೂಪೀ ನೆಲೆಯಿಂದ ಹಿಂದೆ ತನ್ನನ್ನು ಗುರುತಿಸಿಕೊಳ್ಳುತ್ತಿದ್ದ ಸಮುದಾಯ ಎಂದು ಹೇಳಬಹುದು.

ಸೂರ್ಯನ ವರದಿಂದ ದಾನಸಾಲಮ್ಮ ಮತ್ತು ಸುಕ್ಕಲು ಮಲ್ಲಿನಾಯಕ ಪಡೆದ ಮಕ್ಕಳನ್ನು ಐದು ಮಂದಿ ಶರಣರು ಒಬ್ಬ ಶರಣೆ ಇವರೆಲ್ಲಾ ಧರ್ಮಗದ್ದುಗೆಗೆ ಒಡೆಯರು ಎಂದು ಹೇಳಲಾಗುತ್ತದೆ. ಆದರೆ ಪದೇ ಪದೇ ಪ್ರಸ್ತಾಪಿತವಾಗುವ ರೀತಿಯೆಂದರೆ 'ದಾನಸಾಲಿಯ ಕಂದಲು, ಪೆದ್ದಕ್ಕರಾಯಲ ತಮ್ಮುಲು' ಅಂದರೆ ದಾನಸಾಲಿಯ ಮಕ್ಕಳು, ಅಕ್ಕರಾಯಮ್ಮನ ಸೋದರರು ಎಂದು ಈ ಮೂಲಕವಾಗಿಯೇ ಗುರುತಿಸುವ ಪರಿಪಾಠವಿದು. ಒಟ್ಟು ಮಾತೃಮೂಲದಿಂದ ತಮ್ಮನ್ನು ಗುರುತಿಸಿಕೊಳ್ಳುವ ಪರಂಪರೆಯಿದು. ತಾಯಿಯಾದವಳಿಗೆ ಮಾತ್ರ ಇಲ್ಲಿ ಪ್ರಧಾನ ಸ್ಥಾನಮಾನ ಉಳಿದವರ ಸ್ಥಾನ ಯಾವ ನೆಲೆಯದು ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ಕೆಲವು ಸ್ತ್ರೀವಾದೀ ಅಧ್ಯಯನಕಾರರು ಯಾವುದೇ ಸಮಾಜದ ಮಾತೃರೂಪೀ ನೆಲೆಯೂ ಸಹ ಪುರುಷಾಧಿಕಾರದ ನಿರೀಕ್ಷೆಗನುಗುಣವಾಗಿರುವುದು, ಇಲ್ಲಿ ಪುರುಷನಿಂದ ಮಾನ್ಯರಾಗುವವರು 'ಮಾತೆ'ಯರು ಮಾತ್ರ. 'ಮಾತೆ'ಯಾಗದವರಿಗೆ ಅಲ್ಲಿ ಗೌರವವಿಲ್ಲ. ಈ ಕಾರಣದಿಂದಾಗಿ ಇಂತಹ ಸಮುದಾಯವನ್ನು 'ಮಾತೃ ಪ್ರಧಾನ' ಎಂದು ಕರೆಯಬಹುದೇ ಹೊರತು ಎಲ್ಲಾ ಮಹಿಳೆಯರಿಗೂ ಇಲ್ಲಿ ಪ್ರಧಾನಸ್ಥಾನವಿರಲಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಡಾ. ಶೈಲಜಾ ಹಿರೇಮಠ್

ಅವರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೬೨] ಆದರೆ ಪ್ರಸ್ತುತ ಈ ಬುಡಕಟ್ಟಿನಲ್ಲಿ ಮಾತೆಗೂ ಮಾನ್ಯತೆ ಇದೆ. ಅಷ್ಟಲ್ಲದೆ ಅಕ್ಕನಿಗೂ ಮಾನ್ಯತೆ ಇದೆ. 'ಮಾತೆ', 'ಅಮ್ಮ' ಎಂಬ ಪದ ತಾಯ್ತನವನ್ನು ಸೂಚಿಸಿದರೂ ಮಹಿಳೆ ಎಂಬ ಅರ್ಥದಲ್ಲಿಯೂ ಇದು ಬಳಕೆಗೊಳ್ಳುತ್ತದೆ. ಬಹುಶಃ ಈ ಗೊಂದಲ ಬೇಡವೆಂದೇ ಡಾ. ದೇವೀಪ್ರಸಾದರು ಇಂತಹ ಸಮುದಾಯಗಳನ್ನು 'ನಾರೀ ಪ್ರಧಾನ' ಎಂದು ಕರೆಯುತ್ತಾರೆ.[೬೩] ಒಟ್ಟು ಈ ಎಲ್ಲಾ ಹಿನ್ನೆಲೆಯಿಂದ ಮ್ಯಾಸಬೇಡ ಬುಡಕಟ್ಟು ಮಾತೃ ಮೂಲದಿಂದ ತನ್ನನ್ನು ಗುರುತಿಸಿಕೊಳ್ಳುತ್ತಿದ್ದ ಸಮುದಾಯ ಎಂದು ಹೇಳಲು ಸಾಧ್ಯವಾಗುತ್ತದೆ.

ಎರಡನೆಯದಾಗಿ ಇಲ್ಲಿ ಇಂದಿಗೂ ಚಾಲ್ತಿಯಲ್ಲಿರುವ ಬೆಡಗುಗಳು ಅನೇಕ ಬೆಡಗುಗಳಿಂದಾದುದೇ ಒಂದು ಬುಡಕಟ್ಟು, ಅಬ್ಬನಡು, ನಲಟಬ್ಬನಡು, ಅರವಬ್ಬನಡು, ಪಾಲಬ್ಬನಡು, ಗೌಡರಜ್ಜಲು, ಮಾರವ್ವ ಬುಟ್ಟುಗಲು, ನನ್ನಲಬ್ಬನಡು, ಎಂಬ ಬೆಡಗುಗಳ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವ ಗುಂಪುಗಳು ಈ ಸಮುದಾಯದಲ್ಲಿರುವುದು ಇಲ್ಲಿ ಮಹಿಳೆಗೆ ಪ್ರಧಾನ್ಯತೆ ಇದ್ದು ಆ ಮೂಲಕವಾಗಿಯೇ ತಮ್ಮ ಪರಂಪರೆಯನ್ನು ಗುರುತಿಸಿಕೊಳ್ಳುವ ವಿಧಾನಗಳಿಗೆ ಸಾಕ್ಷಿಯಾಗಿವೆ. ತೆಲುಗು ಮಾತೃ ಭಾಷೆಯಾಗಿರುವ ಈ ಬುಡಕಟ್ಟಿನಲ್ಲಿ ಸಮುದಾಯದ ಮೂಲ ಸ್ಥಿತಿಯ ಪಳಿಯುಳಿಕೆಗಳಿವು ಎಂದೂ ವ್ಯಾಖ್ಯಾನಿಸಬಹುದಾಗಿದೆ. (ಅಬ್ಬ-ಅಮ್ಮ ಅಜ್ಜಿ ಎಂದು ಅರ್ಥಕೊಡುತ್ತದೆ.)

ಮೂಲತಃ ಇವರು ಶೈವಾರಾಧನೆಯೊಂದಿಗೆ 'ಅಮ್ಮ'ನ ಆರಾಧನೆಯನ್ನು ಮಾಡುತ್ತಾ ಬಂದವರು. ಸಾಂಕೇತಿಕವಾಗಿ ಹುತ್ತದ ಪೂಜೆ, ಅರ್ಥಾತ್ ಮಣ್ಣಿನ ಪೂಜೆ, ಹಾಲು ಒಸರುವ ಬೇವಿನ ಮರದ ಪೂಜೆ, ಜಲಪೂಜೆ (ಗಂಗೆ ಮಾಳಮ್ಮನ ಪೂಜೆ) ಇವರಲ್ಲಿ ವ್ಯಾಪಕವಾಗಿವೆ. 'ಮಾತೆ' ಅಂದರೆ ಹೆಣ್ಣಿನ ಬಗ್ಗೆ ಇವರಿಗಿದ್ದ ಆರಾಧನೆಯ ಮನೋಭಾವವನ್ನು ಇದು ಪುಷ್ಟೀಕರಿಸುತ್ತದೆ. ಸಮುದಾಯದಾದ್ಯಂತ 'ಮಾರಮ್ಮ'ನ ಪೂಜೆಯಂತೂ ಇಂದು ಎಲ್ಲೆಡೆ ಕಂಡುಬರುತ್ತದೆ. ಇದರೊಂದಿಗೆ ತಮ್ಮ ಬೌದ್ಧಿಕತೆ, ಮತ್ತು ಸಾಹಸ ಗುಣ ಕಾರಣವಾಗಿ ಅಸಾಮಾನ್ಯತೆಗೇರಿದ ಮಹಿಳೆಯರನ್ನು 'ಮಹಿಳೆ' ಎಂಬ ಕಾರಣಕ್ಕಾಗಿ ಅಲಕ್ಷ್ಯಮಾಡದೆ ಆರಾಧಿಸುತ್ತಾ ಬಂದ ಸಮುದಾಯವಿದು.

ಸಮುದಾಯದಾದ್ಯಂತ ವ್ಯಾಪಕವಾಗಿರುವ ಅಕ್ಕರಾಯಮ್ಮನ ಆರಾಧನೆ, ಗೌರಸಮುದ್ರದ ಮಾರಮ್ಮನ ಆರಾಧನೆ, ಮಲೆಯಮ್ಮ, ಮುಂಗಲು ದೇವಮ್ಮ, ಕಾವಲ ಚೌಡಮ್ಮ, ಸೊನ್ನಲಬ್ಬ, ಅರವಬ್ಬ, ಗಾಮಬ್ಬ, ಗಾನಗಟ್ಟೆಮಾಯಮ್ಮ ಇತ್ಯಾದಿ ದೇವತೆಗಳ ಪೂಜೆಯನ್ನು ಗಮನಿಸಿದಾಗ ಮಹಿಳೆಯರಿಗೆ ಸಲ್ಲುತ್ತಿದ್ದ ಗೌರವ, ಪ್ರಾಮುಖ್ಯತೆಯ ದ್ಯೋತಕವಿದು ಎಂದು ಸ್ಪಷ್ಟವಾಗುತ್ತದೆ. ಪ್ರಾತಿನಿಧ್ಯಕೊಟ್ಟು ಆರಾಧಿಸುವ ಸಮುದಾಯದ ಸಮಷ್ಟಿಯ ಮನಸ್ಸುಗಳ ಒಟ್ಟು ಆಲೋಚನೆ ಹೀಗೆ ಗ್ರಹಿತವಾಗುತ್ತದೆ.

---

[೬೨] ಲೇ. ಡಾ. ಶೈಲಜಾ ಹಿರೇಮಠ್, ಕೃತಿ: ಮಾತೃ ಪ್ರಧಾನ ಪರಿಕಲ್ಪನೆ , ೨೦೦೪, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨.

[೬೩] ಡಾ. ದೇವಿ ಪ್ರಸಾದ್ ಚಟ್ಟೋಪಾಧ್ಯಾಯರು, ಕೃತಿ: ಮಾತೆಯರು ಮಾನ್ಯರಾಗಿದ್ದಾಗ ಅನುವಾದಕರು; ಜಿ. ಕುಮಾರಪ್ಪ, ಪು.೨೯.

ಬುಡಕಟ್ಟಿನ ಮಹಿಳೆಯರು ಪ್ರಕೃತಿಯ ಸಹಜ ಪರಿಸರದಲ್ಲಿ ಬದುಕುತ್ತಿದ್ದವರು. ಪ್ರಕೃತಿಯ ಯಾವುದೇ ವಿಕೋಪಕ್ಕೆ ಹೆದರದೆ ಪ್ರತಿರೋಧಿಸುತ್ತಲೇ ಬಾಳಿದ ದೃಢಮನಸ್ಸಿನವರು. ಇವರಿಗೆ ಇದು ಅನಿವಾರ್ಯವೂ ಆಗಿತ್ತು. ಬಹುಶಃ ಒಟ್ಟಿಗೇ ಹೀಗೆ ಸಮುದಾಯಿಕ ಜೀವನ ಪದ್ಧತಿ ಅಳವಡಿಸಿಕೊಂಡು ಬಾಳುತ್ತಿದ್ದ ಇವರಲ್ಲಿ ಸಮುದಾಯದ ಸುಖವನ್ನೇ ಆಗಲಿ, ಕಷ್ಟವನ್ನೇ ಆಗಲಿ ಒಟ್ಟಿಗೇ ಹಂಚಿ ಉಣ್ಣುವ ಗುಣವೂ ಸಹಜವಾದುದೇ ಆಗಿತ್ತು. ಹೀಗೆ ಪ್ರಶಾಂತ ಸ್ಥಿತಿಯಲ್ಲಿದ್ದ ಇವರ ಬದುಕಿನಲ್ಲಿ ಬಿರುಗಾಳಿ ಬೀಸತೊಡಗಿದ್ದೇ ಬದುಕಿನ ವಿಧಾನಗಳು ಬದಲಾವಣೆಯ ಕಡೆ ಸರಿಯತೊಡಗಿದಾಗ ಬೇಟೆಯ ಮೂಲದಿಂದ ಪಶುಪಾಲಕತನದ ಕಡೆ ಮಾರ್ಪಾಡುಗೊಳ್ಳುತ್ತಿರುವಂತೆಯೇ ಸಂಪತ್ತಿನ ಶೇಖರಣೆ, ಆ ಮೂಲಕ ಪಡೆಯಬಹುದಾದ ಸಾಮಾಜಿಕ ಪ್ರತಿಷ್ಠೆ ಅಲ್ಲಿ ಅಡಿಯಿಡಲಾರಂಭಿಸಿದವು. ಈ ಕಾರಣದಿಂದಾಗಿಯೇ ಅನೇಕ ವೈರುಧ್ಯಗಳು ಅಲ್ಲ ಕಾಣಿಸಿಕೊಂಡವು. ಇದರ ಪರಿಣಾಮದಿಂದಾಗಿ ಅಲ್ಲಿಯ ಮಹಿಳೆಯರು ಅತಂತ್ರ ಸ್ಥಿತಿಯ ಕಡೆಗೆ ಸರಿಯಬೇಕಾಯಿತು. ಎಂದಿನಿಂದ ಪುರುಷ ತನ್ನ ಸಂಗಾತಿಯನ್ನು ತನ್ನ ಖಾಸಗೀ ಆಸ್ತಿ ಎಂದು ಭಾವಿಸತೊಡಗಿದನೋ ಅಂದಿನಿಂದಲೇ ಆಕೆಯ ಮೇಲೆ ಈ ಆಳುವಿಕೆಯ ಹಿಡಿತ ಪ್ರಾರಂಭವಾಯಿತು. ಇಂತಹ ಹೊಸ ಹಿಡಿತಗಳ ವಿರುದ್ಧ ಬಂಡೇಳುವ ಗುಣವೂ ಕಾಣಿಸಿಕೊಂಡಿತು.

ವೈರುಧ್ಯಗಳನ್ನು ವಿರೋಧಿಸಿ ಮಹಿಳೆ ನಡೆಸಿದ ಹೋರಾಟಗಳನ್ನು ಇಲ್ಲಿ ಎರಡು ನೆಲೆಗಳಲ್ಲಿ ಗುರುತಿಸಬಹುದಾಗಿದೆ.

೧. ಅಧಿಕಾರ ರೂಢ ಪುರುಷನಿಂದ ಸಮುದಾಯದ ಒಳಗೆಯೇ ಉಂಟಾದ ಅತಿರೇಖಗಳ ವಿರುದ್ಧದ ಹೋರಾಟ.

೨. ತನ್ನ ಸಾಮ್ರಾಜ್ಯಶಾಹೀ ನೀತಿಯಿಂದ ತಮ್ಮ ಬುಡಕಟ್ಟನ್ನು ಮಣಿಸಲು ಆಕ್ರಮಣಮಾಡಿ, ಸಮುದಾಯವನ್ನು ತಲ್ಲಣಕ್ಕೊಳಪಡಿಸಿದ ಹೊರಗಿನ ಶಕ್ತಿಗಳ ವಿರುದ್ಧದ ಹೋರಾಟ.

ಈ ಎರಡೂ ಬಗೆಯ ಹೋರಾಟಗಳಿಗೂ ಮೂಲಕಾರಣವಾಗಿದ್ದದ್ದು ಮಹಿಳೆಯರ ಪ್ರಖರ ವೈಚಾರಿಕ ಶಕ್ತಿ.

೧. ದಾನಸಾಲಿಯಮ್ಮ ಪ್ರಾಪ್ತವಯಸ್ಕಳಾದಾಗ ತಂದೆ ತನ್ನ ಮಗನನ್ನೇ ವಿವಾಹವಾಗಲು ಸೂಚಿಸುತ್ತಾನೆ. ಆದಿಮ ಸಂಸ್ಕೃತಿಯಲ್ಲಿ ತಮ್ಮ ಕುಲದ ರಕ್ತಶುದ್ಧಿಯನ್ನು ಕಾಪಾಡಿಕೊಳ್ಳುವ, ಆಸ್ತಿಯನ್ನು ಉಳಿಸಿಕೊಳ್ಳುವ ಆಸೆಯಿಂದ ಇಂತಹ ಸೋದರ ವಿವಾಹಗಳು ಸಾಮಾನ್ಯವಾಗಿದ್ದವು. ಇದನ್ನೇ ಮ್ಯಾಸಬೇಡರು 'ತಿರುಗನಾನ ಮಂದ ತಿರುಮಂದ' ಎಂದು ಹೇಳಿ ಅಲ್ಲಲ್ಲಿಯೇ ಬಂಧುತ್ವ ವಿವಾಹವಾಗುವುದು ಎಂದು ಹೇಳುತ್ತಾರೆ. ಆದರೆ ಇಂತಹ ವಿವಾಹದ ವ್ಯವಸ್ಥೆಯೊಂದನ್ನು ಪ್ರತಿಭಟಿಸಿ ನಿಂತ ಮಹಿಳೆ ಇಲ್ಲಿ ದಾನಸಾಲಿಯಮ್ಮ. ತನ್ನ ಮಾತನ್ನು ವಿರೋಧಿಸಿ ನಿಂತ ಮಗಳಿಗೆ ತಂದೆ ಕೊಟ್ಟ ಶಿಕ್ಷೆ ಎಂದರೆ ಆಕೆಯನ್ನು ತನ್ನ ಹಟ್ಟಿಯಿಂದ ಹೊರಗೆ ಕಳುಹಿಸಿದುದು. ಇಂತಹ ಶಿಕ್ಷೆಗೆ ಹೆದರದೆ ಒಂಟಿಯಾಗಿ ಕಾಡಿನಲ್ಲಿ ಅಲೆದು ಆತ್ಮಸ್ಥೈರ್ಯದಿಂದ ಆಕೆ ಸೂರ್ಯನ ಸ್ಮರಣೆಯನ್ನು ಶಿವನ ಧ್ಯಾನವನ್ನು ಮಾಡುತ್ತಾ ಕಾಲ ಕಳೆಯುತ್ತಾಳೆ.

"ಕಾಗೆ ಸುಳಿಯದ ಬೆಟ್ಟ, ಗೂಗೆ ಸುಳಿಯದ ಬೆಟ್ಟ, ಮತ್ತೆ ನರಮಾನವರು ಸುಳಿಯದ ಬೆಟ್ಟ, ಅಲ್ಲಿ ದಾನಸಾಲಿಯ ಅರಮನೆ." ಇದು ದಾನಸಾಲಿ ಇದ್ದ ಒಂಟಿತನದ ಸ್ಥಿತಿಯನ್ನು ತೋರಿಸುತ್ತದೆ. ಆದರೆ ಕಥನಗಾರ್ತಿಯರ ಪ್ರಕಾರ ಶರಣೆಯಾದ ಈಕೆ ಇದ್ದ ನೆಲೆ ಪವಿತ್ರವಾದ ನಾಡಾಗಿತ್ತು. ಅದು ಕಾಗೆ, ಗೂಗೆ, ನರ ಮನುಷ್ಯರು ವಾಸಿಸದ, ದೈವೀಕ ನೆಲೆಯಾಗಿತ್ತು ಎಂದು ಆತ್ಮಸ್ಥೈರ್ಯದಿಂದ ತನ್ನ ಬದುಕನ್ನು ತಾನೇ ರೂಪಿಸಿಕೊಳ್ಳುತ್ತಾಳೆ. ನೆಮ್ಮದಿಯಿಂದ ಹೀಗೆ ಬದುಕನ್ನು ಕಟ್ಟಿಕೊಂಡು ಬಾಳುತ್ತಿದ್ದ ಇವಳಿಗೆ ಮತ್ತೆ ಬರಸಿಡಿಲು ಬಡಿದಂತಹ ಸಂದರ್ಭ ಒದಗಿದ್ದು ತನ್ನ ಗಂಡನಿಂದ. ಸಂಸ್ಕೃತಿ ಪಲ್ಲಟಗೊಳ್ಳುತ್ತಿದ್ದ ಸಂದರ್ಭದಲ್ಲಿ ತಾನು ವರಿಸಿದ ಹೆಣ್ಣು ತನ್ನ ಇಚ್ಛೆಗನುಗುಣವಾಗಿ ಬಾಳಬೇಕೆಂಬ ನಿಲುವು ಪುರುಷನದಾದಾಗ ಇದನ್ನು ತಾಳಿಕೊಳ್ಳುವ ಅಥವಾ ಪ್ರತಿಭಟಿಸುವ ಎರಡೂ ನೆಲೆಗಳು ಮಹಿಳೆಗೆ ಎದುರಾಗುತ್ತವೆ. ಇಂತಹ ಇಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡವಳು ದಾನಸಾಲಿಯಮ್ಮ. ಒಂದೆಡೆ ಬಯಸಿ ಪಡೆದ ಮಕ್ಕಳು ಮತ್ತೊಂದೆಡೆ ತನ್ನೊಂದಿಗೆ ಬರುವಂತೆ ಒತ್ತಾಯಿಸುತ್ತಿದ್ದ ಗಂಡ. ಆಕೆಯ ಮೂಲಕ ಆಸ್ತಿಯನ್ನು ಪಡೆಯಬಹುದೆಂಬ ಆಸೆ ಆತನದು. ಆತನೊಂದಿಗೆ ನಡೆದರೆ ಮುಂದೆ ಎಂದಾದರೊಂದು ದಿನ ಮಕ್ಕಳೊಂದಿಗೆ ಕೂಡಿಬಾಳುವಿಕೆ ಸಾಧ್ಯವಾಗಬಹುದೆಂಬ ದೂರದ ನಿರೀಕ್ಷೆ ಒಂದೆಡೆ.

ದಾನಸಾಲಿ ತನ್ನ ಗಂಡನೊಂದಿಗೇ ನಡೆದಾಗ ಅಲ್ಲಿ ಆಕೆಯ ತಾತ ಆಕೆಗೆ ಎಂದು ತನ್ನೆಲ್ಲಾ ಪಶುಸಂಪತ್ತನ್ನು ಕೊಡುತ್ತಾನೆ. ಮಾತೃಮೂಲೀಯ ವ್ಯವಸ್ಥೆ ಶಿಥಿಲಗೊಂಡು ಪಿತೃ ಪ್ರಧಾನ್ಯತೆಯ ಕಡೆ ಪರಿವರ್ತಿತವಾಗುವ ಸಂದರ್ಭದಲ್ಲಿ ವ್ಯವಸ್ಥೆಯೊಂದು ಇದ್ದಕ್ಕಿದ್ದ ಹಾಗೆಯೆ ಬದಲಾಯಿಸಲು ಕ್ರಮೇಣ ಬದಲಾವಣೆಯ ಕಡೆ ಸರಿಯುತ್ತದೆ. ಉತ್ತರಾಧಿಕಾರದ ವರ್ಗಾವಣೆಯಲ್ಲಿ ಈ ಮೂಲದ ಕುರುಹುಗಳನ್ನು ಕಾಣಬಹುದು. ಸ್ತ್ರೀಯ ಮಕ್ಕಳು ಆಕೆಯ ತವರಿನವರಿಂದ ತಾತ ಅಥವಾ ಸೋದರ ಮಾವಂದಿರಿಂದ ಆಸ್ತಿಯನ್ನು ಪಡೆಯುತ್ತಾನೆ. ದಾನಸಾಲಿಯ ಗಂಡ ತನ್ನ ಹೆಂಡತಿಯ ತವರಿನ ಕಡೆಯಿಂದ ಆಸ್ತಿ ಪಡೆದದ್ದು. ಇದರ ಒಂದು ರೂಪ ಎನಿಸುತ್ತದೆ. ಇಲ್ಲಿ ಸಂಪತ್ತಿನ ಮೇಲೆ ಹಿಡಿತ ಹೊಂದುವವನು ಅಂತಿಮವಾಗಿ ಪುರುಷನೇ. ಖಾಸೀ ಜನಾಂಗದಲ್ಲಿ ಆಸ್ತಿ ಸ್ತ್ರೀಯ ಸೋದರರಿಗೆ ವರ್ಗಾವಣೆಯಾಗಿ ಅಲ್ಲಿಂದ ಆಕೆಯ ಮಕ್ಕಳು ಪಡೆಯುತ್ತಾರೆ. ಗಂಡನಿಗೆ ಯಾವುದೇ ಹಕ್ಕು ಇಲ್ಲ. ರೋಮನ್ನರಲ್ಲೂ ಅಧಿಕಾರ ಸೋದರಳಿಯನಿಗೆ ಬರುತ್ತದೆ. ಪ್ರಾಚೀನ ಸುಮೇರಿಯನ್‌ನಲ್ಲಿ ಪತಿಯೊಂದಿಗೆ ಸೇರಿ ಹೆಂಡತಿ ನಗರಾಡಳಿತ ನಡೆಸುತ್ತಿದ್ದಳು.[೬೪] ಈ ಎಲ್ಲಾ ವಿವರಗಳು ಮಾತೃ ಮಾಲೀಯ ಸ್ಥಿತಿಯಿಂದ ಪಿತೃ ಯಜಮಾನ್ಯದ ಕಡೆ ಕ್ರಮೇಣ ಸರಿಯುತ್ತಿದ್ದ ಹಂತಗಳನ್ನು ತೋರಿಸುತ್ತವೆ. ದಾನಸಾಲಿಯದಾಗಬೇಕಾಗಿದ್ದ ಸಂಪತ್ತನ್ನು ಆಕೆಯ ಗಂಡನಿಗೆ ತನ್ನ ಮೊಮ್ಮಕ್ಕಳಿಗಾಗಿ ಎಂಬ ಉದ್ದೇಶದಿಂದಲೇ ತಾತ ಕೊಟ್ಟಾಗ ಅದು ತನ್ನ ಮೊಮ್ಮಕ್ಕಳ ಕೈಗೆ ಸೇರುತ್ತಿಲ್ಲ. ಅವರಿಂದ ಪ್ರತ್ಯೇಕಗೊಂಡು, ತನ್ನ ಪತ್ನಿಯನ್ನು ಪ್ರತ್ಯೇಕ ಗೊಳಿಸಿ ಕರೆದುತಂದ ಸುಕ್ಕಲು ಮಲ್ಲನಾಯಕನ ಕೈಸೇರಿತಲ್ಲಾ ಎಂಬ ವಿಷಯ ಸ್ಪಷ್ಟವಾದಾಗ ಮೋಸ ಹೋದೆ ಎಂದು ಕೊರಗಿ ಮಂದರಾಜ ಕಣ್ಣೀರು ಹಾಕಿ ಆ ಕಣ್ಣೀರೇ ಪ್ರವಾಹದಂತಾಗಿ ಅದರಲ್ಲೇ ಆತ ಮುಳುಗಿ ಅಂತ್ಯವನ್ನು

---

[೬೪] ಡಾ. ದೇವಿಪ್ರಸಾದ್ ಚಟ್ಟೋಪಾಧ್ಯಾಯರು, ಮಾತೆಯರು ಮಾನ್ಯರಾಗಿದ್ದಾಗ ಅನುವಾದ: ಜ. ಕುಮಾರಪ್ಪ, ಪು.೧೧೦. ೨೦೦೪. ನವಕರ್ನಾಟಕ ಪಬ್ಲಿಕೇಷನ್ಸ್. ಬೆಂ.

ಕಾಣುತ್ತಾನೆ. ಆತನ ದುಃಖದ ತೀವ್ರತೆಯನ್ನು ಇದು ಸಾಂಕೇತಿಕವಾಗಿಸುತ್ತದೆ. ಇಂತಹ ಸಂದರ್ಭದಲ್ಲಿ ವ್ಯವಸ್ಥೆಯೊಂದಿಗೆ ರಾಜಿಮಾಡಿಕೊಳ್ಳುತ್ತಲೇ ಅನುಸಂದಾನದ ಮಾರ್ಗದಲ್ಲಿ ನಿಂತು ಯೋಚಿಸುವ ಹೆಣ್ಣಾಗಿ ದಾನಸಾಲಿಯಮ್ಮ ಕಂಡುಬರುತ್ತಾಳೆ. ಈ ಅನುಸಂಧಾನದ ಮಾದರಿಯೂ ಒಂದು ಬಗೆಯ ಬೌದ್ಧಿಕತೆಯೇ ಹೊರತಾಗಿ ಸೋಲಲ್ಲ. ಹೋರಾಟದ ಮಾದರಿಗಿಂತ ಭಿನ್ನವಾದ ಅನುಸಂಧಾನದ ಮಾದರಿಗಳು ಎಷ್ಟೋ ಜಾಗತಿಕ ಸಮಸ್ಯೆಗಳಿಗೂ ಉತ್ತಮ ಪರಿಹಾರ ಒದಗಿಸಿರುವುದನ್ನು ಇತಿಹಾಸ ಮತ್ತು ವರ್ತಮಾನದ ವಿದ್ಯಮಾನಗಳು ನಮಗೆ ಸ್ಪಷ್ಟಪಡಿಸಿವೆ. ಈ ನೆಲೆಯಲ್ಲಿ ದಾನಸಾಲಿಯಮ್ಮನನ್ನು ಇಲ್ಲಿ ಗ್ರಹಿಸಿಕೊಳ್ಳಬಹುದಾಗಿದೆ.

ನಂತರದ ಹಂತದಲ್ಲಿ ಇಂತಹ ಪುರುಷಾಧಿಕಾರದ ಧೋರಣೆಯನ್ನು ಖಂಡಿಸಿ ಆ ಶಕ್ತಿಯನ್ನು ಮಣಿಸಲು ಪ್ರಯತ್ನಿಸಿ ಯಶಸ್ವಿಯಾದ ಮಹಿಳೆಯ ಸಬಲತೆಗೆ ಸಾಕ್ಷಿಯಾಗಿ ನಿಲ್ಲುವವಳು ರಾಯಮ್ಮ. ತನ್ನ ತಾಯಿ ತನ್ನ ಮಕ್ಕಳ ಯೋಗಕ್ಷೇಮದ ಹೊಣೆಗಾರಿಕೆಯನ್ನು ಹಿರಿಯ ಮಗಳಾದ ರಾಯಮ್ಮನಿಗೆ ಒಪ್ಪಿಸಿ ಹೋದಾಗ ಅದನ್ನು ದಕ್ಷತೆಯಿಂದ ನಿರ್ವಹಿಸಿದವಳು ರಾಯಮ್ಮ. ಬೇಟೆ, ಪಶುಪಾಲಕತದೊಂದಿಗೆ ಕೃಷಿ ಸಂಸ್ಕೃತಿಯ ಕಡೆಗೂ ಅಡಿ ಇರಿಸುತ್ತಿದ್ದ ಮಹಿಳೆ ಈಕೆ. ಸೋದರರಿಗೆ ತನ್ನ ಬುಡಕಟ್ಟಿನ ಸಹಜಜ್ಞಾನವಾದ ಬಿಲ್ವಿದ್ಯೆಯನ್ನು ತನ್ನದೇ ಆದ ನೆಲೆಯಲ್ಲಿ ತನ್ನದೇ ಪರಿಕರಗಳನ್ನು ಬಳಸಿಕೊಂಡು ಕಲಿಸಿ, ತರಬೇತುಗೊಳಿಸಿ ತಂದೆಯ ವಿರುದ್ಧ ದಾಳಿಗೆ ಎಂದೇ ಕಳುಹಿಸಿಕೊಡುತ್ತಾಳೆ. ಇಲ್ಲಿ ಎರಡು ಉದ್ದೇಶಗಳಿವೆ. ಪಿತೃವಿನ ಮೂಲಕ ಮಕ್ಕಳನ್ನು ಗುರುತಿಸುವ ಪದ್ಧತಿ ಅಡಿ ಇರಿಸುತ್ತಿರುವಾಗ ಕಳವಳಕ್ಕೀಡಾದ, ಅಪಮಾನಕ್ಕೊಳಗಾದ ತನ್ನ ಸೋದರರಿಗೆ ಒಂದು ಸಾಮಾಜಿಕ ನೆಲೆಗಟ್ಟು ಸಿಗುವುದು ಮಲ್ಲಿನಾಯಕ ತಂದೆ ಎಂದು ಒಪ್ಪಿಕೊಳ್ಳುವುದರ ಮೂಲಕ ಮಾತ್ರ ಆತನ ಬಳಿ ಇರುವ ತಮ್ಮ ಸಂಪತ್ತನ್ನು ಪಡೆದು ಬದುಕನ್ನು ಕಟ್ಟಿಕೊಳ್ಳಬೇಕಾದ ಅವಶ್ಯಕತೆ.

ಎರಡನೆಯದಾಗಿ ಈ ಮೂಲಕ ತಾಯಿಯಾದ ದಾನಸಾಲಿಗೂ ಸಹ ಮನ್ನಣೆ ದೊರಕಿಸಿಕೊಡುವುದು. ಇದಕ್ಕಾಗಿಯೇ ದಾನಸಾಲಿಯಮ್ಮನೂ ಕಾಯುತ್ತಾ ಇದ್ದದ್ದು. ಈ ಎರಡೂ ಉದ್ದೇಶಗಳನ್ನು ತನ್ನ ಯೋಜನೆ, ಸಾಹಸ, ಕಾರ್ಯತಂತ್ರದ ಮೂಲಕ ಸಾಧ್ಯವಾಗಿಸಿಕೊಂಡ ಸಬಲಳೀಕೆ, ತನ್ನನ್ನು ಕೇವಲ ಪ್ರಕೃತಿ ನೆಲೆಯಲ್ಲಿ ಗುರುತಿಸಿಕೊಳ್ಳದೆ ಬೌದ್ಧಿಕ ನೆಲೆಯಲ್ಲಿ ಗುರುತಿಸಿಕೊಂಡವಳೀಕೆ. ಇಲ್ಲಿ ಹೋರಾಟ ಮಾಡಿದವರು ಈಕೆಯ ಸೋದರರಾದರೂ ಅವರ ಹಿಂದಿರುವ ಶಕ್ತಿ ಇವಳೇ. ಸ್ತ್ರೀವಾದದ ಚಳುವಳಿಯ ಹಿಂದಿರುವ ಉದ್ದೇಶವೆಂದರೆ ಶೋಷಣಾ ರಹಿತವಾದ ಸ್ಥಿತಿಯನ್ನು ಮಹಿಳೆ ಅಪೇಕ್ಷಿಸುವುದು ಸಂಪತ್ತಿನ ಹಕ್ಕನ್ನು ಪಡೆಯುವುದರೊಂದಿಗೆ ತಾವು ಆತನ ಮಕ್ಕಳೆಂಬ ಹಕ್ಕನ್ನು ಪ್ರತಿಷ್ಠಾಪಿಸುವಲ್ಲಿಯೇ ತಾಯಿಯನ್ನು ಶೋಷಣೆಯಿಂದ ಬಿಡುಗಡೆಗೊಳಿಸಿ ಆ ಮೂಲಕವಾಗಿಯೇ ಆಕೆಗೊಂದು ಸಾಮಾಜಿಕ ನೆಲೆಗಟ್ಟನ್ನು ದೊರಕಿಸಿಕೊಡುವ ಪ್ರಯತ್ನವೂ ಇದಾಗಿದೆ. ಹೀಗಾಗಿ ಇದೊಂದು ಪರೋಕ್ಷವಾದ ರಾಯಮ್ಮನ ಸ್ತ್ರೀಪರ ಹೋರಾಟವಾಗಿದ್ದು ಅವಳ ಸ್ತ್ರೀವಾದೀ ನಿಲುವನ್ನು ಖಚಿತಪಡಿಸುತ್ತದೆ. ಅಧಿಕಾರ ಮೂಢ ಪುರುಷನಿಂದ ಸಮುದಾಯದ ಒಳಗೆಯೇ ಉಂಟಾದ ಅತಿರೇಕಗಳ ವಿರುದ್ಧದ ರಾಯಮ್ಮನ ನಡೆಸಿದ ಹೋರಾಟವಿದಾಗಿದೆ.

**೨. ಸಮುದಾಯದ ಆಚೆಯಿಂದ ನಡೆದ ದಾಳಿಯನ್ನು ಪ್ರತಿಭಟಿಸಿನಿಂತ ಮಹಿಳೆಯರ ಹೋರಾಟಗಳು:** ತನ್ನ ಜೈವಿಕ ಕಾರಣಗಳಿಂದಾಗಿ ಮಹಿಳೆ ಅನಿವಾರ್ಯವಾಗಿ ಕೆಲವು ನಿಗದಿತ ಸಂದರ್ಭಗಳಲ್ಲಿ ಅಸಹಾಯಕಳಾಗಬಹುದು. ಇಲ್ಲಿ ಅವಳ ಅಸಹಾಯಕತೆ ಎನ್ನುವುದಕ್ಕಿಂತ ಮಗುವಿನ ಪೋಷಣೆಯಂತಹ ಮತ್ತೊಂದು ಜವಾಬ್ದಾರಿಯನ್ನು ನಿರ್ವಹಿಸುವ ಕರ್ತವ್ಯಕ್ಕೆಬದ್ಧಳಾದಾಗ ಅವಳು ತನ್ನನ್ನು ಅಲ್ಲಿಗೆ ಸೀಮಿತಗೊಳಿಸಿಕೊಳ್ಳಬಹುದು. ಇದೇ ಕಾರಣವನ್ನು ಉತ್ಪ್ರೇಕ್ಷಿಸಿ ಅವಳನ್ನು ದುರ್ಬಲ ಸ್ಥಿತಿಯಲ್ಲಿ ಗುರುತಿಸುತ್ತಾ ಬಂದು ತಾನು ಅದರ ಲಾಭವನ್ನು ಪಡೆದುಕೊಂಡಿದ್ದು ಪುರುಷನ ಉಪಾಯ ಅಥವಾ ರಾಜಕಾರಣ ಎನ್ನಬಹುದು.

ಆದರೆ ಬುಡಕಟ್ಟಿನ ಮಹಿಳೆ ಸಾಮಾನ್ಯವಾಗಿ ಇದರಿಂದ ಹೊರತಾಗುತ್ತಾಳೆ. ಯಾವುದೇ ಆದಿಮ ಸಂಸ್ಕೃತಿಯಲ್ಲಿ ಮಹಿಳೆ ಸಮಾನ ಗೌರವ, ಸಮಾನ ಹೊಣೆಗಾರಿಕೆ ಹೊಂದಿದ್ದವಳಾಗಿದ್ದಳು. ಇಂತಹ ಸಂಸ್ಕೃತಿಯ ಮೂಲರೂಪಗಳನ್ನೇ ಉಳಿಸಿಕೊಂಡಿರುವ ಬುಡಕಟ್ಟುಗಳೂ ಇದರಿಂದ ಹೊರತಾಗಿಲ್ಲ. ಬುಡಕಟ್ಟುಗಳ ಜೀವನಕ್ರಮ ಮೂಲತಃ ಸಾಮುದಾಯಿಕವಾದುದು. ಇದರಿಂದ ಪಲ್ಲಟಗೊಳ್ಳುವ ಆರಂಭಿಕ ಹಂತವನ್ನು ಸಾವು ಮ್ಯಾಸಬೇಡ ಬುಡಕಟ್ಟಿನಲ್ಲಿ ಗುರುತಿಸಬಹುದು. ಎಲ್ಲರೂ ಒಟ್ಟಾಗಿ ಕೂಡಿ ಬಾಳುವ ವ್ಯವಸ್ಥೆ ಇದ್ದಂತಹ ಕಾಲದಲ್ಲಿ ಸಮುದಾಯದ ಯಾವುದೇ ಸಂಗತಿಯನ್ನು ಮುಚ್ಚಿಡುವ ಅಥವಾ ಕೆಲವರೇ ಕೂತು ಎಲ್ಲಿಯೋ ನಿರ್ಧರಿಸುವ ಸಂದರ್ಭಗಳೂ ಇದ್ದಿರಲಾರವು. ಶ್ರಮದ ಹಂಚಿಕೆ, ಆದಾಯದ ಅನುಭವಿಸುವಿಕೆ ಹೇಗೆ ಎಲ್ಲರಿಗೂ ಸಮಾನವಾಗಿ ಲಭ್ಯವಾಗುತ್ತಿತ್ತೋ ಹಾಗೆಯೆ ಯಾವುದಾದರೂ ಬಿಕ್ಕಟ್ಟು ಎದುರಾದಾಗಲೂ ಒಟ್ಟಾಗಿ ಎಲ್ಲರೂ ಸೇರಿ ಚರ್ಚಿಸುವುದು ಸಾಮಾನ್ಯವಾಗಿದ್ದಿರಬಹುದು. ಈ ಕಾರಣದಿಂದಾಗಿಯೇ ಬಹುಶಃ ಸಮುದಾಯದಲ್ಲಿ ಸ್ತ್ರೀ ಪುರುಷ ಎಂಬ ತಾರತಮ್ಯವಿಲ್ಲದೆ ರಾಜಕೀಯ, ಸಾಮಾಜಿಕ ಪ್ರಜ್ಞೆ, ಆರ್ಥಿಕ ವಿತರಣೆ ಇವೆಲ್ಲಾ ಜ್ಞಾನ ಸಹಜವಾಗಿಯೇ ಎಲ್ಲರಿಗೂ ಇರುತ್ತಿತ್ತು. ಯಾವುದೇ ಸಂದರ್ಭವನ್ನು ಸ್ತ್ರೀ ಪುರುಷ ಬೇದವಿಲ್ಲದೆ ನಿಭಾಯಿಸಿಕೊಂಡು ಹೋಗಲಾಗುತ್ತಿತ್ತು.

ಬೇಟೆಯ ಹಂತಕ್ಕೆ ಹೋಲಿಸಿ ನೋಡಿದಾಗ ಪಶುಪಾಲನೆಯ ಹಂತ ಮುಂದುವರಿದ ಸ್ಥಿತಿ. ಈ ಮೂಲಕ ಸಮುದಾಯವೊಂದರ ಸಾಮಾಜಿಕ ಅಂತಸ್ತುಗಳೂ ನಿರ್ಣಯಿಸಲ್ಪಡುತ್ತಿದ್ದವು. ಪಶುಪಾಲನೆ ಒಂದು ಬಗೆಯ ಜೀವನ ವಿಧಾನವಾಗಿದ್ದಂತೆಯೇ ಸಂಪತ್ತಿನ ಶೇಖರಣೆಯ ವಿಧಾನವೂ ಆಗಿದ್ದಿತು. ಎಲ್ಲಿ ಸಂಪತ್ತಿನ ಶೇಖರಣೆಯಾಗಿರುತ್ತದೆಯೋ ಅಲ್ಲೆಲ್ಲಾ ಆಕ್ರಮಣಗಳು, ಯುದ್ಧಗಳು ಸಾಮಾನ್ಯ. ಭಾರತದ ಶಿಷ್ಟ ಮಹಾಪುರಾಣಗಳಲ್ಲೂ ಯುದ್ಧವೇ ಪ್ರಮುಖವಸ್ತು. ಮ್ಯಾಸಬೇಡರಲ್ಲಿ ಪಶುಸಂಪತ್ತೇ ಇವರ ಆಸ್ತಿ. ಜೀವನ ನಿರ್ವಹಣೆಗಾಗಿ ಇವರು ಜನರನ್ನು, ಪ್ರಬಲರನ್ನು ಆಶ್ರಯಿಸಿದವರಲ್ಲ. ಬದಲಾಗಿ ಪ್ರಕೃತಿಯನ್ನು ಅವಲಂಬಿಸಿದವರು. ಹೀಗೆ ತಮಗೆ ತಾವೇ ಸ್ವಾಯತ್ತವಾಗಿ ಬದುಕುತ್ತಿದ್ದವರು. ಇವರ ಪಶುಸಂಪತ್ತನ್ನು ಆಕ್ರಮಣಕಾರೀ ಶಕ್ತಿಗಳು ಅಪಹರಿಸುವ ಪ್ರಯತ್ನ ಮಾಡಿದಾಗ ಅದನ್ನು ರಕ್ಷಿಸಿಕೊಳ್ಳಲು ಹೋರಾಟಗಳೂ ಅನಿವಾರ್ಯವಾಗುತ್ತಿದ್ದವು. ಇಂತಹ ಹೋರಾಟಗಳಲ್ಲಿ ಸ್ತ್ರೀಪುರುಷರೆಂಬ ವ್ಯತ್ಯಾಸವಿಲ್ಲದೆ ಎಲ್ಲರೂ ಪಾಲ್ಗೊಳ್ಳುತ್ತಿದ್ದರು.

ತಮ್ಮ ಪಾಡಿಗೆ ತಾವು ಬದುಕುತ್ತಿದ್ದ ನಿರುಪದ್ರವಿಗಳ ಮೇಲೆ ದುರುಳತನದಿಂದ ಪಶುಸಂಪತ್ತಿಗಾಗಿ ಆಕ್ರಮಣ ಮಾಡಿದವರು ನಿಡುಗಲ್ಲಿನ ದೊರೆಯಾದ ಹೊಟ್ಟೆಣ್ಣನಾಯಕ, ಆನೆಗೊಂದಿಯ ಅರಸ ನರಪತಿರಾಜ, ಗೆದ್ದವಲ್ಲಿಯ ದೊರೆ ಗೆದ್ದಲು ಕಟ್ಟೆ ರಾಜ. ಈ ಶಕ್ತಿಗಳ ವಿರುದ್ಧ ಹೋರಾಟಕ್ಕೆ ನಿಂತವರು ಮಹಿಳೆಯರು ಎಂಬುದು ವಿಶೇಷ.

ಅಕ್ಕರಾಯಮ್ಮ, ಮುಂಗಲು ದೇವಮ್ಮ, ಮಲೆಯಮ್ಮ, ಗೌರಸಮುದ್ರದ ಮಾರಮ್ಮ, ಇವರೆಲ್ಲಾ ತಂಡದ ನಾಯಕತ್ವ ವಹಿಸಿ ಹೋರಾಟ ಮಾಡಿದ ಶಕ್ತಿಗಳು. ಶಸ್ತ್ರಾಸ್ತ್ರಗಳನ್ನು ಹಿಡಿದು ಎದುರಾಳಿಗಳೊಂದಿಗೆ ಸೆಣಸಾಡಿದವರು ಮತ್ತು ಕಾರ್ಯ ತಂತ್ರ ರೂಪಿಸಿದವರು. ತಮ್ಮ ಬುಡಕಟ್ಟಿನ ವಿಶೇಷ ಜ್ಞಾನವಾದ 'ಮಾಟ'ದಂತಹ ವಿದ್ಯೆಯನ್ನು ಬಳಸಿಕೊಂಡು ಎದುರಾಳಿಗಳನ್ನು ಹಿಮ್ಮೆಟ್ಟಿಸಿದವರು. ಅರಸರ ಪಡೆಯನ್ನು ಎದುರಿಸುವಂತಹ ಆಧುನಿಕ ಶಸ್ತ್ರಾಸ್ತ್ರಗಳು ತಮ್ಮಲ್ಲಿ ಇಲ್ಲದೆ ಇದ್ದಾಗ ತಮ್ಮ ದನಕರುಗಳನ್ನೇ ಬಳಸಿಕೊಂಡು ಯುಕ್ತಿಯಿಂದ ಜಯಗಳಿಸಿ ಸಮುದಾಯದ ರಕ್ಷಣೆ ಮಾಡಿದ್ದು ಆಯಾ ಪಠ್ಯಗಳ ಮೂಲಕ ಕಂಡುಬರುತ್ತದೆ. ದೈಹಿಕ ಕಸರತ್ತು ಮತ್ತು ಬೌದ್ಧಿಕ ಜ್ಞಾನ ಎರಡನ್ನೂ ಪಡೆದು ಅದನ್ನು ಅತ್ಯುತ್ತಮವಾಗಿ ಸಾಂದರ್ಭಿಕವಾಗಿ ಬಳಸಿಕೊಂಡ ಜಾಣೆಯರಿವರು. ಭಾರತೀಯ ಮಹಿಳೆಯ ಸಹಜವಾದ ಸಬಲತೆಗೆ ಇಂತಹ ಮಹಿಳೆಯರೆ ಮಾದರಿಗಳಾಗಬಲ್ಲರು. ಎಲ್ಲಿಯೂ ಸ್ಥೈರ್ಯವನ್ನು ಕಳೆದುಕೊಳ್ಳದೆ ಮಾನವೀಯ ಅನುಕಂಪವನ್ನು ಹೊಂದಿದವರಾಗಿದ್ದ ಗುಲಾಮಿತನವನ್ನು ಸ್ವೀಕರಿಸಲು ಒಪ್ಪದೆ ಪ್ರತಿಭಟಿಸಿ ನಿಂತವರಿವರು. ಇದು ಇವರ ಅರ್ಥಪೂರ್ಣವಾದ ವೈಚಾರಿಕ ಪ್ರಜ್ಞೆಗೆ ಸಾಕ್ಷಿ. ಇವರ ಈ ಸಬಲತೆ ಸಹಜವಾದ ಗುಣ, ಪುರುಷಾಧಿಕಾರದ ಹಿನ್ನೆಲೆಯಲ್ಲಿ ಹೆಣ್ಣನ್ನು ಪ್ರಕೃತಿ ನೆಲೆಯಲ್ಲಿಯೂ, ಗಂಡನ್ನು ಬೌದ್ಧಿಕ ನೆಲೆಯಲ್ಲಿಯೂ ಗುರುತಿಸುವ ಇಂದಿನ ನಾಗರೀಕ ಸಮಾಜಗಳ ರೀತಿಗೆ ಇದನ್ನು ಹೋಲಿಸಿನೋಡಿದಾಗ ಹೆಣ್ಣನ್ನು ಎರಡನೆಯ ದರ್ಜೆಯಲ್ಲಿರಿಸದೆ ಸಮಾನ ನೆಲೆಯಲ್ಲಿಯೇ ಕಂಡ ಸಮುದಾಯವಿದು ಎಂದು ಸ್ಪಷ್ಟವಾಗುತ್ತದೆ. ಮೂಲದ ಮಾತೃ ಮಾಲೀಯ ಸ್ಥಿತಿ ಕಾರಣವಾಗಿ, ಮತ್ತು ಅಕ್ಕ ರಾಯಮ್ಮನ ಮಾರ್ಗದರ್ಶನದಲ್ಲಿ ಬದುಕನ್ನು ಕಟ್ಟಿಕೊಂಡ ಪರಂಪರೆ ಇದಾಗಿದ್ದು ಮಹಿಳೆಯನ್ನು ಮುಂಚೂಣಿಯಲ್ಲಿಯೇ ಇರಿಸುತ್ತಿದ್ದುದು ಸಹಜವಾಗಿತ್ತು. ಸಮುದಾಯದಲ್ಲಿ ಮೊದಲಿನಿಂದಲೂ ಇದ್ದ ಈ ಗೌರವ ಕಾರಣವಾಗಿ ಮಹಿಳೆಯರೂ ಸ್ಥೈರ್ಯದಿಂದಲೇ ಯಾವುದೇ ಹೋರಾಟದ ಮುಂಚೂಣಿಯಲ್ಲಿ ನಿಲ್ಲುತ್ತಿದ್ದುದು ಕಂಡುಬರುತ್ತದೆ.

ಹಾಗಾದಾಗ ಇಲ್ಲಿ ಪುರುಷನ ಸ್ಥಾನ ಏನಾಗಿತ್ತು. ಮಹಿಳೆಯರೇ ಹೋರಾಟಗಾರ್ತಿಯರಾಗಲು ಕಾರಣವೇನು? ಎಂಬ ಪ್ರಶ್ನೆಗಳೂ ಮೂಡುತ್ತವೆ. ಹುಲಿಯೊಂದಿಗೆ ಹೋರಾಡಿದ ಗಾದ್ರಿಪಾಲನಾಯಕ, ವೈಚಾರಿಕವಾಗಿ ಹೋರಾಟ ಮಾಡಿದ ಜಗಲೂರು ಪಾಪನಾಯಕ, ಯರಮಂಚಿನಾಯಕ, ದೆಡ್ಡಿಸೂರನಾಯಕ, ದೆಡ್ಡಿಕಾಮನಾಯಕ, ದೆಡ್ಡಿಯರಪಾಲನಾಯಕ, ಯರಗಾಟನಾಯಕ ಹೀಗೆ ಅನೇಕ ಪುರುಷ ಶಕ್ತಿಗಳೂ ಇಲ್ಲಿ ವಿಜೃಂಭಿಸಿವೆ. ಇವರೆಲ್ಲರೂ ಸಹಜವೀರರೇ. ಅರಸರ ಮೀಸಲು ಪಡೆಗಳಾಗಿಯೂ ಈ ಮ್ಯಾಸಬೇಡರು ಕಾರ್ಯ ನಿರ್ವಹಿಸುತ್ತಿದ್ದುದರಿಂದ ಎಷ್ಟೋ ಮ್ಯಾಸ ಬೇಡರ ಪಡೆಗಳು ತಮ್ಮನ್ನು ಈ ಕಾಯಕದಲ್ಲಿ ತೊಡಗಿಸಿಕೊಳ್ಳುತ್ತಿದ್ದವು. ಇಂತಹ ಸನ್ನಿವೇಶವನ್ನೇ ಬಳಸಿಕೊಂಡು ಪರರು ಪಶುಸಂಪತ್ತಿಗಾಗಿ ಆಕ್ರಮಣ ಮಾಡುತ್ತಿದ್ದರು. ಕಥನಗಳಲ್ಲಿ ಈ ಉಲ್ಲೇಖಗಳಿಲ್ಲ. ಆದರೆ

ಸಮುದಾಯದ ವಕ್ತೃಗಳು ಕೊಡುವ ವಿವರವಿದು. ಆಗ ಅಲ್ಲಿ ಮಹಿಳೆಯರೇ ಹೋರಾಟಕ್ಕೆ ಅಣಿಯಾಗಬೇಕಾದ ಸಂದರ್ಭ ಎದುರಾಗುತ್ತಿತ್ತು. ಹೀಗಾಗಿ ಮಹಿಳೆಯರು ಹೋರಾಟ ಮಾಡಿದರೆಂಬುದಾಗಿ ತಿಳಿಸುತ್ತಾರೆ. ಒಟ್ಟಾರೆ ಸಂದರ್ಭ ಯಾವುದೇ ಇರಲಿ ಕಣಕ್ಕಿಳಿದು ಶತ್ರುಗಳನ್ನು ಹಿಮ್ಮೆಟ್ಟಿಸುವ ಸಬಲತೆ ಈ ನಾಯಕಿಯರಿಗಿತ್ತು ಎಂಬುದಂತೂ ನಿರ್ವಿವಾದಿತ ಸತ್ಯ. ರಾಯಮ್ಮನೊಂದಿಗೆ ಸಹಾಯಕರಾಗಿದ್ದ ಆಕೆಯ ಕಿರಿಯ ಸಮಕಾಲೀನ ಮಹಿಳೆಯರೂ ಇದ್ದರು. ಅರವಬ್ಬ, ಗಟ್ಟಿಮೀದಬ್ಬ, ಕಡಸಲಬ್ಬ, ಯರದಾಯಬ್ಬ, ಜೆಜ್ಜಿಲಬ್ಬ, ನಲ್ಲಟಬ್ಬ ಇವರುಗಳು. ಸಮುದಾಯದಲ್ಲಿ ಮಾತೆಗೆ ಅರ್ಥಾತ್ ಮಹಿಳೆಗೆ ಮಾನ್ಯತೆ ಇತ್ತು ಎಂಬುದಕ್ಕೆ ಮತ್ತೊಂದು ಉದಾಹರಣೆಯೆಂದರೆ ಪಶುಪಾಲಕರ ಈ ಸಮುದಾಯದಲ್ಲೂ ಕ್ರಮೇಣ ಗುಂಪುಗಾರಿಕೆ, ಖಾಸಗೀ ಆಸ್ತಿಯ ಒಡೆತನದ ಆಸೆ ಕಾರಣವಾಗಿ ಬಿರುಕುಗಳು ಕಾಣಿಸಿಕೊಂಡಾಗ ಪಶುಸಂಪತ್ತನ್ನು, ಆಯುಧಗಳನ್ನು ಪಾಲು ವಿಭಾಗ ಮಾಡಿಕೊಟ್ಟವರು. ಇಲ್ಲಿ ಮಹಿಳೆಯರೇ, ಮೂರುರಾತ್ರಿ, ಮೂರು ಹಗಲು ಜಂಬುದ್ವೀಪದ ಗದ್ದೆಯಲ್ಲಿ ಪಂಚಾಯಿತಿ ನಡೆದು ಸಂಪತ್ತಿನ ಹಂಚಿಕೆಯಾದ ವಿಷಯ ಹಿಂದೆ ಹೇಳಲಾಗಿದೆ. ಹೀಗೆ ಹಂಚುವ ಅಧಿಕಾರ ಸಮುದಾಯದಲ್ಲಿ ಯಜಮಾನ್ಯ ನೆಲೆಯಲ್ಲಿದ್ದವರಿಗೆ ಮಾತ್ರ ಸಾಧ್ಯ.

ಹೀಗೆ ಮೇಲಿನ ಎಲ್ಲಾ ವಿವರಗಳ ಮೂಲಕ ಈ ಸಮುದಾಯದಲ್ಲಿ ಮೂಲತಃ ಮಾತೃಮೂಲೀಯ ಪರಂಪರೆ ಇದ್ದು ಪಶು ಪಾಲಕತನದೊಂದಿಗೆ ಪಿತೃ ಯಜ ಮಾನ್ಯ ಸಂಸ್ಕೃತಿ ಆರಂಭಗೊಳ್ಳುತ್ತಿರುವ ಸೂಚನೆಗಳಿದ್ದರೂ ಮೂಲದ ಸ್ಥಿತಿಯೂ ಇನ್ನೂ ಪೂರ್ಣವಾಗಿ ಮರೆಯಾಗದೆ ಅಸ್ತಿತ್ವದಲ್ಲಿತ್ತು ಎಂದು ಹೇಳಬಹುದು.

ಹೀಗೆ ಸಮುದಾಯದ ರಕ್ಷಕಿಯಾಗಿದ್ದಂತಹ ಮಹಿಳೆಯರನ್ನು ಆರಾಧನಾ ನೆಲೆಯಲ್ಲಿರಿಸಿಕೊಂಡು ಸಮುದಾಯ ಸ್ಮರಣೆಯಲ್ಲಿರಿಸಿಕೊಂಡಿದೆ. ಸಾಮಾನ್ಯವಾಗಿ ಎಲ್ಲಿಯೇ ಆದರೂ ಸ್ತ್ರೀ ದೇವತೆಗಳ ಆರಾಧನೆ ನಡೆಯುತ್ತಿದ್ದರೆ ಅವರು ಪಿತೃನಿಷ್ಠರಾಗಿದ್ದ ಕಾರಣಕ್ಕೆ ದೇವತೆಗಳೆನಿಸಿದರು ಎಂಬ ವಾದವೂ ಇದೆ. ಆದರೆ ಇಲ್ಲಿಯ ಐತಿಹಾಸಿಕ ಮಹಿಳೆಯರು ಸ್ವಂತಿಕೆ, ಸ್ವಾಯತ್ತತೆ, ಸಾಹಸ ಗುಣಗಳಿಂದ ಪುರುಷನಿಂದಲೆ ಗೌರವಿಸಲ್ಪಟ್ಟವರು ಎಂಬುದು ವಿಶೇಷ.

ನಂತರ ಕಾಲಘಟ್ಟದಲ್ಲಿ ಈ 'ಸ್ತ್ರೀ ಪ್ರಾಧಾನ್ಯತೆ' ಹಾಗೆಯೇ ಮುಂದುವರಿಯಿತೇ ಎಂಬ ಪ್ರಶ್ನೆಯೊಂದಿಗೆ ಹುಡುಕಾಟ ನಡೆಸಿದಾಗ ಸಿಗುವ ಉತ್ತರ ನಿರಾಶಾದಾಯಕವಾದುದೇ. ಹೆಣ್ಣನ್ನು ಪಲ್ಲಟಗೊಳ್ಳುತ್ತಿದ್ದ ಸಂದರ್ಭಕಾರಣವಾಗಿ ತನ್ನ ಖಾಸಗಿ ಆಸ್ತಿ ಎಂದು ಪರಿಗಣಿಸುವ ಆಶಯಗಳು ತಲೆದೋರಿದವು. ಹೀಗಾದಾಗ 'ಮುಂಗಲು ದೇವಮ್ಮ' ನಂತಹ ಸಾಹಸ, ಧೈರ್ಯ, ಬೌದ್ಧಿಕ ಜಾಣ್ಮೆಯನ್ನು ಹೊಂದಿದ್ದ ಮಹಿಳೆ ನಿರ್ದಯವಾಗಿ ಹತ್ಯೆಗೊಳಗಾದಳು. ಪುರುಷ ರಾಜಕಾರಣ ಎಲ್ಲಿ ವಿಜೃಂಭಿಸುತ್ತದೆಯೋ ಅಲ್ಲಿ ಕುಟುಂಬದ ಸಮಸ್ಯೆಗಳೇ ಕಾರಣವಾಗಿ ಹೆಣ್ಣು ಸುಲಭವಾಗಿ ಹಿಂಸೆಗೆ ಒಳಗಾಗುತ್ತಾಳೆ. ಅಪರಾಧವನ್ನು, ಅಪರಾಧಿಯನ್ನು ಗುರುತಿಸಲು ಸಾಧ್ಯವಾಗದಂತೆ ಪುರುಷ ರಾಜಕಾರಣ ಕೆಲಸ ಮಾಡುತ್ತದೆ. ಇದಕ್ಕೊಂದು ಅತ್ಯುತ್ತಮ ಉದಾಹರಣೆಯೇ ಈಕೆಯ ಸಾವಿನ ನಿಗೂಢತೆ. ಸ್ತ್ರೀಪಾವಿತ್ರ್ಯ ಎನ್ನುವುದೇ ಬಹಳ ಮುಖ್ಯವಾದ ಮೌಲ್ಯ ಎಂಬ ಸಾಮಾಜಿಕ ವ್ಯವಸ್ಥೆ ಅಡಿಯಡುತ್ತಿರುವಾಗ ಇದನ್ನು

ಮೀರಿದ ಹೆಣ್ಣಿಗೆ ಇದೇ ಕಾರಣದಿಂದಾಗಿ ಅವಳ ಬದುಕು ಸಾವಿನಂತಹ ದುರಂತಕ್ಕೊಳಗಾದಾಗಲೂ ಪರ, ವಿರೋಧದ ಯಾವುದೇ ಧ್ವನಿ ಅಲ್ಲಿ ಮೂಡದೆ ವ್ಯವಸ್ಥೆ ತಟಸ್ಥ ಸ್ಥಿತಿಯನ್ನು ಅನುಸರಿಸುತ್ತಿದೆ. ಈಕೆಯ ಬಗ್ಗೆ ಇಂತಹುದೇ ತಾಟಸ್ಥ್ಯವನ್ನು ಈ ಸಮುದಾಯವೂ ತಳೆದಿದೆ. ಆರ್ಯ ಸಂಸ್ಕೃತಿಯ ಪ್ರಾಬಲ್ಯ ಬೆಳೆಯುತ್ತಾ ಹೋದಂತೆ ಭಾರತೀಯ ಸಮಾಜವು ಸ್ಥಿತ್ಯಂತರಗಳಿಗೆ ಒಳಗಾಗುತ್ತಾ ಮಾತೃ ಪ್ರಧಾನ ವ್ಯವಸ್ಥೆ ಅರ್ಥ ಕಳೆದುಕೊಳ್ಳುತ್ತಾ ಹೋಯಿತು. ಹಾಗೆಯೇ ಲಿಂಗಾಧಾರಿತ ಅಸಮಾನತೆಯೂ ಪ್ರಾರಂಭವಾಯಿತು, ದೇಸೀಯವಾಗಿದ್ದ ವ್ಯವಸ್ಥೆ ನಶಿಸುತ್ತಾ ಹೋಯಿತು.

ಪ್ರಸ್ತಾಪಿತವಾಗಬೇಕಾದ ಮತ್ತೊಂದು ವಿಚಾರವೆಂದರೆ ಜಗಲೂರು ಪಾಪನಾಯಕನ ಸ್ತ್ರೀಪರ ಕಾಳಜಿ. ಪ್ರಖರವಾದ ವೈಚಾರಿಕ ಶಕ್ತಿಯ ಮೂಲಕ ವರ್ಣ ವ್ಯವಸ್ಥೆ ತಂದಿತ್ತ ವರ್ಗ ಅಸಮಾನತೆಯನ್ನು ಪ್ರತಿಭಟಿಸಿ, ಆಡಳಿತ ಶಾಹೀ ದೊರೆಯ ದುಷ್ಟತನದ ತೆರಿಗೆಯು ಹಿಡಿತದಿಂದ ಅಮಾಯಕ ಪ್ರಜೆಗಳನ್ನು ಪಾರು ಮಾಡಿದ ಈತನ ಜೀವ ಪರಕಾಳಜಿ ಹೆಣ್ಣಿನ ಬಗ್ಗೆಯೂ ಮುಂದುವರಿಯುತ್ತದೆ. ನಿಬಂಧನೆಯ ಮೇರೆಗೆ ಪಾಪನಾಯಕನ ಸೋದರತ್ತೆಯನ್ನು ಈತನ ಹೆರಿಗೆ ಸಂದರ್ಭದಲ್ಲಿ ತವರಿಗೆ ಅತ್ತಿಗೆಯ ಹಾರೈಕೆಗಾಗಿ ಕರೆತಂದಿರುತ್ತಾರೆ. ಆಕೆ ಮರಳಿಗಂಡನ ಮನೆಗೆ ಹೋದಾಗ ಆಕೆಯ ಹಲ್ಲು ಮುರಿದಿದ್ದ ಕಾರಣ ಗಂಡ ಕ್ಯಾಸಯ್ಯ ಆಕೆಯನ್ನು ತನ್ನ ಮನೆಗೆ ಸೇರಿಸುವುದಿಲ್ಲ. ಮೊದಲು ಹೇಗೆ ಇದ್ದೆಯೋ ಹಾಗೆಯೇ ಬಾ ಎಂದು ನಿರ್ಬಂಧಿಸುತ್ತಾನೆ. ಸುಮಾರು ೨೦ ವರ್ಷ ಆಕೆ ತವರಿನಲ್ಲಿಯೇ ಉಳಿಯುತ್ತಾಳೆ. ಪಾಪನಾಯಕ ಪ್ರಾಪ್ತವಯಸ್ಕನಾದಾಗ ಮಾವನ ಬಳಿ ಹೋಗಿ ತನ್ನ ಅತ್ತೆಯನ್ನು ಮನೆಗೆ ಸೇರಿಸಿಕೋ ಎಂದು ಬೇಡಿಕೊಂಡರೂ ಆತ ಒಪ್ಪುವುದಿಲ್ಲ. ಆಗ ತನ್ನ ಅತ್ತೆಗೆ ನಾವು ಹಸುವನ್ನು ಬಳುವಳಿಯಾಗಿ ಕೊಟ್ಟಿದ್ದೆವು. ನಿನಗೆ ಆಕೆ ಬೇಡವಾದರೆ ಆಕೆಯ ಆಸ್ತಿಯನ್ನು ಸಂಬಂಧಿಸಿದ ಈ ಪಶುಸಂಪತ್ತನ್ನು ನಮಗೆ ಹಿಂತಿರುಗಿಸು ಎಂದು ಕೇಳಿದಾಗ ಒತ್ತಾಯದಿಂದಲೇ ಪಡೆದುಕೊಳ್ಳುತ್ತಾನೆ. ಆಗ ಹೆದರಿದ ಕ್ಯಾಸಯ್ಯ ತನ್ನ ಪತ್ನಿಯನ್ನು ಸ್ವೀಕರಿಸಲು ಒಪ್ಪುತ್ತಾನೆ. ಇದು ಪಾಪನಾಯಕನ ಸ್ತ್ರೀಪರ ಕಾಳಜಿಯನ್ನು ಸ್ಪಷ್ಟಪಡಿಸುತ್ತದೆ. ಹಿಂದೆ ಮಾತೆಗೆ ಗೌರವವಿತ್ತಿದ್ದ ಸಮುದಾಯದ ಮೂಲದಿಂದ ಬಂದ ಪುರುಷರಲ್ಲಿ ಇನ್ನು ಜೀವಂತವಾಗಿದ್ದ ಸ್ತ್ರೀಪರ ಕಾಳಜಿ, ಗೌರವ, ಆತ್ಮೀಯ ಬಂಧುತ್ವ ಮತ್ತು ಯಾವುದೇ ಶೋಷಣೆಯಿಂದ ಹೆಣ್ಣನ್ನು ಮುಕ್ತಗೊಳಿಸಬೇಕೆಂಬ ಸ್ತ್ರೀವಾದೀ ಧೋರಣೆ ಇಲ್ಲಿ ಸ್ಪಷ್ಟವಾಗುತ್ತದೆ.

ಪುರುಷ ಯಜಮಾನ್ಯದ ಕಡೆ ಸ್ಥಿತ್ಯಂತರಗೊಳ್ಳುತ್ತಿದ್ದ ಸ್ಥಿತಿಗೆ ಮತ್ತೊಂದು ಉದಾಹರಣೆಯೆಂದರೆ ಗಾದ್ರಿಪಾಲನಾಯಕನ ಹೆಂಡತಿಯರಾದ ಕಂಚವ್ವ-ಕಾಮವ್ವನನ್ನು ಸಮುದಾಯ ಗ್ರಹಿಸುತ್ತಿರುವ ರೀತಿ, ಹುಲಿಯೊಂದಿಗೆ ಹೋರಾಡಿ ಮಡಿದ ಪಾಲನಾಯಕನಿಗೆ ಸಿಕ್ಕಷ್ಟು ಪ್ರಾಶಸ್ತ್ಯ ಇವರಿಗೆ ಸಿಕ್ಕಿಲ್ಲ. ಆತನೊಂದಿಗೆ ಪ್ರತಿ ಹೆಜ್ಜೆಯನ್ನು ಇಡುತ್ತಾ ಪೇಟೆಯಲ್ಲಿ ಹಾಲು ಹೈನುಮಾರಿ ಸಮುದಾಯದ ಅಗತ್ಯಗಳನ್ನು ಪೂರೈಸುತ್ತಿದ್ದ ಈ ಮಹಿಳೆಯರು ಕೊನೆಗೆ ಗಂಡನೊಂದಿಗೆ ಅನುಗಮನ ಮಾಡುತ್ತಾರೆ. ಸಂಬಂಧಿಸಿದ ಸತೀ ಕಲ್ಲೂ ಇದೆಯಾದರೂ ಅಲ್ಲಿ ನಡೆಯುತ್ತಿರುವ ಪೂಜೆ, ಜಾತ್ರೆ, ಎಲ್ಲಾ ಗಾದ್ರಿಪಾಲನಾಯಕನ ಹೆಸರಿನಲ್ಲಿ ನಡೆಯುತ್ತಿವೆ. ಈ ಮಹಿಳೆಯರ ಸ್ಮರಣೆ ಇಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಹೀಗೆ ಸ್ಥಿತ್ಯಂತರಗೊಂಡಿರುವ ಸಮುದಾಯದ ಮನಸ್ಸಿನ ಸ್ಥಿತಿಯನ್ನು ಇದು ಸೂಚಿಸುತ್ತದೆ. ಹೀಗೆ ಈ ಎಲ್ಲಾ

ಸ್ತ್ರೀರೂಪೀ ನೆಲೆಗಳ ಮೂಲಕ ಮೂಲತಃ ಮಾತೃಮೂಲೀಯವಾಗಿದ್ದ, ಮಹಿಳೆಯರನ್ನು ಮಾನ್ಯ ಮಾಡುತ್ತಿದ್ದ ಸಮುದಾಯವಿದು. ಪಾಳೆಯಗಾರಿಕೆ ಮನೋಭಾವದ ದರ್ಪಿಷ್ಟರನ್ನು ಮಣಿಸಿದ ಅಸಾಮಾನ್ಯ ಮಹಿಳೆಯರನ್ನು ಹೊಂದಿದ್ದು ಇದು ಸಮುದಾಯಕ್ಕೊಂದು ಘನತೆಯ ಸಂಗತಿಯಾಗಿತ್ತು. ಪಲ್ಲಟಗೊಳ್ಳುತ್ತಿದ್ದ ಸಂದರ್ಭ ಕಾರಣವಾಗಿ ಅಲ್ಲಲ್ಲಿ ಸ್ತ್ರೀಯನ್ನು ಅಧೀನ ನೆಲೆಯಲ್ಲಿ ಕಾಣುವ ಪ್ರಯತ್ನಗಳು ನಡೆದರೂ ಮಂಗಲು ದೇವಮ್ಮನನ್ನು ಹೊರತುಪಡಿಸಿ ಕಡಿಮೆಯೇ. ಅಲ್ಲಿಯೂ ಈ ಮಹಿಳೆಯರ ಪರ ನಿಂತು ಹೋರಾಟ ಮಾಡಿದ ಪುರುಷ ಶಕ್ತಿಗಳಿದ್ದಾರೆ. ಸ್ತ್ರೀ ಸಂರಕ್ಷಕರಿದ್ದಾರೆ. ಹೀಗೆ ಸ್ತ್ರೀಯರನ್ನು ಗೌರವದಿಂದ ಕಂಡು ಮತ್ತೊಂದು ಸಮುದಾಯಕ್ಕೆ ಮಾದರಿಯಾಗಿದ್ದಂತಹ ಸಮುದಾಯ ಇದಾಗಿತ್ತು.

ಸ್ತ್ರೀಗೆ ಸಮಾನ ಗೌರವ ಲಭ್ಯವಾಗಬೇಕು. ಆಕೆಯನ್ನು ವ್ಯಕ್ತಿಯೆಂದು ಪರಿಗಣಿಸಬೇಕು ಎನ್ನುವುದೇ ಒಂದು ದೊಡ್ಡ ಚರ್ಚೆಯಾಗಿರುವಂತಹ ಸಂದರ್ಭದಲ್ಲಿ ಮೂಲದಲ್ಲಿದ್ದ ನಿಜವಾದ ಭಾರತೀಯ ಮಹಿಳೆಯರ ಸ್ವಾಯತ್ತತೆ, ಕ್ಷಾತ್ರ, ಬೌದ್ಧಿಕತೆ, ವೈಚಾರಿಕತೆಯಿಂದ ಕೂಡಿದ ಇಂತಹ ನೆಲೆಗಳು ಗಮನ ಸೆಳೆಯುವಂತೆ ಮಾಡುತ್ತವೆ. ವೈದಿಕ ಸಂಸ್ಕೃತಿಗಿಂತ ಭಿನ್ನವಾದ ಸ್ತ್ರೀಯನ್ನು ಗೌರವಿಸುತ್ತಿದ್ದ ಭಾರತದ ದೇಸೀಯ ಸಂಸ್ಕೃತಿಗಳಿಗೆ ಇದೊಂದು ಉದಾಹರಣೆಯಾಗಿ ಇದೇ ದೇಶೀಯ ಸ್ತ್ರೀವಾದ ಎಂಬುದನ್ನು ಸ್ಪಷ್ಟ ಪಡಿಸುತ್ತವೆ.

ಅದರೊಂದಿಗೆ ಮಾತೃಮಾಲೀಯವಾಗಿದ್ದು ಮಹಿಳೆಗೆ ಗೌರವ ಆದರಗಳನ್ನು ನೀಡಿ ಸಮಾನ ನೆಲೆಯಲ್ಲಿ ಕಂಡ ಸಮುದಾಯದಲ್ಲಿ ಸ್ಥಿತ್ಯಂತರಗಳೇ ಕಾರಣವಾಗಿ ಪುರುಷಾಳ್ವಿಕೆಯೊಂದಿಗೆ ಮಹಿಳೆಯರನ್ನು ಅಲ್ಲಲ್ಲಿ ಅಲಕ್ಷ್ಯದಿಂದ ನಡೆಸಿಕೊಳ್ಳುವ ಮಾದರಿಗಳೂ ಕಂಡುಬರುತ್ತಿರುವುದು ವಿಷಾದದ ಸಂಗತಿಯಾಗಿದೆ.

**೩.೬ ಸಾಂಸ್ಕೃತಿಕ ನಾಯಕಿಯರ ಆರಾಧನೆ, ಆಚರಣೆಗಳು :**

ಸಮುದಾಯವೊಂದಕ್ಕೆ ವಿಶೇಷವಾದ ಕೊಡುಗೆಯನ್ನು ಸಲ್ಲಿಸಿರುವ ವ್ಯಕ್ತಿ ನಾಯಕಿ/ನಾಯಕನ ಸ್ಥಾನವನ್ನು ಪಡೆದು ಕಾಲಾಂತರದಲ್ಲಿ ಅವರು ಅಲ್ಲಿಯ ಜನಮನದಲ್ಲಿ ದೈವೀಕ ಸ್ಥಾನವನ್ನು ಪಡೆಯುತ್ತಾರೆ. ಹೀಗೆ ದೈವತ್ವ ಪಡೆದುಕೊಂಡಾಗ ಸಹಜವಾಗಿಯೇ ಆರಾಧಿಸುವ ಮನಸ್ಸು ಸಂಬಂಧಿಸಿದಂತೆ ಆರಾಧನೆಗಳನ್ನು ಮಾಡುತ್ತಾ ಹೋಗುತ್ತದೆ. ರಾಮ, ಕೃಷ್ಣ ಬುದ್ಧರೂ ಹೀಗೆಯೇ ನಮ್ಮಲ್ಲಿ ದೈವೀಕ ಸ್ಥಾನವನ್ನು ಪಡೆದವರಲ್ಲವೇ ಬುಡಕಟ್ಟು ಸಮುದಾಯಗಳೂ ಇದರಿಂದ ಹೊರತಲ್ಲ. ಇಲ್ಲಿಯ ಸಾಂಸ್ಕೃತಿಕ ನಾಯಕ, ನಾಯಕಿಯರು ಪೂಜೆಗೊಳ್ಳುತ್ತಲೇ ಬರುತ್ತಿದ್ದಾರೆ. ಈ ಮೂಲಕ ಸಂಬಂಧಿಸಿದ ಸಮುದಾಯದ ಸ್ಮರಣೆಯಲ್ಲಿ ಉಳಿದುಬರುತ್ತಾರೆ. ಇವರ ಬಗೆ ನಾವು ಸಮಗ್ರವಾಗಿ ಅರಿಯಬೇಕೆಂದರೆ ಅವರ ಬಗೆಗೆ ಇರುವ ಮೌಖಿಕ ಕಥನಗಳನ್ನು ಅರ್ಥ ಮಾಡಿಕೊಳ್ಳುವುದರೊಂದಿಗೆ ಆಚರಣೆಯನ್ನು ಗಮನಿಸಿ ಗ್ರಹಿಸಿಕೊಳ್ಳುವುದು ಅಗತ್ಯವಾಗುತ್ತದೆ. ಆಗ ಮಾತ್ರ ಅವರ ಬಗೆಗೆ ಆದಷ್ಟೂ ಸಮಗ್ರವಾದ ಚಿತ್ರಣವನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ. ಪುರಾಣ ಮತ್ತು ಆಚರಣೆಗಳು ದೇವತೆಯ ಅಧ್ಯಯನದಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ದೇವತೆಗೆ ಸಂಬಂಧಿಸಿದ ಸೈದ್ಧಾಂತಿಕ ಭಾಗ ಪುರಾಣವಾದರೆ

ಅದಕ್ಕೆ ಸಂಬಂಧಿಸಿದ ಕ್ರಿಯಾಭಾಗವೇ ಆಚರಣೆ ಆಗುತ್ತದೆ ಎಂದು ಹೇಳುತ್ತಾರೆ ಡಾ. ಸಿದ್ಧಲಿಂಗಯ್ಯನವರು.[೬೫]

ಒಬ್ಬ ವ್ಯಕ್ತಿಯ ಬಗೆಗೆ ಹಲವು ಕಥನಗಳು ಹೇಳ್ಪಡುತ್ತಿರುವಾಗ, ಆ ಕಥನಗಳಲ್ಲಿ ಮೂಲ ಯಾವುದು, ನಂತರದ್ದು ಯಾವುದು ಎಂಬ ಜಿಜ್ಞಾಸೆ ಸಹಜವಾಗಿಯೇ ಪ್ರಾರಂಭವಾಗುತ್ತದೆ. ಆದರೆ ಆಚರಣೆ, ಆರಾಧನೆಗಳ ಮೂಲಕ ಪಠ್ಯದ ಮೂಲವನ್ನು ಹಿಡಿದಿಡಲು ಸಾಧ್ಯವಾಗುತ್ತದೆ. ಅಷ್ಟೇ ಅಲ್ಲ. ಈ ಆಚರಣೆಗಳ ಮೂಲಕ ಆಯಾ ಸಾಂಸ್ಕೃತಿಕ ನಾಯಕನ ಸಮುದಾಯದ ಸಾಂಸ್ಕೃತಿಕ ಲಕ್ಷಣಗಳನ್ನು ಅರ್ಥೈಸಿಕೊಳ್ಳಲೂ ಇದು ಅನುವು ಮಾಡಿಕೊಡುತ್ತದೆ. ಒಟ್ಟು ಸಮುದಾಯವೇ ಇಲ್ಲಿ ಪಾಲ್ಗೊಳ್ಳುವುದರ ಮೂಲಕ ತಮ್ಮ ಸಾಂಸ್ಕೃತಿಕ ಒಗ್ಗಟ್ಟನ್ನು ಕಾಪಾಡಿಕೊಂಡು ಬರಲೂ ಸಾಧ್ಯವಾಗುತ್ತದೆ.

ಮ್ಯಾಸಬೇಡರಲ್ಲಿ ಈಗ ನಾನು ಸಾಂಸ್ಕೃತಿಕ ನಾಯಕಿಯರು ಎಂದು ಗುರುತಿಸಲ್ಪಡುವ ಮಹಿಳೆಯರಲ್ಲಿ ಒಂದಿಬ್ಬರನ್ನು ಹೊರತುಪಡಿಸಿದರೆ ಉಳಿದವರಿಗೆಲ್ಲಾ ವಿಶೇಷವಾದ ಆಚರಣೆಗಳಿವೆ. ಈ ಆಚರಣೆಯಲ್ಲಿ ಇಡೀ ಸಮುದಾಯ ಸಂಭ್ರಮ, ಭಕ್ತಿಯಿಂದ ಪಾಲ್ಗೊಳ್ಳುತ್ತದೆ. ಸಮುದಾಯದ ಸಂಸ್ಕೃತಿಗೆ ಸಂಬಂಧಿಸಿದ ಆಚರಣೆಗಳಲ್ಲದೆ ಹಟ್ಟಿಯ ಊರ ದೇವತೆಯಾಗಿ ರೂಪಾಂತರಗೊಂಡಿರುವ, ಇವರ ಅಮ್ಮನಾಗಿಯೂ ಆರಾಧನೆಗೊಳ್ಳುತ್ತಿದ್ದಾರೆ. ಈ ಆಚರಣೆಗಳಲ್ಲಿರುವ ವಿಶಿಷ್ಟತೆ ಹಾಗೂ ವೈರುಧ್ಯ ಹಾಗೂ ಅದಕ್ಕಿರುವ ಕಾರಣಗಳನ್ನು ಅರ್ಥಮಾಡಿಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಅಗತ್ಯವಾದ ಸಂಗತಿಯಾಗಿದೆ.

**ಅ) ಅಕ್ಕರಾಯಮ್ಮನ ಆರಾಧನೆ – ಚಿನಮಜ್ಜನಹಳ್ಳಿ : ೧**

ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿಭಾಗದಲ್ಲಿರುವ ಹಳ್ಳಿಯೇ ಚಿನಮಜ್ಜನಹಳ್ಳಿ. ಆಂಧ್ರಪ್ರದೇಶದ ವ್ಯಾಪ್ತಿಯಲ್ಲಿ ಬರುವ ಪ್ರದೇಶವಿದು. ಸಾಕಷ್ಟು ಮಂದಿ ಮ್ಯಾಸಬೇಡರು ಇಲ್ಲಿ ನೆಲೆಸಿದ್ದಾರೆ. ಇಲ್ಲಿ ಇವರು ಆರಾಧಿಸುವ ದೇವತೆಗಳೆಂದರೆ, ಅಕ್ಕರಾಯಮ್ಮ, ಗಾದ್ರಿಪಾಲನಾಯಕ, ಜುಗಲೋಬಳದೇವರು ಮತ್ತು ಜುಂಜಪ್ಪ. ಈ ನಾಲ್ಕೂ ದೇವರುಗಳನ್ನು ಮೂಲತಃ ಹುಲ್ಲಿನ ಗುಡಿಸಲಿನಲ್ಲಿಟ್ಟೇ ಪೂಜಿಸಲಾಗುತ್ತಿತ್ತು. ಇತ್ತೀಚಿಗೆ ನಾಗರೀಕಗೊಂಡಂತೆಲ್ಲಾ ಇದು ಬದಲಾವಣೆಯ ಕಡೆ ಸರಿಯುತ್ತಿದೆ. ಕೆಲವು ಕಡೆ ಗುಡಿಸಲುಗಳಿಗೆ ಬದಲಾಗಿ ಕಾಂಕ್ರೀಟ್ ಕಟ್ಟಡಗಳು ತಲೆಯೆತ್ತುತ್ತಿವೆ. ಇಲ್ಲಿಯೂ ಗುಡಿಸಲುಗಳಿದ್ದ ಸ್ಥಳದಲ್ಲಿ ನಾಲ್ಕು ಗುಡಿಗಳನ್ನು ಕಟ್ಟಿದ್ದು ಅದರಲ್ಲಿ ಈ ನಾಲ್ಕೂ ದೇವರುಗಳನ್ನು ಇರಿಸಲಾಗಿದೆ. ಮ್ಯಾಸಬೇಡರ ದೇವರುಗಳೊಂದಿಗೆ ಕಾಡುಗೊಲ್ಲರ ಸಾಂಸ್ಕೃತಿಕ ನಾಯಕನಾದ ಜುಂಜಪ್ಪನೂ ಇಲ್ಲಿ ಸೇರಿರುವುದು ವಿಶೇಷ. ಮೂಲತಃ ಕಾಡುಗೊಲ್ಲರ ಮತ್ತು ಮ್ಯಾಸಬೇಡರು ಒಂದೇ ಮೂಲದವರೇ. ಆದರೆ ಕಾರಣಾಂತರಗಳಿಂದ ಪ್ರತ್ಯೇಕಗೊಂಡವರು ಎಂಬ ಅಭಿಪ್ರಾಯವಿದೆ. ಇಲ್ಲಿ ಮತ್ತೆ ಜೊತೆಯಾಗಿರುವುದು ಆಶ್ಚರ್ಯವೆನಿಸುತ್ತದೆ. ಇದಕ್ಕೆ ಕಾರಣ ಕೇಳಿದಾಗ ಅಲ್ಲಿಯ ಸಮುದಾಯದವರು ಕೊಡುವ ವಿವರ ಹೀಗಿದೆ. ಒಮ್ಮೆ ಮಳೆ ಬರದೆ ಜನ ಪರಿತಪಿಸುತ್ತಿದ್ದರು. ಕಾಡಿನಲ್ಲಿ ಜುಂಜಪ್ಪನ ಗುಡಿ

---

[೬೫] ಡಾ.ಸಿದ್ದಲಿಂಗಯ್ಯ: ಗ್ರಾಮದೇವತೆಗಳು. ಪು.೨. ಮೂಲಭಾರತಿ ಪ್ರಕಾಶನ. ಬೆಂಗಳೂರು. ೧೯೯೭.

ಇತ್ತು. ದನಗಾಹಿಗಳು ಒಮ್ಮೆ ಈ ಜುಂಜಪ್ಪನಿಗೆ ಹರಕೆ ಮಾಡಿಕೊಂಡರು. ನನ್ನನ್ನು ನಿಮ್ಮೊಂದಿಗೆ ಕರೆದೊಯ್ದು ಪೂಜೆ ಮಾಡಿ ಊರಿಗೆ ಮಳೆಯಾಗುತ್ತದೆ ಎಂಬ ಸೂಚನೆಯಾಯಿತಂತೆ. ಆ ಪ್ರಕಾರ ಜುಂಜಪ್ಪನನ್ನು ಊರಿಗೆ ಕರೆ ತಂದು ಪೂಜಿಸಿದಾಗ ಆ ಪ್ರಾಂತ್ಯಕ್ಕೆ ಮಳೆಯಾಯಿತು ಎಂದು ಅವರ ನಂಬಿಕೆ. ಹೀಗಾಗಿ ಅಂದಿನಿಂದ ಜುಂಜಪ್ಪನನ್ನು ಒಂದು ಪೆಟ್ಟಿಗೆ ದೇವರ ರೂಪದಲ್ಲಿ ಪೂಜಿಸುತ್ತಿದ್ದಾರೆ. ಅಷ್ಟಲ್ಲದೆ ಪೂಜೆ ಮಾಡುವ ವ್ಯಕ್ತಿಯೂ ಮ್ಯಾಸಬೇಡರ ಸಮುದಾಯಕ್ಕೆ ಸೇರಿದವನೇ. ಮೂಲದಲ್ಲಿ ಒಂದೇ ಸಮುದಾಯವಾಗಿದ್ದು ನಂತರ ಪ್ರತ್ಯೇಕಗೊಂಡ ಸಮುದಾಯಗಳು ಇವೆರಡಾಗಿದ್ದು ಮೂಲದಲ್ಲಿದ್ದ ಅನ್ಯೋನ್ಯತೆ ಮತ್ತು ಈ ಹಳ್ಳಿಯಲ್ಲಿರುವ ಈ ಎರಡೂ ಸಮುದಾಯಗಳ ಮಧ್ಯೆ ಇರುವ ಅನ್ಯೋನ್ಯತೆ ಹೀಗೆ ಜುಂಜಪ್ಪನ ಗುಡಿಯೂ ಜೊತೆಯಲ್ಲಿರುವುದಕ್ಕೆ ಕಾರಣವಾಗಿರಬಹುದು.



ಅಕ್ಕರಾಯಮ್ಮ,
ಚಿನಮಜ್ಜನಹಳ್ಳಿ

ಅಕ್ಕರಾಯಮ್ಮ ಇಲ್ಲಿ ಆರಾಧಿಸಲ್ಪಡುತ್ತಿರುವ ಪ್ರಮುಖ ದೇವತೆ. ಇಲ್ಲಿಯ ಪ್ರಮುಖ ಆರಾಧನೆಗಳೆಂದರೆ, ೧. ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಗುಗ್ಗರಿ ಹಬ್ಬದ ಆಚರಣೆ. ೨. ಆವುಲು (ಆಕಳು) ಗೂಡಿನ ಹಬ್ಬ. (೩) ಅಕ್ಕರಾಯಮ್ಮನ ಆಕಾಶಿಪಂಡಗು (ಏಕಾದಶಿ ಹಬ್ಬ).

ಅಕ್ಕರಾಯಮ್ಮನ ಗುಡಿ ಮೊದಲು ನಿಡುಗಲ್ಲು ಪ್ರಾಂತ್ಯದಲ್ಲಿರುವ 'ಮುಗುದಾಣದ ಬೆಟ್ಟ' ಎಂಬಲ್ಲಿದ್ದು ಕಾಲಾಂತರದಲ್ಲಿ ಇಲ್ಲಿ ಬಂದು ನೆಲೆಸಿದಳು ಎಂದು ಹೇಳುತ್ತಾರೆ. ಪಶುಪಾಲಕತನ ಅವಲಂಬಿಸಿದ್ದ ಈ ಸಮುದಾಯ ವಲಸಿಗರಾಗಿದ್ದು ನಿಡುಗಲ್ಲು ಪ್ರಾಂತ್ಯದಲ್ಲಿದ್ದಾಗ ಅವರ ದೇವರುಗಳು ಅವರೊಂದಿಗೆ ಅಲ್ಲಿದ್ದು ಬಹುಶಃ ಅಲ್ಲಿಂದ ಸಮುದಾಯದ ಬಹುಮಂದಿ ಈ ಹಳ್ಳಿಯ ಕಡೆ ಸ್ಥಳಾಂತರಗೊಂಡಾಗ ಅವೂ ಇತ್ತ ನೆಲೆಯನ್ನು ಕಂಡುಕೊಂಡಿರಬಹುದು.

**ಗುಗ್ಗರಿ ಹಬ್ಬ :**

ಮ್ಯಾಸಬೇಡರ ದೇವಾಲಯಗಳಲ್ಲಿ ನಡೆಯುವ ಪ್ರಮುಖ ಹಬ್ಬವಿದು. ವರ್ಷದ ವಿಶೇಷ ಪೂಜೆ ಇದಾಗಿದೆ. ಇಲ್ಲಿಯೂ ಇದು ಪ್ರಮುಖ ಹಬ್ಬ. ಆ ದಿನ ಊರವರೆಲ್ಲಾ ಈ ಆಚರಣೆಯಲ್ಲಿ ಪಾಲ್ಗೊಳ್ಳುವರಲ್ಲದೆ ಸಮುದಾಯದ ಬಹು ಮಂದಿ ಬೇರೆ ಬೇರೆ ಊರುಗಳಿಂದಲೂ ಕಾಸು ಮೀಸಲು, ಕಾಳಿನೊಂದಿಗೆ ಬಂದು ಇವನ್ನೆಲ್ಲಾ ಭಕ್ತಿಪೂರ್ವಕವಾಗಿ ದೇವಾಲಯಕ್ಕೆ ಅರ್ಪಿಸಿ ಪೂಜಾ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾರೆ. ಶಿವರಾತ್ರಿ ಸಂದರ್ಭದ ಒಂದು ಸೋಮವಾರ ಗಂಗೆ ಪೂಜೆಗಾಗಿ ಅಕ್ಕರಾಯಮ್ಮನ ಪೆಟ್ಟಿಗೆ ಮತ್ತು ಆಕೆಯೊಂದಿಗೆ ಗಾದ್ರಿಪಾಲನಾಯಕನ ಸಂಕೇತವಾಗಿ ಪೂಜಿಸುವ ಬಿಲ್ಲು, ಅಹೋಬಲ ನರಸಿಂಹಸ್ವಾಮಿಯ ಪೆಟ್ಟಿಗೆ ಮತ್ತು ಜುಂಜಪ್ಪನ ಪೆಟ್ಟಿಗೆ ಈ ನಾಲ್ಕು ಹೊರಡುತ್ತವೆ. ಚಿನ್ನಮಜ್ಜನಹಳ್ಳಿ ಸಮೀಪದಲ್ಲಿರುವ ದೇವರ ಹಳ್ಳಕ್ಕೆ ಕೆಲವು ಸಂದರ್ಭಗಳಲ್ಲಿ ವೇದವತಿ ನದಿಗೂ, ಕೆಲವೊಮ್ಮೆ ನಿಡಗಲ್ಲು ಗುಡ್ಡಕ್ಕೂ ಹೋಗುವುದುಂಟು. ಅತ್ಯಂತ ವಿಜೃಂಭಣೆಯಿಂದ ತಮ್ಮಟೆ, ಉರುಮೆ, ಕಹಳೆ, ಭೇರಿ ಈ ವಾದ್ಯಗಳ ಧ್ವನಿಯೊಂದಿಗೆ ಹೊಳೆಗೆ ಈಕೆ ಬರುತ್ತಾಳೆ. ಊರ ಜನ, ಸಮುದಾಯದ ಜನ, ಆಕೆಯ ಬಗ್ಗೆ ಕಥನಗಳನ್ನು ಹೇಳುತ್ತಾ ಬರುತ್ತಿರುವ ಹೆಂಗಳೆಯರ ಗುಂಪು ಈ ಸಂಭ್ರಮದ ಮಧ್ಯೆ ಆಕೆ ಬರುವುದೇ ಒಂದು ವೈಭವ.

"ಬಾಳೆಹಣ್ಣಿನಂತೆ ಬಾಗಿರುವ ಗಂಗಮ್ಮ, ಬಾಜು ಕೊಡು ನನ್ನ ತಾಯೀಗೆ !, ಬಾಜು ಕೊಡು ನನ್ನ ತಾಯಿ ರಾಯಮ್ಮನ, ಬಂಗಾರದ ಪದ ತೊಳಿಯಾಕೆ ॥"

"ನಿಂಬೆಹಣ್ಣಿನಂಗೆ ತುಂಬಿರುವ ಗಂಗಮ್ಮ, ಇಂಬು ಕೊಡು ನನ್ನ ತಾಯೀಗೆ, ಇಂಬು ಕೊಡು ನನ್ನ ತಾಯಿ ರಾಯಮ್ಮಗೆ , ಬಂಗಾರದ ಲಿಂಗ ತೊಳಿಯಾಕೆ."

ಹೀಗೆ ಗಂಗೆಯನ್ನು ಕೇಳುತ್ತಲೇ ದಾರಿ ಮಾಡಿಕೊಂಡು ರಾಯಮ್ಮ ಹಳ್ಳಕ್ಕೆ ಬರುತ್ತಾಳೆ. ಹಳ್ಳದಲ್ಲಿ ನೀರಿಲ್ಲದಿದ್ದರೆ ಚಿಲುಮೆ ತೋಡಿ ಆ ನೀರಿನ ದಡದಲ್ಲಿ ಅಕ್ಕರಾಯಮ್ಮನ ಪೆಟ್ಟಿಗೆ ಹಾಗೂ ನರಸಿಂಹಸ್ವಾಮಿಯ ಪೆಟ್ಟಿಗೆಯನ್ನು ಎದುರು ಬದುರಾಗಿ ಕೂರಿಸಿದ್ದು ಅಕ್ಕರಾಯಮ್ಮನ ಒಡವೆಗಳನ್ನು ಚಿಲುಮೆ ನೀರಿನಲ್ಲಿ ತೊಳೆಯುತ್ತಾರೆ. ರಾಯಮ್ಮನ ಪೆಟ್ಟಿಗೆಯಲ್ಲಿ ಚಿಕ್ಕದಾಗಿರುವ ಮಗಿ (ಮಣ್ಣಿನ ಕುಡಿಕೆ) ಅದಕ್ಕೊಂದು ಮುಚ್ಚಳವಿದೆಯಂತೆ. ಪೆಟ್ಟಿಗೆಯ ಒಂಬತ್ತು ಒಳಭಾಗಗಗಳಲ್ಲಿ ಹಣ್ಣು, ಎಲೆ, ಅಡಿಕೆ, ಉತ್ತತ್ತಿ ಇತರೆ ಕೆಲವು ಪೂಜಾವಸ್ತುಗಳನ್ನು ಇಡುತ್ತಾರೆ. ಮಧ್ಯದಲ್ಲಿ ಮುಖ್ಯವಾದ ಚಿಕ್ಕ ಸಂದೂಕದಲ್ಲಿ ಕೆಲವು ವಿಶೇಷ ವಸ್ತುಗಳಿದ್ದು ಇವುಗಳನ್ನು ಕಣ್ಣು ಕಟ್ಟಿಕೊಂಡು ಪೂಜಿಸುತ್ತಾರೆ. ಪೂಜಾರಿ ಇದನ್ನೆಲ್ಲಾ ಮಾಡುತ್ತಾನೆ. ಬೇರೆ ಯಾರೂ ಇದನ್ನು ನೋಡುವಂತಿಲ್ಲ. ಸುತ್ತಲೂ ಕಂಬಳಿ ತೆರೆಗಳನ್ನು ಕಟ್ಟಿಕೊಂಡು ಒಳಭಾಗದಲ್ಲಿ ಪೂಜಿಸುತ್ತಾರೆ. ಬಾಳೆಹಣ್ಣು, ತೆಂಗಿನಕಾಯಿ, ಚಿಗಳಿ, ತಂಬಿಟ್ಟಿನೊಂದಿಗೆ ಗಂಗೆ ಪೂಜೆಯನ್ನೂ, ರಾಯಮ್ಮನಿಗೆ ೧೦೧ ಪೂಜೆಯನ್ನೂ ಸಲ್ಲಿಸಲಾಗುತ್ತದೆ. ನಂತರ ಗಾದ್ರಿಪಾಲನಾಯಕನ ಸಂಕೇತವಾದ ಬಿಲ್ಲು, ಜುಂಜಪ್ಪನ ಸಂಕೇತವಾದ ಪೆಟ್ಟಿಗೆ, ಓಬಳದೇವರ ಪೆಟ್ಟಿಗೆ ಅದರಲ್ಲಿರುವ ವಸ್ತುಗಳನ್ನು ಹೀಗೆಯೇ ತೊಳೆದು ಪೂಜಿಸಲಾಗುತ್ತದೆ. ನಂತರ ಸಾಯಂಕಾಲಕ್ಕೆ ಚಿನಮಜ್ಜನ ಹಳ್ಳಿಗೆ ಮರಳಿ

ಊರಿನಲ್ಲಿ ಮೆರವಣಿಗೆ ಮಾಡಿ ಗುಡಿ ತುಂಬಿಸುತ್ತಾರೆ. ಆ ದಿನ ಸಂಜೆಯ ವೇಳೆಗಾಗಲೇ ದೇವಸ್ಥಾನಕ್ಕೆ ಅಕ್ಕಿ, ಹುರುಳಿ, ಮೀಸಲು ಹಾಲು, ಮೊಸರನ್ನು ತಂದು ಕೊಟ್ಟಿರುತ್ತಾರೆ. ಸಮುದಾಯಕ್ಕೆ ಸೇರಿದವರು ಮಾತ್ರವಲ್ಲದೆ ಹಳ್ಳಿಯವರೂ ಕೊಟ್ಟಿರುತ್ತಾರೆ. ಹುರುಳಿಕಾಳನ್ನು ಬೇಯಿಸಿ ಗುಗ್ಗರಿ ಮಾಡಿ ನೈವೇದ್ಯಕ್ಕೆ 'ತಳಿಗೆ ಅನ್ನ' ಎಂದು ಮಾಡುತ್ತಾರೆ. ಅಕ್ಕಿ ಬೇಯಿಸಿ ಅದಕ್ಕೆ ಬಾಳೆಹಣ್ಣು, ಹಾಲು, ಮೊಸರು, ಬೆಲ್ಲ ಹಾಕಿ ಬೇಯಿಸುವುದೇ ತಳಿಗೆ ಅನ್ನ. ನವಣೆ ಅಕ್ಕಿಯನ್ನು ಕುಟ್ಟಿ ತಂಬಿಟ್ಟು ಮಾಡುತ್ತಾರೆ. ಇವೆಲ್ಲವನ್ನೂ ಅಕ್ಕರಾಯಮ್ಮನಿಗೆ ನೈವೇದ್ಯ ಮಾಡುತ್ತಾರೆ. ಗಾದ್ರಿಪಾಲನಾಯಕ, ಓಬಳದೇವರು, ಜುಂಜಪ್ಪನಿಗೂ ಈ ನೈವೇದ್ಯ ಸಲ್ಲುತ್ತದೆ. ಹೀಗೆ ರಾತ್ರಿ ಎಲ್ಲಾ ಪೂಜೆ ಮಾಡಿ ಬೆಳಗಿನ ಜಾವದ ವೇಳೆಗೆ ಪೂಜೆ ಮುಗಿಯುತ್ತದೆ. ನಂತರ 'ಮಣೇವು ಸೇವೆ' ಎಂಬ ಆಚರಣೆ ನಡೆಸುತ್ತಾರೆ. ಗುಡಿಯ ಹೊರಗೆ ಕಟ್ಟೆಯ ಮೇಲೆ ದೇವತೆಯ ಪೆಟ್ಟಿಗೆಯನ್ನು ಉಳಿದ ಮೂರು ದೇವರುಗಳೊಂದಿಗೆ ಇಡುತ್ತಾರೆ. ಗುಡಿಯ ಮುಂಭಾಗದಲ್ಲಿ ಮಡಿ ಬಟ್ಟೆ ಹಾಕಿ ಅದರ ಮೇಲೆ ಬೆಲ್ಲ, ಬಾಳೆಹಣ್ಣು, ತಂಬಿಟ್ಟನ್ನು ಬೆರೆಸಿ ಸಾಲಾಗಿ ಒಂದಿಷ್ಟು ಕುಪ್ಪೆಗಳನ್ನು ಇಡುತ್ತಾರೆ. ಪಕ್ಕದಲ್ಲಿ ದೊಡ್ಡದಾಗಿ ಪಂಜನ್ನು ಹಚ್ಚಿಟ್ಟಿದ್ದು ಅದು ಉರಿಯುತ್ತಿರುತ್ತದೆ. ನಂತರ ಕಲ್ಲು ಕಂಬದ ದೀಪವನ್ನು ಹಚ್ಚುತ್ತಾರೆ. ಆಗ ಮಣೇವು ಪ್ರಾರಂಭವಾಗುತ್ತದೆ. ದಾಸಯ್ಯಗಳು ಕುಣಿಯುತ್ತಾ ಹೂಂಕರಿಸುತ್ತಾ ಬಂದು ಮಲಗಿ ಬಲಪಕ್ಕಕ್ಕೆ ಹೊರಳಿ ಆ ಬಾಳೆಹಣ್ಣು ಬೆಲ್ಲದ ಕುಪ್ಪೆಗೆ ಬಾಯಿ ಹಾಕಿ ಪ್ರಾಣಿಯಂತೆ ತಿನ್ನುತ್ತಾರೆ. ನಂತರ ಎಲ್ಲರೂ ಸೇರಿ ಸೂರ್ಯನಿಗೆ ನಮಸ್ಕರಿಸಿ ನಂತರ ರಾಯಮ್ಮನಿಗೂ, ಉಳಿದ ದೇವರುಗಳಿಗೂ ನಮಸ್ಕರಿಸುತ್ತಾರೆ. ಮರುದಿನ ಮುಂಜಾನೆ ಸುಮಾರು ೭ ಗಂಟೆ ಸಮಯಕ್ಕೆ ಊರಿನ ಹೆಣ್ಣುಮಕ್ಕಳು ಆರತಿ ತಟ್ಟೆಯನ್ನು ಹಿಡಿದು ಸಾಲಾಗಿ ದೇವಸ್ಥಾನದ ಮುಂದೆ ಬಂದು ನಿಂತುಕೊಳ್ಳುತ್ತಾರೆ. ನಂತರ ಈ ನಾಲ್ಕೂ ಮಂದಿ ಪೂಜಾರಿಗಳು ಬಂದು ಮಧ್ಯೆ ನಿಲ್ಲುತ್ತಾರೆ. ಸೂರ್ಯನ ಕಡೆಗೆ ಮತ್ತು ಅಕ್ಕರಾಯಮ್ಮ ಹಾಗೂ ಉಳಿದ ದೇವರುಗಳಿಗೂ ಆರತಿ ಬೆಳಗುತ್ತಾರೆ. ಇದಾದ ನಂತರ ಭಕ್ತಾದಿಗಳು ತಂದಿದ್ದ ಅಕ್ಕಿಯನ್ನು ಅಳೆಯುತ್ತಾರೆ. ಇದನ್ನು ಅನ್ನ ಮಾಡಿ ಎಲ್ಲಾ ಜನರಿಗೂ ದಾಸೋಹ ಮಾಡುತ್ತಾರೆ. ಅಲ್ಲಿಯ ಈ ಜಾತ್ರೆಯ ಮುಖ್ಯ ವಿಧಿಗಳೆಲ್ಲಾ ಮುಗಿಯುತ್ತವೆ. ಬುಧವಾರ ರಾತ್ರಿ ಗಾದ್ರಿಪಾಲನಾಯಕನ ಬಿಲ್ಲನ್ನು ಮಾತ್ರ ತೆಗೆದುಕೊಂಡು ಹೋಗಿ ಊರ ಹೊರಗಿರುವ ವಾಸು ಕೊಯ್ಯುವ ಕಲ್ಲುಗಳ ಬಳಿ ಹೋಗಿ ಕುರಿ ಕೊಯ್ದು ಊಟ ಮಾಡುತ್ತಾರೆ.

**ಆವುಲಗೂಡಿನ ಹಬ್ಬ :**

ಮ್ಯಾಸಬೇಡರು ತಮ್ಮ ಸಮುದಾಯಕ್ಕೆ ಸೇರಿದ ಆಯಾ ಸಾಂಸ್ಕೃತಿಕ ನಾಯಕನಿಗೆ ಸೇರಿದ ಪಶುಸಂಪತ್ತನ್ನೆಲ್ಲಾ ಕೂಡುವ ಸ್ಥಳಕ್ಕೆ 'ಗೂಡು' ಎನ್ನುತ್ತಾರೆ. ಸಾಮಾನ್ಯವಾಗಿ ಊರ ಹೊರಭಾಗದಲ್ಲಿ, ಕಾಡಿನ ಅಂಚಿನಲ್ಲಿ ಈ 'ಗೂಡು'ಗಳಿರುತ್ತವೆ. ಅಕ್ಕರಾಯಮ್ಮನವೇ ಎಂಬ ಪ್ರತ್ಯೇಕವಾದ ದನಕರುಗಳಿಲ್ಲ. ಆದರೆ ಎಲ್ಲಾ ಗೂಡುಗಳಿಗೂ ಒಡತಿ ಆಕೆಯೇ ಎಂಬ ಭಾವನೆಯಿಂದ ಸಾಮಾನ್ಯವಾಗಿ ಎಲ್ಲ ದೇವರ ಎತ್ತುಗಳೂ ಈ ಹಳ್ಳಿಗೆ ಬರುವುದುಂಟು.

ಹಬ್ಬದ ನಿಮಿತ್ತ ಊರ ಹೊರಭಾಗದಲ್ಲಿ ಚಿಕ್ಕದಾದ ಗೂಡನ್ನು ನಿರ್ಮಿಸುತ್ತಾರೆ. ಜಾಲಿಯ ಮುಳ್ಳಿನ ಬೇಲಿಯನ್ನು ಸುತ್ತಲೂ ಹಾಕಿ ಗೂಡನ್ನು ನಿರ್ಮಿಸಲಾಗುತ್ತದೆ. ಇದು ಸುಮಾರು ೧೦-೧೨ ಅಡಿ ಸುತ್ತಳತೆಯಷ್ಟು ಜಾಗದಿಂದ ಕೂಡಿರುತ್ತದೆ. ಆ ಗೂಡಿನಲ್ಲಿ ೪-೫ ಹಸುಗಳನ್ನು ಕಟ್ಟಿರುತ್ತಾರೆ. ಸಾಯಂಕಾಲ ಊರಿನ ಹಸು ಮತ್ತು ಎತ್ತುಗಳನ್ನು ಆ ಗೂಡಿನ ಸುತ್ತಲೂ ಕಟ್ಟುತ್ತಾರೆ. ಸುಮಾರು ೧೦-೧೨ ಸೇರು ಅಕ್ಕಿಯನ್ನು ಅಕ್ಷತೆ ಕಾಳು ಮಾಡಿ ಪೂಜಾರಿಗಳು ಗೂಡಿನ ಸುತ್ತಲೂ ಚೆಲ್ಲುತ್ತಾರೆ. ಅಕ್ಕರಾಯಮ್ಮನ ಪೆಟ್ಟಿಗೆಯನ್ನು ಇಲ್ಲಿಗೆ ತಂದಿರುತ್ತಾರೆ. ಉಳಿದ ದೇವರುಗಳೂ ಬಂದಿರುತ್ತವೆ. ಅಕ್ಷತೆಯ ನಂತರ ದಾಸೋಹ ನಡೆಸುತ್ತಾರೆ.

ಅಕ್ಕರಾಯಮ್ಮ ಆವುಲು- ಅಂದರೆ ಹಸುಗಳ ಗೂಡಿಗೆ ಹೋಗುವಾಗ ಹೆಂಗಳೆಯರು ಹಾಡುವ ಪದಗಳು ಹೀಗಿವೆ.

"ಆರು ಎಸಳು ಹೊಂಬಾಳೆ ತೋಳಿಗವಿಸಿಕೊಂಡು, ಜೋಡೀಲಿ ಪಾಲಯ್ಯನ ಕರಕೊಂಡು ‖ ರಾಯಮ್ಮ, ಆವಿನ ಗೂಡಿಗೆ ನಡೆದಾಳೆ, ಹತ್ತೆಸೆಲು ಹೊಂಬಾಳೆ ತಕ್ಕೆಗವುಚಿಕೊಂಡು, ಜೊತೇಲಿ ಓಬಯ್ಯನ ಕರಕೊಂಡು ‖ ರಾಯಮ್ಮ, ಎತ್ತಿನ ಗೂಡಿಗೆ ನಡೆದಾಳೆ."

**ಅಕ್ಕರಾಯಮ್ಮನ ಏಕಾದಶಿ ಹಬ್ಬ :**

ಏಕಾದಶಿಯ ದಿನ ಹಗಲು ಉಪವಾಸ ಮಾಡಿರುತ್ತಾರೆ. ರಾತ್ರಿ ವೇಳೆ ಅಕ್ಕಿ, ಬೆಲ್ಲ, ಹಾಲು, ಬಾಳೆಹಣ್ಣು ಸೇರಿ ಕುದಿಸಿ ತಳಿಗೆ ಅನ್ನ ಎಂದು ತಯಾರಿಸುತ್ತಾರೆ. ಬೆಳಗಿನ ಜಾವದ ವೇಳೆಗೆ ಇದನ್ನು ರಾಯಮ್ಮನಿಗೆ ನೈವೇದ್ಯ ಮಾಡುತ್ತಾರೆ. ಬೆಳಗಾದ ನಂತರ ೪ ಮಂದಿ ಪೂಜಾರಿಗಳು ಪ್ರತಿಮನೆಗೆ ಹೋಗಿ ಪ್ರಸಾದ ತಿಂದು ಬರುತ್ತಾರೆ. ಈ ವೇಳೆಗೆ ಮನೆಗಳಲ್ಲಿಯೂ ಪೂಜೆ ಮಾಡಿ ತಳಿಗೆ ಅನ್ನ ಮಾಡಿಟ್ಟಿರುತ್ತಾರೆ. ಇದಾದ ನಂತರ ಜನ ಅವರವರ ಮನೆಗಳಲ್ಲಿ ಈ ಪ್ರಸಾದವನ್ನು ತಿಂದು ಏಕಾದಶಿ ಉಪವಾಸಕ್ಕೆ ಮುಕ್ತಾಯ ಹಾಡುತ್ತಾರೆ.

**ಆವಳೇನಹಳ್ಳಿ - ಚಿತ್ರದುರ್ಗ ಜಿಲ್ಲೆ : ೨**

ಮ್ಯಾಸಬೇಡರೇ ಬಹುಮಟ್ಟಿಗೆ ವಾಸವಾಗಿರುವ ಪುಟ್ಟಹಳ್ಳಿಯಿದು. ಗಾದ್ರಿಪಾಲನಾಯಕ ಮತ್ತು ಅಕ್ಕರಾಯಮ್ಮನನ್ನು ಅಕ್ಕಪಕ್ಕದ ದೇವಾಲಯದಲ್ಲಿರಿಸಿ ಇಲ್ಲಿ ಪೂಜೆ ಮಾಡಲಾಗುತ್ತದೆ. ಅಕ್ಕರಾಯಮ್ಮನ ಗುಡಿಯಲ್ಲಿರುವುದು 'ಪೆಟ್ಟಿಗೆ ದೇವರು' ಮ್ಯಾಸರಲ್ಲಿ ಸಾಮಾನ್ಯವಾಗಿ ಪೆಟ್ಟಿಗೆ ದೇವರುಗಳನ್ನೇ ಪೂಜಿಸುವುದು. ಸುಮಾರು ಎರಡು ಅಡಿ ಎತ್ತರ, ಎರಡೂವರೆ ಅಡಿ ಸುತ್ತಳತೆ ಇರುವ ಈ ಪೆಟ್ಟಿಗೆಗೆ ಕೆಂಪುಬಟ್ಟೆಯನ್ನು ಸುತ್ತಿರುತ್ತಾರೆ. ಈ ಪೆಟ್ಟಿಗೆಯಲ್ಲಿ ಸಾಲಿಗ್ರಾಮ ಮತ್ತು ಅಕ್ಕರಾಯಮ್ಮನಿಗೆ ಸಂಬಂಧಿಸಿದ ಅಮೂಲ್ಯ ವಸ್ತುಗಳಿವೆ ಎಂಬುದು ಸಮುದಾಯದವರ ನಂಬಿಕೆ.



ಅಕ್ಕರಾಯಮ್ಮನ
ಪೆಟ್ಟಿಗೆ
ಆವಳೇನಹಳ್ಳಿ-
ಜಗಲೂರು ತಾಲ್ಲೂಕು

ಮ್ಯಾಸರಲ್ಲಿ ತಮ್ಮ ಬುಡಕಟ್ಟಿನ ಒಬ್ಬ ವ್ಯಕ್ತಿಯನ್ನು ದೊರೆಯ ಸ್ಥಾನದಲ್ಲಿರಿಸಿ ಆತನ ಮುಖಂಡತ್ವದಲ್ಲಿ ತಮ್ಮ ಬದುಕನ್ನು ಸಾಗಿಸಿಕೊಂಡು ಬರುವ ವ್ಯವಸ್ಥೆ ಹಿಂದೆ ಇತ್ತು. ಈಗ ಅದು ಸಂಪ್ರದಾಯವಾಗಿ ಧಾರ್ಮಿಕ ವಿಧಿವಿಧಾನಗಳಲ್ಲಿ ಬಳಕೆಯಾಗುತ್ತಿದೆ. ಎನುಮಲವರು ಅಂದರೆ ಸುಕ್ಕಲ ಮಲ್ಲನಾಯಕನ ಗುಂಪಿನವರೇ ಇಲ್ಲಿ ದೊರೆಗಳೆಂದು ಕರೆಸಿಕೊಳ್ಳುತ್ತಾರೆ. ಒಮ್ಮೆ ಮ್ಯಾಸಮಂಡಲದಲ್ಲಿ ಇಂತಹ ದೊರೆಯೊಬ್ಬ ಮಡಿದಾಗ ಆತನ ನಂತರ ದೊರೆಯಪಟ್ಟ ಯಾರದು ಎಂಬ ಪ್ರಶ್ನೆ ಉದ್ಭವಿಸುತ್ತದೆ. ದೊರೆಗೆ ಪತ್ನಿಯಿಂದ ಪಡೆದ ಮಕ್ಕಳೂ ಇದ್ದರು. ಅಲ್ಲದೆ ಯಾದವರ ಸ್ತ್ರೀಯೊಂದಿಗೆ ಈತನಿಗೆ ಸ್ನೇಹ ಸಂಬಂಧ ಇದ್ದು ಆಕೆಯಿಂದ ಪಡೆದ ಮಗನೂ ಇರುತ್ತಾನೆ. ದೊರೆಯ ಈ ಉಪಪತ್ನಿ ತನ್ನ ಮಗನೇ ಉತ್ತರಾಧಿಕಾರಿಯಾಗಬೇಕೆಂದು ಪಟ್ಟು ಹಿಡಿಯುತ್ತಾಳೆ. ಈ ಸಂದರ್ಭದಲ್ಲಿ ಮ್ಯಾಸರೆಲ್ಲಾ ಸಭೆ ಸೇರಿ ಚರ್ಚಿಸಿ ದೊರೆಯ ಮುಳ್ಳಿನ ಗದ್ದಿಗೆಯನ್ನು ಯಾರು ಹತ್ತುತ್ತಾರೋ ಅವರಿಗೇ ಪಟ್ಟಾಭಿಷೇಕ ಮಾಡುವುದು ಎಂದು ಸಭೆ ತೀರ್ಮಾನಿಸುತ್ತದೆ. ದೊರೆಯ ಪತ್ನಿಯ ಮಕ್ಕಳಿಗೇ ಉತ್ತರಾಧಿಕಾರ ಸಿಗಬೇಕು ಎಂಬುದು ಮ್ಯಾಸಮಂಡಲದ ಅಭಿಪ್ರಾಯವಾಗಿರುತ್ತದೆ. ತಾಯಿಯ ಆದೇಶದಂತೆ ಯಾದವ ಸ್ತ್ರೀಯ ಮಗನೇ ದೊರೆಯ ಮುಳ್ಳಿನಗದ್ದಿಗೆಯನ್ನು ಏರಿ ಕುಳಿತುಕೊಳ್ಳುತ್ತಾನೆ. ಇದನ್ನು ಇಷ್ಟಪಡದ ಮ್ಯಾಸರಲ್ಲಿ ಆಗ ನಾವು ಈ ಯಾದವನ ಅಧಿಪತ್ಯದಲ್ಲಿ ಬಾಳುವುದು ಅಪಮಾನದ ಸಂಗತಿ. ಇದು ಎಂದಿಗೂ ಸಾಧ್ಯವಾಗದು. ತಾವು ಇನ್ನು ಇಲ್ಲಿರುವುದೇ ಬೇಡ ಎಂದು ನಿರ್ಧರಿಸಿ ಕೈಗೆ ಸಿಕ್ಕ ವಸ್ತುವನ್ನು, ತಮ್ಮ ಪೆಟ್ಟಿಗೆ ದೇವರುಗಳನ್ನೂ ಹೊತ್ತುಕೊಂಡು ಪಶುಸಂಪತ್ತಿನೊಂದಿಗೆ ಓಡಿ ಬಿಡುತ್ತಾರೆ. ಕೊನೆಯಲ್ಲಿ ಒಂದು ಪೆಟ್ಟಿಗೆ ಮಾತ್ರ ಉಳಿದುಕೊಂಡಿರುತ್ತದೆ. ಅದರಲ್ಲಿ ಏನೂ ಅಂತಹ ವಿಶೇಷವಾದ ವಸ್ತು ಇಲ್ಲ ಎಂದು ನಿರ್ಲಕ್ಷಿಸುತ್ತಾರೆ. ಮೀಸಲು ನಾಯಕ ದೈಹಿಕವಾಗಿ ಅಸಮರ್ಥನಾಗಿದ್ದು ಆತನಿಗೆ ಬೇಗ ಅಲ್ಲಿಂದ ಹೋಗಲು ಸಾಧ್ಯವಾಗುವುದಿಲ್ಲ. ಅತನಿಗೆ ಸಹಾಯಕನಾಗಿ ಆತನ ಭಾವಮೈದುನಾಗಿದ್ದ ಬೋಡೇ ಪಾಲನವನೂ ಉಳಿದಿದ್ದ. ಎಲ್ಲರೂ ನಿರ್ಲಕ್ಷಿಸಿದ್ದ ಆ ಪೆಟ್ಟಿಗೆಯನ್ನೇ ತೆಗೆದುಕೊಂಡು ಹೋಗೋಣ ಎಂದು ತಾವು ನಿರ್ಧರಿಸುತ್ತಾರೆ. ಬೊಡೇಪಾಲ ಅದನ್ನು ಒಂದು ಕಂಬಳಿಯಲ್ಲಿ ಕಟ್ಟಿ ಮಿಸಲು ನಾಯಕನ ತಲೆಯ ಮೇಲಿರಿಸಿ ಅಲ್ಲಿಂದ ಇಬ್ಬರೂ ಹೊರಡುತ್ತಾರೆ. ಈ ಮೊದಲೇ ಚೆದುರಿ ಪಲಾಯನ ಮಾಡಿದ್ದ ಮ್ಯಾಸರು

ಅಕ್ಕರಾಯಮ್ಮನ ವಸ್ತುಗಳು ಮತ್ತು ಸಾಲಿಗ್ರಾಮ ತಮ್ಮಲ್ಲಿ ಯಾರ ಬಳಿಯಲ್ಲಿಯೂ ಇಲ್ಲದಿರುವುದನ್ನು ಮನಗಂಡು ಮತ್ತೆ ತಾವು ಹೊರಟ ಸ್ಥಳಕ್ಕೆ ಹಿಂದಿರುಗಿ ಹೋಗಿ ನೋಡುತ್ತಾರೆ. ಅಲ್ಲಿ ಆ ವೇಳೆಗಾಗಲೇ ಅದನ್ನು ಬೋಡೇಪಾಲ ಮತ್ತು ಮೀಸಲು ನಾಯಕ ತೆಗೆದುಕೊಂಡು ಹೋಗಿ ಜೋಳದ ರಾಶಿ ಬಳಿ ಇರುವ ಚಿನ್ನಹಗರಿ(ಜಗಲೂರು ತಾಲ್ಲೂಕಿನ ಸಂಗೇನಹಳ್ಳಿ ಅಣೆಕಟ್ಟಾಗಿರುವ ಸ್ಥಳದಲ್ಲಿ ಈ ಸ್ಥಳವಿತ್ತು) ನದಿಯ ಪಕ್ಕದಲ್ಲಿ ಹೋಗಿ ಸೇರಿರುತ್ತಾರೆ. ರಾಯಮ್ಮನ ಮುತ್ತಿನ ಸೆರಗೇ ಬಹಳ ವಿಶಿಷ್ಟವಾದುದು. ಮುತ್ತುರತ್ನಗಳನ್ನೇ ಪೋಣಿಸಿ ಹೆಣೆದಿದ್ದ ಸೆರಗದು. ಕಕ್ಕೆ ಒಂದು ಗಿಡ, ಅದರ ಕಾಯಿ ಸುಮಾರು ಅರ್ಧಮಾರು ಉದ್ದವಿರುತ್ತದೆ. ಇದು ಒಣಗಿ ಟೊಳ್ಳಾಗಿದ್ದಾಗ ಅದನ್ನೇ ಅಮೂಲ್ಯವಾದ ವಸ್ತುಗಳನ್ನು ರಕ್ಷಿಸಿಡಲು ಬಳಸುತ್ತಿದ್ದರಂತೆ. ಈ ಕಾಯಿಯಲ್ಲಿ ಈ ಸೆರಗನ್ನು ಇರಿಸಿ ಅದನ್ನು ಪೆಟ್ಟಿಗೆಯಲ್ಲಿಟ್ಟು ಸಂರಕ್ಷಿಸಿಕೊಂಡು ಬರುತ್ತಿದ್ದರು. ಇದೊಂದು ಅಮೂಲ್ಯವಾದ ವಸ್ತುವಾಗಿತ್ತು ಈ ಸಮುದಾಯದವರಿಗೆ. ಇಂತಹ ಅಮೂಲ್ಯವಾದ ತಮಗೆ ಪವಿತ್ರವಾದ ವಸ್ತು ಈಗ ಬೋಡೇಪಾಲನ ಮತ್ತು ಮೀಸಲು ನಾಯಕನ ಬಳಿ ಸೇರಿ ಹೋಗಿದೆಯಲ್ಲ ಎಂದು ಬೇಸರಗೊಂಡ ದೊರೆಯ ಮಕ್ಕಳು ಮತ್ತು ಅವರ ಹಿಂಬಾಲಕರು ಇವರನ್ನು ಬೆನ್ನಟ್ಟುತ್ತಾರೆ. ಜೋಳದ ರಾಶಿಯ ಬಳಿ ಬಂದು ಇವರಿಬ್ಬರನ್ನು ಸೆರೆ ಹಿಡಿಯಲು ಬಿಲ್ಲು ಬಾಣಗಳನ್ನು ಸಿದ್ಧ ಮಾಡಿಕೊಂಡು ನಿಲ್ಲುತ್ತಾರೆ. ಬೋಡೇಪಾಲನವನ ಬಳಿ 'ಸಿಂಗಾರಿ' ಎಂಬ ಬಿಲ್ಲಿದ್ದು ಅದರ ಮೂಲಕ ಬಾಣ ಪ್ರಯೋಗ ಮಾಡಿದರೆ ಗುರಿ ತಪ್ಪುವುದೇ ಇಲ್ಲ ಎಂಬ ನಂಬಿಕೆ. ಅರ್ಜುನನ ಗಾಂಢೀವಿಯಂತೆ ಎಂದು ಅವರಿಗೆ ಅದರ ಮೇಲೆ ತುಂಬಾ ಅಭಿಮಾನ. ಈತನೂ ಈ ಬಿಲ್ಲನ್ನು ಸಿದ್ಧಮಾಡಿಕೊಂಡು ಬಾಣ ಹೂಡುತ್ತಾನೆ. ಎದುರಾಳಿಗಳೇನೂ ಬೇರೆಯವರಲ್ಲ. ಆದರೆ ಈಗ ಸದ್ಯ ವೈಮನಸ್ಸು ಉಂಟಾಗಿದೆಯಷ್ಟೆ. ಮೀಸಲು ನಾಯಕನಿಗೆ ತಮ್ಮವರ ವಿರುದ್ಧವಾಗಿಯೇ ತಾವು ಯುದ್ಧ ಮಾಡುವುದು ಮುಜುಗರ ಎನಿಸುತ್ತದೆ. ಬೋಡೇಪಾಲನವನಿಗೆ ಹೀಗೆ ಹೇಳುತ್ತಾನೆ. ನೀನು ಸಿಂಗಾರಿ ಬಿಲ್ಲಿನ ಮೂಲಕ ಬಾಣ ಬಿಟ್ಟರೆ ಖಂಡಿತ ಅವರು ನಾಶ ಹೊಂದುತ್ತಾರೆ. ಹಾಗೆ ಮಾಡುವುದು ಬೇಡ. ಆದರೆ ಅವರಿಗೆ ಪಾಠ ಕಲಿಸಬೇಕು, ಅವರು ಹತ್ತಿರುವ ಕುದುರೆಯ ಕಾಲುಗಳಿಗೆ ಬಾಣ ಬಿಟ್ಟು ಅವರನ್ನು ನೆಲಕ್ಕೆ ಬೀಳಿಸು ಎನ್ನುತ್ತಾನೆ. ಅದರಂತೆಯೇ ಬೋಡೇಪಾಲನು ಕುದುರೆಗಳ ಕಾಲಿಗೆ ಬಾಣ ಬಿಡುತ್ತಾನೆ. ಕುದುರೆಗಳ ಕಾಲು ಮುರಿದು ಎದುರಾಳಿಗಳು ನೆಲಕ್ಕೆ ಬಿದ್ದು ಸೋತು ಹೋಗುತ್ತಾರೆ. ಹೀಗೆ ಅವಮಾನಿತರಾದ ಅವರಿಗೆ ಬೋಡೇಪಾಲನ ಸಾಮರ್ಥ್ಯದ ಬಗ್ಗೆ ಅರಿವು ಮೂಡಿ ತಾವು ಈತನನ್ನು ಶಕ್ತಿಯ ಮೂಲಕ ಸೋಲಿಸಲು ಸಾಧ್ಯವಾಗುವುದಿಲ್ಲ. ತಂತ್ರದ ಮೂಲಕ ಮಾತ್ರ ಸಾಧ್ಯ ಎಂದು ಯೋಜನೆಯನ್ನು ರೂಪಿಸುತ್ತಾರೆ. ಅಂದು ಗುಂಪುಗಳ ಮಧ್ಯೆ ಪರಸ್ಪರ ಪಂದ್ಯಗಳನ್ನು ಕಟ್ಟಿಕೊಳ್ಳುವುದು, ಅಲ್ಲಿ ಗೆಲುವು ಸಾಧಿಸುವುದು ಪ್ರತಿಷ್ಠೆಯ ಸಂಗತಿಯಾಗಿತ್ತು. ಇದೇ ಉಪಾಯದಿಂದ ಬೋಡೇಪಾಲನವನನ್ನು ಮಣಿಸಲು ತೀರ್ಮಾನಿಸುತ್ತಾರೆ. ಕಜ್ಜಾಯ ತಿನ್ನುವ ಪಂದ್ಯವನ್ನು ಏರ್ಪಡಿಸುತ್ತಾರೆ. ನಾವು ನಿಮಗೆ ಕಜ್ಜಾಯಗಳನ್ನು ಕೊಡುತ್ತೇವೆ. ನಾವು ಕೊಟ್ಟಷ್ಟು ಕಜ್ಜಾಯಗಳನ್ನು ತಿನ್ನಬೇಕು ಮತ್ತು ನಾವು ಕೊಡುವ ಎಣ್ಣೆಯನ್ನು ಕುಡಿಯಬೇಕು ಇದನ್ನು ನೀನು ಸಾಧಿಸಿದರೆ ಆಗ ನಿನ್ನನ್ನು ಸಾಹಸಿ ಎಂದು ನಿರ್ಧರಿಸಿ ನಾವು ಸೋಲೊಪ್ಪಿಕೊಳ್ಳುತ್ತೇವೆ. ಯಾವುದೇ ಪ್ರತಿರೋಧವಿಲ್ಲದೆ ಆಗ ಅಕ್ಕರಾಯಮ್ಮನ ಪೆಟ್ಟಿಗೆ ನಿನ್ನದೇ ಆಗುತ್ತದೆ ಎಂದು ಬೋಡೇಪಾಲನವನಿಗೆ ಹೇಳಿ

ಕಳುಹಿಸುತ್ತಾರೆ. ಆತನೂ ಇದಕ್ಕೆ ಒಪ್ಪಿಕೊಳ್ಳುತ್ತಾನೆ. ಆವಳೇನಹಳ್ಳಿಯ ಬಳಿ ಒಂದು ಬೆಟ್ಟವಿದ್ದು ಅದನ್ನು ದೇಸೀಯವಾಗಿ 'ಗೋವಸರಪ್ಪನ ಗುಡ್ಡ' ಎಂದು ಕರೆಯುತ್ತಾರೆ.



ಗೋವಾಸರಯ್ಯನಗುಡ್ಡ



ಇದೇ ಗುಡ್ಡದ ತಪ್ಪಲಿನಲ್ಲಿರುವ ಕಜ್ಜಾಯ ಅರೆಯುವ ಬಂಡೆ, ಬೋಡೇಪಾಲನವರ ಪೂಜಾರಿಯಿಂದ ಪೂಜೆ

ಆ ಬೆಟ್ಟದ ತಪ್ಪಲು ಇಂದಿಗೂ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿದ್ದು ದನಕರುಗಳಿಗೆ ಮೇವು ನೀರಿನ ತಾಣವಾಗಿದೆ. ಈ ಕಾರಣದಿಂದಾಗಿ ಬಹುಶಃ ಗೋವುಗಳಿಗೆ ಆಶ್ರಯವಿತ್ತಿದ್ದ ತಾಣವಾದ್ದರಿಂದ ಬಹುಶಃ ಇದಕ್ಕೆ ಗೋವಾಶ್ರಿತ ಗುಡ್ಡ. ಗೋವಾಸಿರಪ್ಪನ ಗುಡ್ಡ ಎಂದು ಕರೆಯಲಾಗಿರಬಹುದು. ಅಲ್ಲಿ ಒಬ್ಬ ಯೋಗಿ ಇದ್ದನಂತೆ ಈತನನ್ನೇ ಗೋವಾಸಿರಪ್ಪ ಎಂದು ಕರೆಯುತ್ತಿದ್ದರು. ಕೆಂಡೇಶ್ವರ, ಮುಸ್ಟೂರೇಶ್ವರ, ತಿಪ್ಪೇಸ್ವಾಮಿ, ಅಳ್ಳಳ್ಳಿ ಬಸವೇಶ್ವರ, ಕಾಟಮಲಿಂಗೇಶ್ವರ ಇವರೆಲ್ಲಾ ಈತನ ಸೇವೆ ಮಾಡುತ್ತಿದ್ದರು. ಉಗ್ರಸ್ವರೂಪಿಯಾದ ಈತನ ಸೇವೆಯನ್ನು ಮುಂದುವರಿಸಲಾಗದೆ ಕಾಟಮಲ್ಲನಾಯಕನನ್ನು ಹೊರತು ಪಡಿಸಿ ಎಲ್ಲರೂ ಓಡಿಹೋಗಲು ಪ್ರಯತ್ನಿಸಿ ಬೆಟ್ಟದಲ್ಲಿ ಅಲ್ಲಲ್ಲಿಯೇ ಶಿಲೆಗಳಾದರು ಎಂದು ಪ್ರತೀತಿ. ಅದರಲ್ಲಿ ಕಾಟಮಲ್ಲನಾಯಕ ಪಶುಪಾಲಕನಾಗಿದ್ದು ತನ್ನ ಭಕ್ತಿ, ಶ್ರದ್ಧೆಯಿಂದ ಯೋಗಿಯ ಸೇವೆ ಮಾಡುತ್ತಾ ಅಲ್ಲಿಯೇ ಉಳಿದಿದ್ದ. ಆತನ ತರುವಾಯ ಆತನ ಪರಂಪರೆಯವರಾದ ಈ ಮ್ಯಾಸಬೇಡರು ಆತನ ಹೆಸರಿನಲ್ಲಿ ಬೆಟ್ಟದ ತಪ್ಪಲಿನಲ್ಲಿ 'ಕಾಟಮಲಿಂಗ' ಎಂದು ಪ್ರತಿಷ್ಠಾಪಿಸಿಕೊಂಡು ಪೂಜೆ ಮಾಡುತ್ತಾ ಬಂದರು. ಆತನ ಸಮಾಧಿ ಸ್ಥಳ ಇದು ಎಂಬ ನಂಬಿಕೆಯೂ ಇದೆ. ಆ ಪ್ರಾಂತ್ಯದಲ್ಲಿ ಪಶುಪಾಲಕತನ ಮಾಡುತ್ತಾ ಇದ್ದ ಮ್ಯಾಸಬೇಡರಿಗೆ ಯಾವುದೇ ಮಹತ್ವದ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಈ ಸಮಾಧಿಯ ಸಮಕ್ಷಮದಲ್ಲೇ ಆಗುತ್ತಿತ್ತು. ಈಗಲೂ ಈ ಬೋಡೇಪಾಲನಿಗೆ ಪಂದ್ಯದ ಆಹ್ವಾನ ಕೊಟ್ಟಾಗ ಇದೇ ಸ್ಥಳವನ್ನು ಆಯ್ಕೆ ಮಾಡಿಕೊಂಡರು. ಮರುದಿನ ಬೋಡೇಪಾಲ ಮತ್ತು ಮೀಸಲು ನಾಯಕ ಅಕ್ಕರಾಯಮ್ಮನ

ಪೆಟ್ಟಿಗೆಯೊಂದಿಗೆ ಅಲ್ಲಿಗೆ ಬರುತ್ತಾರೆ. ಬೋಡೇಪಾಲನವನು ಸ್ನಾನ ಮಾಡಿ ಶುಚಿರ್ಭೂತರಾಗಿ ಬಂದು ಕಾಟನಾಯಕನ ಸಮಾಧಿಗೆ ಪೂಜೆ ಸಲ್ಲಿಸಿ ಅಕ್ಕರಾಯಮ್ಮನ ಸ್ಮರಣೆ ಮಾಡುತ್ತಾನೆ. ಪಂದ್ಯದಲ್ಲಿ ಗೆಲ್ಲುವ ಶಕ್ತಿಯನ್ನು ಕೊಡು ಎಂದು ಬೇಡಿಕೊಳ್ಳುತ್ತಾನೆ. ಎದುರಾಳಿಗಳೂ ಅಲ್ಲಿ ಬಂದು ನೆರೆದಿರುತ್ತಾರೆ. ಕಾಟಮಲ್ಲನಾಯಕನ ಸಮಾಧಿಗೆ ಹತ್ತಿರದಲ್ಲಿಯೇ ಇರುವ ಒಂದು ಬಂಡೆಯ ಮೇಲೆ ಅವರು ಕಜ್ಜಾಯಗಳನ್ನು ತಯಾರಿಸಲು ಅರೆಯುತ್ತಾರೆ. ಅರೆಯುವಾಗ ಮೋಸದಿಂದ ವಿಷದ ಸೊಪ್ಪುಗಳು, ಚೇಳು, ಮಂಡರಗಪ್ಪೆ, ಹಾವ್ರಾಣಿ, ಮಂಡಗಳ್ಳಿ ಹಾಲು ಇತ್ಯಾದಿಗಳನ್ನು ಸೇರಿಸಿ ಅರೆಯುತ್ತಾರೆ. ಹೇಗಾದರೂ ಇದನ್ನು ತಿನ್ನಿಸಿ ಬೋಡೇಪಾಲನನ್ನು ಕೊಲ್ಲಬೇಕೆಂಬುದೇ ಇವರ ಉದ್ದೇಶವಾಗಿತ್ತು. ಕಜ್ಜಾಯಗಳನ್ನು ತಯಾರಿಸಿ ಬೋಡೇಪಾಲನವನಿಗೆ ತಿನ್ನಿಸುತ್ತಾರೆ. ಪಂದ್ಯದಲ್ಲಿ ಸೋಲಬಾರದು ಎಂಬ ಖಚಿತತೆ ಮತ್ತು ಅಕ್ಕರಾಯಮ್ಮನ ಸ್ಮರಣೆ ಮಾಡಿ ಪಡೆದ ಆಶೀರ್ವಾದದ ಬಲ ಕಾರಣವಾಗಿ ಆತ ಹಿಂದೆಗೆಯದೆ ಈ ವಿಷಯದ ಕಜ್ಜಾಯಗಳನ್ನು ತಿನ್ನುತ್ತಾನೆ, ಎಣ್ಣೆಯನ್ನು ಕುಡಿಯುತ್ತಾನೆ. ಕಜ್ಜಾಯಗಳೆಲ್ಲಾ ಮುಗಿದು ಹೋಗಲು ಆರ್ಭಟಿಸುತ್ತಾ, ಆವೇಶದಿಂದ ಕೊಡುವವರ ಕೈಗಳನ್ನೇ ತಿನ್ನಲು ತೊಡಗುತ್ತಾನೆ. ಆಗ ಸೋತ ದೊರೆಗಳ ಕಡೆಯವರು ಆತನ ಬೊಗಸೆಗೆ ಜನಿಗೆ ಹಸುವಿನ ಮೀಸಲು ಮೊಸರನ್ನು ಸುರಿದು ಸಂತೈಸಿ ದಾಹವನ್ನು ತಣಿಸುತ್ತಾರೆ. ಸೋಲೊಪ್ಪಿಕೊಳ್ಳುತ್ತಾರೆ. ಪೆಟ್ಟಿಗೆ ಬೋಡೇಪಾಲನವನ ಉಸ್ತುವಾರಿಯಲ್ಲೇ ಉಳಿಯುತ್ತದೆ. ಮೀಸಲುನಾಯಕ ಅದಕ್ಕೆ ಪೂಜೆ ಸಲ್ಲಿಸುತ್ತಾನೆ. ಇಂದಿಗೂ ಈ ಘಟನೆ ಒಂದು ಆಚರಣೆಯ ರೂಪದಲ್ಲಿ ಉಳಿದುಬಂದಿದ್ದು ಪ್ರತಿವರ್ಷ ಜನವರಿ ತಿಂಗಳಿನಲ್ಲಿ ಇದು ನಡೆಯುತ್ತದೆ. ಇದು ಇಲ್ಲಿ ಅಕ್ಕರಾಯಮ್ಮನನ್ನು ಪೂಜೆ ಮಾಡುವ ನೆಲೆಯಲ್ಲಿ ಕಾಟನಾಯಕನ ಮಲ್ಲಯ್ಯನನ್ನು ಪೂಜೆಮಾಡುವ ಬೊಡೇಪಾಲ ಬೆಡಗಿಗೆ ಸೇರಿದವರು ಹೇಳುವ ಕಥೆ. ನನ್ನಿವಾಳದ ದೊರೆಗಳ ಪ್ರಕಾರ, ಬೋಡೇಪಾಲರು ಸಮುದಾಯಕ್ಕೆ ಸೇರಿದ ಎತ್ತುಗಳನ್ನು ಕಾಯುವ ಕಿಲಾರಿಗಳು. ವರ್ಷಕ್ಕೊಮ್ಮೆ ಕಂಪಳದೇವರ ಜಾತ್ರೆಯಲ್ಲಿ ಈ ದೊರೆ ಎತ್ತುಗಳ ಲೆಕ್ಕ ತೆಗೆದುಕೊಳ್ಳುತ್ತಾನೆ. ಯಾವುದಾದರೂ ಎತ್ತು, ಹಸು ಆ ವರ್ಷ ಸತ್ತು ಹೋಗಿದ್ದರೆ ಮುದ್ರೆ ಹಾಕಿರುವ ಭಾಗದ ಅದರ ಚರ್ಮವನ್ನು ಸುರಕ್ಷಿಸಿಟ್ಟ ಸಾಕ್ಷಿಯಾಗಿ ತೋರಿಸಬೇಕು. ಇಲ್ಲವಾದರೆ ಯಾರಿಗಾದರೂ ಮಾರಿರುವ ಸಂಭವವಿರುತ್ತದೆ. ಒಮ್ಮೆ ಹೀಗೆ ಲೆಕ್ಕ ತಪ್ಪಿದಾಗ ಕಿಲಾರಿಯ ಅಪ್ರಮಾಣಿಕತೆಗೆ ದೊರೆ ವಿಷದ ಕಜ್ಜಾಯ ತಿಂದು, ಎಣ್ಣೆ ಕುಡಿಯುವ, ಹುಣಸೆ ಬರಲಿನಿಂದ ಹೊಡೆಸಿಕೊಳ್ಳುವ ಶಿಕ್ಷೆ ಕೊಟ್ಟು ಅದು ಒಂದು ಸಾಂಕೇತಿಕ ಆಚರಣೆಯಾಗಿ ಉಳಿದುಕೊಂಡು ಬಂದಿದೆ.

ಅಕ್ಕರಾಯಮ್ಮನ ಬೆಲೆಬಾಳುವ 'ಮುತ್ತಿನ ಸೆರಗು' ಆ ಪೆಟ್ಟಿಗೆಯಲ್ಲಿ ಇದ್ದುದಾಗಿಯೂ ಒಮ್ಮೆ ಹುಣಿಸೇಕಟ್ಟೆ (ಚಿತ್ರದುರ್ಗ ಜಿಲ್ಲೆ) ಯಿಂದ ಒಬ್ಬ ದಾಸಯ್ಯ ಆವಳೇನಹಳ್ಳಿಗೆ ಬಂದು ದೇವಸ್ಥಾನದಲ್ಲಿ ಉಳಿದುಕೊಳ್ಳುತ್ತಾನೆ. ದೇವಸ್ಥಾನವೆಂದರೆ ಮೊದಲು ಇದ್ದದ್ದು ಹುಲ್ಲಿನ ಗುಡಿಸಲೇ. ಸುಮಾರು ದಿನ ಆತ ಅಲ್ಲಿಯೇ ಉಳಿಯುತ್ತಾನೆ. ಬೋಡೇಪಾಲ ಮತ್ತು ಮೀಸಲುನಾಯಕನಿಗೂ ಆತನ ಬಗ್ಗೆ ನಂಬಿಕೆ ಬರುತ್ತದೆ. ಆದರೆ ದಾಸಯ್ಯ ಬಂದಿದ್ದ ಉದ್ದೇಶವೇ ಬೇರೆ. ನಂಬಿಕೆ ಹುಟ್ಟಿಸಿ ಸಮಯ ಸಾಧಿಸಿ ಒಂದು ದಿನ ಆ ಪೆಟ್ಟಿಗೆಯಲ್ಲಿದ್ದ ಮುತ್ತಿನ ಸೆರಗನ್ನು ಅಪಹರಿಸಿಕೊಂಡು ಹೋಗಿಬಿಡುತ್ತಾನೆ. ಹುಣಸೇ ಕಟ್ಟೆಯ ಕಡೆ ಹೋಗುವಾಗ ಹುಣಸೇಕಟ್ಟೆ ಮತ್ತು ಬಂಗಾರಕ್ಕನ ಹಳ್ಳಿ ಮಧ್ಯೆ ಇರುವ ಬೆಲ್ಲದ ಮಟ್ಟಿ ಎಂಬ ಸ್ಥಳವಲ್ಲಿ

ಅನಿರೀಕ್ಷಿತವಾಗಿ ಮರಣ ಹೊಂದುತ್ತಾನೆ. ಪವಿತ್ರವಸ್ತುವನ್ನು ಕಳ್ಳತನ ಮಾಡಿದ್ದರಿಂದಲೇ ಸತ್ತ ಎಂಬುದು ಮ್ಯಾಸರ ನಂಬಿಕೆ. ಮುತ್ತಿನ ಸೆರಗು ಇದ್ದ ಕಕ್ಕೆಕಾಯಿ ಆತನ ಪಕ್ಕ ಬಿದ್ದಿರುತ್ತದೆ. ದನಕಾಯುವ ಹುಡುಗರು ಇದರಲ್ಲಿ ಹೊಳೆಯುವ ವಸ್ತುವಿರುವುದನ್ನು ಗಮನಿಸಿ ಹುಣಿಸೇಕಟ್ಟೆಗೆ ಸುದ್ದಿ ಮುಟ್ಟಿಸುತ್ತಾರೆ. ಅಲ್ಲಿಂದ ಬಂದ ಮ್ಯಾಸರು ದಾಸಯ್ಯನನ್ನು ಗುರುತಿಸಿ ಆತ ಹೋಗಿದ್ದ ಉದ್ದೇಶ ಅವರಿಗೆ ಮೊದಲೇ ತಿಳಿದಿತ್ತಾದ ಕಾರಣ ಆ ಮುತ್ತಿನ ಸೆರಗಿದ್ದ ಕಕ್ಕೇಕಾಯಿಯನ್ನು ತೆಗೆದುಕೊಂಡು ತಮ್ಮಲ್ಲಿದ್ದ ಅಲಿಕೋಬಳದೇವರ ಪೆಟ್ಟಿಗೆಯ ಪಕ್ಕದಲ್ಲಿಯೇ ಅಕ್ಕರಾಯಮ್ಮನ ಹೆಸರಿನಲ್ಲಿ ಒಂದು ಪೆಟ್ಟಿಗೆ ಮಾಡಿಸಿ ಅದರಲ್ಲಿ ಈ ಸೆರಗನ್ನು ಸಂರಕ್ಷಿಸಿ ಪೂಜಿಸಿಕೊಂಡು ಬರುತ್ತಿದ್ದಾರೆ ಎಂದು ಅವಳೇನಹಳ್ಳಿಯ ಹಿರಿಯರು ಹೇಳುತ್ತಾರೆ. ಒಟ್ಟಾರೆ ಆವಳೇನಹಳ್ಳಿ ಅಕ್ಕರಾಯಮ್ಮನ ಒಂದು ಪ್ರಮುಖ ಆರಾಧನಾ ನೆಲೆಯಾಗಿದೆ. ಇಂದು ಹುಲ್ಲಿನ ಗುಡಿಸಿಲಿಗೆ ಬದಲಾಗಿ ಕಲ್ಲಿನಿಂದ ನಾಗರೀಕವಾದ ಚಿಕ್ಕದೊಂದು ದೇವಾಲಯ ಕಟ್ಟಿ ಈ ಪೆಟ್ಟಿಗೆಯನ್ನು ಇರಿಸಿ ಪೂಜಿಸಿಕೊಂಡು ಬರುತ್ತಿದ್ದಾರೆ.

**ಆವಳೇನಹಳ್ಳಿಯ ಅಕ್ಕರಾಯಮ್ಮನ ಆರಾಧನೆ :**

ಮ್ಯಾಸಬೇಡರಲ್ಲಿ ಅವರ ಎಲ್ಲಾ ಧಾರ್ಮಿಕ ನೆಲೆಗಳಲ್ಲೂ ಪ್ರಧಾನವಾಗಿ ನಡೆಸುವ ಹಬ್ಬವೆಂದರೆ 'ಗುಗ್ಗರಿ ಹಬ್ಬ' ಅಂದರೆ ಸುಗ್ಗಿಯ ನಂತರ ನಡೆಸುವ ಆಚರಣೆಯಿದು. ಆವಳೇನಹಳ್ಳಿಯಲ್ಲಿರುವ ಅಕ್ಕರಾಯಮ್ಮನಿಗೂ ಪ್ರಧಾನವಾಗಿ ನಡೆಸುವ ಆರಾಧನೆಯೆಂದರೆ 'ಗುಗ್ಗರಿ ಹಬ್ಬ'. ನಂತರ ಯುಗಾದಿ ಹಬ್ಬದ ದಿನ ಮತ್ತು ಶ್ರಾವಣಮಾಸದಲ್ಲಿ ವಿಶೇಷ ಪೂಜೆಗಳು ಸಲ್ಲುತ್ತವೆ. ಹಿಂದೆ ದೀಪಾವಳಿಯಲ್ಲೂ ವಿಶೇಷವಾದ ಪೂಜೆ ನಡೆಯುತ್ತಿದ್ದು ಈಗ ಅದನ್ನು ನಡೆಸುತ್ತಿಲ್ಲ.

**ಗುಗ್ಗರಿ ಹಬ್ಬ :**

ಪುಷ್ಯಮಾಸ ಅಂದರೆ ಶೂನ್ಯಮಾಸ ಕಳೆದು ಮಾಘಮಾಸದ ಒಂದು ಭಾನುವಾರ ಇಲ್ಲಿ ಗುಗ್ಗರಿ ಹಬ್ಬದ ಆಚರಣೆ ಆರಂಭವಾಗುತ್ತದೆ. ಒಟ್ಟು ಈ ಹಬ್ಬದ ಆಚರಣೆಯಲ್ಲಿ ಪ್ರಧಾನವಾಗಿ ಪೂಜಾವಿಧಿಗಳಲ್ಲಿ ಪಾಲ್ಗೊಳ್ಳುವವರೆಂದರೆ ಒಂಬತ್ತು ಪುಟ್ಟಿಗಳವರು. 'ಎನುಮಲವರು' ಎಂಬ ಬೆಡಗಿನ ಆರುಪುಟ್ಟಿಯವರು ಮತ್ತು'ಬೋಡೇಪಾಲರು' ಎಂಬ ಬೆಡಗಿನ ಮೂರು ಪುಟ್ಟಿಗಳವರು. ಎನುಮಲವರಲ್ಲಿ ಯಜಮಾನರು, ನಾಯಕರು, ದೊರೆಗಳು ಎಂಬ ಮೂರು ಗುಂಪಿನವರು ಬರುತ್ತಾರೆ. ಉಳಿದಂತೆ ಹಳ್ಳಿಯ ಇತರರೂ ಈ ಪೂಜಾಕಾರ್ಯದಲ್ಲಿ ಭಾಗವಹಿಸಿ ಬೆಂಬಲ ಕೊಡುತ್ತಾರೆ.

ಭಾನುವಾರ ಸಾಯಂಕಾಲ ಈ ಒಂಬತ್ತು ಪುಟ್ಟಿಗಳವರು (ಇಲ್ಲಿ ಪುಟ್ಟಿ ಎಂದರೆ ಒಂದು ಗುಂಪಿನವರು ಎಂಬ ಅರ್ಥ). ಕಾಸು, ಅಂದರೆ ದಕ್ಷಿಣೆ. ಮಡಿಯಿಂದ ತಂದ ಮೀಸಲು ಹಾಲು ಮತ್ತು ಹುರುಳಿಕಾಳಿನೊಂದಿಗೆ ದೇವಾಲಯಕ್ಕೆ ಬರುತ್ತಾರೆ. ೯ ಗುಂಪಿನವರು ತಂದ ಇದನ್ನೆಲ್ಲಾ ಒಟ್ಟಾಗಿ ಸೇರಿಸುತ್ತಾರೆ. ಗಾದ್ರಿಪಾಲನಾಯಕ ಮತ್ತು ಅಕ್ಕರಾಯಮ್ಮನ ಗುಡಿ ಅಕ್ಕ ಪಕ್ಕದಲ್ಲಿಯೇ ಇವೆ. ಈ ಎರಡರಲ್ಲೂ ಪೂಜೆ ಸಲ್ಲಿಸಿ ನಂತರ ಕಾಸು- ಅಂದರೆ ದಕ್ಷಿಣೆಯ ಹಣ (ತಮ್ಮ ಸಾಂಸ್ಕೃತಿಕ ನಾಯಕ-ನಾಯಕಿಗೆ ಗೌರವಪೂರ್ವಕವಾಗಿ ಒಪ್ಪಿಸುವ ದಕ್ಷಿಣೆ. ಇದು ಪೂಜಾರಿಗೆ ಸಲ್ಲುತ್ತದೆ.), ಮೀಸಲು ಹಾಲು,

ಮೊಸರು, ಸ್ವಲ್ಪ ಹುರುಳಿಯ ಕಾಳಿನೊಂದಿಗೆ ಮೀಸಲು ನಾಯಕ ಮತ್ತು ಬೋಡೇಪಾಲ ಪೂಜಾರಿ ಗೋವಾಸಿರಪ್ಪನ ಗುಡ್ಡಕ್ಕೆ ಹೊರಡುತ್ತಾರೆ. ಬೆಟ್ಟದ ತಪ್ಪಲಿನಲ್ಲಿರುವ ಕಾಟಮಲ್ಲನಾಯಕನ ಗುಡಿಯ ಬಳಿ ಹೋಗಿ ಆ ರಾತ್ರಿ ಕಾಳು ಬೇಯಿಸಿ ಮರುದಿನದ ಪೂಜೆಗೆ ಅಣಿ ಮಾಡಿಕೊಳ್ಳುತ್ತಾರೆ.

ಇತ್ತ ಅದೇ ದಿನದ ಸಾಯಂಕಾಲ ಅಕ್ಕರಾಯಮ್ಮನ ಪೆಟ್ಟಿಗೆಯನ್ನೂ ಗಾದ್ರಿಪಾಲನಾಯಕನ ಬಿಲ್ಲಿನೊಂದಿಗೆ ವಿಜೃಂಭಣೆಯಿಂದ ಗೋವಾರಿಸಪ್ಪನ ಬೆಟ್ಟದ ಹತ್ತಿರದಲ್ಲಿಯೇ ಇರುವ ಜನಿಗೆ ಹಳ್ಳಕ್ಕೆ (ಚಿನ್ನ ಹಗರಿನದಿ) ತರುತ್ತಾರೆ. ಉರುಮೆ, ತಮ್ಮಟೆ ವಾದ್ಯಗಳು, ಹೆಂಗಳೆಯರು ಹಿಡಿದಿರುವ ಆರತಿ, ಕಳಶಗಳೊಂದಿಗೆ ಹಳ್ಳಿಯ ಜನಸಮೂಹದೊಂದಿಗೆ ಛತ್ರಿ ಚಾಮರಗಳ ಸೇವೆಯ ಮಧ್ಯೆ ಈ ನಾಯಕಿ ಇಲ್ಲಿಗೆ ಬರುತ್ತಾಳೆ. ಹಳ್ಳದ ಬದಿಯಲ್ಲಿ ಉದಿಪದಿ ಹಾಕಿ ಅಕ್ಕರಾಯಮ್ಮನ ಪೆಟ್ಟಿಗೆಯನ್ನು ಇರಿಸುತ್ತಾರೆ. ಉದಿಪದಿ ಎಂದರೆ ಸೊಪ್ಪಿನ ಗುಡಿಸಲು. ಪಕ್ಕದ 'ಪದಿ'ಯಲ್ಲಿ ಗಾದ್ರಿಪಾಲನಾಯಕನ ಬಿಲ್ಲನ್ನೂ ಇಟ್ಟಿರುತ್ತಾರೆ. ರಾತ್ರಿ ರಾಯಮ್ಮನ ಹೆಸರಿನಲ್ಲಿರುವ ಪೆಟ್ಟಿಗೆಯಲ್ಲಿನ ಸಾಲಿಗ್ರಾಮ ಇತ್ಯಾದಿ ವಸ್ತುಗಳನ್ನು, ಇತರೆ ವಸ್ತುಗಳನ್ನು ತೊಳೆದು ಮತ್ತೆ ಅದೇ ಪೆಟ್ಟಿಗೆಯಲ್ಲಿರಿಸಿ, ಪೆಟ್ಟಿಗೆಯನ್ನು ಹೂವು, ಹೊಂಬಾಳೆಗಳಿಂದ ಅಲಂಕರಿಸುತ್ತಾರೆ. ೧೦೧ ಬಾರಿ ಬಾಳೆಹಣ್ಣು, ಎಲೆ, ಅಡಿಕೆ, ಕಾಸು ಇಟ್ಟು ಪೂಜೆ ಸಲ್ಲಿಸುತ್ತಾರೆ. ಪೂಜೆ ಸಲ್ಲಿಸುವವನು ಇಲ್ಲಿ 'ಎನುಮಲ' ಬೆಡಗಿನವನು. ಈತ ಅಕ್ಕರಾಯಮ್ಮನ ತಮ್ಮಂದಿರ ಸಂತತಿಗೆ ಸೇರಿದವನು. ರಾತ್ರಿ ಇಡೀ ಉರುಮೆ ಮತ್ತು ಕಹಳೆ ಧ್ವನಿ ಮೊಳಗುತ್ತಿರುತ್ತದೆ. ಮರುದಿನ ಬೆಳಿಗ್ಗೆ ಅಕ್ಕರಾಯಮ್ಮನ ಪೆಟ್ಟಿಗೆ ಮತ್ತು ಗಾದ್ರಿಪಾಲನಾಯಕನ ಬಿಲ್ಲನ್ನು ಕಾಟಮಲ್ಲನಾಯಕನ ಗುಡಿಯ ಬಳಿ ಕೊಂಡೊಯ್ಯುತ್ತಾರೆ. ಇದರೊಂದಿಗೆ ಸೂರಪ್ಪನ ಇಲ್ಲವೇ ಮುತ್ತಿಗಾರರ ದೇವರೆತ್ತುಗಳು ಅಲ್ಲಿಗೆ ಬರುತ್ತವೆ. ಈ ನಾಯಕಿ (ಪೆಟ್ಟಿಗೆ) ಮತ್ತು ಗಾದ್ರಿಪಾಲನಾಯಕನ ಸಮಕ್ಷಮದಲ್ಲಿ ಬೋಡೇಪಾಲ ಪೂಜಾರಿ ಕಜ್ಜಾಯ ತಿನ್ನುವ ಆಚರಣೆ ನಡೆಯುತ್ತದೆ. ಹಿಂದೆ ಪಂದ್ಯ ಏರ್ಪಡಿಸಿ ದೊರೆಗಳು ಬೋಡೇಪಾಲನಿಗೆ ವಿಷದ ಕಜ್ಜಾಯ ತಿನ್ನಿಸಿ ವಿಷದ ಎಣ್ಣೆ ಕುಡಿಸಿ ಆ ಪಂದ್ಯದಲ್ಲಿ ಬೋಡೇಪಾಲ ಗೆದ್ದು ರಾಯಮ್ಮನ ಪೆಟ್ಟಿಗೆಯ ಉಸ್ತುವಾರಿ ಆತನಿಗೆ ದಕ್ಕಿರುತ್ತದೆ. ಈ ಪ್ರಸಂಗವನ್ನು ಸಾಂಕೇತಿಕವಾಗಿ ಮತ್ತೆ ಇಲ್ಲಿ ಆಚರಿಸಲಾಗುತ್ತದೆ. ದೊರೆಗಳ ಗುಂಪಿನವರು ಎಣ್ಣೆಯನ್ನು ತಂದಿರುತ್ತಾರೆ. ಬೆಟ್ಟದ ತಪ್ಪಲಿನಲ್ಲಿಯೇ ಹಿಂದೆ ವಿಷದ ಕಜ್ಜಾಯವನ್ನು ಅರೆದಿದ್ದ ಬಂಡೆ ಇದ್ದು ಅದನ್ನು 'ಸವುರದ ಬಡೆ' ಎಂದು ಕರೆಯಲಾಗುತ್ತದೆ. ಆ ಬಂಡೆಯನ್ನು ಪೂಜಿಸಿ ಅಲ್ಲಿ ಬೇವಿನಸೊಪ್ಪು. ಹಾಲೇಸೊಪ್ಪು, ಮಂಡಗಳ್ಳಿಯ ಹಾಲು ಇತರೆ ಸೊಪ್ಪುಗಳನ್ನು ಅರೆದು ವಿಷದ ಕಜ್ಜಾಯಗಳನ್ನು ತಯಾರಿಸುತ್ತಾರೆ. ಈ ವೇಳೆಗೆ ಬೋಡೇಪಾಲ ಪೂಜಾರಿ ಕಾಟಮಲ್ಲನಾಯಕನ ಸಮಾಧಿಗೆ ಪೂಜೆ ಸಲ್ಲಿಸಿ ಅಲ್ಲಿಂದ ಗಿಡಗಿಡಕ್ಕೂ ಒಟ್ಟಾರೆ ೧೦೧ ಕಡೆ ಎಲೆ, ಅಡಿಕೆ, ಬಾಳೆಹಣ್ಣು ಇಟ್ಟು ಪೂಜೆ ಮಾಡಿ, ಅಕ್ಕರಾಯಮ್ಮನ ಪೆಟ್ಟಿಗೆಯನ್ನು ಪೂಜೆ ಮಾಡಿ ಸವುರದ ಬಂಡೆಯ ಬಳಿ ಬರುತ್ತಾನೆ.

ಅಲ್ಲಿ ಆತನ ಬೊಗಸೆಗೆ ದೊರೆಗಳು ಕಜ್ಜಾಯವನ್ನು ಹಾಕುತ್ತಾರೆ. ಅದನ್ನು ತಿಂದು ಅರ್ಭಟಿಸುತ್ತಾ ಇನ್ನೂ ಬೇಕು ಬೇಕು ಎನ್ನುತ್ತಾ ಕಾಟಮಲ್ಲನಾಯಕನ ಬಂಡೆಯ ಬಳಿ ಬರಲು ಅಲ್ಲಿ ಮತ್ತೆ ದೊರೆಗಳು ಆತನ ಬೊಗಸೆಗೆ ಎಣ್ಣೆಯನ್ನು ಸುರಿಯುತ್ತಾರೆ. ಅದನ್ನು ಕುಡಿದು ಇನ್ನೂ ಕಜ್ಜಾಯ ಬೇಕು, ಎಣ್ಣೆ ಬೇಕು

ಎಂದು ಆರ್ಭಟಿಸುತ್ತಾ ಕೊಡುತ್ತಿರುವವರ ಕೈಗಳನ್ನೇ ತಿನ್ನಲು ಹೋಗುತ್ತಾನೆ. ಆಗ ಆತನ ಜೊಗಸೆಗೆ ಜನಿಗೆ ಹಸುವಿನ ಮೀಸಲು ಮೊಸರನ್ನು ಸುರಿದು ಕುಡಿಸಿ ಆರ್ಭಟವನ್ನು, ದಾಹವನ್ನೂ ಶಮನಗೊಳಿಸುತ್ತಾರೆ. ಹೀಗೆ ಸಾಂಕೇತಿಕವಾಗಿ ವಿಷದ ಕಜ್ಜಾಯ ತಿನ್ನುವ ಆಚರಣೆ ಮುಗಿದ ನಂತರ ಕಾಟಮಲ್ಲನಾಯಕನಿಗೆ ಹಿಂದಿನ ರಾತ್ರಿ ಬೇಯಿಸಿದ್ದ ಕಾಳು ಮತ್ತು ಬಾಳೆಹಣ್ಣು, ಮೊಸರು, ಬೆಲ್ಲವನ್ನು ನೈವೇದ್ಯ ಮಾಡುತ್ತಾರೆ. ರಾಯಮ್ಮನ ಪೆಟ್ಟಿಗೆಗೆ ಅಲ್ಲಿ ಕಾಳಿನ ನೈವೇದ್ಯ ಮಾಡುವುದಿಲ್ಲ. ಬಾಳೆಹಣ್ಣು, ಮೊಸರು, ಬೆಲ್ಲದ ೧೦೧ ಪೂಜೆ ಮಾಡುತ್ತಾರೆ. ಹೊಂಬಾಳೆ, ಹೂವಿನ ಅಲಂಕಾರ ಮಾಡುತ್ತಾರೆ. ಅಲ್ಲಿಗೆ ಈ ಪೆಟ್ಟಿಗೆಯೊಂದಿಗೆ ಬಂದಿದ್ದ ದೇವರ ಎತ್ತುಗಳನ್ನು ಅಲ್ಲಿ ಓಡಿಸಲಾಗುತ್ತದೆ. ಪ್ರತಿಯೊಬ್ಬ ಮ್ಯಾಸಬೇಡರ ಶರಣ ಅಥವಾ ಸಾಂಸ್ಕೃತಿಕ ನಾಯಕನಿಗೆ ಸೇರಿದ ಎತ್ತುಗಳನ್ನು ಕಾಡಿನಲ್ಲಿ ಗೂಡುಗಳನ್ನಿಟ್ಟುಕೊಂಡು ಕಿಲಾರಿಗಳು ರಕ್ಷಣೆ ಮಾಡುತ್ತಾರೆ. ಆಯಾ ನಾಯಕನ ಹಬ್ಬದ ಆಚರಣೆಯ ದಿನ ಅವುಗಳನ್ನು ಆ ನಾಯಕನ ದೇವಾಲಯದ ಬಳಿ ತರಲಾಗುತ್ತದೆ. ಮ್ಯಾಸಬೇಡರಲ್ಲಿ ಅವರ ಹಬ್ಬಗಳ ಆಚರಣೆಯಲ್ಲಿ ಈ ಎತ್ತುಗಳ ಪಾತ್ರ ಬಹಳ ಮುಖ್ಯವಾದುದು. ರಾಯಮ್ಮನಿಗೆ ಪ್ರತ್ಯೇಕವಾದ ಎತ್ತುಗಳಿಲ್ಲ. ಆದರೆ ಎಲ್ಲಾ ನಾಯಕನ ಎತ್ತುಗಳೂ ಅಲ್ಲಿಗೆ ಬಂದು ಸೇವೆ ಸಲ್ಲಿಸುವ, ಪಡೆಯುವ ಅವಕಾಶವಿದೆ. ಅಂದರೆ ಎಲ್ಲರಿಗೂ ಬೇಕಾದವಳು, ಎಲ್ಲರ ಗೌರವಕ್ಕೂ ಪಾತ್ರಳಾಗಿರುವವಳು ಈ ರಾಯಮ್ಮ. ಇಲ್ಲಿಯೂ ಈ ದೇವರ ಎತ್ತುಗಳನ್ನು ಓಡಿಸಲಾಗುತ್ತದೆ. ಸುಮಾರು ೩೦೦ ಅಡಿಗಳ ಅಂತರದಲ್ಲಿ ಎತ್ತುಗಳನ್ನು ಕಿಲಾರಿಗಳು ಒಂದೆಡೆಯಿಂದ ಮತ್ತೊಂದು ಕಡೆಗೆ ಓಡಿಸುತ್ತಾರೆ. ತನ್ನ ಅಧಿಪತ್ಯದಲ್ಲಿದ್ದ ಎತ್ತುಗಳ ಈ ಮೇಲಾಟವನ್ನು ಅದರ ನಾಯಕ/ನಾಯಕಿ ನೋಡಬೇಕು ಎಂಬುದು ಈ ಆಚರಣೆಯ ಉದ್ದೇಶ ಮತ್ತು ಆ ಎತ್ತುಗಳು ತಮ್ಮ ನಾಯಕನಿಗೆ ಸಲ್ಲಿಸುವ ಗೌರವದ ಪ್ರತೀಕವೂ ಹೌದು. ಮ್ಯಾಸಮಂಡಲಕ್ಕೆ ಈ ಎತ್ತುಗಳ ಬಗ್ಗೆ ತುಂಬಾ ಗೌರವ ಮತ್ತು ಪವಿತ್ರವೆಂಬ ಭಕ್ತಿ ಇದೆ. ಈ ಆಚರಣೆ ಅಕ್ಕರಾಯಮ್ಮನ ಪೆಟ್ಟಿಗೆಯ ಮುಂದೆ ನಡೆದ ನಂತರ ಆ ವೇಳೆಗೆ ಸಂಜೆಯಾಗಿರುತ್ತದೆ. ಅಲ್ಲಿಂದ ಮತ್ತೆ ಆವಳೇನಹಳ್ಳಿಯ ಕಡೆ ವಾದ್ಯ, ಎತ್ತುಗಳ ಸಮೇತ ಹೊರಡುತ್ತಾರೆ. ಮಾರ್ಗಮಧ್ಯದಲ್ಲಿ 'ಯಳವರ್ತಿ' ಎಂಬ ಗ್ರಾಮದಲ್ಲಿನ ಮ್ಯಾಸನಾಯಕರು ಈ ಪೆಟ್ಟಿಗೆ ದೇವರು ಮತ್ತು ಗಾದ್ರಿಪಾಲನಾಯಕನ ಸಂಕೇತವಾದ ಬಿಲ್ಲಿಗೆ ಪೂಜೆ ಮಾಡಿ ಜನರಿಗೆಲ್ಲಾ ಅತಿಥ್ಯ ನೀಡುತ್ತಾರೆ. ಅದನ್ನು ಪಡೆದು ಆವಳೇನಹಳ್ಳಿಗೆ ಬಂದು ತಲುಪುತ್ತಾರೆ. ರಾತ್ರಿಯೆಲ್ಲಾ ದೇವಾಲಯದ ಮುಂದೆ ಉರುಮೆ, ಕಹಳೆಗಳ ವಾದ್ಯ ನುಡಿಸುವಿಕೆ ನಡೆಯುತ್ತದೆ. ಅಲ್ಲಿ ಮತ್ತೆ ಹುರುಳಿ, ಹೆಸರು, ಕಡಲೆ, ಅವರೆಕಾಳುಗಳನ್ನು ಬೇಯಿಸಿ ಜೋಳದ ಅನ್ನ ಮಾಡಿ ಮೀಸಲು ಮೊಸರನ್ನು ಕಡೆದು ಅದರಲ್ಲಿ ಬೆಲ್ಲ, ಬಾಳೆಹಣ್ಣು ಹಾಕಿ ಅಕ್ಕರಾಯಮ್ಮನಿಗೆ ನೈವೇದ್ಯ ಮಾಡುತ್ತಾರೆ. ೧೦೧ ಪೂಜೆ ಸಲ್ಲಿಸುತ್ತಾರೆ ಬೆಳಗಿನ ಜಾವಕ್ಕೆ ಮುಖ್ಯ ಪೂಜೆ ಮುಗಿದು ಸೂರ್ಯೋದಯಕ್ಕೆ ಮುಂಚೆ ದೇವಾಲಯದ ಅಂಗಳಕ್ಕೆ ಎಲ್ಲರೂ ಬಂದು ನಿಂತುಕೊಳ್ಳುತ್ತಾರೆ. ಕರಿಕಂಬಳಿ ಗದ್ದಿಗೆ ಹಾಕಿ ಅದರ ಮೇಲೆ ಭಯಭಕ್ತಿಯಿಂದ ಎಲ್ಲರೂ ಎಲೆ ಅಡಿಕೆ ಕಾಸು (ಗೌರವಪೂರ್ವಕವಾಗಿ ಅರ್ಪಿಸುವ ಕಾಣಿಕೆ) ಇಡುತ್ತಾರೆ. ಆ ವೇಳೆಗೆ ಯರಿಪೋತು ಕರಿಬೊಮ್ಮಂತರಾಜನ ಸಂತತಿಯವರಲ್ಲಿ ಒಬ್ಬರು ಅಲ್ಲಿಗೆ ಬಂದಿರುತ್ತಾರೆ. ಆತ ಮೊಣಕಾಲೂರಿ ಅಕ್ಕರಾಯಮ್ಮನ ಪೆಟ್ಟಿಗೆಗೆ ನಮಸ್ಕರಿಸಿ ಆಂ ಓಂ ಎನ್ನುತ್ತಾ ಕತ್ತಿಯಿಂದ ತನ್ನ ಪಕ್ಕೆಗೆ ತಿವಿದುಕೊಳ್ಳುವಂತೆ ಅಭಿನಯಿಸಿ ನಂತರ

ಕತ್ತಿಯನ್ನು ಕೆಳಗಿಟ್ಟು ಪೆಟ್ಟಿಗೆಗೆ ನಮಸ್ಕರಿಸುತ್ತಾನೆ. ಹಿಂದೆ ಅಕ್ಕರಾಯಮ್ಮ ತನ್ನ ತಮ್ಮಂದಿರು ತಂದೆಯ ವಿರುದ್ಧವಾಗಿ ದಾಳಿ ಮಾಡಲು ಹೋದಾಗ ತಂದೆ ಮೋಡಗಳನ್ನೇ ಅಡ್ಡ ನಿಲ್ಲಿಸಿ ಅವರಿಗೆ ದಾರಿ ಕಾಣದಂತೆ ಮಾಡುತ್ತಾನೆ. ಆಗ ಇಡೀ ಜಗತ್ತಿಗೇ ಕತ್ತಲು ಕವಿಯುತ್ತದೆ. ಅಕ್ಕರಾಯಮ್ಮ ತನ್ನ ಸೋದರಮಾವನಾದ ಕರಿಬೊಮ್ಮಂತರಾಜನನ್ನು ತಮ್ಮಂದಿರ ಸಹಾಯಕ್ಕಾಗಿ ಕಳುಹಿಸಿಕೊಡುತ್ತಾಳೆ. ಆತ ತನ್ನ ದೇಹದ ಪಕ್ಕವನ್ನೇ ಕತ್ತಿಯಿಂದ ತಿವಿದುಕೊಂಡು ನೆಣವನ್ನು ತೆಗೆದು ಅದನ್ನು ಉರಿಸಿ ಬೆಳಕು ಮಾಡಿ ತನ್ನ ಅಳಿಯಂದಿರಿಗೆ ಉಂಟಾಗಿದ್ದ ತಡೆಯನ್ನು ನಿವಾರಿಸುತ್ತಾನೆ. ಜಗತ್ತು ಬೆಳಕು ಪಡೆಯುವಂತೆ ಮಾಡುತ್ತಾನೆ. ಅದರ ಸಂಕೇತವಾಗಿ ಆ ಪ್ರಸಂಗವನ್ನು ಒಂದು ಆಚರಣೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿದ್ದು ಅದನ್ನು ಇಲ್ಲಿ ಆಚರಿಸಲಾಗುತ್ತದೆ. ನಂತರ ಸೂರ್ಯನ ಪಾಡ್ಯ ಎಂದು ಎಲ್ಲರೂ ಸೇರಿರಲು ಅವರ ಮೇಲೆ ಜನಿಗೆ ಹಳ್ಳ (ಚಿನ್ನಹಗರಿನದಿ)ದಿಂದ ತಂದಿದ್ದ ತೀರ್ಥವನ್ನು ದಳವಾಯಿ ಅವರ ಮೇಲೆ ಪ್ರೋಕ್ಷಿಸಲು ಎಲ್ಲರೂ ಸೇರಿ ಸೂರ್ಯನಿಗೆ ನಮಸ್ಕರಿಸುತ್ತಾರೆ ಮತ್ತೆ ಒಟ್ಟಾಗಿಯೇ ರಾಯಮ್ಮನ ಪೆಟ್ಟಿಗೆಗೆ ನಮಸ್ಕರಿಸುತ್ತಾರೆ. ಮಂಗಳವಾರದ ದಿನ ಬೆಳಿಗ್ಗೆ ಮತ್ತೆ ದೇವಾಲಯದ ಮುಂದೆ ದೇವರ ಎತ್ತುಗಳನ್ನು ಓಡಿಸಲಾಗುತ್ತದೆ. ನಂತರ ಸಂಜೆ ದಾಸೋಹ ನಡೆಸಲಾಗುತ್ತದೆ. ಬುಧವಾರ ಬೆಳಿಗ್ಗೆ 'ಮಣೇವು' ಎಂಬ ಸೇವೆಯನ್ನು ಸಲ್ಲಿಸಲಾಗುತ್ತದೆ. ಮ್ಯಾಸಬೇಡರಲ್ಲಿ 'ಭೂತಮಣೇವು' ಎಂಬ ಆಚರಣೆ ಇದೆ. ವೈಷ್ಣವ ಸಂಪ್ರದಾಯ ಸ್ವೀಕಾರ ಮಾಡಿ ಅಹೋಬಲ ನರಸಿಂಹಸ್ವಾಮಿ ಸಮಕ್ಷಮದಲ್ಲಿ ದೀಕ್ಷೆ ಅಂದರೆ ಮುದ್ರೆಯೊತ್ತಿಸಿ ಕೊಂಡು ಬಂದವರನ್ನು ದಾಸಯ್ಯಗಳು ಎಂದು ಕರೆಯಲಾಗುತ್ತದೆ. ಒಂದು ಮೊಳದಷ್ಟು ಅಗಲಕ್ಕೆ ಮಡಿಚಿದ ಕಂಬಳಿ ಅಥವಾ ಬಿಳಿ ಬಟ್ಟೆಯನ್ನು ಉದ್ದವಾಗಿ ಹಾಸಿ ಅದರ ಮೇಲೆ ಮಧ್ಯೆ ಅಂತರವಿಟ್ಟು ಹತ್ತಾರು ಕುಪ್ಪೆಗಳಾಗಿ ಬೆಲ್ಲದ ಮತ್ತು ಬಾಳೆಹಣ್ಣಿನ ಚೂರು ಬೆರೆಸಿ ಮೂರು ಹಿಡಿಯಷ್ಟು ಇಟ್ಟಿರುತ್ತಾರೆ. ದೇವಾಲಯ ಮತ್ತು ಎತ್ತುಗಳ ಸುತ್ತ ತಿರುಗಿದ ಕುಣಿಯುತ್ತಾ, ಡಾಂ, ಹೂಂ ಎನ್ನುತ್ತಾ ಬಂದು ಬೆಲ್ಲ ಬಾಳೆಹಣ್ಣು ಇಟ್ಟಿರುವ ಬಳಿ ಬಂದು ಮಲಗಿ ಬಲ ಪಕ್ಕಕ್ಕೆ ಹೊರಳಿಕೊಂಡು ಆ ಬೆಲ್ಲ ಬಾಳೆಹಣ್ಣಿನ ಕುಪ್ಪೆಗೆ ಬಾಯಿ ಹಾಕಿ ಹೂಂಕರಿಸುತ್ತಲೇ ಪ್ರಾಣಿಗಳಂತೆ ತಿನ್ನುತ್ತಾರೆ. ಮ್ಯಾಸರು ಮಾಡುವ ಎಲ್ಲಾ ಗುಗ್ಗರಿ ಹಬ್ಬದಲ್ಲೂ ಇದು ಸಾಮಾನ್ಯವಾಗಿ ನಡೆಸುವ ಒಂದು ಆಚರಣೆ. ಈ ಸೇವೆ ನಡೆದ ನಂತರ ಒಂಬತ್ತು ಪುಟ್ಟಿಗಳವರಿಗೆ ಪ್ರಸಾದವನ್ನು ಹಂಚುತ್ತಾರೆ. ಖರ್ಚು ವೆಚ್ಚವನ್ನು ಹಂಚಿಕೊಳ್ಳುತ್ತಾರೆ. ಬೋಡೇಪಾಲರ ಪೂಜಾರಿ ಮನೆಯಲ್ಲೂ ಹುರುಳಿಕಾಳನ್ನು ಬೇಯಿಸಿ ಆ ಗುಗ್ಗರಿ ಮತ್ತು ದೇವಸ್ಥಾನಕ್ಕೆ ಬಂದಿದ್ದ ಬಾಳೆಹಣ್ಣುಗಳನ್ನು ಊರಲ್ಲಿ ಪ್ರತಿಮನೆಗೂ ಹಂಚುತ್ತಾರೆ. ಮಹಾಮಂಗಳಾರತಿಯೊಂದಿಗೆ ಬುಧವಾರ ಸಂಜೆಗೆ ಈ ಹಬ್ಬದ ಆಚರಣೆ ಮುಕ್ತಾಯಗೊಳ್ಳುತ್ತದೆ. ಒಟ್ಟು ಮ್ಯಾಸಬೇಡರು ಪ್ರತಿ ವರ್ಷಕ್ಕೊಮ್ಮೆ ಅಕ್ಕರಾಯಮ್ಮನಿಗೆ ಸಲ್ಲಿಸುವ ವಿಶಿಷ್ಟವಾದ ಸೇವೆಯಿದು.

**ಶ್ರಾವಣದ ಹಬ್ಬ :**

ಶ್ರಾವಣಮಾಸದ ಪ್ರತಿ ಸೋಮವಾರವೂ ಅಕ್ಕರಾಯಮ್ಮನ ಪೆಟ್ಟಿಗೆಯನ್ನು ಅಲಂಕರಿಸಿ ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿ ಇಟ್ಟು ಪೂಜೆ ಮಾಡುತ್ತಾರೆ. ವಾದ್ಯಗಳ ಸೇವೆಯನ್ನೂ ಸಲ್ಲಿಸಲಾಗುತ್ತದೆ. ಹಳ್ಳಿಯವರೆಲ್ಲಾ ಹಣ್ಣು-ಕಾಯಿ ತಂದು ನೈವೇದ್ಯ ಮಾಡಿಸಿ ಪೂಜೆ ಮಾಡಿಸಿಕೊಂಡು ಹೋಗುತ್ತಾರೆ.

**ಯುಗಾದಿ :**

ಪ್ರತಿ ಯುಗಾದಿಯ ದಿನ ೯ ಪುಟ್ಟಿಗಳವರು ಕಾಸು ಮತ್ತು ಮೀಸಲು ಹಾಲನ್ನು ತರುತ್ತಾರೆ. ಬಾಳೆಹಣ್ಣು, ತೆಂಗಿನಕಾಯಿ ಮತ್ತು ಬೇವಿನ ಹೂವಿನೊಂದಿಗೆ ಇದೆಲ್ಲವನ್ನೂ ನೈವೇದ್ಯ ಮಾಡಿ ಎಲ್ಲರೂ ಒಟ್ಟಾಗಿ ಅಕ್ಕರಾಯಮ್ಮನಿಗೆ ನಮಸ್ಕರಿಸುತ್ತಾರೆ. ವಾದ್ಯಗಳ ಸೇವೆಯನ್ನು ಗೌರವವನ್ನು ಅರ್ಪಿಸುತ್ತಾರೆ.

**ಅಕ್ಕರಾಯಮ್ಮನ (ದೆಡ್ಡಲು ಮಾರಮ್ಮನ ದೇವರಹಳ್ಳಿ) ಆರಾಧನೆ : ೩**



*ದೆಡ್ಡುಲ ಮಾರಮ್ಮನಾಗಿ ಅವಸ್ಥಾಂತರಗೊಂಡಿರುವ ಅಕ್ಕರಾಯಮ್ಮನ ಪೆಟ್ಟಿಗೆ, ದೇವರಹಳ್ಳಿ*

ವೇದವತಿ ನದಿಯ ಉಪನದಿಯ ಬಯಲಿನಲ್ಲಿ ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಪ್ರಾಂತ್ಯದಲ್ಲಿ ಕಾಟಮಲ್ಲನಾಯಕನ ನೇತೃತ್ವದಲ್ಲಿ ತಮ್ಮ ಪಶುಸಂಪತ್ತಿನೊಂದಿಗೆ ಬಂದು ಬೇಡಗಂಪಳ ನೆಲೆಸಿತ್ತು. ಈ ಬೇಡಗಂಪಳಕ್ಕೂ ಮತ್ತು ನಿಡುಗಲ್ಲು ಪ್ರಾಂತ್ಯದಲ್ಲಿದ್ದ ಹೊಟ್ಟೆಣ್ಣನಾಯಕನಿಗೂ ಘರ್ಷಣೆಯಾಗುತ್ತದೆ. ಮ್ಯಾಸಬೇಡರ ಪಶುಸಂಪತ್ತನ್ನು ಹೊಟ್ಟೆಣ್ಣನಾಯಕ ಸೆರೆ ಹಿಡಿದು ಕೊಂಡೊಯ್ಯಲು ಬಂದಿರುತ್ತಾನೆ. ಆಗ ಈ ಅಕ್ಕರಾಯಮ್ಮನ ನೇತೃತ್ವದಲ್ಲಿ ಕಾಳಗ ನಡೆದು ಮ್ಯಾಸರು ವಿಜಯ ಪಡೆಯುತ್ತಾರೆ. ಸ್ವಲ್ಪ ಕಾಲದಲ್ಲಿಯೇ ಈ ಬೇಡಗಂಪಳದ ಮಧ್ಯೆ ಭಿನ್ನಾಭಿಪ್ರಾಯಗಳು ತಲೆದೋರಿ ಒಡಕುಂಟಾಗುತ್ತದೆ. ತಮ್ಮ ತಮ್ಮ ಪಶುಸಂಪತ್ತನ್ನೂ, ಪೆಟ್ಟಿಗೆ ದೇವರುಗಳನ್ನೂ, ಇನ್ನುಳಿದ ಸ್ವತ್ತುಗಳನ್ನೂ ಹಂಚಿಕೆ ಮಾಡಿಕೊಳ್ಳಬೇಕೆಂದು ಬಯಸುತ್ತಾರೆ. ಆಗ ಅಕ್ಕರಾಯಮ್ಮನ ನಿರ್ದೇಶನದಂತೆಯೇ ಇವೆಲ್ಲವೂ

ಹಂಚಿಕೆಯಾಗುತ್ತದೆ. ಎಲ್ಲರಿಗಿಂತ ಹಿರಿಯವಳು ಅಕ್ಕರಾಯಮ್ಮ ಎಂದು ಆಕೆಯ ಹೆಸರಿನಲ್ಲೂ ಒಂದು ಪೆಟ್ಟಿಗೆಯನ್ನು ಮಾಡಿಸಿ ಆಕೆಗೆ ಸಂಬಂಧಿಸಿದ ಸ್ವತ್ತುಗಳನ್ನು ಅದರಲ್ಲಿಡುತ್ತಾರೆ. ಒಟ್ಟಿಗೆ ದೇವರುಗಳನ್ನೂ ಹಂಚಿಕೆ ಮಾಡಿಕೊಳ್ಳುತ್ತಾರೆ. ಹೀಗೆ ಹಂಚಲ್ಪಟ್ಟ ಪೆಟ್ಟಿಗೆಗಳಲ್ಲಿ ಅಕ್ಕರಾಯಮ್ಮನ ಪೆಟ್ಟಿಗೆ ಎನುಮಲವರ ಗುಂಪಿಗೆ ಸೇರಿದ 'ಮುಡೇನವರ' ಬೆಡಗಿನವರ ಉಸ್ತುವಾರಿಕೆಗೆ ಬರುತ್ತದೆ. ಎನುಮಲವರು ಅಕ್ಕರಾಯಮ್ಮನಿಗೆ ತವರಿನವರಾಗಬೇಕು. ಆಗ ಅದೇ ನಾಯಕನಹಟ್ಟಿ ಪ್ರಾಂತ್ಯದಲ್ಲಿರುವ ದೇವರಹಳ್ಳಿಯಲ್ಲಿ ಈ ಪೆಟ್ಟಿಗೆ ಇದ್ದು ಮುಡೇನವರು ಅದನ್ನು ಪೂಜೆ ಮಾಡುತ್ತಾರೆ. ಇದುವರೆಗೂ ಇದನ್ನು ದಡ್ಡಲು ಮಾರಮ್ಮನ ಪೆಟ್ಟಿಗೆ ಎಂದು ಕರೆಯಲಾಗುತ್ತದೆ. ಈ ಪೆಟ್ಟಿಗೆಯನ್ನು ಮ್ಯಾಸಬೇಡರ ಪದ್ಧತಿಯಂತೆ ಹುಲ್ಲಿನ ಗುಡಿಸಿಲಿನಲ್ಲಿಯೇ ಇಟ್ಟು ಪೂಜಿಸಲಾಗುತ್ತಿದೆ. ಅಕ್ಕರಾಯಮ್ಮ ಉಪಯೋಗಿಸುತ್ತಿದ್ದ ಗಂಡುಗೊಡಲಿ, ತ್ರಿಶೂಲ, ಕತ್ತಿ, ಬಾಕು ಈ ದೇವಸ್ಥಾನದಲ್ಲಿದೆ ಎಂದು ಹೇಳುತ್ತಾರೆ. ಅವುಗಳನ್ನು ರೇಷ್ಮೆ ಬಟ್ಟೆಯಲ್ಲಿ ಕಟ್ಟಿಡಲಾಗಿದ್ದು ವಿಶೇಷವಾದ ಸಂದರ್ಭದಲ್ಲಿ ಮಾತ್ರ ಅದನ್ನು ತೆಗೆದು ಪೂಜಿಸಲಾಗುತ್ತದೆ ಎಂಬುದು ಅಲ್ಲಿಯ ಹಿರಿಯ ಪೂಜಾರಿಗಳ ಹೇಳಿಕೆಯಾಗಿದೆ. ಹಿರೇಹಳ್ಳಿ ಗುಡಿಕಟ್ಟೆಗೆ ಸೇರಿದವರು ರಣಗಂಬಗಳ ಬಳಿ 'ವಾಸೆ' ಕೊಯ್ಯುವ ಸಂಪ್ರದಾಯವಿದೆ. ಮುಖ್ಯವಾಗಿ ಇಲ್ಲಿ ಪಾಲ್ಗೊಳ್ಳುವವರು 'ಎತ್ತುಗಳವರು' ಎಂಬ ಬೆಡಗಿಗೆ ಸೇರಿದವರು. ಆಗ ಮಾತ್ರ ಈ ಆಯುಧಗಳ ಗಂಟನ್ನು ಬಿಚ್ಚಿ ಪೂಜೆ ಮಾಡಲಾಗುತ್ತದೆ. ದಿನಾಂಕ : ೦೬.೦೩.೨೦೦೬ರ ಸೋಮವಾರ ಇತ್ತೀಚಿಗೆ ರಣಗಂಬಗಳ ಬಳಿ 'ವಾಸೆ' ಕೊಯ್ದು ನೇಮವನ್ನು ಮಾಡಿದರು. ಈ ಆಯುಧಗಳ ಗಂಟನ್ನು ಗಂಗೆಪೂಜೆಗೆ ತೆಗೆದುಕೊಂಡು ಹೋಗಲಾಗಿತ್ತು. ದಡ್ಲುಮಾರಮ್ಮನ ಪೂಜಾರಿ ದೇವರೆತ್ತುಗಳ ಕಿಲಾರಿಗಳ ಕೈಗೆ ರೇಷ್ಮೆಯ ಬಟ್ಟೆಯಲ್ಲಿ ಸುತ್ತಿದ್ದ ಆಯುಧಗಳನ್ನು ಕೊಟ್ಟನು. ಗಂಗೆಪೂಜೆ ಮಾಡಿ ತಂದು 'ಅಕ್ಕರಾಯಮ್ಮನ ನೋಮು' ಎಂದು ಆಯುಧಗಳ ಗಂಟು ಮತ್ತು ದೆಡ್ಲುಮಾರಮ್ಮನ ಪೆಟ್ಟಿಗೆ ಮುಂದೆ ವಾಸು ಕೊಯ್ದರು. ಗಂಟನ್ನು ಬಿಚ್ಚಿ ಆಯುಧಗಳನ್ನು ಯಾರೂ ನೋಡಲಿಲ್ಲ. ಕಾರಣ ನೋಡಬಾರದು ಎಂಬ ಪ್ರತೀತಿ.

ಅರ್ಜುನ ಜೋಗಿಗಳು ಎಂಬ ಸಮುದಾಯಕ್ಕೆ ಸೇರಿದವರು ದೇವರಹಳ್ಳಿಯಲ್ಲಿ ಈಗಲೂ ನೆಲೆಸಿದ್ದಾರೆ. ಈಗ ಬೋರೇದೇವರ ದೇವಸ್ಥಾನ ಖುದಾಪುರದಲ್ಲಿದ್ದು ಅದನ್ನು ಬೋರೇದೇವರ ಹಟ್ಟಿಯೆಂದೂ ಕರೆಯಲಾಗುತ್ತಿದೆ. ಮೊಳಕಾಲ್ಮುರಿವಿನಲ್ಲಿರುವ ನುಂಕೇಮಲೆಯಲ್ಲಿ ನಾಥ ಪಂಥಕ್ಕೆ ಸೇರಿದ ಸಿದ್ದೇಶ್ವರನ ದೇವಾಲಯವಿದೆ. ಅಲ್ಲಿಂದ ದೀಕ್ಷೆ ಪಡೆದ ಜೋಗಿಗಳು ಹಿಂದೆ ಈಗಿನ ಬೋರೇದೇವರಿರುವ ಸ್ಥಳದಲ್ಲಿ ಕಾಲಭೈರವವನ್ನು ಸ್ಥಾಪಿಸಿಕೊಂಡು ಪೂಜೆ ಮಾಡುತ್ತಿದ್ದರು. ಇದನ್ನು ಜೋಗಿಯರ ಕಟ್ಟೆ ಎಂದೂ ಕರೆಯಲಾಗುತ್ತಿತ್ತು. ಕ್ರಮೇಣ ಮ್ಯಾಸನಾಯಕರು ಅಲ್ಲಿ ಬಂದು ನೆಲೆಸಿ ಅವರ ಪ್ರಾಬಲ್ಯ ಕಾರಣವಾಗಿ ಅದು 'ಸಿಂತಗುಟ್ಲುಬೋರುವ' ಎಂಬ ಹೆಸರಿನ ಮ್ಯಾಸರ ಆರಾಧನಾ ನೆಲೆಯಾಯಿತು. ಇದಕ್ಕೆ ಕೇವಲ ಒಂದು ಕಿ.ಮೀ. ಅಂತರದಲ್ಲಿರುವ ಊರೇ ದೇವರಹಳ್ಳಿ. ಇದೇ ಆಸುಪಾಸಿನಲ್ಲಿಯೇ ಜೋಗಿಗಳು ಈಗಲೂ ನೆಲೆಸಿದ್ದಾರೆ. ಇಲ್ಲಿಂದ ಜೋಗಿಗಳು ಆಗಾಗ್ಗೆ ಅಕ್ಕಪಕ್ಕದ ಊರುಗಳಿಗೆ ಹೋಗಿ ಮಹಾಭಾರತದ ಕಥನ ಮಾಡುತ್ತಾ ಪ್ರತಿಯಾಗಿ ಹಣಕಾಸು, ಧಾನ್ಯ ಪಡೆದು ಬರುವುದು ವಾಡಿಕೆ. ಹೀಗೆ ಒಬ್ಬ ಜೋಗಿ ಒಮ್ಮೆ ಅಲ್ಲಿಂದ ಆರೇಳು ಕಿ.ಮೀ. ಅಂತರದಲ್ಲಿರುವ ಗೌಡಗೆರೆ ಎಂಬ ಗ್ರಾಮಕ್ಕೆ ಹೋಗಿದ್ದನಂತೆ. ಅಲ್ಲಿ ಒಬ್ಬ

ಮಹಿಳೆಯ ಬಳಿ ಒಂದು ಹೆಣ್ಣುದೇವತೆಯ ಪ್ರತಿಮೆ ಇದ್ದು ಆಕೆಗೆ ತುಂಬಾ ಬಡತನಪಿದ್ದ ಕಾರಣ ಅದನ್ನು ತಾಳಲಾರದೆ ಇದಕ್ಕೆಲ್ಲಾ ಕಾರಣ ಈ ದೇವತೆಯೇ ಎಂದು ಭಿಕ್ಷೆಗೆ ಬಂದ ಜೋಗಪ್ಪನ ಜೋಳಿಗೆಗೆ ಹಾಕಿ ಕಳುಹಿಸಿ ಬಿಡುತ್ತಾಳೆ. ಆತ ಅದನ್ನು ತಂದು ದೇವರಹಳ್ಳಿಯಲ್ಲಿ ತನ್ನ ಬಳಿ ಇಟ್ಟುಕೊಂಡು ಪೂಜೆ ಮಾಡುತ್ತಿರುತ್ತಾನೆ. ಅಂದಿನಿಂದ ದೇವರಹಳ್ಳಿಯ ಅದೃಷ್ಟ ಖುಲಾಯಿಸಿ ಒಳ್ಳೆಯ ಮಳೆ-ಬೆಳೆಯಾಗಿ ಹಳ್ಳಿ ಸಮೃದ್ಧಿ, ನೆಮ್ಮದಿಯನ್ನು ಪಡೆಯುತ್ತದೆ. ಅತ್ತ ಗೌಡಗೆರೆ ಭೀಕರವಾದ ಬಡತನದಿಂದ ತತ್ತರಿಸುತ್ತದೆ. ಇದಕ್ಕೆ ಕಾರಣ ತಮ್ಮೂರಿನಿಂದ ದೇವತೆಯ ಪ್ರತಿಮೆಯನ್ನು ದೇವರಹಳ್ಳಿಯ ಜೋಗಪ್ಪನಿಗೆ ಕೊಟ್ಟದ್ದೇ ಕಾರಣ ಎಂದು ತೀರ್ಮಾನಿಸಿ ತಮ್ಮೂರಿನ ಹುಲುಸು ಅದರೊಂದಿಗೇ ಹೋಯಿತು. ಅದನ್ನು ಮರಳಿ ತರಬೇಕು ಎಂದು ತೀರ್ಮಾನಿಸಿ ದೇವರಹಳ್ಳಿಗೆ ಬಂದು ಕೇಳುತ್ತಾರೆ. ಜೋಗಿಗಳು ಇದಕ್ಕಾಗಿ ಜಗಳ ಬೇಡ. ಒಬ್ಬ ಚಿಕ್ಕ ಹುಡುಗನ ತಲೆಯ ಮೇಲೆ ಇದನ್ನು ಇಡೋಣ. ಆಗ ಆತ ಪ್ರತಿಮೆಯೊಂದಿಗೆ ಗೌಡಗೆರೆಯ ಕಡೆ ತಿರುಗಿದರೆ ನೀವೇ ತೆಗೆದುಕೊಂಡು ಹೋಗಿ. ಆತನ ಈ ಕಡೆಗೇ ತಿರುಗಿದರೆ ಇಲ್ಲಿಯೇ ಇರಲಿ, ಇದು ಆಕೆಯ ಇಚ್ಛೆ ಎಂದು ಹೇಳುತ್ತಾರೆ. ಆಗ ಪ್ರತಿಮೆ ಹೊತ್ತ ಬಾಲಕ ದೇವರಹಳ್ಳಿಯ ಕಡೆಗೇ ಮುಖ ಮಾಡಿ ನಿಲ್ಲುತ್ತಾನೆ. ಗೌಡಗೆರೆಯವರು ಬೇರೆ ದಾರಿ ಕಾಣದೆ ಬಂದ ದಾರಿಗೆ ಸುಂಕವಿಲ್ಲ ಎಂದು ಹಿಂದಿಗುರುತ್ತಾರೆ. ಹೀಗೆ ಜೋಗಿಗಳ ಬಳಿಯೇ ಉಳಿದ ಪ್ರತಿಮೆ ಅವರಿಂದಲೇ ಪೂಜಿಸಲ್ಪಡುತ್ತಿತ್ತು. ಅವರು ಊರಾಡಲು ಹೋಗುತ್ತಿದ್ದ ಕಾರಣ. ಮ್ಯಾಸಬೇಡರ ಕೈಗೆ ಕೊಟ್ಟು ಹೋಗುತ್ತಿದ್ದುದಾಗಿಯೂ, ಕ್ರಮೇಣ ಅದನ್ನೇ ಅವರು ದಡ್ಡಲು ಮಾರಮ್ಮ ಎಂದು ತಮ್ಮದನ್ನಾಗಿ ಮಾಡಿಕೊಂಡರೆಂದೂ ಅವರು ಇಂದಿಗೂ ಹೇಳುತ್ತಿದ್ದಾರೆ. ಇದರ ಸತ್ಯಾಸತ್ಯತೆಯನ್ನು ಪರೀಕ್ಷಿಸಿದರೆ ಬಹುಶಃ ಹೀಗೆ ಮ್ಯಾಸಬೇಡರ ಕೈಗೆ ಪ್ರತಿಮೆ ಸಿಕ್ಕಿದರೂ ಕೂಡ ಅವರು ಅಕ್ಕರಾಯಮ್ಮನನ್ನು ಪೆಟ್ಟಿಗೆಯನ್ನು ಮಾಡಿಸಿ ಆಕೆಯ ಅಮೂಲ್ಯವಾದ ವಸ್ತುಗಳನ್ನು ಅಂದರೆ ಮುತ್ತಿನ ಸೆರಗು, ಮುತ್ತಿನ ಕಾಲುಪೆಂಡೆಯ ರತ್ನದ ಮೂಗುತಿಯೊಂದಿಗೆ ಸಾಲಿಗ್ರಾಮವನ್ನು ಅದರಲ್ಲಿಸಿ ಪೂಜಿಸುತ್ತಾ ಬರುತ್ತಿರುವಾಗೆ ಜೋಗಿಗಳ ಬಳಿಯಲ್ಲಿದ್ದ ಪ್ರತಿಮೆಯೋ ಅಥವಾ ಬರೀ ಮುಖಪದ್ಮದಂತಹ ವಸ್ತುವನ್ನು ಇದರೊಂದಿಗೇ ಸೇರಿಸಿ ಸಮೀಕರಿಸಿಕೊಂಡಿರಬಹುದು ಎನಿಸುತ್ತದೆ. ಒಟ್ಟಾರೆ ಈ ಜೋಗಿಗಳ ಸಮುದಾಯದವರೂ ಸಹ ತುಂಬಾ ಭಯಭಕ್ತಿಯಿಂದ ಈಕೆಯನ್ನು ತಮ್ಮ ಮನೆದೇವತೆ ಎಂದು ಪೂಜಿಸಿಕೊಂಡು ಬರುತ್ತಿದ್ದಾರೆ. ಪ್ರಬಲವಾದ ಸಮುದಾಯವೊಂದು ತನಗಿಂತ ಅತಂತ್ರ ಸ್ಥಿತಿಯಲ್ಲಿರುವ ಸಮುದಾಯದ ಕೆಲವು ವಿಶೇಷತೆಗಳನ್ನು ತನ್ನಲ್ಲಿ ಸಮೀಕರಿಸಿಕೊಂಡು ತನ್ನ ಪ್ರಭುತ್ವವನ್ನು ಅಲ್ಲಿ ಸ್ಥಾಪಿಸಿಕೊಳ್ಳುವುದು ಸಾಮಾನ್ಯ ಸಂಗತಿಯಾಗಿದ್ದು ಇಲ್ಲಿಯೂ ಇದೇ ನಡವಳಿಕೆಯನ್ನು ಕಾಣಬಹುದಾಗಿದೆ.

**ಗುಗ್ಗರಿ ಹಬ್ಬ :**

ಶಿವರಾತ್ರಿ ಸಂದರ್ಭದಲ್ಲಿ ಒಂದು ಮಂಗಳವಾರ ಈ ಹಬ್ಬವನ್ನು ಆಚರಿಸಲಾಗುತ್ತದೆ. ಆ ದಿನದ ಸಂಜೆಯ ವೇಳೆಗೆ ಮ್ಯಾಸಬೇಡರು ಮುಖ್ಯವಾಗಿ ಮುಡೇಲವರು ಮತ್ತು ಗಟ್ಟಿ ಮುತ್ತಿನಾಯಕನ ಬೆಡಗಿನವರು ಹುರುಳಿ, ಅಕ್ಕಿ, ಕಾಸು, ಮೀಸಲು ಹಾಲಿನೊಂದಿಗೆ ಬಂದು ಸೇರುತ್ತಾರೆ. ಈಗ ಊರವರೂ ಜಾತಿ ಬೇಧವಿಲ್ಲದೆ ಹುರುಳಿ ಮತ್ತು ಅಕ್ಕಿಯನ್ನು ದೇವಸ್ಥಾನಕ್ಕೆ ತಂದು ಕೊಡುತ್ತಾರೆ. ಪೆಟ್ಟಿಗೆಗೆ ನಮಸ್ಕರಿಸಿ ನಂತರ ಗುಗ್ಗರಿ ಬೇಯಿಸಲು ತೊಡಗುತ್ತಾರೆ. ಬೆಳಗಿನ ಜಾವದ ವೇಳೆಗೆ ಗುಗ್ಗರಿ ಮತ್ತು ಅನ್ನ

ಸಿದ್ಧವಾಗುತ್ತದೆ. ಆ ವೇಳೆಗೆ ಪೆಟ್ಟಿಗೆಗೆ ಕೆಂಪು ಹೊಸ ಬಟ್ಟೆಯನ್ನು ಸುತ್ತಿ ಬೆಳ್ಳಿಯ ಡಾಬನ್ನು ಇಟ್ಟು, ಗೆಜ್ಜೆ, ಬೆಳ್ಳಿಯ ಛತ್ರಿಕೆ, ಮುಖಪದ್ಮ, ಕರಡಿಗೆ, ಕಣ್ಣು, ಮೂಗುತಿ ಇಟ್ಟು ಅಲಂಕರಿಸುತ್ತಾರೆ. ಹರಕೆ ಮಾಡಿಕೊಂಡ ಭಕ್ತರು ಸಾಕಷ್ಟು ಬೆಳ್ಳಿಯ ವಸ್ತುಗಳನ್ನು ಒಪ್ಪಿಸಿರುತ್ತಾರೆ. ಇವೆಲ್ಲವುಗಳನ್ನು ಇಟ್ಟು ಅಲಂಕರಿಸಿದ ಪೆಟ್ಟಿಗೆ ಒಟ್ಟು ಬೆಳ್ಳಿಯ ಮಯವಾಗಿರುತ್ತದೆ. ಹೂವು, ಹೊಂಬಾಳೆಯಿಂದ ಅಲಂಕರಿಸಿ ಹುರುಳಿ ಗುಗ್ಗರಿ, ಅನ್ನ, ಮೀಸಲು ಮೊಸರು, ತೆಂಗಿನಕಾಯಿ, ಬಾಳೆಹಣ್ಣು ಇಟ್ಟು ಪೂಜೆ ಮಾಡುತ್ತಾರೆ. ಸಾಕಷ್ಟು ಮಂದಿ ಸುತ್ತಮುತ್ತಲ ಹಳ್ಳಿಯ ಜನ, ಅದೇ ಊರಿನ ಜನರೂ ಈ ಸಂದರ್ಭದಲ್ಲಿ ನೆರೆದಿರುತ್ತಾರೆ. ಗುಡಿಯ ಹೊರಗೆ ಒಂದು ಕಂಬಳಿ ಗದ್ದಿಗೆ ಹಾಸಿ ಭಕ್ತರು ಕಾಸನ್ನು ಇಟ್ಟು ನಮಸ್ಕರಿಸಿ ಸೂರ್ಯನಿಗೆ ನಮಸ್ಕರಿಸಿ ಪೆಟ್ಟಿಗೆಗೆ ಅಂದರೆ ಅಕ್ಕರಾಯಮ್ಮನಿಗೆ ನಮಸ್ಕರಿಸುತ್ತಾರೆ. ನಂತರ ಎಲ್ಲರಿಗೂ ಗುಗ್ಗರಿ, ಪ್ರಸಾದದ ವಿನಿಯೋಗ ಮಾಡಲಾಗುತ್ತದೆ.

**ಜಾತ್ರೆ :**

ದೇವರಹಳ್ಳಿಯ ದೆಡ್ಡಲು ಮಾರಮ್ಮನಿಗೆ ಅಲ್ಲಿ ಆಚರಿಸುವ ವಿಶೇಷವಾದ ಆಚರಣೆಯಿದು. ಯುಗಾದಿ ಹಬ್ಬದ ದಿನ ಮಂಗಳವಾರ ಬಂದರೆ ಅದೇ ದಿನ ಹಬ್ಬ, ಇಲ್ಲದಿದ್ದರೆ ಯುಗಾದಿಯ ನಂತರ ಬರುವ ಮೊದಲ ಮಂಗಳವಾರದ ದಿನ ಜಾತ್ರೆ ನಡೆಸಲಾಗುತ್ತದೆ. ಒಟ್ಟು ಆ ಊರಿನ ಜನತೆಗೆ ಅಂದೇ ಯುಗಾದಿ ಹಬ್ಬ. ಅದುವರೆಗೂ ಅವರು ಬೇವು-ಬೆಲ್ಲ ತಿನ್ನುವುದಿಲ್ಲ. ಜಾತ್ರೆಗೆ ಒಂದು ವಾರ ಮೊದಲು ದೇವಸ್ಥಾನದ ಬಳಿ ಎಲ್ಲರೂ ಕಲೆತು ಮಾತನಾಡುತ್ತಾರೆ. ಮ್ಯಾಸರಷ್ಟೇ ಅಲ್ಲದೆ ಹಳ್ಳಿಯ ಲಿಂಗಾಯತ ಜಾತಿಯವರಾದ ಗೊಂಚಿಗಾರರು, ಗೊಲ್ಲರ ಸಮುದಾಯದ ಗೌಡರು ಎಲ್ಲರೂ ಇಲ್ಲಿ ನೆರೆದಿರುತ್ತಾರೆ. ಮುಂದಿನ ಮಂಗಳವಾರ ಜಾತ್ರೆ ಎಂದು ಮಾದಿಗ ಜಾತಿಗೆ ಸೇರಿದ ವ್ಯಕ್ತಿ ಸಾರುತ್ತಾ ಬರುತ್ತಾನೆ. ಅಂದಿನಿಂದ ಊರಿನಲ್ಲಿ ಹೊಸಬಟ್ಟೆ ಉಡುವಂತಿಲ್ಲ. ತಲೆಗೆ ಸ್ನಾನ ಮಾಡುವಂತಿಲ್ಲ. ಕರಿದ ತಿಂಡಿಯನ್ನು ಮಾಡುವಂತಿಲ್ಲ. ಪೊರಕೆಯಿಂದ ಕಸಗುಡಿಸುವಂತಿಲ್ಲ. ಬದಲಾಗಿ ಬಟ್ಟೆಯಿಂದಲೇ ಗುಡಿಸಬೇಕು. ಈ ನಿಯಮಗಳನ್ನು ಈಗಲೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಮರು ಮಂಗಳವಾರದ ವೇಳೆಗೆ ಊರಲ್ಲಿ ಪ್ರತಿಮನೆಗೂ ಸುಣ್ಣ ಬಣ್ಣ ಬಳಿದು, ದೇವಾಲಯವನ್ನೂ ಶುಚಿಗೊಳಿಸಿ ಊರಿಗೆ ಊರೇ ಜಾತ್ರೆಗೆ ಅಣಿಯಾಗಿರುತ್ತದೆ. ಮಾರಮ್ಮನ ಗುಡಿಯ ಬಳಿ ಹಳ್ಳಿಯವರು, ಸುತ್ತಮುತ್ತಲ ಹಳ್ಳಿಯ ಜನರು, ಬಹುಪಾಲು ಮ್ಯಾಸನಾಯಕರು ಬಂದು ಸೇರುತ್ತಾರೆ.

ಚಿಗಳಿ, ತಂಬಿಟ್ಟು, ಹಣ್ಣು, ಕಾಯಿ, ಹೂವು, ಎಲೆ, ಅಡಿಕೆಯನ್ನು ಒಂದು ಬುಟ್ಟಿಗೆ ತುಂಬಿಕೊಂಡು ಮಾರಮ್ಮನ ಪೆಟ್ಟಿಗೆಯನ್ನು ಪೂಜಾರಿ ತಲೆಯ ಮೇಲೆ ಹೊತ್ತಿರಲು ಹೆಂಗಳೆಯರು ಕಳಶ, ಆರತಿ ಹಿಡಿದಿರಲು ಈ ವಿಜೃಂಭಣೆಯ ಮಧ್ಯೆ ಉರುಮೆ, ತಮ್ಮಟೆ, ಕಹಳೆ, ಮುಂತಾದ ವಾದ್ಯಗಳ ಧ್ವನಿಯೊಂದಿಗೆ ಹೊಳೆಗೆ ಗಂಗಾಪೂಜೆಗೆ ಬಂದು ಸೇರುತ್ತಾರೆ. ಅಲ್ಲಿ ಪೆಟ್ಟಿಗೆಯಲ್ಲಿರುವ ಮಾರಮ್ಮ ಅರ್ಥಾತ್ ರಾಯಮ್ಮನಿಗೆ ಸಂಬಂಧಿಸಿದ ವಸ್ತುಗಳನ್ನು ಸಾಲಿಗ್ರಾಮಗಳನ್ನೂ ತೊಳೆದು ಅದರಲ್ಲಿಯೇ ಇಡುತ್ತಾರೆ. ಇದನ್ನು ಪೂಜಾರಿ ಮಾತ್ರ ಮಾಡುತ್ತಾನೆ. ಬೇರೆ ಯಾರೂ ಇದನ್ನು ನೋಡುವಂತಿಲ್ಲ. ನಂತರ ಗಂಗೆ ಪೂಜೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಗೊಲ್ಲಗೌಡರು ಹೆಗಲ ಮೇಲೆ ಕಂಬಳಿ ಹಾಕಿಕೊಂಡು ಒಂದು

ಕುರಿಮರಿಯನ್ನು ಹಿಡಿದು ತಂದಿರುತ್ತಾರೆ. 'ಧೂಳು ಮರಿ' ಎಂದು ಇಲ್ಲಿ ಅದನ್ನು ಕಡಿಯುತ್ತಾರೆ. ನಂತರ ಪೆಟ್ಟಿಗೆಯನ್ನು ಅಲಂಕರಿಸಿಕೊಂಡು ಹೊಸಬಟ್ಟೆ, ಹೂವು, ಆಭರಣಗಳಿಂದ ಕಂಗೊಳಿಸುತ್ತಿರಲು ಪೂಜಾರಿ ಹೊತ್ತಿರಲು ಮೆರವಣಿಗೆಯಲ್ಲಿ ವೈಭವದಿಂದ ಊರಿಗೆ ಮರಳುತ್ತಾರೆ. ಊರಿನಲ್ಲೆಲ್ಲಾ ಆ ರಾತ್ರಿ ಮೆರವಣಿಗೆ ಮಾಡುತ್ತಾರೆ. ಮಧ್ಯರಾತ್ರಿ ಒಂದು ಗಂಟೆಯ ವೇಳೆಗೆ ಅಮ್ಮನನ್ನು ಗುಡಿ ತುಂಬಿಸುತ್ತಾರೆ. ನಂತರ ಹುತ್ತಕ್ಕೆ ಹೋಗಿ ಮಣ್ಣನ್ನು ತಂದು ಮಾರಮ್ಮನ ಪ್ರತಿಮೆಯನ್ನು ಮಾಡಿ ದೆಡ್ಡಲು ಮಾರಮ್ಮನ ಗುಡಿಯ ಮುಂಭಾಗದಲ್ಲಿ ಸ್ವಲ್ಪ ಅಂತರದಲ್ಲಿ ಒಂದು ಹಸಿರು ಸೊಪ್ಪಿನ ಗುಡಿಸಲನ್ನು ಹಾಕಿ ಅದರಲ್ಲಿ ಇಡುತ್ತಾರೆ. ಹೂವು, ಕುಂಕಮ, ಅರಿಷಿಣ ಹಾಕಿ ಪೂಜೆ ಮಾಡುತ್ತಾರೆ. ಲಿಂಗಾಯಿತರಾದ ಗೊಂಚಿಗಾರರು (ಊರ ಜಮೀನ್ದಾರರು) ಮನೆಯಿಂದ ಅನ್ನದ ಕರಬಾನ (ಮಣ್ಣಿನ ಸೋರೆ)ವನ್ನು ಹೊತ್ತು ತರುತ್ತಾರೆ. ಸೊಪ್ಪಿನ ಗುಡಿಸಿಲಿನಲ್ಲಿರುವ ಮಾರಮ್ಮನ ಮೂರ್ತಿಯ ಮುಂದೆ ಸರಗದ ಕೋಣವನ್ನು ಕಡಿದು ಗೊಂಚಿಗಾರರು ತಂದಿರುವ ಅನ್ನಕ್ಕೆ ರಕ್ತ ಮತ್ತು ಕರಸನ್ನು ಬೆರೆಸುತ್ತಾರೆ. ಅಲ್ಲಿಯೇ ಉಲುಸಿನ ಕುಣಿ ಎಂದು ಒಂದು ತಗ್ಗು ತೆಗೆದಿರುತ್ತಾರೆ. ಆ ತಗ್ಗಿಗೆ ಈ ಅನ್ನವನ್ನು ಸ್ವಲ್ಪ ಭಾಗ ಹಾಕುತ್ತಾರೆ. ಆ ತಗ್ಗನ್ನು ಮುಚ್ಚುತ್ತಾರೆ. ನಂತರ ಆ ಸರಗದ ಕರಬಾನವನ್ನು ಗೊಂಚಿಗಾರರೇ ಹೊತ್ತುಕೊಳ್ಳುತ್ತಾರೆ. ಇವರು ಸೋಮವಾರ ರಾತ್ರಿ ಉಪವಾಸ ವ್ರತ ಹಿಡಿದವರು ಬುಧವಾರ ಅಮ್ಮನನ್ನು ಕಳುಹಿಸುವವರೆಗೂ ಊಟ ಮಾಡುವುದಿಲ್ಲ. ಅಷ್ಟು ನಿಷ್ಠೆಯಿಂದ ಆತ ಸರಗದ ಸೋರೆ ಹೊರುತ್ತಾನೆ. ಊರ ಸುತ್ತ ಇದನ್ನು ಹೊತ್ತು ಬರುತ್ತಿರುವಾಗ ಮಣೆಗಾರರು ಆ ಸೋರೆಯಿಂದ ಸರಗದ ಅನ್ನವನ್ನು ತೆಗೆದುಕೊಂಡು ಚೆಲ್ಲುತ್ತಾ ಬರುತ್ತಾರೆ. ಆ ರಾತ್ರಿ ಇದು ಮುಖ್ಯವಾದ ಕಾರ್ಯಕ್ರಮ. ಬೆಳಗಿನ ಜಾವದ ವೇಳೆಗೆ ಇದು ಮುಗಿಯುತ್ತದೆ. ಮರುದಿನ ಅಂದರೆ ಬುಧವಾರ ಬೆಳಿಗ್ಗೆ ಪೂಜಾರಿಯೇ ಬೇವು ಬೆಲ್ಲ ಕಲೆಸಿ ಮಾರಮ್ಮನಿಗೆ ನೈವೇದ್ಯ ಮಾಡುತ್ತಾರೆ. ಊರಿನಲ್ಲಿನ ಪ್ರತಿಮನೆಯವರೂ ಅವರವರ ಆಹಾರ ಪದ್ಧತಿಗೆ ಅನುಗುಣವಾಗಿ ನೈವೇದ್ಯ ತರುತ್ತಾರೆ. ನಾಯಕರೆಲ್ಲಾ ಕುರಿಯನ್ನು ಕಡಿದು ಬೇವಿನಸೊಪ್ಪನ್ನು ಹಿಡಿದು ಗುಡಿಯ ಸುತ್ತ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಹರಕೆ ತೀರಿಸುತ್ತಾರೆ. ಇವರನ್ನು ಬಿಟ್ಟರೆ ಊರಿನ ಮತ್ತೊಂದು ಪ್ರಮುಖ ಗುಂಪು ಲಿಂಗಾಯತರದು. ಅವರೆಲ್ಲಾ ಪಾಯಸ, ಹೋಳಿಗೆ, ಬೇವು, ಬೆಲ್ಲ ತಂದು ಹಣ್ಣುಕಾಯಿಯೊಂದಿಗೆ ನೈವೇದ್ಯ ಮಾಡಿಸಿ ಬೇವಿನ ಸೀರೆ ಎಂದು ಸಾಂಕೇತಿಕವಾಗಿ ಕೈಯಲ್ಲಿ ಬೇವಿನಸೊಪ್ಪನ್ನು ಹಿಡಿದು ದೇವಸ್ಥಾನವನ್ನು ಪ್ರದಕ್ಷಿಣೆ ಮಾಡಿ ಭಯಭಕ್ತಿಯಿಂದ ನಮಸ್ಕರಿಸುತ್ತಾರೆ. ಸುತ್ತಮುತ್ತಲಹಳ್ಳಿ ಹಟ್ಟಿಗಳಿಂದ ಸಾಕಷ್ಟು ಮಂದಿ ಬಂದು ಹೀಗೆಯೇ ಹರಕೆ ತೀರುತ್ತಾರೆ. ಲಂಬಾಣಿ ಸಮುದಾಯವರು ಸುತ್ತಮುತ್ತಲ ಹಟ್ಟಿಗಳಲ್ಲಿದ್ದು ಅವರೂ ಕುರಿ ಕೋಳಿಯ ಬಲಿ ಬೇವಿನ ಸೀರೆಯ ಬಾಯಿಬೀಗದ ಸೇವೆ ಸಮರ್ಪಿಸುತ್ತಾರೆ. ಮುಖ್ಯವಾಗಿ ಇಲ್ಲಿ ಅರ್ಜುನ ಜೋಗಿಗಳ ಸಮುದಾಯವರೂ ಮತ್ತು ಲಂಬಾಣಿಗಳೂ ಇಲ್ಲಿ ಬಂದು ತಮ್ಮ ಹರಕೆಗಳನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಾರೆ. ಸುಮಾರು ಮಧ್ಯಾಹ್ನ ಒಂದು ಗಂಟೆಯ ವೇಳೆಗೆ ಈ ಸೇವೆಗಳೆಲ್ಲಾ ಸಲ್ಲುತ್ತವೆ. ಜಾತ್ರೆಗೆ ಬಂದ ಗಾಡಿಗೆ ಹೂಡಿದ ಎತ್ತುಗಳಲ್ಲದೆ ಆ ಊರಿನ ಮತ್ತು ಸುತ್ತಮುತ್ತಲ ಹಟ್ಟಿಗಳ ದನ, ಆಕರು, ಕುರಿ, ಮೇಕೆಗಳನ್ನೂ ಹೊಡೆದು ಕೊಂಡು ಬಂದು ಇಲ್ಲಿ ಬೇವಿನಸೀರೆ ಎಂದು ಸಾಂಕೇತಿಕವಾಗಿ ಬೇವಿನಸೊಪ್ಪನ್ನು ಸಿಕ್ಕಿಸಿ ಮಾರಮ್ಮನ ಗುಡಿಯ ಸುತ್ತ ಪ್ರದಕ್ಷಿಣೆ ಮಾಡಿಸುತ್ತಾರೆ. ತಮ್ಮನ್ನೂ, ತಮ್ಮ ದನ, ಕರು, ಕುರಿಗಳನ್ನೂ ಕಾಯುವ ದೇವತೆ ಈಕೆ ಎಂಬುದೇ ಇವರ ನಂಬಿಕೆ. ಮಧ್ಯಾಹ್ನ ಸುಮಾರು ಒಂದು ಗಂಟೆಯ ವೇಳೆಗೆ ಅಮ್ಮನನ್ನು ಸಾಗಹಾಕುವುದು ಎಂಬ ಕಾರ್ಯಕ್ರಮ ಮಾಡುತ್ತಾರೆ. ಊರ ಪ್ರಮುಖರು ಮತ್ತು ಪೂಜಾರಿ, ಗಟ್ಟಿ ಮುತ್ತಿನಾಯಕ, ಇವರೆಲ್ಲ ಇಲ್ಲಿ ಇರಲೇಬೇಕು.

ಸೊಪ್ಪಿನ ಗುಡಿಸಿಲಿನಲ್ಲಿ ಇಟ್ಟಿದ್ದ ಮಣ್ಣಿನ ಮಾರಮ್ಮನ ಮೂರ್ತಿಯನ್ನು ತೆಗೆದುಕೊಂಡು ಹೋಗಿ ತಮ್ಮ ಹಳ್ಳಿಯ ಗಡಿಭಾಗದಲ್ಲಿನ ಒಂದು ಮರದ ಕೆಳಗೆ ಇಟ್ಟು ಬರುತ್ತಾರೆ. ಇಲ್ಲಿಗೆ ಜಾತ್ರೆಯ ವಿಧಿಗಳು ಮುಗಿಯುತ್ತವೆ.

**ಬೇರೆಹಳ್ಳಿ, ಹಟ್ಟಿಗಳವರು ಕರೆದೊಯ್ಯುವುದು :**

ಈಕೆ ಅಂದರೆ ಅಕ್ಕರಾಯಮ್ಮ ಎಪ್ಪತ್ತೇಳು ಹಟ್ಟಿಗಳಿಗೆ ಅಕ್ಕನಾಗಿದ್ದಳು. ೭೭ ಗೊಡಗು ಎಂದರೆ ಛತ್ರಿ ಚಾಮರಗಳಿಗೆ ಅಕ್ಕ ಎಂದೆಲ್ಲಾ ಈಕೆಯನ್ನು ಹೊಗಳುತ್ತಾರೆ. ಹೀಗೆ ಸಮಸ್ತ ಮ್ಯಾಸಮಂಡಲಕ್ಕೆ ಶ್ರೇಷ್ಟ ಶಕ್ತಿಯೆನಿಸಿ ಹಿರಿತನದ ಸ್ಥಾನವನ್ನು ಪಡೆದಿರುವವಳು ಈಕೆಯಾದ್ದರಿಂದ ಎಲ್ಲರೂ ಈಕೆಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ಕೆಲವು ಹಳ್ಳಿ, ಹಟ್ಟಿಗಳವರು ದೇವರಹಳ್ಳಿಗೆ ಬಂದು ಈಕೆಯನ್ನು ತಮ್ಮಲ್ಲಿಗೆ ಕರೆದೊಯ್ಯುತ್ತಾರೆ. ಊರ ಅಥವಾ ಹಟ್ಟಿಯ ಯಜಮಾನರು ಬಂದು ಮೊದಲು ಆಹ್ವಾನವಿತ್ತು ಇಂತಹ ದಿನ ತಮ್ಮಲ್ಲಿಗೆ ಬರಬೇಕು ಎಂದು ತಿಳಿಸಿ ಹೋಗುತ್ತಾರೆ. ಒಮ್ಮೊಮ್ಮೆ ಇಡೀ ಪೆಟ್ಟಿಗೆಯನ್ನು ತೆಗೆದುಕೊಂಡು ಹೋಗುವುದು ಉಂಟು. ಕೆಲವೊಮ್ಮೆ ಕೇವಲ ಭಂಡಾರ ಭರಣಿಯನ್ನು ಮಾತ್ರ ಸಾಂಕೇತಿಕವಾಗಿ ಕೊಂಡೊಯ್ಯುತ್ತಾರೆ. ವಿಜೃಂಭಣೆಯಿಂದ ಹೀಗೆ ಹೊರಟ ಅಕ್ಕರಾಯಮ್ಮ ಹಳ್ಳಿಗಳ ಮೇಲೆ ಹಾದು ಹೋಗುವಾಗ ದಾರಿಯುದ್ದಕ್ಕೂ ಜನ ಪೂಜೆ ಮಾಡಿ, ಗೌರವ ಆದರಗಳನ್ನು ತೋರಿಸುತ್ತಾರೆ. ಆಹ್ವಾನವಿತ್ತ ಊರಿಗೆ ಹೋದಾಗ ಅಲ್ಲಿ ಆಕೆಯನ್ನು ಕೂರಿಸಲು ಒಂದು ಪ್ರಶಸ್ತವಾದ ಸ್ಥಳವನ್ನು ಗುರುತಿಸಿರುತ್ತಾರೆ. ಅಲ್ಲಿ ಸ್ಥಿತಳಾದಾಗ ಮತ್ತೆ ದೇವರಹಳ್ಳಿಯಲ್ಲಿ ಜಾತ್ರೆಯ ದಿನ ನಡೆಸಿದ ಆಚರಣೆಗಳೇನಿವೆ – ಆ ಎಲ್ಲಾ ವಿಧಿ ವಿಧಾನಗಳನ್ನು ಇಲ್ಲಿ ನೆರವೇರಿಸಲಾಗುತ್ತದೆ. ಕೋಣನ ಬಲಿ, ಸರಗ ಚೆಲ್ಲುವುದು, ಅಮ್ಮನನ್ನು ಸಾಗ ಹಾಕುವುದು, ಬಾಯಿಬೀಗ, ಬೇವಿನಸೀರೆ ಸೇವೆ ಇವೆಲ್ಲಾ ಅಲ್ಲಿ ಮುಖ್ಯವಾಗಿ ನಡೆಯುವ ಆಚರಣೆಗಳು. ಹೀಗೆ ಈಕೆ ದೇವರಹಳ್ಳಿಗೆ ಮಾತ್ರ ಮಾರಮ್ಮನಲ್ಲ. ಸಮಸ್ತ ಮ್ಯಾಸಮಂಡಲಗಳ ಹಟ್ಟಿಗಳಿಗೆಲ್ಲಾ ಅಧಿದೇವತೆಯಾಗಿ ಪೂಜಿಸಲ್ಪಡುತ್ತಿದ್ದಾಳೆ.

**ಅಕ್ಕರಾಯಮ್ಮನ ಆರಾಧನೆ**

**ಹುಣಿಸೇಕಟ್ಟೆ – ಚಿತ್ರದುರ್ಗ ಜಿಲ್ಲೆ : ೪**



*ಅಲಿಕೋಬಳದೇವರು ಮತ್ತು ಅಕ್ಕರಾಯಮ್ಮ ದೇವತೆ, ಹುಣಸೇಕಟ್ಟೆ, ಚಿತ್ರದುರ್ಗಜಿಲ್ಲೆ*

ಈ ಗ್ರಾಮದಲ್ಲಿ ತುಂಬಾ ಪ್ರಾಮುಖ್ಯತೆ ಪಡೆದು ಪೂಜೆಗೊಳ್ಳುತ್ತಿರುವ ದೇವರೆಂದರೆ ಅಹೋಬಲ ನರಸಿಂಹಸ್ವಾಮಿ. ಇಲ್ಲಿ ಇದನ್ನು ಅಲಿಕೋಬಳ ದೇವರು ಎಂದು ಕರೆಯಲಾಗುತ್ತದೆ. ಹಿಂದೆ ಅಲಿಕಿಸಿರಿ ಎಂಬ ದೊರೆ ನಾಯಕನಹಟ್ಟಿಗೆ ಸಮೀಪದಲ್ಲೇ ಮತ್ತೊಂದು ಭಾಗದ ದೊರೆಯೆನಿಸಿಕೊಂಡಿದ್ದ. ಕಾರಣಾಂತರಗಳಿಂದ ಈತನ ಪತ್ನಿ ಈತನನ್ನೇ ಬಿಟ್ಟು ಹೋದಾಗ ತುಂಬಾ ಖಿನ್ನತೆಯಿಂದ ಈತ ಬಳಲುತ್ತಿದ್ದಾಗ ಆತನನ್ನು ಸಮಾಧಾನ ಪಡಿಸಲೆಂದು ಹೆಂಡತಿಯ ತಂದೆ ಅಂದರೆ ಈತನ ಮಾವ ತನ್ನ ಬಳಿ ಇದ್ದ ಅಮೂಲ್ಯವಾದ ಅಕ್ಕರಾಯಮ್ಮನ ಮುತ್ತಿನ ಸೆರಗನ್ನೇ ಈತನಿಗೆ ಕೊಟ್ಟ ಎಂದು ಹೇಳಲಾಗುತ್ತದೆ. (ಅವಳೀನ ಹಳ್ಳಿಯಿಂದ ಇಲ್ಲಿಗೆ ಬಂತು ಎಂಬುದು ಅವಳೀನಹಳ್ಳಿಯವರ ಹೇಳಿಕೆ.) ಮೂಲತಃ ಅಹೋಬಲ ನರಸಿಂಹಸ್ವಾಮಿಯ ಭಕ್ತನಾಗಿದ್ದನೀತ. ಹಾಗಾಗಿ ಅದೇ ಪೆಟ್ಟಿಗೆಯಲ್ಲೇ ಆ ಮುತ್ತಿನ ಸೆರಗನ್ನಿಟ್ಟು ರಕ್ಷಣೆ ಮಾಡುತ್ತಾ ಪೂಜಿಸಿಕೊಂಡು ಬಂದ ಎಂದು ಹೇಳಲಾಗುತ್ತದೆ. ಈ ಅಲಿಕಿಸಿರಿ ಅಥವಾ ಅಕಿಲಿಮಾನ್ಯ ಎಂದು ಕರೆಯಲ್ಪಡುವ ದೊರೆಯ ಸಂತತಿಯವರೇ ಇಂದು ಹುಣಿಸೇಕಟ್ಟೆಯಲ್ಲಿ ಅಲಿಕೋಬಳ ದೇವರ ಪೆಟ್ಟಿಗೆಯನ್ನಿಟ್ಟುಕೊಂಡು ಪೂಜೆ ಮಾಡುತ್ತಿದ್ದಾರೆ. ಮೊದಲು ಗುಡಿಸಲೇ ದೇವಾಲಯವಾಗಿದ್ದದ್ದು ಈಗ ಕಲ್ಲಿನ ಕಟ್ಟಡದಲ್ಲಿ ಈ ಪೆಟ್ಟಿಗೆಯನ್ನಿಟ್ಟು ಪೂಜೆ ಮಾಡಲಾಗುತ್ತಿದೆ. ಈ ಪೆಟ್ಟಿಗೆಯ ಪಕ್ಕದಲ್ಲಿ ಬಲಭಾಗದಲ್ಲಿ ಒಂದು ಬಿದಿರಿನ ಪುಟ್ಟಿಯನ್ನಿಟ್ಟು ಅದಕ್ಕೆ ಅಕ್ಕರಾಯಮ್ಮ ಎಂದು ಹೆಸರಿಸಿ ಆಕೆಗೆ ಸಂಬಂಧಿಸಿದ ವಸ್ತುಗಳನ್ನು ಅದರಲ್ಲಿರಿಸಿ ಅದಕ್ಕೆ ಇತ್ತೀಚೆಗೆ ಒಂದು ಮುಖಪದ್ಮ ಮಾಡಿಸಿ ಇಟ್ಟು ಪೂಜೆಮಾಡುತ್ತಾ ಬರುತ್ತಿದ್ದಾರೆ. ಇಲ್ಲಿ ಅಲಿಕೋಬಳ ದೇವರಿಗೇ ಪ್ರಾಶಸ್ತ್ಯ ಹೆಚ್ಚು, ಆದರೆ ಕೆಲವು ವಿಧಿ ಆಚರಣೆಗಳು ರಾಯಮ್ಮನಿಗೆ ಸಂಬಂಧಿಸಿದವುಗಳಾಗಿರುವುದು ಇಲ್ಲಿ ವಿಶೇಷ. ಇಲ್ಲಿಯ ಪೂಜಾಕಾರ್ಯಗಳಲ್ಲಿ ಪ್ರಮುಖವಾಗಿ ಪಾಲ್ಗೊಳ್ಳುವ ಬೆಡಗಿನವರೆಂದರೆ. ೧.ಅಲಿಕಿನವರು, ೨.ಗೋನಾಳರು, ೩. ಮ್ಯಾಕಲವರು, ೪. ಪೂಜಾರಿಗಳು (ಗಡಗುದಾಸರಿ), ೫. ಎತ್ತಿನವನು. ಇಲ್ಲಿ ಪ್ರಮುಖವಾಗಿ ನಡೆಯುವ ಹಬ್ಬಗಳು ಮೂರು ಗುಗ್ಗರಿ ಹಬ್ಬ, ಶ್ರಾವಣಮಾಸದ ಪೂಜೆ, ದೀಪಾವಳಿ ಹಬ್ಬ.

**ಗುಗ್ಗರಿ ಹಬ್ಬ :**

ಮ್ಯಾಸಮಂಡಲದಾದ್ಯಂತ ಆಚರಿಸಲ್ಪಡುತ್ತಿರುವ ಪ್ರಮುಖ ಹಬ್ಬವೆಂದರೆ, ಗುಗ್ಗರಿ ಹಬ್ಬ. ಇಲ್ಲಿ ಮಾಘ ಮಾಸದ ಮೂರನೇ ಶನಿವಾರ ಸಂಜೆಗೆ ೫ ಬೆಡಗಿನವರು ಮೀಸಲು ಹಾಲು, ಹುರುಳಿಕಾಳು, ಅಕ್ಕಿ, ಕಾಣಿಕೆಯಾಗಿ ಅರ್ಪಿಸುವ ಕಾಸು – ಇವೆಲ್ಲವನ್ನೂ ದೇವಸ್ಥಾನಕ್ಕೆ ತಂದು ಕೊಡುತ್ತಾರೆ. ಇಲ್ಲಿ ಅಲಿಕಿಸಿರಿ ಮಾನ್ಯನ ಪರಂಪರೆಯವರು ಪೂಜಿಸುವ ಅಹೋಬಲ ನರಸಿಂಹಸ್ವಾಮಿಯಾದ್ದರಿಂದ ಇದಕ್ಕೆ ಅಲಿಕೋಬಳ ದೇವರು ಎಂದು ಕರೆಯಲಾಗುತ್ತದೆ. ಮ್ಯಾಸಮಂಡಲದಾದ್ಯಂತ ಅಹೋಬಿಲಿಸ ನರಸಿಂಹಸ್ವಾಮಿಯ ಆರಾಧನೆ ಇದೆ. ಮೂಲತಃ ಶೈವಾರಾಧಕರಾಗಿದ್ದಾಗ್ಯೂ ಶ್ರೀಶೈಲ ಪ್ರಾಂತ್ಯದಲ್ಲಿದ್ದು ಸನಿಹದ ಅಹೋಬಲ ನರಸಿಂಹಸ್ವಾಮಿಯ ಪ್ರಭಾವಕೊಳ್ಳಗಾಗಿ ಮ್ಯಾಸರೂ ಭಕ್ತರಾಗಿದ್ದು ಇಂದಿಗೂ ಈ ಪದ್ಧತಿ ಮುಂದುವರೆದಿದೆ. ಪೂಜಾಸಾಮಾಗ್ರಿಗಳನ್ನು ತರುವಾಗ ಓಬಳದೇವರಿಗೇ ಬೇರೆ, ರಾಯಮ್ಮನಿಗೆ ಬೇರೆ ಎಂದು ಪ್ರತ್ಯೇಕವಾಗಿ ತರುವುದಿಲ್ಲ. ಇವರಿಬ್ಬರಿಗೂ ಇಲ್ಲಿ ಒಟ್ಟಿಗೇ ಪೂಜೆ ಸಲ್ಲುತ್ತದೆ. ಆ ರಾತ್ರಿ ಕಾಳನ್ನು ಬೇಯಿಸಿ ಗುಗ್ಗರಿ ಮಾಡುತ್ತಾರೆ. ಭಾನುವಾರ ಬೆಳಿಗ್ಗೆ ಸೂರ್ಯೋದಯಕ್ಕೆ ಮೊದಲು ಗುಗ್ಗರಿ, ಬಾಳೆಹಣ್ಣು, ಮೀಸಲು

ಮೊಸರು, ಅನ್ನದ ನೈವೇದ್ಯ ನಡೆಯುತ್ತದೆ. ಇತ್ತೀಚಿಗೆ ಬದಲಾವಣೆಯಾಗಿ ಅನ್ನದ ನೈವೇದ್ಯ ನಡೆಯುತ್ತದೆ. ಮೂಲತಃ ಇದ್ದದ್ದು ಬೇರೆಯೇ. ಬೆಲ್ಲವನ್ನು ನೀರಿನಲ್ಲಿ ಕುದಿಸಿ ಪಾಕ ಬಂದ ಮೇಲೆ ಭಕ್ತರು ತಂದಿರುವ ಮೀಸಲು ಹಾಲನ್ನು ಕಾಯಿಸಿ ಮೊಸರು ಮಾಡಿ ಕಡೆದ ಮಜ್ಜಿಗೆಯಲ್ಲಿ ರಾಗಿ ಹಿಟ್ಟನ್ನು ಹಾಕಿ ಕಲಿಸಿ ಅದನ್ನು ಬೆಲ್ಲದ ಪಾಕಕ್ಕೆ ಹಾಕಿ ಚೆನ್ನಾಗಿ ಸೌಟಿನಿಂದ ತಿರುವುತ್ತಾ ಕುದಿಸುತ್ತಿದ್ದರಂತೆ. ಇದು ಬೆಂದು ಹದವಾದಾಗ ಅಲ್ಲಿಗೆ ನೈವೇದ್ಯ ಸಿದ್ಧವಾದಂತೆ. ಇದನ್ನು ಅಹೋಬಲ ನರಸಿಂಹಸ್ವಾಮಿಗೆ ನೈವೇದ್ಯ ಮಾಡುತ್ತಿದ್ದುದಾಗಿ, ಸಮುದಾಯದ ಹಿರಿಯ ವಕ್ತೃಗಳು ವಿವರವನ್ನು ಕೊಡುತ್ತಾರೆ. 'ಅಕ್ಕರಾಯಮ್ಮನ ಕಲಶ' ಎಂದು ಗುಡಿಯಲ್ಲೇ ಇರುತ್ತದೆ. ಬೆಳಗಿನ ಜಾವದ ವೇಳೆಗೆ ಪೂಜೆ ನೈವೇದ್ಯದ ಸೇವೆ ಆಗುತ್ತದೆ. ನಂತರ ಸೂರ್ಯೋದಯ ಆಗುವ ಸಂದರ್ಭದಲ್ಲಿ 'ಅಕ್ಕರಾಯಮ್ಮನ ಕಳಶ' ಎಂದು ವಿಶೇಷವಾದ ಆಚರಣೆಯೊಂದು ನಡೆಯುತ್ತದೆ. ಪೂಜಾರಿಯವರ ಹೆಂಡತಿ ಹೊಸ ಸೀರೆ ಉಟ್ಟು ನಿಯಮ ನಿಷ್ಠೆಯಿಂದ ಈ ಕಳಶವನ್ನು ದೇವಾಲಯದ ಮುಂಭಾಗಕ್ಕೆ ತರುತ್ತಾಳೆ. ಆ ವೇಳೆಗೆ ಊರ ಮಹಿಳೆಯರೂ ಆರತಿ ಕಳಶವನ್ನು ತಂದಿರುತ್ತಾರೆ. ತನ್ನ ತಮ್ಮಂದಿರು ತಂದೆಯ ಬಳಿ ಹೋದಾಗ ಜಯಶೀಲರಾಗಿ ಸುಖವಾಗಿ ಬಂದು ಹಟ್ಟಿಯನ್ನು ತಲುಪಿದರೆ ಅಕ್ಕರಾಯಮ್ಮ ಸೂರ್ಯನಿಗೆ ಆರತಿ ಬೆಳಗುವುದಾಗಿ ಹರಕೆ ಹೊತ್ತಿದ್ದಳಂತೆ. ಅದೇ ರೀತಿ ಆಕೆ ಸೋದರರು ಮರಳಿ ಬಂದ ನಂತರ ಸೂರ್ಯನಿಗೆ ಆರತಿ ಬೆಳಗುತ್ತಾಳೆ.

"ನೂರೊಂದಾರತಿ ಕೈಲಿಡಿದು ರಾಯಮ್ಮ ಮೂಡಿಬರುವ, ಸೂರಿದಗೆ ಬೆಳಿಗ್ಯಾಳೆ. ಬೆಳಿಗ್ಯಾಳೆ ಎನ್ನಯ ಗುರುವಿನ , ನವರಾಜರ ಪಾದ ನೆನೆದೇನು"

"ಎಪ್ಪತ್ತಾರುತಿ ಕೈಲಿಡಿದು ರಯಮ್ಮ ಹುಟ್ಟಿಬರುವ ಸೂರಿದಗೆ, ಬೆಳಿಗ್ಯಾಳೆ – ಬೆಳಿಗ್ಯಾಳೆ – ಬೆಳಿಗ್ಯಾಳೆ ಎನ್ನಯ ಗುರುವಿನ , ನವರಾಜರ ಪಾದ ನೆನೆದೇನು."

ಹೀಗೆ ರಾಯಮ್ಮನ ಕಥನದಲ್ಲಿಯೇ ಈ ವಿವರ ಬರುತ್ತದೆ. ಅಕ್ಕರಾಯಮ್ಮ ಅಂದು ಮಾಡಿಕೊಂಡಿದ್ದ ಹರಕೆಯನ್ನು ಆಕೆ ಅಂದೇ ತೀರಿಸಿದಾಗ್ಯೂ ಆಕೆಯ ಪಂರಪರೆಯವರು ಇಂದಿಗೂ ಈ ನಿಯಮವನ್ನು ಪಾಲಿಸಿಕೊಂಡು ಬರುತ್ತಿರುವುದೇ ವಿಶೇಷ. ಪೂಜಾರಿ ಹೆಂಡತಿಯ ಕೈಯಿಂದ ಕಳಶಾರತಿಯನ್ನು ಪಡೆದು ಸೂರ್ಯನಿಗೆದುರಾಗಿ ಒಂಬತ್ತು ಬಾರಿ ಒಂದೊಂದು ಹೆಜ್ಜೆಗೆ ಒಂದೊಂದು ಸಾರಿಯಂತೆ ಬೆಳಗುತ್ತಾನೆ. ನಂತರ ಉಳಿದ ಹಲವು ಮಂದಿ ಪುರುಷರೂ ಮಹಿಳೆಯರು ತಂದಿಟ್ಟಿದ್ದ ಕಳಶಾರತಿಯನ್ನು ಸೂರ್ಯನಿಗೆ ಒಂಬತ್ತು ಸಾರಿ ಬೆಳಗುತ್ತಾರೆ. ಇದಾದ ಮೇಲೆ ಯರಿಪೋತು ಬರುತ್ತಾನೆ. ದೇವಾಲಯದ ಮುಂದೆ ಕರಿ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ತನ್ನ ಕತ್ತಿಯನ್ನಿಟ್ಟು ನರಸಿಂಹಸ್ವಾಮಿ ಮತ್ತು ರಾಯಮ್ಮನಿಗೆ ವಂದಿಸಿ, ನಂತರ ಸೂರ್ಯನಿಗೆ ನಮಸ್ಕರಿಸಿ ಆಂ – ಓಂ ಎನ್ನುತ್ತಾ ತನ್ನ ಪಕ್ಕೆಗೆ ಕತ್ತಿಯಿಂದ ತಿವಿದುಕೊಡಂತೆ ನಟಿಸುತ್ತಾ ಕತ್ತಿಯನ್ನು ಕೆಳಗಿಡುತ್ತಾನೆ. ನಮಸ್ಕರಿಸುತ್ತಾನೆ ಇದೂ ಕೂಡ ಅಂದು ಸೋದರಳಿಯಂದಿರಿಗೆ ಸಹಾಯ ಮಾಡಲು ಹೋದಾಗ ಕತ್ತಲೆ ಕವಿದಿದ್ದ ಸಂದರ್ಭದಲ್ಲಿ ತನ್ನ ದೇಹಕ್ಕೆ ಚುಚ್ಚಿಕೊಂಡು ನೆಣತೆಗೆದು ಉರಿಸಿ ಬೆಳಕು ಮಾಡಿ ದಾರಿ ತೋರಿಸಿದ ಪ್ರಸಂಗದ ಪುನರಾಭಿನಯ ಒಂದು ಸ್ಮರಣೆ ಸಾಂಕೇತಿಕವಾಗಿ ಇಂದು ನಡೆಯುತ್ತದೆ. ನಂತರ ಎಲ್ಲರೂ ಕೂಡಿ ಕಾಸು ಇಟ್ಟು ಸೂರ್ಯನಿಗೆ ಮತ್ತು ನರಸಿಂಹಸ್ವಾಮಿ– ರಾಯಮ್ಮನಿಗೆ ನಮಸ್ಕರಿಸುತ್ತಾರೆ. ನಂತರ ಪ್ರಸಾದ ವಿನಿಯೋಗ.

ಬೆಡಗಿನ ಹೆಸರಿಟ್ಟು ಕರೆದು ಗುಗ್ಗರಿ ಮತ್ತು ಮಜ್ಜಿಗೆ ಹುಳಿ ಪ್ರಸಾದವನ್ನು ವಿನಿಯೋಗಿಸಲಾಗುತ್ತದೆ. ಎರಿಪೋತು ಕರಿಬೊಮ್ಮನಿಗೆ ಮೊದಲು ನಂತರ ಬುಲ್ಲಡಲು ಎಂಬ ಬೆಡಗಿನವರಿಗೆ, ನಂತರ ಕಾಮಗೇತಿಗಳವರಿಗೆ, ನಂತರ ಗೋಣೂರು ಕಟ್ಟಿಮನೆಯವರಿಗೆ, ನಂತರ ನನ್ನಿವಾಳದ ಕಟ್ಟೀಮನೆಯವರಿಗೆ ಪ್ರಸಾದ ನೀಡಲಾಗುತ್ತದೆ. ದಾಸಯ್ಯಗಳಿಗೆ ಬೊಗಸೆಗೆ ಮಜ್ಜಿಗೆಹುಳಿಯನ್ನು ಹಾಕಲಾಗುತ್ತದೆ. ನಂತರ ದಾಸೋಹ ಮಾಡುತ್ತಾರೆ. ಪ್ರಸಾದಕ್ಕಾಗಿ ಮಾಡಿದ ಸಿಹಿ ಮತ್ತು ಅನ್ನ, ಹುರುಳಿಸಾರು ನಂತರ ಅನ್ನ ಮಜ್ಜಿಗೆಯನ್ನು ಬಡಿಸಲಾಗುತ್ತದೆ. ನಂತರ ಎತ್ತುಗಳನ್ನು (ದೇವರ ಎತ್ತುಗಳು) ಹರಿಸಲಾಗುತ್ತದೆ. ನಂತರ ಮಣೇವು ಸೇವೆಯನ್ನು ನಡೆಸಲಾಗುತ್ತದೆ. ನಂತರ ದೇವಾಲಯದಿಂದ ಭಂಡಾರದ (ಅರಿಷಿಣ) ತಟ್ಟೆಗಳನ್ನು ಹೊರಗೆ ತರಲಾಗುತ್ತದೆ. ಈ ತಟ್ಟೆಗಳನ್ನು ಕೈಲಿಡಿದು ಐದಾರು ಮಂದಿ ಪುರುಷರು ಲಯಬದ್ಧವಾಗಿ ಕುಣಿಯುತ್ತಾ ಈ ಭಂಡಾರವನ್ನು ಸುತ್ತಲೂ ಚೆಲ್ಲುತ್ತಾರೆ. ದೇವಸ್ಥಾನದ ಸುತ್ತಾ ಕುಣಿಯುತ್ತಾ ಚೆಲ್ಲಿ, ನಂತರ ಎತ್ತುಗಳ ಸುತ್ತ ಕುಣಿಯುತ್ತಾ ಚೆಲ್ಲಿ ನಂತರ ಒಂದೆಡೆ ಒಟ್ಟಾಗಿ ಕುಣಿಯುತ್ತಾ ಚೆಲ್ಲುತ್ತಾರೆ. ಇದನ್ನು ಬಸವಂತಗಳಾಗುವುದು ಎಂದು ಕರೆಯಲಾಗುತ್ತದೆ. ಇಲ್ಲಿಗೆ ಗುಗ್ಗರಿಹಬ್ಬದ ಆಚರಣೆ ಮುಕ್ತಾಯಗೊಳ್ಳುತ್ತದೆ.

**ಶ್ರಾವಣಮಾಸದ ಹಬ್ಬ :**

ಶ್ರಾವಣ ಶುಕ್ರವಾರ ಮೀಸಲು ಹಾಲು ಇಟ್ಟು, ಅಂದರೆ ಆ ದಿನ ಮನೆಯಲ್ಲಿ ಯಾರೂ ಹಾಲನ್ನು ಬಳಸುವಂತಿಲ್ಲ. ಅದನ್ನು ದೇವಸ್ಥಾನಕ್ಕೆ ತಂದು ಕೊಡಲಾಗುತ್ತದೆ. ಅಲ್ಲಿ ಅದನ್ನು ಕಾಯಿಸಿ ಹೆಪ್ಪು ಹಾಕಿ ಮರುದಿನ ಮೀಸಲು ಮೊಸರು ಎಂದು ನೈವೇದ್ಯಕ್ಕೆ ಬಳಸಲಾಗುತ್ತದೆ. ಹಿಂದೆ ಸೂಚಿಸಿದ ಐದೂ ಬೆಡಗಿನವರೂ ಈ ಮೀಸಲನ್ನು ಹಾಕುತ್ತಾರೆ. ಶನಿವಾರದ ದಿನ ದೇವಾಲಯದ ವತಿಯಿಂದ ಹೋಗಿ ಹುತ್ತಕ್ಕೆ ಹಾಲೆರೆದು ಬರುತ್ತಾರೆ. ಮಜ್ಜಿಗೆ ಹುಳಿ ನೈವೇದ್ಯ ನಂತರ ದಾಸೋಹ ಮಾಡುತ್ತಾರೆ. ಓಬಳದೇವರು ಮತ್ತು ರಾಯಮ್ಮನಿಗೆ. ಒಟ್ಟಿಗೇ ಇಲ್ಲಿ ಪೂಜೆ ನಡೆಯುತ್ತದೆ.

**ದೀಪಾವಳಿ :**

ಕಾರ್ತೀಕಮಾಸದ ಅಮಾವಾಸ್ಯೆ ನಂತರದ ಶುಕ್ರವಾರ ಈ ಹಬ್ಬವನ್ನು ಆಚರಿಸಲಾಗುತ್ತದೆ. ಇಲ್ಲಿಯೂ ಅಷ್ಟೆ. ಅಲಿಕೋಬಳ ದೇವರಿಗೆ ಪ್ರಾಧಾನ್ಯತೆ ಹೆಚ್ಚು. ಜೊತೆಯಲ್ಲಿ ರಾಯಮ್ಮನಿಗೆ ಪೂಜೆ ಸಲ್ಲುತ್ತದೆ. ದೀಪಾವಳಿ ಸಂದರ್ಭದಲ್ಲಿ ಮೂರು ಶನಿವಾರ ಭಾನುವಾರಗಳಂದು ಇಲ್ಲಿ ಆರಾಧನೆ ನಡೆಯುತ್ತದೆ. ಯಥಾ ಪ್ರಕಾರ ಶುಕ್ರವಾರವೇ ಹಾಲನ್ನು ಮೀಸಲಾಗಿರಿಸುತ್ತಾರೆ. ಶನಿವಾರ ಅದನ್ನು ಕಡೆದು ಬೆಣ್ಣೆ ತೆಗೆದು ತುಪ್ಪ ಕಾಯಿಸಿ ದೀಪ ಉರಿಸಲು ಬಳಸುತ್ತಾರೆ. ಈ ಮಜ್ಜಿಗೆ ಮೊಸರು ನೈವೇದ್ಯಕ್ಕೆ ಶನಿವಾರ ಬೆಳಿಗ್ಗೆಯೇ ಪೂಜೆ ನಂತರ ದಾಸೋಹ ಮತ್ತು ಪ್ರಸಾದ ವಿನಿಯೋಗ. ೩ನೇ ವಾರ ದೇವರ ಎತ್ತುಗಳು ಬಂದಿರುತ್ತವೆ ಅವುಗಳನ್ನು ಓಡಿಸಲಾಗುತ್ತದೆ. ದೇವಾಲಯದ ಮುಂದೆ ಸ್ವಲ್ಪ ವಿಶಾಲವಾದ ಜಾಗದಲ್ಲಿ ಒಂದೆಡೆಯಿಂದ ಮತ್ತೊಂದೆಡೆಗೆ ಸುಮಾರು ಒಂದು ೨೦೦ ಮೀಟರುಗಳ ಅಂತರದಲ್ಲಿ ಇವುಗಳನ್ನು

ಓಡಿಸಲಾಗುತ್ತದೆ. ಇದು ಎತ್ತುಗಳಿಂದ ತಮ್ಮ ದೇವರಿಗೆ ಸಲ್ಲುವ ಸೇವೆ ಎಂಬುದಾಗಿ ಸಮುದಾಯ ಭಾವಿಸುತ್ತದೆ.

**ದೊಡ್ಡ ಹಬ್ಬ :**

ಇದು ರಾಯಮ್ಮನಿಗೇ ಪ್ರತ್ಯೇಕವಾಗಿ ಸಲ್ಲುವ ಪೂಜೆ. ಊರಿಗೆ ಆಪತ್ತು ಬಂದಾಗ ರೋಗ-ರುಜಿನ, ಬರಗಾಲ ಇಂತಹ ಸಂದರ್ಭಗಳಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಶೂನ್ಯಮಾಸವನ್ನು ಇದಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಪೆದ್ದಕ್ಕ ರಾಯಮ್ಮನ ಸಂಕೇತವಾಗಿ ಪೂಜಿಸುವ ಬುಟ್ಟಿಯನ್ನು ವಿಜೃಂಭಣೆಯಿಂದ ವಾದ್ಯಘೋಷಗಳ ಮಧ್ಯೆ ಊರ ಹೊರಗಡೆ ಇರುವ ಮಾರಮ್ಮನ ಕಟ್ಟೆಯ ಬಳಿಗೆ ಕೊಂಡೊಯ್ದು ಆ ಕಟ್ಟೆಯ ಮೇಲೆ ಇಡಲಾಗುತ್ತದೆ. ಸೋಮವಾರ ರಾತ್ರಿ ಹಬ್ಬ ಎಂದು ಸಾರು ಹಾಕಿ ಮರುದಿನ ರಾತ್ರಿಯೇ ಅಲ್ಲಿಗೆ ಕೊಂಡೊಯ್ದು ಇಡಲಾಗುತ್ತದೆ. ಆ ದಿನ ಬೆಳಗಿನ ಜಾವದಲ್ಲಿ ಕೋಣವನ್ನು ಕಡಿದು ಗಂಡಾದೀಪ ಹಚ್ಚಲಾಗುತ್ತದೆ. ಊರಿಗೆ ಚೆರಗ ಚೆಲ್ಲುತ್ತಾರೆ. ನಂತರ ಬೆಳಿಗ್ಗೆಯಿಂದ ಊರವರೂ ಕುರಿ, ಮೇಕೆಯನ್ನು ಬಲಿ ಕೊಡುತ್ತಾರೆ. ಪೂಜೆ, ಹರಕೆಗಳನ್ನು ಸಲ್ಲಿಸುತ್ತಾರೆ. ಆ ದಿನ ಅಂದರೆ ಬುಧವಾರ ಸಾಯಂಕಾಲ ಮತ್ತೆ ವಿಜೃಂಭಣೆಯಿಂದ ಈಕೆಯನ್ನು ಊರಿಗೆ ತರುತ್ತಾರೆ. ಗುರುವಾರದ ದಿನ ಊರೊಳಗೆಯೇ ಒಂದು ನಿರ್ದಿಷ್ಟ ಜಾಗದಲ್ಲಿ 'ಗಾವು' ಸಿಗಿಯಲಾಗುತ್ತದೆ. ಹೀಗೆ ಆಪತ್ತಿನಿಂದ ಕಾಪಾಡುವ ಮಾರಮ್ಮನೊಂದಿಗೆ ಸಮೀಕರಿಸಿ ರಾಯಮ್ಮನನ್ನು ಪೂಜಿಸಲಾಗುತ್ತಿದೆ.

**ಗಾವು ಸಿಗಿಯುವುದು :**

'ಮ್ಯಾಸನಾಯಕ' ಬುಡಕಟ್ಟಿನಲ್ಲಿ 'ಪೋತಪ್ಪಗಳು' ಎಂಬ ಗುಂಪಿನವರಿದ್ದಾರೆ. ದೇವಿಯ ಜಾತ್ರೆಯಲ್ಲಿ ಗಾವು ಸಿಗಿಯುವ ಆಚರಣೆ ಇರುವ ಕಡೆ ಈ ಗುಂಪಿನ ಐದಾರು ಮಂದಿ ಬಿಳಿಯ ಚಲ್ಲಣ ಹಾಕಿಕೊಂಡು ಅದರ ಮೇಲೆ ಕಾಸೆಯನ್ನು ಕಟ್ಟಿಕೊಂಡು (ಕಾಸಿದಟ್ಟಿ ಎನ್ನುತ್ತಾರೆ) ಭಂಡಾರ, ಕುಂಕಮ ಮೈಮೇಲೆ ಚೆಲ್ಲಿಕೊಂಡು ಹೆಗಲ ಮೇಲೆ ಕಪ್ಪು ಹೋತವನ್ನು ಹೊತ್ತು ಕುಣಿಯುತ್ತಾ ಬರುತ್ತಾರೆ. ಕುಣಿಯುತ್ತಾ ದೇವಿಯ ಮುಂದೆ ಬಂದು ನಿಂತಾಗ ಅವರಲ್ಲೇ ಒಬ್ಬ ಈ ಹೋತದ ಕಿವಿಗೆ ಗಾಳಿ ಊದುತ್ತಾನೆ. ಆಗ ಅದು ಅರೆಮೂರ್ಚಾವಸ್ಥೆಗೆ ಹೋಗುತ್ತದೆ. ಹೆಗಲಮೇಲಿಂದ ಕೆಳಗಿಳಿಸಿ ಅದನ್ನು ನಾಲ್ವರು ಹಿಡಿದು ನಿಂತಾಗ ಒಬ್ಬ ಅದರ ಕೆಳತುಟಿಯನ್ನು ತನ್ನ ಹಲ್ಲಿನಿಂದ ಕಚ್ಚಿ ಕೆಳಮುಖವಾಗಿ ಎಳೆಯುತ್ತಾನೆ. ಹೀಗೆ ಒಂದು ಮೊಳದಷ್ಟು ಕಿತ್ತು ಬಿಡುತ್ತಾನೆ. ಆ ವೇಳೆಗೆ ಆತನ ತುಟಿ, ಬಾಯಿ, ದೇಹವೆಲ್ಲಾ ರಕ್ತಮಯವಾಗುತ್ತದೆ. ನಂತರ ಉಳಿದವರು ಅದನ್ನು ಎಳೆದೊಯ್ಯುತ್ತಾರೆ. ಹೀಗೆ ಹಲ್ಲಿನಿಂದಲೇ ಕಚ್ಚಿ ಕಿತ್ತು ಕೊಲ್ಲುವ ಕ್ರಿಯೆಯನ್ನು ಗಾವು ಸಿಗಿಯುವುದು ಎನ್ನುತ್ತಾರೆ.[೬೬] "ಯಾವುದೇ ಆಯುಧದ ನೆರವಿಲ್ಲದೆ ಪ್ರಾಣಿಯನ್ನು ಕೈಯಲ್ಲಿ ಹಿಡಿದು ಹಲ್ಲಿನಿಂದ ಕಚ್ಚಿ ತಿನ್ನುವ ಕ್ರಿಯೆಯು ಬೇಟೆ ಸಂಸ್ಕೃತಿಯ ಅವಶೇಷವಾಗಿ ಆಚರಣೆಯ ರೂಪದಲ್ಲಿ ಉಳಿದು ಬಂದಿರುವ ಸಾಧ್ಯತೆಗಳಿವೆ. ಬಹುಪಾಲು

---

[೬೬] ಡಾ. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪು.೧೦೦. ಮೂಲಭಾರತಿ ಪ್ರಕಾಶನ. ೧೯೬೭

ಈ ಆಚರಣೆ ನಡೆಸಿಕೊಡುವವರು ನಾಯಕ ಜನಾಂಗದವರೆಂಬುದು ಈ ಮೇಲಿನ ಮಾತಿಗೆ ಸಮರ್ಥನೆಯಾಗುತ್ತದೆ". ಇದು ಮಾನವನ ಆಯುಧಗಳಿಲ್ಲದ ಹಂತದಲ್ಲಿ ತನ್ನ ಕೈಬಾಯಿಗಳನ್ನೇ ಬಳಸಿ ಬೇಟೆ ಆಡುತ್ತಿದ್ದುದರ ಸೂಚನೆ ಎನ್ನಬಹುದು. ಮಾನವನ ಚರಿತ್ರೆಯ ದೃಷ್ಟಿಯಿಂದ ನೋಡಿದಾಗ ಮನುಷ್ಯನೂ ಮೃಗ ಸದೃಶವಾದ ಅವಸ್ಥೆಯಲ್ಲಿದ್ದಾಗಿನ ಸ್ಥಿತಿಯ ಒಂದು ಪುನರಾವರ್ತನೆ ಅಥವಾ ಪುನರಭಿನಯ ಈ ಗಾವು ಸಿಗಿಯುವ ಆಚರಣೆ ಎಂದು ಭಾವಿಸುವುದು ಹೆಚ್ಚು ಉಚಿತ. ಮ್ಯಾಸಬೇಡರು ಮೂಲತಃ ಬೇಟೆಯ ಮೂಲದಿಂದ ಬಂದವರು. ಬೇಡ ಎಂಬ ಪದ ನಿಷ್ಪನ್ನವಾಗುವುದೇ ಈ ಬೇಟೆ, ಬೇಟೆಗಾರ ಎಂಬ ಮೂಲದಿಂದ. ಹಾಗಾಗಿ ಈ ವ್ಯಾಖ್ಯಾನ ಹೆಚ್ಚು ಸಮಂಜಸ ಎನಿಸುತ್ತದೆ. ಆದರೆ ಈ ಸಮುದಾಯದ ತಪ್ಪು ಮಾಡಿದವರಿಗೆ ಬಾಯಿಗೆ ಬೀಗ ಹಾಕಿಸುತ್ತೇನೆ ಎಂದು ದೇವಿ ಎಚ್ಚರಿಕೆ ಕೊಟ್ಟು ಆ ಪ್ರಕಾರ ಬಾಯಿಬೀಗದ ಆಚರಣೆ ಇದೆ. ಹಾಗೆಯೇ ತಪ್ಪು ಮಾಡಿದವರನ್ನು ಸಿಗಿದು ತೋರಣ ಕಟ್ಟುತ್ತೇನೆ ಎಂದಿದ್ದು ಅದರ ನಿಮಿತ್ತ ಹೀಗೆ ಪ್ರಾಣಿಯನ್ನು ಸಿಗಿದು ಅದನ್ನು ಆಚರಣೆಯ ರೂಪದಲ್ಲಿ ಎಚ್ಚರಿಕೆಯ ಒಂದು ವಿಧಾನವನ್ನಾಗಿ ಬಳಸಲಾಗುತ್ತಿದೆ ಎಂದು ಈ ಆಚರಣೆಯನ್ನು ವ್ಯಾಖ್ಯಾನಿಸುತ್ತದೆ.

**ರುದ್ರಮ್ಮನ ಹಳ್ಳಿ – ಚಿತ್ರದುರ್ಗ ಜಿಲ್ಲೆ –೫**

**ಅಕ್ಕರಾಯಮ್ಮನಿಗೆ ಸಂಬಂಧಿಸಿದ ಆಚರಣೆ :**

ಹಿಂದೆ 'ದಿದ್ದಿಲು ಪಲ್ಲಿ' ಎಂದು ಕರೆಯಲ್ಪಡುತ್ತಿದ್ದ ಹಳ್ಳಿ ಈಗ ರುದ್ರಮ್ಮನ ಹಳ್ಳಿ ಎಂದು ಕರೆಯಲ್ಪಡುತ್ತಿದೆ. ಮ್ಯಾಸಬೇಡರು ಮಾತ್ರ ವಾಸಿಸುತ್ತಿರುವ ಪುಟ್ಟಗ್ರಾಮವಿದು. ಚಳ್ಳಕೆರೆ ತಾಲ್ಲೂಕಿನ ಹಿರೇಹಳ್ಳಿ ಗ್ರಾಮ ಪಂಚಾಯಿತಿಗೆ ಹೊಂದಿಕೊಂಡಿರುವ ಮುಜುರೆ ಗ್ರಾಮವಿದು. ಇಲ್ಲಿಯೂ ಅಹೋಬಲ ನರಸಿಂಹಸ್ವಾಮಿ ದೇವಸ್ಥಾನವಿದ್ದು ಅದನ್ನು 'ನಲ್ಲ ಚೆರುವು ಓಬಳದೇವರು' ಎಂದು ಕರೆಯಲಾಗುತ್ತದೆ. ಇಲ್ಲಿ ಅಕ್ಕರಾಯಮ್ಮನಿಗೆ ಸಂಬಂಧಿಸಿದ ದೇವಾಲಯವೇನೂ ಇಲ್ಲ. ಆದರೆ ಆಕೆಗೆ ಸಂಬಂಧಿಸಿದ ಆಚರಣೆಯೊಂದು ಬಹಳ ಭಯಭಕ್ತಿಯಿಂದ ಇಲ್ಲಿ ನಡೆಯುತ್ತದೆ. ಮ್ಯಾಸಮಂಡಲದಲ್ಲಿ ಸಾಮಾನ್ಯವಾಗಿರುವ ಗುಗ್ಗರಿ ಹಬ್ಬವನ್ನು ಮಾಘ ಮಾಸದಲ್ಲಿ ಇಲ್ಲಿಯೂ ಆಚರಿಸಲಾಗುತ್ತದೆ. ಶನಿವಾರ ರಾತ್ರಿ ಈ ಗುಗ್ಗರಿ ಬೇಯಿಸುವಿಕೆ, ಚಿಗಳಿ ತಯಾರಿಸುವಿಕೆ, ಸಜ್ಜೆ ಅಥವಾ ಜೋಳದ ಅನ್ನ ಮಾಡುವುದು ಇದೆಲ್ಲಾ ನಡೆದು ಬೆಳಗಿನ ಜಾವ ಸೂರ್ಯೋದಯಕ್ಕೆ ಮೊದಲು ಇದೆಲ್ಲವನ್ನೂ ಇಟ್ಟು ನೈವೇದ್ಯ ಮಾಡಿ ದೇವರಿಗೆ ಪೂಜೆ ಸಲ್ಲಿಸಲಾಗುತ್ತದೆ. ನಂತರ ಸೂರ್ಯೋದಯದ ಸಂದರ್ಭದಲ್ಲಿ ಒಂದು ಬುಟ್ಟಿಯಲ್ಲಿ ಬೇಯಿಸಿದ ಹುರುಳಿ ಅಂದರೆ ಗುಗ್ಗರಿಯನ್ನು ತುಂಬಿಕೊಂಡು ಜೊತೆಗೆ ಎಲೆ, ಅಡಿಕೆ, ಬಾಳೆಹಣ್ಣು, ಬೆಲ್ಲವನ್ನೂ ಬೇರೆ ಬೇರೆ ಬುಟ್ಟಿಗಳಿಗೆ ತುಂಬಿಕೊಂಡು ತಲೆಯ ಮೇಲೆ ಹೊತ್ತು ಹೊರಡುತ್ತಾರೆ. ನಲಜರುವೋಬಳ ದೇವರ ಬಿರುದಾವಳಿಗಳಾದ ಶ್ರೀರಾಮ ಬಾಣ, ತ್ರಿಶೂಲ (ಇದನ್ನು ತ್ರಿಶೂಲ ಎಂದು ಕರೆದರೂ ಇದರ ಕೊನೆಯಲ್ಲಿ ಮೂರು ಕವಲುಗಳಿಗೆ ಬದಲಾಗಿ, ಎರಡು ಕವಲುಗಳಿವೆ) ಎಡೆಮುರಿ, ಬಲಮುರಿ ಚಿತ್ರಗಳು, ಶಂಖುಗಳು, ಸುಮಾರು ಮೂರು ಅಡಿ ಉದ್ದವಿರುವ ನಾಲ್ಕು ಬೆತ್ತಗಳಿವೆ. ನವಿಲುಗರಿಗಳು, ಚವರಿಗಳು, ಗರುಡಗಂಭ ಇವೆಲ್ಲವುಗಳನ್ನು ಸಂಬಂಧಿಸಿದ ಆಯಾ ಗುಂಪಿನವರು ಹಿಡಿದು ಹೊರಡುತ್ತಾರೆ. ಉರುಮೆ, ತಮ್ಮಟೆ, ಕಹಳೆ ವಾದ್ಯಗಳ ಧ್ವನಿ ಭೋರ್ಗರೆಯುತ್ತಿರುತ್ತದೆ. ಭೇರಿಯನ್ನು ಬೆನ್ನ

ಮೇಲೆ ಒಬ್ಬರು ಹೊತ್ತಿರಲು ಮತ್ತೊಬ್ಬರು ಅದನ್ನು ಲಯಬದ್ಧವಾಗಿ ಬಡಿಯುತ್ತಲಿರುತ್ತಾರೆ. ಇಂತಹ ಎರಡು ಭೇರಿಗಳ ಶಬ್ದ ವಿಶಿಷ್ಟವಾದ ವಾತಾವರಣವನ್ನು ಅಲ್ಲಿ ನಿರ್ಮಾಣ ಮಾಡಿರುತ್ತದೆ. ಇವೆಲ್ಲವುಗಳ ಮಧ್ಯೆ ನಲಜರುವೋಬಳ ದೇವರ ಪೂಜಾರಿ ಮತ್ತು ಕೈಯಲ್ಲಿ ಕಳಶದ ತಟ್ಟೆಯನ್ನಿಡಿದ ಆತನ ಪತ್ನಿ ಛತ್ರಿ ಚಾಮರಗಳ ಮಧ್ಯೆ ಬರುತ್ತಾರೆ. ಊರ ಹೊರಗೆ ಸುಮಾರು ಒಂದು ಫರ್ಲಾಂಗು ದೂರದಲ್ಲಿರುವ ಒಂದು ಕಲ್ಲು ಗುಡ್ಡೆಯ ಬಳಿ ಬಂದು ಸೇರುತ್ತಾರೆ. ಅಲ್ಲಿ ಕರಿಯ ಕಂಬಳಿ ಹಾಸಿ ಇದನ್ನು ಪೂಜೆ ಮಾಡಿ ಅದರ ಮಧ್ಯೆ ಕಳಸ ಇಡುತ್ತಾರೆ. ಕಲಶದ ಸುತ್ತಲೂ ೧೦೧ ಪೂಜೆ ಎಂದು ಎಲೆ, ಅಡಿಕೆ, ಬಾಳೆಹಣ್ಣು, ಗುಗ್ಗರಿ, ಕೊಬರಿ, ಉತ್ತುತ್ತಿ, ಹೊಂಬಾಳೆ, ಹೂವು ಇಡುತ್ತಾರೆ. ಈ ಗದ್ದುಗೆಯ ಮೇಲೆ ಎಡ ಮತ್ತು ಬಲಭಾಗದಲ್ಲಿ ಎಡಮುರಿ, ಬಲಮುರಿ ಬೆತ್ತಗಳು ರಾಮಬಾಣ ಹಾಗೂ ನವಿಲುಗರಿಗಳ ಕಟ್ಟುಗಳನ್ನು ಇಟ್ಟು ಹೂವುಗಳಿಂದ ಅಲಂಕರಿಸುತ್ತಾರೆ. ಗದ್ದುಗೆಯ ಎದುರಿಗೆ ಸ್ವಲ್ಪ ಮುಂದೆ ಗರುಡಗಂಭವನ್ನಿಟ್ಟಿದ್ದು ಅದಕ್ಕೂ ಗುಗ್ಗರಿ ನೈವೇದ್ಯ ಇಟ್ಟು ಪೂಜೆ ಮಾಡುತ್ತಾರೆ. ಈ ಪೂಜೆಯ ನಂತರ ರಾಮಬಾಣ, ನವಿಲುಗರಿ, ಬೆತ್ತ, ತ್ರಿಶೂಲಗಳನ್ನು ಕೆಲವು ನಿಗಧಿತ ಬೆಡಗಿನವರು ಕೈಯಲ್ಲಿ ಹಿಡಿದುಕೊಂಡು ನಿಂತಿರುತ್ತಾರೆ. ಇವುಗಳ ಸುತ್ತಲೂ ದಾಸಯ್ಯಗಳು (ಇವರೂ ನಾಯಕರೇ ಆದರೆ ಓಬಳ ದೇವರ ಸಮಕ್ಷಮದಲ್ಲಿ ಹರಿಸೇವೆಗೆಂದು ಮೀಸಲಾಗಿಸಿಕೊಂಡು ದೀಕ್ಷೆ ಪಡೆದವರು. ಇವರಿಗೆ ಎರಡೂ ಕೈ ತೋಳುಗಳ ಮೇಲೆ ಶಂಖು, ಚಕ್ರದ ಮುದ್ರೆಯನ್ನು ಹಾಕುವ ವಿಧಿಯೊಂದಿಗೆ ದಾಸಯ್ಯಗಳಾಗಿ ಕರೆಸಿಕೊಳ್ಳುತ್ತಾರೆ.) ಬಿಳಿಯ ಚಲ್ಲಣ ಧರಿಸಿ, ತಲೆಗೆ ಪೇಟವನ್ನು ಕಟ್ಟಿಕೊಂಡಿದ್ದು ಕೆಲವರು ಕೈಯಲ್ಲಿ ಬೆತ್ತ ಕೋಲುಗಳನ್ನು ಹಿಡಿದುಕೊಂಡು ಕೆಲವರು ಭಂಡಾರ, ಹೂವು ತುಂಬಿದ ತಟ್ಟೆಗಳನ್ನು ಕೈಯಲ್ಲಿ ಹಿಡಿದು ಉರುಮೆ, ತಮ್ಮಟೆ, ವಾದ್ಯದ ಧ್ವನಿಗೆ ಅನುಗುಣವಾಗಿ ಲಯಬದ್ಧವಾಗಿ ಕುಣಿಯುತ್ತಾರೆ. ಕುಣಿಯುತ್ತಲೇ ಸುತ್ತಲೂ ನಿಂತಿರುವ ಜನರ ಮೇಲೆ ಭಂಡಾರ, ಹೂವನ್ನು ಎಸೆಯುತ್ತಾರೆ. ಮೊದಲು ಸೂರ್ಯನ ಕಡೆಗೆ, ನಂತರ ಅಲ್ಲಿ ನೆರೆದಿರುವ ದೇವರ ಎತ್ತುಗಳ ಕಡೆಗೆ ನಂತರ ಗದ್ದಿಗೆಯ ಕಡೆಗೆ ಎಸೆದು ನಂತರ ಜನರ ಕಡೆ ಎಸೆಯುತ್ತಾರೆ. ಈ ಚೆಲ್ಲಿದ ಹೂವುಗಳನ್ನು ಭಕ್ತಾಧಿಗಳು ಭಯ ಭಕ್ತಿಯಿಂದ ಆರಿಸಿಕೊಳ್ಳುತ್ತಾರೆ. ಈ ವೇಳೆಗೆ ಎತ್ತುಗಳ ಕಿಲಾರಿ ಕರಿಯ ಕಂಬಳಿ ಗದ್ದಿಗೆಯನ್ನು ಸನಿಹದಲ್ಲಿಯೇ ಹಾಸಿಕೊಂಡು ನಿಂತಿರುತ್ತಾನೆ. ಅಲ್ಲಿಗೆ ಎಲ್ಲರೂ ಬಿರುದಾವಳಿಗಳ ಸಹಿತ ಬಂದು ಆ ಕಂಬಳಿ ಗದ್ದಿಗೆಯ ಮೇಲೆ ಗುಗ್ಗರಿ, ಬಾಳೆಹಣ್ಣು, ಬೆಲ್ಲ ಇಡುತ್ತಾರೆ. ನಂತರ ಎಲ್ಲರೂ ಒಟ್ಟಾಗಿ ಸೂರ್ಯನಿಗೆ ಎದುರಾಗಿ ನಿಂತು ನಮಸ್ಕರಿಸುತ್ತಾರೆ. ಇದಾದ ನಂತರ ಕರಿಯ ಕಂಬಳಿ ಗದ್ದುಗೆಯ ಬಳಿ ಪೂಜಾರಿ ಸಮೇತ ಭಕ್ತಾಧಿಗಳು ಬರುತ್ತಾರೆ. ಆಗ ಎಲೆ ಅಡಿಕೆ, ಗುಗ್ಗರಿ, ಬಾಳೆಹಣ್ಣು, ಹೂವುಗಳನ್ನು ಪ್ರಸಾದ ಎಂದು ಎಲ್ಲಾ ಬೆಡಗಿನವರನ್ನೂ ಕೂಗಿ ಕರೆದು ಅವರಿಗೆಲ್ಲಾ ಕೊಡುತ್ತಾರೆ. ಇದಕ್ಕೆ ಮೊದಲು ಯರಮಂಚಿನಾಯಕನ ಪರಂಪರೆಗೆ ಸೇರಿದ ವ್ಯಕ್ತಿಯೊಬ್ಬರಿಗೆ ಹೂವಿನ ಹಾರವನ್ನು ಹಾಕುತ್ತಾರೆ. ನಂತರ ಎಲ್ಲರೂ ದೇವಾಲಯಕ್ಕೆ ಮರಳುತ್ತಾರೆ. ಅಲ್ಲಿ ಮಣೇವು ಇತ್ಯಾದಿ ನಲಜರುವೋಬಳ ದೇವರಿಗೆ ಸಂಬಂಧಿಸಿದ ಪೂಜಾ ವಿಧಿ ವಿಧಾನಗಳು ಮುಂದುವರೆಯುತ್ತವೆ. ಇದುವರೆಗೆ ಮೇಲೆ ವಿವರಿಸಿದ ಆಚರಣೆಯನ್ನು ಇಲ್ಲಿ ಅಕ್ಕರಾಯಮ್ಮ ಕುದುರೆಗಳಿಗೆ ಗುಗ್ಗರಿ ಹಾಕಿದ ನೇಮ ಎಂದು ಕರೆಯಲಾಗುತ್ತದೆ. ಹಿಂದೆ ಅಕ್ಕರಾಯಮ್ಮ ತನ್ನ ಸೋದರರು ತಮ್ಮ ತಂದೆಯ ಬಳಿ ಹೋದಾಗ ಅಕ್ಕರಾಯಮ್ಮ ಕೊಟ್ಟ

ಕುದುರೆಗಳ ಮೇಲೆಯೇ ಹೋಗಿರುತ್ತಾರೆ. ಯಾವುದೇ ತೊಡಕಿಲ್ಲದೆ ಸೋದರರು ತಂದೆಯಿಂದ ಸಂಪತ್ತನ್ನೂ, ಸ್ವತ್ತುಗಳನ್ನೂ ಪಡೆದು ಈ ಮೂಲಕ ಆತ ತಮ್ಮ ತಂದೆ ಎಂಬುದನ್ನು ಒಪ್ಪಿಕೊಳ್ಳುವಂತೆ ಮಾಡಿ ಸಾಮಾಜಿಕ ಸ್ಥಾನಮಾನ ಪಡೆಯಲಿ ಎಂದು ಬಯಸಿ ಅದಕ್ಕಾಗಿ ಸೂರ್ಯನನ್ನು ಕುರಿತು ಧ್ಯಾನಿಸುತ್ತ ನಿಲ್ಲುತ್ತಾಳೆ. ಸೂರ್ಯನಿಗೆ ಆರತಿ ಬೆಳಗುತ್ತೇನೆಂದು ಹರಕೆ ಹೊರುತ್ತಾಳೆ. ಅಹೋಬಲ ನರಸಿಂಹಸ್ವಾಮಿಗೆ ಮಜ್ಜಿಗೆ ಹುಳಿಯ ನೈವೇದ್ಯ ಮಾಡುತ್ತೇನೆ ಮತ್ತು ಗುಡಿಯ ಮುಂದೆ ಬಸವಂತಗಳನ್ನು ಆಡಿಸುತ್ತೇನೆ ಎಂದು ಹರಕೆ ಹೊರುತ್ತಾಳೆ. ಅಲ್ಲದೆ,

"ಹರಕೆ ಹೊತ್ತಾಳೆ ಅಕ್ಕರಾಯಮ್ಮ, ನಲಜರು ಓಬೋಳಯ್ಯನಿಗೆ, ಕುದುರೇಗೆ ಗುಗ್ಗರಿಯ ಹಾಕಿಸುವೆ ॥ ತಮ್ಮಗಳು, ಮರಳಾಲಿ ಸೂರಿದನ ವರದಿಂದ"– ಹೀಗೆ ತನ್ನ ಸೋದರರ ಪ್ರಯಾಣಕ್ಕೆ ಅನುವು ಮಾಡಿಕೊಟ್ಟು ದಣಿದ ಕುದುರೆಗಳನ್ನು ಅವಳು ಮರೆತಿಲ್ಲ. ಆ ಕುದುರೆಗಳೋ ಈ ಅಪ್ರತಿಮ ವೀರರಿಗೆ ತಕ್ಕ ವೇಗದ ಕುದುರೆಗಳೇ.

"ಆಕಾಶಕೆ ತೇಜಿ ನೂಕಿ ಹೋಗಲುವಾಗ, ನೂಲೆ ಪಟ್ಟಣಿ ಹರಿದೇವೆ ॥ ತೆಂಗುಪಟ್ಟಣೆ ಹರಿದಾವೆ, ರಾಯಭಾನಗೋಟಿ ಏರ‍್ಯಾವೆ ತೇಜಿಗಳು , ಬಾಲಮ್ಮ ಬಿದ್ದ ನಡುವಾಕೆ ॥"

ಎಂದೆಲ್ಲಾ ಕಥನದಲ್ಲಿ ವಿವರ ಬರುತ್ತದೆ. ರಾಯಮ್ಮ ಸಾಕಿ ತರಬೇತುಗೊಳಿಸಿದ ಕುದುರೆಗಳಿವು. ಹೀಗೆ ತನ್ನ ಸೋದರರಿಗೆ ಸಹಕರಿಸಿದ ಕುದುರೆಗಳಿಗೆ ಬಂದ ತಕ್ಷಣ ಗುಗ್ಗರಿ ಹಾಕಿಸುತ್ತೇವೆ ಎಂದು ಹರಿಸಿಕೊಳ್ಳುತ್ತಾಳೆ. ಸೋದರರು ಹಿಂದಿರುಗಿ ಬಂದಾಕ್ಷಣ ಅವರಿಗೆ ಆರತಿ ಬೆಳಗಿ, ಸ್ನಾನಕ್ಕೆ ನೀರು ಹದ ಮಾಡಿ ಉಪಚರಿಸಿ, ಜೊತೆಯಲ್ಲಿ ಕುದುರೆಗಳಿಗೆ ಮಾಲೀಷು ಮಾಡಿ ಬಗೆ ಬಗೆಯ ಗುಗ್ಗರಿಯನ್ನು ತಿನ್ನಲು ಹಾಕಿ ಆದರಿಸುತ್ತಾಳೆ. ಅವಳು ಅಂದು ಮಾಡಿದ ಈ ನಿಯಮವನ್ನು ಇಂದೂ ಒಂದು ಆಚರಣಾ ವಿಧಿಯನ್ನಾಗಿ ಸಮುದಾಯ ನಡೆಸಿಕೊಂಡು ಬರುತ್ತಿದೆ. ಇಲ್ಲಿ ಕುದುರೆಗಳು ಬರುವುದಿಲ್ಲ. ಕುದುರೆಗೆ ಗುಗ್ಗರಿಯನ್ನು ತಿನ್ನಿಸುವುದಿಲ್ಲ. ದೇವರಿಗೆ ನೈವೇದ್ಯವನ್ನು ಭಯಭಕ್ತಿಯಿಂದ ಮಾಡಿದಂತೆ ಕುದುರೆಗಳಿಗೆ ಗುಗ್ಗರಿ ಹಾಕುವುದು ಎಂದು ಭಯಭಕ್ತಿಯಿಂದ ನೇಮವನ್ನು ಸಲ್ಲಿಸುತ್ತಾರೆ. ಅಕ್ಕರಾಯಮ್ಮನ ಬಗ್ಗೆ ಸಮುದಾಯಕ್ಕಿರುವ ಅಭಿಮಾನ, ಪ್ರೀತಿ, ಗೌರವಗಳೇ ಆಕೆಯ ಹರಕೆಯನ್ನು ತೀರಿಸುವಲ್ಲಿ ಗಮನ ಸೆಳೆಯುವಂತಹ ಸಂಗತಿಗಳಾಗುತ್ತವೆ.

"ಸೂರಿದನಿಗೆದುರಾಗಿ ನಿಂತಾಳೆ ರಾಯಮ್ಮ, ಕುದುರೇಗೆ ಪೂಜೇಯಸಲಿಸುತಲಿ ॥, ಭಕ್ತರ ನಡುವೀಲಿ ನಿಂತು ರಾಯಮ್ಮನು, ಸೂರಿದಗೆ ಕರವ ಮುಗುದಾಳೆ ॥" ಮಾಡಿದ ಹರಕೆಯನು ಸಲಿಸ್ಯಾಳೆ.

**ಅಕ್ಕರಾಯಮ್ಮನ ಆರಾಧನೆ – ಗಡಿ ಮಾಕುಂಟೆ –೬**

ಈ ಹಳ್ಳಿಯ ಮ್ಯಾಸರಕೇರಿಯನ್ನು ಮ್ಯಾಸರಹಟ್ಟಿ ಎನ್ನುತ್ತಾರೆ. ಈ ಮ್ಯಾಸರ ಹಟ್ಟಿಯಲ್ಲಿಯೇ ಅಕ್ಕರಾಯಮ್ಮನ ದೇವಸ್ಥಾನವಿದೆ. ಪುಟ್ಟಿಯನ್ನು ರಾಯಮ್ಮ ಎಂದು ಪೂಜಿಸಲಾಗುತ್ತದೆ.

**ಭಾರತ ಹುಣ್ಣಿಮೆ :**

ಈ ದಿನ ಇಲ್ಲಿ ಗುಗ್ಗರಿ ಹಬ್ಬವನ್ನು ಆಚರಿಸಲಾಗುತ್ತದೆ. ಮ್ಯಾಸನಾಯಕರ ಕೇರಿಯ ಎಲ್ಲರೂ ಹುರುಳಿ ತಂದು ದೇವಾಲಯಕ್ಕೆ ಕೊಡುತ್ತಾರೆ. ರಾತ್ರಿ ಬೇಯಿಸಿ ಬೆಳಗಿನ ಜಾವ ನೈವೇದ್ಯ ಮಾಡಿ ಬೇಗ್ಗೆ ಹಟ್ಟಿಯ ಎಲ್ಲಾ ಮನೆಗೂ ಪ್ರಸಾದ ಹಂಚಲಾಗುತ್ತದೆ.

ಶ್ರಾವಣ ಮಾಸದಲ್ಲಿ ಗುಡಿಯಿಂದಲೇ ಹಾಲು, ಚಿಗಳಿ, ತಂಬಿಟ್ಟು ತೆಗೆದುಕೊಂಡು ಹೋಗಿ ಶ್ರದ್ಧಾಭಕ್ತಿಗಳಿಂದ ನಾಗರಪೂಜೆ (ಹುತ್ತ) ಮಾಡಿ ಬರುತ್ತಾರೆ.

**ಶೂನ್ಯಮಾಸ :**

ಇದು ಇಲ್ಲಿ ವಿಶೇಷವಾದ ಹಬ್ಬ, ಜಂಗಮರು ಬಂದು ಅಭಿಷೇಕ ಪೂಜೆ ಸಲ್ಲಿಸಿದ ಮೇಲೆ ಗಂಗೆ ಪೂಜೆಗೆ ತೆಗೆದುಕೊಂಡು ಹೋಗುತ್ತಾರೆ. ದಾಸಯ್ಯಗಳು ಮುಂದೆ ಜಾಗಟೆ ಬಾರಿಸುತ್ತಾ ಹೋಗಲು ಈಕೆಯ ಸಂಕೇತವಾದ ಪುಟ್ಟಿಯನ್ನು ಪೂಜಾರಿ ಹೊತ್ತು ಹಿಂದೆ ಹೋಗುತ್ತಾನೆ. ಗಂಗೆ ಪೂಜೆ ಮುಗಿಸಿಕೊಂಡು ಸಂಜೆ ಹಿಂದಿರುಗುತ್ತಾರೆ. ಆ ದಿನ ಬೆಳಗಿನ ಜಾವ ಕುರಿ ಕಡಿದು ಪೂಜೆ ಮಾಡುತ್ತಾರೆ. ಹಟ್ಟಿಯ ಮ್ಯಾಸರೂ ಕೂಡ ಮನೆಗೊಂದೊಂದು ಕುರಿಯಂತೆ ಕಡಿಯುತ್ತಾರೆ.

**ಕಂಪಳ ದೇವರಹಟ್ಟಿಯಲ್ಲಿ :**

ಕಂಪಳದೇವರಹಟ್ಟಿಯಲ್ಲಿ ಪೂಜಿಸಲಾಗುತ್ತದೆ. ವರ್ಷಕ್ಕೊಮ್ಮೆ ಹಟ್ಟಿಯ ಹೊರಗಡೆ ಪುಟ್ಟಿಯನ್ನು ತಂದು ಮಾರಮ್ಮ ಎಂದು ಕುರಿ ಬಲಿಕೊಡುವ ಸಂಪ್ರದಾಯವಿದೆ. ಕಂಪಳರಂಗನ ಸನಿಹದಲ್ಲೇ ಈಕೆ ಇರುವುದರಿಂದ ಇದನ್ನು ಭಾಗ್ಯದ ಲಕ್ಷ್ಮಮ್ಮ ಎಂದೂ ಕರೆಯಲಾಗುತ್ತದೆ.

ಮಾದಯ್ಯನಹಟ್ಟಿ, ಮಲೆಬೋರನಹಟ್ಟಿ, ಮಲ್ಲೂರಹಳ್ಳಿ ಹತ್ತಿರ ಮ್ಯಾಸರಹಟ್ಟಿಗಳಲ್ಲಿರುವ ರಾಯಮ್ಮನ ಆರಾಧನಾ ನೆಲೆಗಳಲ್ಲೂ ಇದೇ ಬಗೆಯ ಆರಾಧನೆಗಳಿವೆ.

ಬುಡಕಟ್ಟು ತನ್ನದೇ ಆದ ವಿಶಿಷ್ಟವಾದ ಬದುಕಿನ ಕ್ರಮವನ್ನು ಹೊಂದಿರುತ್ತದೆ. ಈ ವಿಶಿಷ್ಟತೆ ಅನ್ಯ ಸಮುದಾಯ ಅಥವಾ ಜನಾಂಗಗಳಿಂದ ಇದನ್ನು ಪ್ರತ್ಯೇಕವಾಗಿಸುತ್ತದೆ. ಪ್ರಾಚೀನ ಕಾಲದಿಂದಲೂ ಇದನ್ನು ಉಳಿಸಿಕೊಂಡು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ಬುಡಕಟ್ಟಿನ ಜೀವನ ವಿಧಾನ ಎಂದಾಗ ಅದರಲ್ಲಿ ಅವರ ಆಚಾರ, ವಿಚಾರ ಅಂದರೆ ಅವರು ಯೋಚಿಸುವ ರೀತಿ – ತಕ್ಕಂತೆ ಅವರು ನಡೆದುಕೊಳ್ಳುವ ರೀತಿ ವಿಶಿಷ್ಟವಾದುದಾಗಿರುತ್ತದೆ. ಇದು ಅವರ ಪ್ರತಿಯೊಂದು ಚಟುವಟಿಕೆಗೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಈ ಚಟುವಟಿಕೆಗಳಲ್ಲಿ ಅವರ ದೈವಾರಾಧನೆಯೂ ಒಂದು ಭಾಗವಾಗಿರುತ್ತದೆ. ಕುಲದೇವತಾರಾಧನೆ ಎಂಬುದು ಬುಡಕಟ್ಟಿನ ಒಂದು ವಿಶಿಷ್ಟತೆಯಾಗಿರುತ್ತದೆ. ಈ ಕುಲದೇವತೆ ಆ ಬುಡಕಟ್ಟನ್ನು ಕಟ್ಟಿದ, ಕೊಡುಗೆ ಸಲ್ಲಿಸಿದ ವ್ಯಕ್ತಿಯಾಗಿರುವುದು ಸಹಜ. ಈ ವ್ಯಕ್ತಿಗೆ ಸಂಬಂಧಿಸಿದ ಯಾವುದಾದರೂ ಒಂದು ವಸ್ತುವನ್ನೋ, ಸಮಾಧಿಯನ್ನೋ ಅಲ್ಲಿ ಪೂಜಿಸಲಾಗುತ್ತದೆ. ಸಮುದಾಯ ಆಚರಿಸುವ ಎಲ್ಲಾ ಹಬ್ಬಗಳೂ ಈ ಕುಲದೇವರಿಗೆ ಸಲ್ಲುತ್ತದೆ. ಮ್ಯಾಸಬೇಡ ಬುಡಕಟ್ಟಿನಲ್ಲಿಯೂ ಈ ಬಗೆಯ ಆರಾಧನೆ ಇದ್ದು ಇಲ್ಲಿ ಈ ದೇವತೆಗಳಿಗೆ ನಡೆಸುವ ಆಚರಣೆಗಳು ವಿಶಿಷ್ಟವಾಗಿದೆ.

ಸಾಮಾನ್ಯವಾಗಿ ಸುಗ್ಗಿಯ ಹಬ್ಬದಾಚಾರಣೆ ನಾಡಿನಾದ್ಯಂತ ನಡೆಯುತ್ತದೆ. ಆ ವರ್ಷ ಬೆಳೆದ ಹೊಸ ಧಾನ್ಯದಿಂದ ತಯಾರಿಸಿದ ಅಡುಗೆಯನ್ನು ಮೊದಲು ದೇವರಿಗೆ ಅರ್ಪಿಸಿ ಕೃತಕೃತ್ಯ ಭಾವ ಹೊಂದಿ ಸಂಭ್ರಮಿಸುವುದು ಸಾಮಾನ್ಯ. ಇದು ಅಂಧಶ್ರದ್ಧೆಯೂ ಅಲ್ಲ, ಅವೈಚಾರಿಕವಾದುದೂ ಅಲ್ಲ. ಶುದ್ಧ ವೈಚಾರಿಕತೆಯಿಂದ ಕೂಡಿದ ಋಣದ ಪ್ರಜ್ಞೆ, ತನ್ನ ನಮನವನ್ನು ಸಲ್ಲಿಸುವ ಒಂದು ವಿಧಾನ. ಮ್ಯಾಸಬೇಡರಲ್ಲಿ ದೈವೀಕರಣಗೊಂಡ ತಮ್ಮ ನಾಯಕರಿಗೆ ಸಲ್ಲುವ ಪ್ರಮುಖ ಪೂಜೆಯೆಂದರೆ ಗುಗ್ಗರಿ ಹಬ್ಬ, ಶ್ರಾವಣ, ದೀಪಾವಳಿ ಹಬ್ಬಗಳು, ಜಗಲೂರು ಪಾಪನಾಯಕ, ಗಾದ್ರಿಪಾಲನಾಯಕ, ದೆಡ್ಡಿಸೂರನಾಯಕ, ದೆಡ್ಡಿಕಾಮನಾಯಕ ಅಲ್ಲದೆ ಅಹೋಬಲಂನ ನರಸಿಂಹಸ್ವಾಮಿ, ಇವರಿಗೆಲ್ಲಾ ವಿಶೇಷವಾದ ವಾರ್ಷಿಕ ಹಬ್ಬವಾಗಿ ಇದನ್ನು ಆಚರಿಸಲಾಗುತ್ತದೆ, ಕಾಡುಗೊಲ್ಲರಲ್ಲಿಯೂ ಈ ಆಚರಣೆ ಇದೆ. ಮನೆಗೊಬ್ಬರಂತೆಯಾದರೂ ಸಂಬಂಧಿಸಿದ ಸಮುದಾಯವರು ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಉಳಿದಂತೆ ಕುಲಸಾವಿರದವರು ಎಂದು ಹೇಳಲಾಗುವ ಎಲ್ಲರೂ (ಹಟ್ಟಿ, ಗ್ರಾಮದವರು ಕುಲಭೇದವೆನ್ನದೆ) ಪಾಲ್ಗೊಳ್ಳಲೂ ಅವಕಾಶವಿರುತ್ತದೆ. ಸುಗ್ಗಿಯಾದ ಮೇಲೆ ಅದುವರೆಗೂ ಆ ಧಾನ್ಯವನ್ನು ಬಳಸದೇ ಹಾಗೆಯೇ ಇಟ್ಟರುತ್ತಾರೆ. ತಮ್ಮ ಶಕ್ತ್ಯಾನುಸಾರ ಒಂದರಿಂದ ಹತ್ತಾರು ಸೇರಿನವರೆಗೆ ಹುರುಳಿ, ಜೋಳ ಮತ್ತು ಮನೆಯ ಜನಿಗೆ ಹಸು, ಅಥವಾ ಎಮ್ಮೆಯಿಂದ ಪಡೆದ ಹಾಲು, ಮೊಸರಿನ ಮೀಸಲನ್ನು ಗುಡಿಗೆ ತರುತ್ತಾರೆ. ಎತ್ತಿನ ಗೂಡಿನಿಂದಲೂ ಮೀಸಲು ಮೊಸರು ಬರುತ್ತದೆ. ಕೆಲವೊಮ್ಮೆ ಸಂಬಂಧಿಸಿದ ನಾಯಕನ ಸಂಕೇತವಾದ ಪೆಟ್ಟಿಗೆ ಅಥವಾ ಬಿಲ್ಲನ್ನು ಗಂಗೆ ಪೂಜೆಗೆ ತೆಗೆದುಕೊಂಡು ಹೋಗುವುದೂ ಉಂಟು. ನಂತರ ರಾತ್ರಿ ಕಾಳು ಮುಖ್ಯವಾಗಿ ಹುರುಳಿಯನ್ನು ಬೇಯಿಸಿ ಗುಗ್ಗರಿ ಮಾಡುತ್ತಾರೆ. ಜೋಳ ಅಥವಾ ಸಜ್ಜೆಯನ್ನು ಕುಟ್ಟಿ ಅನ್ನ ಮಾಡಿ ಕಾಡಿನಿಂದ ತಂದ ಮುತ್ತುಗದ ಎಲೆಯ ಮೇಲೆ ಈ ನೈವೇದ್ಯವನ್ನಿರಿಸಿ ನೈವೇದ್ಯ ಮಾಡಲಾಗುತ್ತದೆ. ಅಂದು ಸಂಬಂಧಿಸಿದ ನಾಯಕ/ನಾಯಕಿಗೆ ಸಂಬಂಧಿಸಿದ ಎತ್ತುಗಳನ್ನು ಗುಡಿಯ ಬಳಿ ತರಲಾಗಿರುತ್ತದೆ. ಅದಕ್ಕೂ ಗುಗ್ಗರಿ ನೈವೇದ್ಯ ಮಾಡಲಾಗುತ್ತದೆ. ಕರಿಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ಶ್ರದ್ಧೆ, ಭಕ್ತಿಯಿಂದ ಕಾಣಿಕೆಯನ್ನು ಇಟ್ಟು ಎಲ್ಲರೂ ಒಟ್ಟಾಗಿ ಸೂರ್ಯನಿಗೆ ನಮಸ್ಕರಿಸಿ ನಂತರ ನಾಯಕನಿಗೆ (ದೈವ) ನಮಸ್ಕರಿಸುತ್ತಾರೆ. ಸಾಂಪ್ರದಾಯಿಕವಾದ ಈ ಹಬ್ಬವನ್ನು ಪ್ರತಿವರ್ಷ ಮಾಘ ಮಾಸದಲ್ಲಿ ಆಚರಿಸಲಾಗುತ್ತದೆ. ಈ ಬಗೆಯ ಆರಾಧನೆ, ಆಚರಣೆ ಊರಿನ ದೇವತೆಗಳಿಗೆ ಅಂದರೆ ಈಶ್ವರ, ಗಣಪತಿಗೆ ಮಾಡುವುದಿಲ್ಲ. ಆಚರಿಸಿದರೂ ಕೂಡ ಬುಡಕಟ್ಟು ದೈವಾರಾಧನೆಯ ವಿಧಾನದ ಪ್ರಭಾವದಿಂದಾಗಿ ಗುಗ್ಗರಿ ನೈವೇದ್ಯ ಹೊರತು ಬೇರೆ ವಿಧಿಗಳಿಲ್ಲ. ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ನಾಯಕರಿಗೆ ಮತ್ತು ಅವರು ಆರಾಧಿಸುವ ದೇವರು ಅಂದರೆ ಅಹೋಬಲಂ ನರಸಿಂಹಸ್ವಾಮಿ ಮತ್ತು ಶಿವ-ಬೈರವ-ಬೋರುವ ಎಂದು ಪೂಜೆಗೊಳ್ಳುವ ದೇವರಿಗೆ ಮಾತ್ರ ಸಲ್ಲುವ ಆರಾಧನೆಯಿದು. ಈ ಸಮುದಾಯದಲ್ಲಿ ನಾಯಕತ್ವ ವಹಿಸಿ ಇದನ್ನು ರಕ್ಷಿಸಿ ಪೋಷಿಸಿಕೊಂಡು ಬಂದವರಲ್ಲಿ ಮಹಿಳೆಯರೂ ಇದ್ದು ಇವರು ಆರಾಧನೆಯ ನೆಲೆಯಲ್ಲಿರುವುದರಿಂದ ಇವರಿಗೂ ಈ ವಿಶಿಷ್ಟವಾದ ಪೂಜೆ ಸಲ್ಲುವುದರ ಮೂಲಕ ಪ್ರಶ್ನಾತೀತ ನಾಯಕಿಯರಾಗುತ್ತಾರೆ ಇವರು. ಸಮುದಾಯದಾದ್ಯಂತ ಪೂಜೆಗೊಳ್ಳುತ್ತಿರುವ ವಿಶಿಷ್ಟ ಮಹಿಳೆ ಅಕ್ಕರಾಯಮ್ಮನಾಗಿದ್ದು ಈಕೆಗೂ ಈ ವಿಶಿಷ್ಟದ ಪೂಜೆ ಸಲ್ಲುತ್ತದೆ. ಇದರೊಂದಿಗೆ ಇತರ ಆಚರಣೆಗಳೂ

ಸಾಂಸ್ಕೃತಿಕ ನಾಯಕಿಯರಿಗೆ ಸಲ್ಲುತ್ತಿವೆ. ಅಕ್ಕರಾಯಮ್ಮನಿಗೆ ಒಟ್ಟು ನಡೆಸಲಾಗುವ ಆರಾಧನೆ ಆಚರಣೆಗಳನ್ನು ಹೀಗೆ ವಿಭಾಯಿಸಬಹುದು.

೧. ಗುಗ್ಗರಿ ಹಬ್ಬ

೨. ಅಕ್ಕರಾಯಮ್ಮ ಅಂದು ಮಾಡಿಕೊಂಡ ಹರಕೆಗಳನ್ನು ತೀರಿಸುವ ಆಚರಣೆ

೩. ಮಾರಿಯಾಗಿ ಕುರಿಕೋಣಗಳ ಬಲಿ ಪಡೆಯುವ ಹಬ್ಬ

ಮೊದಲು ಅಕ್ಕರಾಯಮ್ಮನದೊಂದು ಪೆಟ್ಟಿಗೆ ಎಂದು ರೂಪುಗೊಂಡಿದ್ದೇ ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಬಳಿ ಇರುವ ದೇವರಹಳ್ಳಿ ಎಂದು ಇಂದು ಕರೆಯಲ್ಪಡುತ್ತಿರುವಲ್ಲಿ. ನಿಡುಗಲ್ಲಿನ ಹೊಟ್ಟೆಣ್ಣನಾಯಕ ಮತ್ತು ಸಮುದಾಯದ ಪಶುಸಂಪತ್ತನ್ನು ತನ್ನದಾಗಿಸಿಕೊಳ್ಳಬೇಕೆಂದು ಆಕ್ರಮಣ ಮಾಡಿದಾಗ ರಾಯಮ್ಮನ ನೇತೃತ್ವದಲ್ಲಿ ಈ ಸಮುದಾಯ ಯಶಸ್ಸನ್ನು ಪಡೆಯುತ್ತದೆ. ಅದರ ಸ್ಮಾರಕವಾಗಿ ರಣಗಂಬಗಳನ್ನು ಈ ಸ್ಥಳದಲ್ಲಿ ನಿಲ್ಲಿಸಲಾಗಿದೆ. ಇದಾದ ನಂತರ ಕ್ರಮೇಣ ಈ ಸಮುದಾಯದಲ್ಲಿ ಒಡಕು ಪ್ರಾರಂಭವಾಗುತ್ತದೆ. ನಿಭಾಯಿಸಲು ಕಷ್ಟ ಎಂದರಿತ ರಾಯಮ್ಮ ಸಮುದಾಯದ ಪಶು ಮತ್ತು ಇತರೆ ಸಂಪತ್ತು, ಆಯುಧ ಇತ್ಯಾದಿಗಳನ್ನು ಎಲ್ಲರಿಗೂ ಹಂಚಿಕೊಡುತ್ತಾಳೆ. ಎಲ್ಲರೂ ತಮಗೆ ಬಂದ ವಿಶೇಷವಾದ ವಸ್ತುಗಳನ್ನು ತಮ್ಮ ಪೆಟ್ಟಿಗೆಯಲ್ಲಿಟ್ಟುಕೊಳ್ಳುತ್ತಾರೆ. ಆಗ ನಮಗೆ ರಕ್ಷಣೆ ಕೊಟ್ಟ ಸಮುದಾಯದ ಅಸ್ತಿತ್ವಕ್ಕೆ ಕಾರಣವಾದ ಆಕೆಯ ಸ್ಮರಣಾರ್ಥವಾಗಿ ಆಕೆಗೆ ಸಂಬಂಧಿಸಿದ ಕೆಲವು ಅಮೂಲ್ಯ ವಸ್ತುಗಳನ್ನು ತಮ್ಮೆಲ್ಲರ ಪೆಟ್ಟಿಗೆಗಳಿಗಿಂತ ಹಿರಿದಾದ ಪೆಟ್ಟಿಗೆಯಲ್ಲಿರಿಸಿ ತಮ್ಮನ್ನು ಸಲಹುತ್ತಾ ಬಂದ ಈಕೆ ನಮಗೆ ಕೇವಲ ಬಂಧುವಲ್ಲ. ಸ್ವತಃ ದೇವಿಯ ಅಪರಾವತಾರ ನಮ್ಮ ೭೭ ಹಟ್ಟಿಗಳಿಗೆ ಈಕೆಯೇ ನಾಯಕಿ. ಈಕೆಯೇ ಶ್ರೇಷ್ಟಳು ಎಂದು ಭಾವಿಸಿ ಆಕೆಗೆ ನೀನೇ ನಮ್ಮ ಹಟ್ಟಿಗಳಿಗೆ ಮಾರಮ್ಮನಿದ್ದಂತೆ ಎಂದು ಹೇಳಿ ದೆಡ್ಡಲು (ಹಟ್ಟಿಗಳು) ಮಾರಮ್ಮ ಎಂದು ಕರೆಯುತ್ತಾರೆ. ದೇವರ ಹಳ್ಳಿಯಲ್ಲಿಯೇ ಇದನ್ನು ನೆಲೆಗೊಳಿಸುತ್ತಾರೆ. ಮುಡೇಲವರು ಬೆಡಗಿನವರು (ಎನುಮಲವರಲ್ಲಿ ಒಂದು ಒಳ ಗುಂಪು) ಈಗ ಅದನ್ನು ಪೂಜೆ ಮಾಡುತ್ತಾರೆ. ಆಕೆ ಉಪಯೋಗಿಸುತ್ತಿದ್ದ ಆಯುಧಗಳೂ ಇವೆ ಎಂದು ಹೇಳುತ್ತಾರೆ. ಶಿವರಾತ್ರಿ ಸಂದರ್ಭದ ಮಾಘ ಮಾಸದಲ್ಲಿ ಇಲ್ಲಿ ಈಕೆಗೆ ಗುಗ್ಗರಿ ಹಬ್ಬವನ್ನು ಮಾಡಲಾಗುತ್ತದೆ. ಚಿನಮಜ್ಜನಹಳ್ಳಿ (ಆಂಧ್ರದ ಗಡಿ)ಯಲ್ಲೂ ಈ ಸಹ ಈಕೆಗೆ ಗುಗ್ಗರಿ ಹಬ್ಬವನ್ನು ಆಚರಿಸಲಾಗುತ್ತದೆ. ಹೊಳೆಗೆ ಕರೆದೊಯ್ದು ಗಂಗೆ ಪೂಜೆ ಮಾಡಿಕೊಂಡು ಬಂದು ನಂತರ ಗುಗ್ಗರಿ ಬೇಯಿಸಿ ನೈವೇದ್ಯ ಮಾಡಲಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಆವಳೇನಹಳ್ಳಿಯಲ್ಲಿ, ಹುಣಿಸೇಕಟ್ಟೆಯಲ್ಲಿ ಅಹೋಬಲಂ ನರಸಿಂಹಸ್ವಾಮಿಯೊಂದಿಗೆ (ಅಲಿಕೋಬಳ ದೇವರು), ಗಡಿಮಾಕುಂಟೆಯಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಈ ಎಲ್ಲಾ ವಿವರಗಳ ಮೂಲಕ ಈಕೆ ಸಾಂಸ್ಕೃತಿಕ ನಾಯಕತ್ವವನ್ನು ವಹಿಸಿದ್ದ ಮಹಿಳೆ ಎಂಬುದು ದೃಢವಾಗುತ್ತದೆ.

**ಅಕ್ಕರಾಯಮ್ಮ ಮಾಡಿಕೊಂಡು ಹರಕೆಗಳನ್ನು ತೀರಿಸುವ ಆಚರಣೆ :**

ಗುಗ್ಗರಿ ಹಬ್ಬದ ಸಂದರ್ಭದಲ್ಲಿಯೇ ಇದನ್ನೂ ನಡೆಸಲಾಗುತ್ತದೆ. ಇದೊಂದು ಅಚ್ಚರಿ ತರಿಸುವ ಆಚರಣೆ ಕಾರಣ ಇಲ್ಲಿ ರಾಯಮ್ಮನಿಗಲ್ಲ ಆರಾಧನೆ. ಆದರೆ ತಮ್ಮ ಸಮುದಾಯದ ನಾಯಕಿಯಾದ ರಾಯಮ್ಮ ಅಂದು ತಮಗಾಗಿ ದೇವರಿಗೆ ಮಾಡಿಕೊಂಡಿದ್ದ ಹರಕೆಯನ್ನು ಇಂದಿಗೂ ಆಕೆಯ ಬದಲು ತಾವು ಆಚಂದ್ರಾರ್ಕವಾಗಿ ಎಂಬಂತೆ ನೆರವೇರಿಸಿಕೊಂಡು ಬರುತ್ತಿದ್ದಾರೆ.

ರುದ್ರಮ್ಮನಹಳ್ಳಿ ಹಿಂದೆ 'ದಿದ್ದಿಲುಪಲ್ಲಿ' ಎಂದು ಕರೆಯಲ್ಪಡುತ್ತಿದ್ದ ಈ ಹಳ್ಳಿಯಲ್ಲಿ ನಲಜರುವೋಬಳ ದೇವರ ದೇವಾಲಯವಿದೆ. ಆದರೆ ಅಕ್ಕರಾಯಮ್ಮನಿಗೆ ಸಂಬಂಧಿಸಿದ ಯಾವುದೇ ವಸ್ತುವಿಲ್ಲ. ಆದರೆ ಮ್ಯಾಸಮಂಡಲದಲ್ಲಿ ಯಾವುದೇ ಬೆಡಗಿನ ಭೇದವಿಲ್ಲದೆ ಆಕೆಯ ಬಗ್ಗೆ ಪೂಜ್ಯಭಾವನೆಯಿರುವ ಕಾರಣದಿಂದಾಗಿ ಈಕೆಯ ಹರಕೆ ಇಲ್ಲಿ ಸಲ್ಲುತ್ತದೆ. ತನ್ನ ಸೋದರರು ಸೂರ್ಯನ ವಿರುದ್ಧ ದಾಳಿಗೆ ಹೋಗಿದ್ದಾಗ ವಿಜಯದೊಂದಿಗೆ ಸುಖವಾಗಿ ಮರಳಿ ಬಂದರೆ ಅವರು ಏರಿ ಹೋದ ದಣಿದ ಕುದುರೆಗಳಿಗೆ ಬಂದಾಕ್ಷಣ ಗುಗ್ಗರಿ ಹಾಕಿಸುತ್ತೇನೆ. ಸೂರ್ಯನಿಗೆ ಆರತಿ ಬೆಳಗುತ್ತೇನೆ ಎಂದು ಹರಕೆ ಮಾಡಿಕೊಂಡಿದ್ದಳಂತೆ. ಹಾಗಾಗಿ ಇದನ್ನು ಒಂದು ಆಚರಣೆಯನ್ನಾಗಿ ಇಲ್ಲಿ ಓಬಳದೇವರಿಗೆ ಗುಗ್ಗರಿ ನೈವೇದ್ಯ ಮಾಡಿದ ಬೆಳಿಗ್ಗೆ ಊರ ಹೊರಗೆ ಹೋಗಿ ಕಂಬಳಿ ಗದ್ದಿಗೆ ಹಾಕಿ ಕುದುರೆ ಬರದಿದ್ದರೂ ಸಾಂಕೇತಿಕ ಅರ್ಪಣೆಯಾಯಿತು ಎಂದು ಭಾವಿಸಿ ಪೂಜಾರಿಯ ಹೆಂಡತಿ ತಂದ ಕಳಶಾರತಿಯನ್ನು ಸೂರ್ಯನಿಗೆ ಆಕೆ ಬೆಳಗುವುದರ ಮೂಲಕ ಹರಕೆ ತೀರಿಸಲಾಗುತ್ತದೆ.

ಚಿನ್ನಮಜ್ಜನಹಳ್ಳಿಯಲ್ಲಿಯೂ ಸೂರ್ಯನಿಗೆ ಆರತಿ ಬೆಳಗುವ ರಾಯಮ್ಮನ ಹರಕೆಯನ್ನು ತೀರಿಸಲಾಗುತ್ತದೆ. ಅಲ್ಲಿಯ ಅದೊಂದು ವಿಶಿಷ್ಟವಾದ ಸುಂದರವಾದ ಆಚರಣೆ.

ಹುಣಿಸೇಕಟ್ಟೆಯಲ್ಲಿ ಇಲ್ಲಿ ನಡೆಯುವ ಆಚರಣೆ ರಾಯಮ್ಮನ ಮತ್ತೊಂದು ಹರಕೆ ತೀರಿಸುವ ವಿಧಾನವಾಗಿದೆ. ಇಲ್ಲಿ ರಾಯಮ್ಮನ ಹೆಸರಿನಲ್ಲಿ ಪುಟ್ಟಿಯೊಂದು ಆರಾಧನೆಗೊಳ್ಳುತ್ತಿತ್ತು. ಈಗ ದೇವಿಯ ಮುಖ ಇರಿಸಿಕೊಂಡು ಪೂಜಿಸುತ್ತಿದ್ದಾರೆ. ರಾಯಮ್ಮ ಅಹೋಬಲ ನರಸಿಂಹಸ್ವಾಮಿಗೆ ಮಜ್ಜಿಗೆ ಹುಳಿ ನೈವೇದ್ಯ ಮಾಡುತ್ತೇನೆ. ದಾಸರಿಗೆ ದಾಸೋಹ ಮಾಡಿಸುತ್ತೇನೆ ಎಂದು ಅಂದು ಹರಕೆ ಮಾಡಿಕೊಂಡಿದ್ದಳಂತೆ. ಆಪ್ರತೀಕವಾಗಿ ಇಂದು ಈ ನೈವೇದ್ಯ ಮತ್ತು ದಾಸರಿಗೆ ಬೊಗಸೆಯಲ್ಲಿ ಮಜ್ಜಿಗೆ ಹುಳಿ ಸುರಿದು ನಂತರ ದಾಸೋಹ ಮಾಡಿಸಿ ಹರಕೆ ತೀರಿಸುತ್ತಾರೆ. ಇಲ್ಲಿಯೂ ಸೂರ್ಯನಿಗೆ ಆರತಿಯನ್ನು ಬೆಳಗಲಾಗುತ್ತದೆ.

ವ್ಯಕ್ತಿಯನ್ನು ದೈವತ್ವಕ್ಕೇರಿಸಿ ಪೂಜೆ ಮಾಡುವುದು ಸಾಮಾನ್ಯವಾಗಿರುವ ಸಂಗತಿ. ಅದರೊಂದಿಗೆ ಇಂದು ದೈವೀಕರಣಗೊಂಡಿರುವ ತಮ್ಮ ಹಿರಿಯಳು ವ್ಯಕ್ತಿಯಾಗಿದ್ದಾಗ ಮಾಡಿಕೊಂಡಿದ್ದ ಹರಕೆಯನ್ನು ಇಂದಿಗೂ ಸಮುದಾಯ ತೀರಿಸುತ್ತಾ ಬರುತ್ತಿರುವುದು ಬಹಳ ಆಶ್ಚರ್ಯಕರವಾಗಿದೆ ಮತ್ತು ಈ ಎಲ್ಲಾ ಕ್ರಿಯೆಗಳ ಹಿಂದೆ ಆಕೆ ಹೇಗೆ ಬುಡಕಟ್ಟಿನ ಮನಸ್ಸಿನಲ್ಲಿ ಉಳಿದುಬಂದಿದ್ದಾಳೆ ಎಂಬುದು ಸ್ಪಷ್ಟವಾಗುತ್ತದೆ.

**ಏಕಾದಶಿಯ ಹಬ್ಬ :**

ಏಕಾದಶಿ ಹಬ್ಬ ಇಲ್ಲಿ ಪ್ರವೇಶ ಮಾಡಿರುವುದು ವೈಷ್ಣವ ಧರ್ಮದ ಪ್ರಭಾವದಿಂದಾಗಿ ಪರಿಸೇವೆ (ದಾಸರಿಗೆ ದಾಸೋಹ ಮಾಡಿಸುವ) ಇದೇ ಬಗೆಯದೇ. ವೈಷ್ಣವ ದೇವರಾದ ನರಸಿಂಹಸ್ವಾಮಿ (ಜೂಗಲೋಬಳದೇವರು) ಆಕೆಯ ಪೆಟ್ಟಿಗೆಯೊಂದಿಗೆ ಇಲ್ಲಿರುವುದರಿಂದ ಈ ಪೂಜೆ ಇಲ್ಲಿ ಪ್ರವೇಶ ಮಾಡಿರುವ ಸಾಧ್ಯತೆ ಇದೆ. ರುದ್ರಮ್ಮನ ಹಳ್ಳಿಯ ನಲಜರುವೋಬಳ ದೇವರಿಗೂ ಈ ಏಕಾದಶಿ ಹಬ್ಬವನ್ನು ಮಾಡಲಾಗುತ್ತದೆ.

**ಆವುಲು ಗೂಡಿನ ಹಬ್ಬ :**

ಹಸುಗಳ ಗೂಡಿಗೆ ರಾಯಮ್ಮ ಹೋಗಿ ಬರುವ ಆಚರಣೆಯಿದು. ಪಶುಪಾಲಕಿಯಾದ ಇವಳ ಬಳಿಗೆ ಗುಗ್ಗರಿ ಹಬ್ಬದಲ್ಲಿ ಎತ್ತುಗಳು ಗೌರವಪೂರ್ವಕವಾಗಿ ಬಂದರೆ, ಈಕೆಯೇ ಒಂದು ದಿನದ ಮಟ್ಟಿಗೆ (ಪೆಟ್ಟಿಗೆ) ಗೂಡಿಗೇ ಹೋಗಿ ತನ್ನ ಪಶುಸಂಪತ್ತಿನ ಉಸ್ತುವಾರಿ ಮಾಡಿ, ಕಣ್ತುಂಬಿಕೊಂಡು ಬರುವ ಸಾಂಕೇತಿಕತೆ ಇಲ್ಲಿದ್ದು ಪಶುಪಾಲಕ ಮೂಲದ ಈ ಸಮುದಾಯಕ್ಕೆ ಸಲ್ಲುವ ವಿಶಿಷ್ಟ ಆಚರಣೆಯಾಗಿದ್ದು ತನ್ನ ಅನನ್ಯತೆ ಇಲ್ಲಿ ಕಂಡುಬರುತ್ತದೆ.

ಶ್ರಾವಣ, ದೀಪಾವಳಿಯಲ್ಲಿಯೂ ಅಕ್ಕರಾಯಮ್ಮನಿಗೆ ಪೂಜೆ ಸಲ್ಲುತ್ತದೆ. ಆವಳೇನಹಳ್ಳಿಯಲ್ಲಿ ಯುಗಾದಿ ಹಬ್ಬದಲ್ಲಿಯೂ ಪೂಜೆ ನಡೆಸುತ್ತಾರೆ.

ಆವಳೇನಹಳ್ಳಿಯಲ್ಲಿ ನಡೆಯುವ ಗುಗ್ಗರಿಹಬ್ಬದ ಆಚರಣೆಯಲ್ಲಿ ಅಕ್ಕರಾಯಮ್ಮ ಅಂದು ಪವಾಡ ಸದೃಶವಾಗಿ ತಮ್ಮನ್ನು ಸ್ಪರ್ಧೆಯಲ್ಲಿ ವಿಷದ ಕಜ್ಜಾಯ ತಿಂದೂ ಕೂಡ ಬದುಕುವಂತೆ ಮಾಡಿದಳು ಎಂದು ಸ್ಮರಣಾರ್ಥವಾಗಿ ಇಂದೂ ಆ ಘಟನೆಯನ್ನು ಒಂದು ಆಚರಣೆಯನ್ನಾಗಿ ನಡೆಸುತ್ತಾರೆ. ಇದು ಈಕೆ ನಡೆಸಿದ ಪವಾಡ ಎಂಬ ಭಾವನೆ. ಸಮುದಾಯಲ್ಲಿದೆ. ವ್ಯಕ್ತಿಯೊಬ್ಬ ದೈವತ್ವಕ್ಕೇರಿದಾಗ ತಮ್ಮ ಯಾವುದೇ ವಿಜಯವನ್ನು ಆಕೆಯ ಕಾರಣದಿಂದಾಗಿಯೇ ಆಯಿತು ಎಂದು ಸಂಭ್ರಮಿಸುವ ಮುಗ್ಧ ಮನಸ್ಸನ್ನು ಇಲ್ಲಿ ಕಾಣಬಹುದು. ಪವಾಡ ಎಂದಾಗ ಆಕೆ ಎಲ್ಲಿ ಮಾನವಳಾಗುವುದಿಲ್ಲ. ದೈವವೇ ಆಗಿ ಬಿಡುತ್ತಾಳೆ. ಹೀಗೆ ಮಾನವಳಾದ ರಾಯಮ್ಮ ದೈವೀಕರಣಗೊಳ್ಳುವ ಪರಿಯನ್ನು ಇದು ಪ್ರತಿನಿಧಿಸುತ್ತದೆ.

**ಮಾರಿಯಾಗಿ ಕುರಿಕೋಣಗಳ ಬಲಿ ಪಡೆಯುವ ಹಬ್ಬ :**

ದೇವರಹಳ್ಳಿಯಲ್ಲಿ ಮತ್ತು ಹುಣಿಸೇಕಟ್ಟೆಯಲ್ಲಿ ಕೆಲವೊಮ್ಮೆ ಈಕೆಯೇ ಮಾರಮ್ಮನಾಗಿ ಪೂಜೆಗೊಳ್ಳುತ್ತಾಳೆ. ಅಕ್ಕರಾಯಮ್ಮನ ಬಗ್ಗೆ ವಿವರಗಳನ್ನು ಕೊಡುವಾಗ ವಕ್ತೃಗಳು ದಾನಸಾಲಿಯಮ್ಮನಿಗೆ ಈಕೆ ಮಗಳಾಗಿ ಖಂಡುಗ ಬೇವು ಖಂಡುಗ ಭಂಡಾರ, ಉಕ್ಕಿನ ಚಾಟಿಯೊಂದಿಗೇ ಮಾರಮ್ಮನಂತೆಯೇ ಜನಿಸಿದಳು ಎಂದು ಹೇಳುತ್ತಾರೆ. ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಿಗೆ 'ವಾಸೆ ಕೊಯ್ಯುವುದು' ಎಂಬ ಆಚರಣೆಯ ಹೆಸರಿನಲ್ಲಿ ಬಲಿಕೊಡುವ ಪದ್ಧತಿ ಇದ್ದೇ ಇದೆ. ರಕ್ತಬಲಿಯಿಂದ ಸಂಪತ್ತು ಸಮೃದ್ಧಿಗೊಳ್ಳುವುದೆಂಬುದು ಬುಡಕಟ್ಟಿನ ಜನರ ಒಂದು ನಂಬಿಕೆಯೂ ಬಲಿಯಂತಹ ಆಚರಣೆಯನ್ನು

ತಾನು ನಡೆಸುತ್ತಿರಲು ಕಾರಣವಾಗಿದೆ. ಇಲ್ಲಿ ರಾಯಮ್ಮ ಸಾಂಸ್ಕೃತಿಕ ನಾಯಕಿಯಾಗಿ ದೈವೀಕರಣಗೊಂಡು ಪೂಜೆಗೊಳ್ಳುತ್ತಿದ್ದಾಳೆ. ಈಕೆ ಮೂಲತಃ ಮಹಿಳೆ ಎಂಬುದನ್ನು ನಾವಿಲ್ಲಿ ಮರೆಯುವಂತಿಲ್ಲ ಮತ್ತು ಬುಡಕಟ್ಟುಗಳಲ್ಲಿ ಮಾತೃದೇವತಾರಾಧನೆ ಇದ್ದು ಈ ರಾಯಮ್ಮ ಇಲ್ಲಿ ಮಾತೃದೇವತೆಯ ಸ್ವರೂಪದಲ್ಲಿಯೂ ಪೂಜೆಗೊಳ್ಳುತ್ತಿರುವುದೇ ಬಲಿಯಂತಹ ಆಚರಣೆಗಳನ್ನು ಆಕೆಗೆ ನಡೆಸಲು ಕಾರಣವಾಗಿದೆ. ನೆಲದ ಫಲವಂತಿಕೆಗಾಗಿ, ರೋಗ ರುಜಿನಗಳಿಂದ ಸಂರಕ್ಷಿಸಿಕೊಳ್ಳಲೋಸುಗ ಈಕೆಯನ್ನು ಮಾರಮ್ಮನಂತೆ ಪರಿಗಣಿಸಿ ಬಲಿಯನ್ನು ಅರ್ಪಿಸಲಾಗುತ್ತದೆ. ಹುಣಿಸೇಕಟ್ಟೆಯಲ್ಲಿ ದೇವಸ್ಥಾನದ ಮುಂದೆ ಬಲಿ ಕೊಡುವುದಿಲ್ಲ ಬದಲಾಗಿ ಊರ ಹೊರಗಡೆ ಇರುವ ಮಾರಮ್ಮನ ಕಟ್ಟೆಯ ಮೇಲೆ ರಾಯಮ್ಮನ ಪುಟ್ಟಿಯನ್ನಿರಿಸಿ (ಈಗ ಮುಖಪದ್ಮ) ಅಲ್ಲಿ ಕುರಿ ಕೋಣದ ಬಲಿಕೊಟ್ಟು ನಂತರ ಮರುದಿನ ಊರೊಳಗೆ ದೇವಾಲಯದಿಂದ ದೂರದಲ್ಲಿ ಗಾವು ಸಿಗಿಯುವ ಆಚರಣೆ ಇದೆ.

ದೇವರಹಳ್ಳಿಯಲ್ಲಿಯೂ ಯುಗಾದಿ ಹಬ್ಬದಲ್ಲಿ ಮಂಗಳವಾರವೇ ಇಡೀ ಊರಿಗೆ ಹಬ್ಬ ಮೊಡಲಾಗುತ್ತದೆ. ಜಾತಿಬೇಧವಿಲ್ಲದಂತೆ ಮಂಗಳವಾರ ಗಂಗೆಪೂಜೆ ನಡೆದು ಬೆಳಗಿನ ಜಾವ ಕೋಣ ಕಡಿದು ಅಕ್ಕರಾಯಮ್ಮ (ದೆಡ್ಡಲು ಮಾರಮ್ಮ)ನ ಪೆಟ್ಟಿಗೆ ಇರುವ ಗುಡಿಸಲಿಗೆ ಸ್ವಲ್ಪ ದೂರದಲ್ಲಿ ಮತ್ತೊಂದು ಗುಡಿಸಲಿನಲ್ಲಿ ಮಾರಮ್ಮನ ಮಣ್ಣಿನ ಮೂರ್ತಿ ಇರಿಸಿ ಅಲ್ಲಿ ಕೋಣ ಕಡಿದು ಊರಿಗೆ ಚರಗ ಚೆಲ್ಲಿ ಶಾಂತಿ ಮಾಡಿ ಮರುದಿನ ಬೇವು ಬೆಲ್ಲ ತಿನ್ನುತ್ತಾರೆ. ಅಂದರೆ ಅಕ್ಕರಾಯಮ್ಮ ಇಲ್ಲಿ ಕೇವಲ ಬುಡಕಟ್ಟಿನ ದೇವತೆಯಾಗದೆ ಊರ ದೇವತೆಯಾಗಿ ಮಾರ್ಪಟ್ಟು ಈ ಆಚರಣೆ ರೂಢಿಗೆ ಬಂದಿರುವ ಸಾಧ್ಯತೆಗಳಿವೆ. ಅಷ್ಟೇ ಅಲ್ಲ. ಇಲ್ಲಿ ದೇವಸ್ಥಾನದ ಒಳಗೆ ಮಾಂಸದ ನೈವೇದ್ಯವಿಲ್ಲ. ಬದಲಾಗಿ ಬೇವು, ಬೆಲ್ಲ, ಪಾಯಸ, ಹೋಳಿಗೆ, ಮುಖ್ಯವಾಗಿ ಮೊಸರು ಅನ್ನದ ನೈವೇದ್ಯ ಮಾತ್ರ. ಅಂದರೆ ಈಕೆಯ ಸಮಕ್ಷಮದಲ್ಲಿ ಊರಮ್ಮನನ್ನು ಮಾಡುವ ಒಂದು ರೀತಿ ಇದಾಗಿದೆ ಅಷ್ಟೆ ಎಂದು ಅಂದಾಜು ಮಾಡಲು ಇಲ್ಲಿ ಸಾಧ್ಯವಿದೆ. ತಮ್ಮ ನಾಯಕಿಗೆ ಅಸಾಮಾನ್ಯ ಬಲವನ್ನು ಕೊಡುವ ಅಥವಾ ಆಕೆಯಲ್ಲಿ ಅಸಾಮಾನ್ಯ ಶಕ್ತಿಯನ್ನು ಗುರುತಿಸುವ ಒಂದು ವಿಧಾನವೇ ಆಕೆಯನ್ನು ಮಾರಿಯ ರೂಪದಲ್ಲಿ ಪೂಜಿಸುವ ವಿಧಾನವಾಗಿರಬಹುದು.

ಒಟ್ಟಾರೆ ವಿವಿಧ ರೂಪದಲ್ಲಿ, ವಿವಿಧ ವೈಶಿಷ್ಟ್ಯಪೂರ್ಣವಾದ ಆಚರಣೆಗಳ ಮೂಲಕ ಆರಾಧಿಸಲ್ಪಡುತ್ತಿರುವ ಅಕ್ಕರಾಯಮ್ಮನೇ ವೈಶಿಷ್ಟ್ಯತೆಯಿಂದ ಕೂಡಿದ ಅಸಾಮಾನ್ಯಳಾಗಿದ್ದ ಅಸಾಮಾನ್ಯ ಸ್ಥಿತಿಗೇರಿದ ಮಹಿಳೆ ಎಂಬುದು ಇಲ್ಲಿ ಸತ್ಯವಾಗುತ್ತದೆ ಮತ್ತು ಸಮುದಾಯವರೆಲ್ಲಾ ಪಾಲ್ಗೊಳ್ಳುವಂತೆ, ಊರ ಇತರ ಸಮುದಾಯವರೂ ಪಾಲ್ಗೊಂಡು ಕೊನೆಗೆ ಊರದೇವತೆಯೆನಿಸುವ ಎತ್ತರಕ್ಕೆ ಈಕೆ ಏರಿದ್ದಾಳೆ.

**ಆ) ಮಲೆಯಮ್ಮನ ಆರಾಧನೆ, ಆಚರಣೆ, – ಮುತ್ತಿಗಾರರಹಳ್ಳಿ, ಕಮರದ ಕಾವಲಿನಲ್ಲಿ : ೧**

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿಗೆ ಸೇರಿದ ಬೊಮ್ಮಗೊಂಡನ ಕೆರೆ ಎಂಬ ಊರಿನ ಪಕ್ಕದಲ್ಲಿ ಮುತ್ತಿಗಾರರ ಹಳ್ಳಿ ಎಂಬ ಮ್ಯಾಸನಾಯಕರೇ ಹೆಚ್ಚಾಗಿ ವಾಸಿಸುವ ಪ್ರದೇಶವಿದೆ. ಇದರ

ಪಕ್ಕದಲ್ಲಿಯೇ ಮ್ಯಾಸರ ಹಟ್ಟಿಗಳೂ ಇವೆ ಅದಕ್ಕೆ ಹತ್ತಿರದಲ್ಲಿಯೇ ಕುರುಚಲು ಕಾಡಿದ್ದು ಅಲ್ಲಿ ಮ್ಯಾಸನಾಯಕರ ಹಿರಿಯರಾದ ಇಂದು ದೈವೀಕ ನೆಲೆಯಲ್ಲಿ ಆರಾಧಿಸಲ್ಪಡುತ್ತಿರುವ ಮುತ್ತಿಗಾರರ (ಹಿರಿಯರ) ಎತ್ತುಗಳ ಗೂಡುಗಳಿವೆ. ಅವುಗಳ ರಕ್ಷಣೆ ಮಾಡುತ್ತಿರುವ ಕಿಲಾರಿಗಳೂ ಅಲ್ಲಿಯೇ ವಾಸ ಮಾಡುತ್ತಾರೆ. ಎರಡನೆಯ ತಂಡವಾಗಿ ಶ್ರೀಶೈಲದ ಕಡೆಯಿಂದ ಇತ್ತ ಬಂದು ನೆಲೆಸಿದವರೇ ಮುತ್ತಿಗಾರರು ಎಂಬುದು ಸಮುದಾಯವರ ನಂಬಿಕೆ. ಇವರೊಂದಿಗೆ ಬಂದವಳೇ ಮಲೆಯಮ್ಮ. ಇವರನ್ನು ರಕ್ಷಣೆ ಮಾಡಿದವಳೇ ಮಲೆಯಮ್ಮ. ಹಾಗಾಗಿ ಈ ಮಲೆಯಮ್ಮನನ್ನು ಇವರು ತಮ್ಮ ಆರಾಧ್ಯದೇವತೆಯನ್ನಾಗಿ ಪೂಜಿಸಿಕೊಂಡು ಬರುತ್ತಿದ್ದಾರೆ. ಮೂರು ವರ್ಷಕ್ಕೊಮ್ಮೆ ಇಲ್ಲಿ ಇವರು ಮಲೆಯಮ್ಮನ ಪೂಜೆಯನ್ನು ಏರ್ಪಡಿಸುತ್ತಾರೆ. ಹನ್ನೆರಡು ಬೆಡಗಿನವರು ಸೇರಿ ಈ ಪೂಜೆಯನ್ನು ಆಚರಿಸಲು ನಿರ್ಧರಿಸುತ್ತಾರೆ. ಶ್ರೀಶೈಲದಿಂದ ಎರಡನೆಯ ತಂಡದಲ್ಲಿ ಬಂದವರು ಒಟ್ಟು ಹನ್ನೆರಡು ಗುಡಿಸಿಲಿನವರು. ಹೀಗಾಗಿ ಆ ಹನ್ನೆರಡು ಗುಡಿಸಿಲಿನವರು, ಅವರೇ ಹನ್ನೆರಡು ಬೆಡಗಿನವರು ಸೇರಿ ಈ ಪೂಜೆಯನ್ನು ಏರ್ಪಡಿಸುತ್ತಾರೆ. ೧. ರಾಬಲು, ೨. ಅಜ್ಜಡಲು, ೩. ದಾದಗನಾಡು, ೪. ಎದ್ದಲವರು, ೫. ಬೋಡೇಪಾಲರು, ೬. ದೆಡ್ಡಿ ಮುತ್ತಿ, ೭. ಕ್ಯಾತಪುಲು, ೮. ಅಬ್ಬನಾರು, ೯. ಮಲ್ಲೇವಾರು, ೧೦. ದ್ಯಾವುಡಲವರು, ೧೧. ಮುಡೇಲವರು, ೧೨. ಬುಲ್ಲುಡಲವರು ಇವರೇ ಆ ಹನ್ನೆರಡು ಗುಡಿಸಿಲಿನ ಮಂದಿ. ಇವರನ್ನೆಲ್ಲಾ 'ಕಡೇಲು ನಾಯಕ' ಎಂಬ ಬೆಡಗಿಗೆ ಸೇರಿದ ವ್ಯಕ್ತಿ ಸಂಪರ್ಕಿಸಿ ಒಂದು ಕಡೆ ಅಂದರೆ ಎತ್ತಿನ ಗೂಡಿನ ಬಳಿ ಸೇರಿಸುತ್ತಾನೆ. ಅಲ್ಲಿ ಮಲೆಯಮ್ಮನ ಜಾತ್ರೆ ಮಾಡುವ ದಿನವನ್ನು ನಿರ್ಧರಿಸುತ್ತಾರೆ. ಇದನ್ನು ಮಲೆದೇವರ ಜಾತ್ರೆ ಎಂದೂ ಕರೆಯುತ್ತಾರೆ. ನಂತರ ಕಡೇಲು ನಾಯಕ ಇವರಿಂದಲೇ ಪೂಜೆಗಾಗಿ, ಎತ್ತುಗಳಿಗೆ ಸರಗ ಹಾಕಲು ಮೂರು ಕುರಿಗಳನ್ನು ತರುತ್ತಾನೆ. ಇವನ್ನು ಬೊಡೇಪಾಲನ ಬೆಡಗಿಗೆ ಸೇರಿದ ವ್ಯಕ್ತಿಗೆ ಒಪ್ಪಿಸುತ್ತಾನೆ. ಜಾತ್ರೆಯ ದಿನದವರೆಗೂ ಈತನೇ ಇವುಗಳ ರಕ್ಷಣೆ ಮಾಡಬೇಕು. ಹಬ್ಬದ ಆಚರಣೆಯ ನಿಮಿತ್ತ ನಿಗದಿತ ಮಂಗಳವಾರದಂದು ಎಲ್ಲರೂ ಸೇರುತ್ತಾರೆ. ಹನ್ನೆರಡು ಗುಡಿಸಿಲಿನವರಷ್ಟೇ ಅಲ್ಲದೆ ಸುತ್ತಮುತ್ತಲ ಪ್ರಾಂತ್ಯದ ಮ್ಯಾಸಬೇಡರೂ ಅಲ್ಲಿ ನೆರೆಯುತ್ತಾರೆ. ಇವರನ್ನು ಒಟ್ಟಾರೆ ಕುಲ ಸಾವಿರದವರು ಎಂದು ಕರೆಯಲಾಗುತ್ತದೆ. ಇವರೆಲ್ಲರ ಸಮಕ್ಷಮದಲ್ಲಿ ಹನ್ನೆರಡು ಗುಡಿಸಲು/ಬೆಡಗಿನವರು ಮನೆಯಿಂದ ಭಯ ಭಕ್ತಿ ಮಡಿಯಿಂದ ತಂದಿದ್ದ ತಮ್ಮ ಜನಿಗೆ ಹಸುಗಳ ಮೀಸಲು ಮತ್ತು 'ಕಾಸ'ನ್ನು ಪದಿಯ ಒಳಗೆ ಕೊಡುತ್ತಾರೆ. ಹಸಿ ಸೊಪ್ಪಿನಿಂದ ಕಟ್ಟಿದ ಆವರಣವನ್ನು 'ಪದಿ' ಎಂದು ಕರೆಯುತ್ತಾರೆ. ಮಣ್ಣಿನಿಂದ ಮಾಡಿದ ಮಲೆಯಮ್ಮನ ಪ್ರತಿಮೆಯನ್ನು ಇಲ್ಲಿ ಇಟ್ಟಿರುತ್ತಾರೆ. ಎಲ್ಲರೂ 'ಶ್ರೀಶೈಲದ ಮುತ್ತೈಯ್ಯಗಳ ಮೊಕ್ಕು' ಎಂದು ನಮಸ್ಕಾರ ಮಾಡುತ್ತಾರೆ. ಮುತ್ತೈಯ್ಯಗಳ ಸ್ಮರಣೆ ಮಾಡುತ್ತಾರೆ. ಇವರಲ್ಲಿ 'ಯಜಮಾನ'ನೆಂದು ನಿಷ್ಕರ್ಷಿಸಲ್ಪಟ್ಟವರು ಇನ್ನು ನಿಮ್ಮ ನಿಮ್ಮ ಪೂಜಾ ಕಾರ್ಯಗಳನ್ನು ನಿರ್ವಹಿಸಿ ಎಂದು ಹೇಳುತ್ತಾರೆ. ಬೋಡೇಪಾಲ ಮೈಗೆ, ತಲೆಗೆ ಕರಿ ಕಂಬಳಿಯ ತುಂಡನ್ನು ಸುತ್ತಿಕೊಳ್ಳುತ್ತಾನೆ. ಬಾಯಿಗೂ ಕಟ್ಟಿಕೊಂಡು ಬಲಿಗಾಗಿ ಸಿದ್ಧವಾಗಿರುವ ಕುರಿಯನ್ನೂ, ಕುಡುಗೋಲನ್ನು ಪೂಜೆ ಮಾಡುತ್ತಾನೆ. ಮತ್ತೊಮ್ಮೆ ಎಲ್ಲರೂ ಸೇರಿ ಶ್ರೀಶೈಲ ಮುತ್ತೈಯ್ಯಗಳ ಮೊಕ್ಕು ಎಂದು ನಮಸ್ಕರಿಸಿ ಆ ಹಿರಿಯರ ಸ್ಮರಣೆ ಮಾಡುತ್ತಾರೆ. ಕುಡುಗೋಲನ್ನು ಯಜಮಾನದ ಕೈಗೆ ಕೊಡಲು ಆತ ಕುರಿಯನ್ನು ಕೊಯ್ಯುತ್ತಾನೆ. ಕುರಿಯ ಬಲಗಾಲನ್ನು

ಕೊಯ್ದು ಕುರಿಯ ಬಾಯಿಯಲ್ಲಿಡುತ್ತಾನೆ. ಕೊಯ್ದುಯ್ದ ಕುರಿಯ ಮುಂಡವನ್ನು ಮೂರು ಬಾರಿ ಗಿರಗಿರನೆ ಸುತ್ತಿಸುತ್ತಾರೆ. ಪದಿಯ ಒಳಗೆ ನಂತರ ತೆರೆ ಕಟ್ಟಿಕೊಂಡು ಅದರ ಒಳಗೆ ಕುರಿಯನ್ನು ತೆಗೆದುಕೊಂಡು ಅದರ ಹೊಟ್ಟೆಯೊಳಗಿರುವ 'ಕರಸು' ಓಕ್ಕೆ ಯನ್ನು ತೆಗೆಯುತ್ತಾರೆ. ರಕ್ತವನ್ನು ಇದರೊಂದಿಗೆ ಸೇರಿಸಿ ಹೊಸ ಮೊರದಲ್ಲಿ ಇವೆರಡನ್ನೂ ಕಲಸುತ್ತಾರೆ. ಮಲೆಯಮ್ಮನ ಪ್ರತಿಮೆಯ ಮುಂದೆ ಇದನ್ನು ಇಡುತ್ತಾರೆ. ಎಲ್ಲರೂ ಸೇರಿ ಮತ್ತೆ ನಮಸ್ಕಾರ ಮಾಡುತ್ತಾರೆ. ನಂತರ ಮಲೆಯಮ್ಮನ ಮುಂದೆ ಇಟ್ಟಿದ್ದ ರಕ್ತ ಮತ್ತು ಕರಸನ್ನು ಕಲಿಸಿಕೊಂಡು ಮುತ್ತಿಗಾರರ ಎತ್ತುಗಳ ಸುತ್ತಲೂ ಸರಗ ಚೆಲ್ಲುತ್ತಾರೆ. ಸಾಯಂಕಾಲ ಐದು ಗಂಟೆಗೆ ಈ ಪೂಜಾ ವಿಧಿಗಳೆಲ್ಲಾ ಮುಗಿಯುತ್ತವೆ. ಇದು ಇಲ್ಲಿ ಬಹಳ ಮುಖ್ಯವಾಗಿ ನಡೆಯುವ ವಿಧಿ. ಇದೇ ರೀತಿ ಮತ್ತೆ ಎರಡು ಮಂಗಳವಾರ ಇದೇ ಆಚರಣೆಯನ್ನು ಮಾಡುತ್ತಾರೆ. ಒಟ್ಟು ಮೂರು ಮಂಗಳವಾರ ಈ ಆಚರಣೆ ನಡೆಯುತ್ತದೆ. ಆಗಲೇ ಮುತ್ತಿಗಾರರ ಮಾರಮ್ಮನ ಜಾತ್ರೆ ಮಾಡಲು ೧೫ ದಿನಗಳ 'ಸಾರ'ನ್ನು ಹಾಕುತ್ತಾರೆ. ಮುತ್ತಿಗಾರರ ಮಾರಮ್ಮನ ಜಾತ್ರೆಗೆ ಹನ್ನೆರಡು ಬೆಡಗಿನ ದೇವರುಗಳೆಲ್ಲಾ ಬರುತ್ತಾರೆ.

**ಮಲೆಯಮ್ಮನ ಆರಾಧನೆ – ಜುಮ್ಮೋಬನಹಳ್ಳಿ ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ : ೨**

ಜುಮ್ಮೋಬನಹಳ್ಳಿಯಲ್ಲಿ ಮತ್ತು ಇದಕ್ಕೆ ಸೇರಿದ ಮ್ಯಾಸರಹಟ್ಟಿ ಈ ಎರಡೂ ಕಡೆ ಮಲೆಯಮ್ಮನ ದೇವಸ್ಥಾನಗಳಿವೆ. ಹಳ್ಳದ ಒಂದು ಬದಿಗೆ ಹಟ್ಟಿ ಮತ್ತೊಂದು ಬದಿಗೆ ಹಳ್ಳಿ. ಹಳ್ಳದ ದಡದಲ್ಲಿ ಹಟ್ಟಿಯ ಮಲೆಯಮ್ಮನ ದೇವಸ್ಥಾನವಿದೆ. ಮೂಲತಃ ಇದ್ದದ್ದು ಹಟ್ಟಿಯಲ್ಲಿ ಮಾತ್ರ. ನಂತರ ಆದದ್ದು ಹಳ್ಳಿಯಲ್ಲಿನ ಗುಡಿ. ಊರಲ್ಲಿರುವ ಮಲೆಯಮ್ಮನ ಗುಡಿಯಲ್ಲಿ ಒಂದು ಪೆಟ್ಟಿಗೆಯಲ್ಲಿ ಮರದಿಂದ ಮಾಡಿದ ಮಲೆಯಮ್ಮನ ಮುಖವನ್ನು ಇಟ್ಟಿದ್ದಾರೆ. ವಿಗ್ರಹದ ಇತರ ಭಾಗಗಳನ್ನು ಬಿಚ್ಚಿ ದೇವಸ್ಥಾನದ ಮಾಡಿಗೆ ಕಟ್ಟಿರುತ್ತಾರೆ. ಹಬ್ಬದ ಆಚರಣೆಯ ದಿನ ಇವೆಲ್ಲವನ್ನೂ ಜೋಡಿಸಿ ದೇವಿಯ ಆಕಾರ ರೂಪಿಸಿ ಬಿಳಿಸೀರೆ ಉಡಿಸಿ, ಹೂವು ಹೊಂಬಾಳೆಯಿಂದ ಅಲಂಕರಿಸುತ್ತಾರೆ. ಶೂನ್ಯ ಮಾಸದಲ್ಲಿ ಮಾಡುವ ಜಾತ್ರೆಯೇ ವರ್ಷದ ಪ್ರಮುಖ ಆಚರಣೆ.



ಜಮ್ಮೋಬನಹಳ್ಳಿಯಲ್ಲಿರುವ ದೇವಾಲಯದಲ್ಲಿ ಮಲೆಯಮ್ಮ



ಪಕ್ಕದ ಮ್ಯಾಸರ ಹಟ್ಟಿಯಲ್ಲಿರುವ ಮಲೆಯಮ್ಮ

ಜಾತ್ರೆ ಆರಂಭವಾಗುವುದು ಮಂಗಳವಾರದ ದಿನ ಇದಕ್ಕೆ ಒಂದು ವಾರ ಮುಂಚೆಯೇ `ಸಾರ`ನ್ನು ಹಾಕಲಾಗುತ್ತದೆ. ಇಂದಿಗೆ ಒಂದು ವಾರಕ್ಕೆ ಮಲೆಯಮ್ಮನ ಜಾತ್ರೆ ಎಂದು `ಮಣೆಗಾರ`ರು ಸಾರುತ್ತಾ ಬರುತ್ತಾರೆ. ಸಾರು ಬಿದ್ದ ಮೇಲೆ ಯಾರೂ ಮನೆಯಲ್ಲಿ ತವೆಯನ್ನಿಟ್ಟು ಯಾವುದೇ ಪದಾರ್ಥವನ್ನು ಹುರಿಯುವಂತಿಲ್ಲ. ರೊಟ್ಟಿ, ದೋಸೆಯನ್ನು ಮಾಡುವಂತಿಲ್ಲ. ಕರಿದ ಪದಾರ್ಥಗಳನ್ನು ಮಾಡುವಂತಿಲ್ಲ, ತಿನ್ನುವಂತಿಲ್ಲ, ಪೊರಕೆಯಲ್ಲಿ ಕಸಗುಡಿಸುವಂತಿಲ್ಲ. ಬಟ್ಟೆಯಿಂದಲೇ ಮನೆಯನ್ನು ಗುಡಿಸುತ್ತಾರೆ. ತಲೆಬಾಚಬಾರದು, ತಲೆಗೆ ಸ್ನಾನ ಮಾಡಬಾರದು ಎಂಬ ನಿಬಂಧನೆಗಳಿದ್ದು ಇದನ್ನು ಊರಲ್ಲಿ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಸಾರಿನ ಕೊನೆಯ ದಿನಗಳಲ್ಲಿ ಮನೆಗೆ ಮತ್ತು ಎರಡೂ ದೇವಾಲಯಗಳಿಗೆ ಸುಣ್ಣ, ಬಣ್ಣ, ಕಾರಣೆ ಮಾಡುತ್ತಾರೆ. ಜಾತ್ರೆಯ ಮಂಗಳವಾರದ ದಿನ ಊರ ಹಿರಿಯರೊಂದಿಗೆ ಮುಖ್ಯವಾಗಿ ಗೌಡರು, ಗೊಂಚಿಗಾರರು, ಪೂಜಾರಿಗಳ ಗುಂಪಿನವರು ಗುಡಿಗೆ ಬರುತ್ತಾರೆ. ಇವರೆಲ್ಲಾ ವ್ಯಾಸನಾಯಕರೇ ಪೂಜೆಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನೂ ಜೋಡಿಸಿಕೊಳ್ಳುತ್ತಾರೆ. ಈ ಮೊದಲೇ ಮಲೆಯಮ್ಮನಿಗೆ ಬಲಿ ಕೊಡಲು ಕೋಣವನ್ನು ಬಿಟ್ಟಿರುತ್ತಾರೆ.

ಮಂಗಳವಾರದ ದಿನ ಸಾಯಂಕಾಲ ಉರುಮೆ, ತಮ್ಮಟೆ, ಕಹಳೆ ವಾದ್ಯಗಳೊಂದಿಗೆ ಹೆಂಗಳೆಯರ ಕಳಶದೊಂದಿಗೆ ಛತ್ರಿ, ಚಾಮರಗಳ ಮಧ್ಯೆ ಮಲೆಯಮ್ಮನ ವಿಗ್ರಹವನ್ನು (ಕುದುರೆ ಮೇಲೆ ಕುಳಿತ ಸ್ತ್ರೀ ವಿಗ್ರಹ) ನಾಲ್ಕು ಮಂದಿ ಹೊರುವ ದಂಡಿಗೆಯಲ್ಲಿ ಕೂರಿಸಿ ಅದನ್ನು ನಾಲ್ಕು ಮಂದಿ ಹೆಗಲ ಮೇಲೆ ಹೊತ್ತು ರಾತ್ರಿಯೆಲ್ಲಾ ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ., ಮನೆಗಳ ಮುಂದೆ ಬೀದಿಯಲ್ಲಿ ಸಾಗಿ ಹೋಗುವಾಗ ದಾರಿಗೆ ನೀರು ಹಾಕಿ ಹೂವು, ತೆಂಗಿನಕಾಯಿ, ಬಾಳೆಹಣ್ಣು ನೈವೇದ್ಯ ಮಾಡಿಸಿ ಮನೆಗೆ ಹೆಣ್ಣುಗಳಂತೆ ಭಾವಿಸಿ ಮಡಿಲಕ್ಕಿ ಹಾಕಿ ಕಲುಹಿಸಿಕೊಡುತ್ತಾರೆ. ಹೀಗೆ ಗೌರವಾದರಗಳನ್ನು ಪಡೆದು ವಿಜೃಂಭಣೆಯಿಂದ ಬೆಳಗಿನ ಜಾವದ ವೇಳೆಗೆ ಹಟ್ಟಿಯ ಪಕ್ಕದಲ್ಲಿ ಇರುವ ಹೊರಗುಡಿ ಅಂದರೆ ಮೂಲಗೂಡಿಗೆ ಬಂದು ಕುಳಿತುಕೊಳ್ಳುತ್ತಾಳೆ. ಮೂಲಗುಡಿಯಲ್ಲೂ ಮಲೆಯಮ್ಮನ ಆಕಾರದಲ್ಲಿರುವ ಒಂದು ಮರದ ಆಕೃತಿಗೆ ಅಲಂಕರಿಸಿ ಹೊಸ ಬಟ್ಟೆ ಸುತ್ತಿ ಪೂಜೆ ಮಾಡಿರುತ್ತಾರೆ. ಈ ಗುಡಿಯ ಎದುರಿಗೇ ಮಾತಂಗಿಯ ಗುಡಿಯೂ ಇದೆ. ಬಲಗಾಗಿ ಸಿದ್ಧವಾಗಿದ್ದ ಕೋಣವನ್ನು ನಾಯಕರೇ ಕಡಿದು ಗಂಡಾದೀಪವನ್ನು ಉರಿಸುತ್ತಾರೆ. ಬುಧವಾರದ ದಿನ ಬೆಳಗಿನಿಂದಲೇ ಬೇವಿನ ಸೀರೆ, ಬಾಯಿಬೀಗದ ಸೇವೆ ನಡೆಯುತ್ತದೆ. ಆ ದಿನ ಮುಖ್ಯವಾಗಿ ಹಟ್ಟಿಯವರು ಮತ್ತು ಊರವರೆಲ್ಲಾ ಇಡೀ ಇಡಿಯಾಗಿ ಬಾಳೆಗೊನೆಯನ್ನೇ ತಂದು ಮಲೆಯಮ್ಮನಿಗೆ ನೈವೇದ್ಯ ಮಾಡಿಸುತ್ತಾರೆ. ಗುರುವಾರದ ದಿನ 'ಗಾವು' ಸಿಗಿಯುತ್ತಾರೆ. ಆಕಸೂರಿನಿಂದ ಪೋತರಾಜ ಬಂದು ಗಾವು ಸಿಗಿಯುತ್ತಾನೆ. ತನ್ನ ಈ ಸೇವೆಗೆ ಪ್ರತಿಯಾಗಿ ಆತ ಏನನ್ನೂ ಪಡೆಯುವುದಿಲ್ಲ. ಅದೇ ದಿನ ಬೆಳಗಿನಿಂದಲೂ ಊರ ಮತ್ತು ಹಟ್ಟಿಯ ಜನ ಕುರಿ, ಮೇಕೆಯನ್ನು ತಂದು ಮಲೆಯಮ್ಮನ ಮುಂದೆ ಕಡಿದು ಹರಕೆ ತೀರಿಸುತ್ತಾರೆ. ಶುಕ್ರವಾರದ ದಿನ ಸಾಯಂಕಾಲ ಮತ್ತೆ ಹೊರಗುಡಿಯಿಂದ ಊರೊಳಗಿರುವ ಗುಡಿಗೆ ವಿಜೃಂಭಣೆಯಿಂದ ದೇವಿಯನ್ನು ಕರೆತಂದು ಗುಡಿ ತುಂಬಿಸುತ್ತಾರೆ.

**ಶ್ರಾವಣ ಮಾಸದ ಪೂಜೆ :**

ಶ್ರಾವಣಮಾಸದ ಮೂರು ಮಂಗಳವಾರ ಮಲೆಯಮ್ಮನನ್ನು ಊರೊಳಗಿರುವ ಗುಡಿಯಿಂದ ಹಟ್ಟಿಯ ಪಕ್ಕ ಇರುವ ಹೊರಗುಡಿಗೆ ತರುತ್ತಾರೆ. ಈ ಮಧ್ಯೆ ಊರಲ್ಲೆಲ್ಲಾ ಮೆರವಣಿಗೆ ಮಾಡುತ್ತಾರೆ. ಅಲ್ಲಿ ಸಾಯಂಕಾಲದವರೆಗೂ ಕೂರಿಸುತ್ತಾರೆ. ಹಟ್ಟಿಯ ಜನ ಮೂಲ ಮಲೆಯಮ್ಮನಿಗೂ ಮತ್ತು ಊರಿನಿಂದ ತಂದ ಮಲೆಯಮ್ಮನಿಗೂ ಕೂಡಿಯೇ ಪೂಜೆ ಸಲ್ಲಿಸುತ್ತಾರೆ. ನಂತರ ಊರ ಕಡೆಗೆ ವಿಜೃಂಭಣೆಯಿಂದ ಸಾಗಿ ಮೆರವಣಿಗೆಯೊಂದಿಗೆ ಗುಡಿ ತುಂಬಿಸಿಕೊಳ್ಳುತ್ತಾಳೆ ಮಲೆಯಮ್ಮ.

**ಜೋಳಿಗೆ ತೂಗುವುದು :**

ಪೂಜಾರಿಯ ಮನೆಯಲ್ಲಿ ಒಂದು ಪೆಟ್ಟಿಗೆಯಲ್ಲಿ ದೇವಿಯ ವಸ್ತುಗಳನ್ನು ಭಂಡಾರದೊಂದಿಗೆ ಇಟ್ಟಿದ್ದು ಅದರಲ್ಲಿ ಒಂದು ಕೆಂಪು ಬಟ್ಟೆಯಿಂದ ಮಾಡಿದ ಜೋಳಿಗೆ ಇದೆ. ಇದರಲ್ಲಿ ಪವಿತ್ರವಾದ ಕೆಲವು ವಸ್ತುಗಳಿವೆ. ಯಾರಾದರೂ ನಿಮಿತ್ತ ಕೇಳಿದಾಗ ಪೂಜೆ ಮಾಡಿ ಈ ಜೋಳಿಗೆಯನ್ನು ಪೂಜಾರಿ ಕೈಯಲ್ಲಿಡಿದು ಕೂರುತ್ತಾರೆ. ಅದು ತಾನಾಗಿಯೇ ತೂಗಿದರೆ ಶುಭ ಫಲ. ತೂಗದಿದ್ದರೆ ಅಂದುಕೊಂಡ ಕೆಲಸ ಆಗುವುದಿಲ್ಲ ಎಂಬ ಪ್ರತೀತಿ ಅವರದು. ಒಮ್ಮೆ ಊರಿಗೆ ಬರಗಾಲ ಬಂದಾಗ ಗೋವಾಸರಯ್ಯನ ಗುಡ್ಡಕ್ಕೆ ಹೋಗಿದ್ದೆವು ಎಂದು ಹೇಳುತ್ತಾರೆ. ಈ ಬೆಟ್ಟ ಮ್ಯಾಸಬೇಡರಿಗೆ ಪವಿತ್ರ ಕ್ಷೇತ್ರ. ಅಲ್ಲಿ ಕಾಟಮಲ್ಲನಾಯಕ ಸಮಾಧಿ ಇದೆ. ಚಿತ್ರದುರ್ಗಜಿಲ್ಲೆಯ ಚುಕ್ಕೊಂಡನಹಳ್ಳಿ, ಕಲ್ಲೇದೇವರಪುರದ ಮಧ್ಯೆ ಈ ಬೆಟ್ಟ ಇದೆ. ಅಲ್ಲಿಂದ ತಂದ ಶಿವಲಿಂಗ ಮತ್ತು ಬಸವನ ಬೆಳ್ಳಿಯ ಮಾದರಿ ಆ ಜೋಳಿಗೆಯಲ್ಲಿರುವುದಾಗಿ ಹೇಳುತ್ತಾರೆ.

**ಮರ್ಲಹಳ್ಳಿ – ಮಲೆಯಮ್ಮನ ಆರಾಧನೆ :** ೩

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕು ಕೇಂದ್ರಕ್ಕೆ ಹತ್ತಿರದಲ್ಲಿರುವ ಹಳ್ಳಿಯಿದು. ಎತ್ತಿನ ಗೂಡಿನ ಬಳಿ ಆಲದಮರದ ಬುಡದಲ್ಲಿ ಒಡಮೂಡಿರುವ ಪ್ರತಿಮೆಯನ್ನೇ ಮಲೆಯಮ್ಮ ಎಂದು ಇವರು ಪೂಜಿಸುತ್ತಾರೆ. ಇಲ್ಲಿಯ ಮ್ಯಾಸರ ಪ್ರಕಾರ ಈಕೆ ಮಜ್ಜಿಗೆ ಕಂಬದಲ್ಲಿ ಒಡಮೂಡಿದವಳು. ಪಶುಪಾಲಕರಾದ ಇವರು ಮಜ್ಜಿಗೆ, ಹಾಲು, ಮೊಸರು ಇವುಗಳ ಸಮೃದ್ಧಿಯೊಂದಿಗೇ ಒಡನಾಡುತ್ತಿರುವಾಗ ಇದಕ್ಕೆ ಅನುಗುಣವಾಗಿಯೇ ತಮ್ಮ ದೈವೀಕ ನಂಬಿಕೆಗಳನ್ನೂ ಬೆಳೆಸಿಕೊಳ್ಳುವುದೂ ಅಷ್ಟೇ ಸಹಜವಾದುದು. ಇಲ್ಲಿ ಮುಖ್ಯವಾಗಿ ಮಲೆಯಮ್ಮನಿಗೆ ಎರಡು ಹಬ್ಬಗಳನ್ನು ಮಾಡುವ ಪರಿಪಾಠವಿದೆ. ಮೊದಲನೆಯದಾಗಿ ಮ್ಯಾಸಮಂಡಲದಲ್ಲಿ ಕುಲದೇವತೆಗಳಿಗೆ ಮಾಡುವ ಗುಗ್ಗರಿ ಹಬ್ಬ. ಎರಡನೆಯ ಹಬ್ಬ ಕಾರ್ತೀಕ ಹುಣ್ಣಿಮೆಯಂದು ಮಾಡಿದ ಹಬ್ಬ.

**ಗುಗ್ಗರಿ ಹಬ್ಬ :**

ಮಾಘ ಮಾಸದಲ್ಲಿ ಮಂಗಳವಾರ ಅಥವಾ ಶುಕ್ರವಾರದ ದಿನ ಈ ಹಬ್ಬದ ಆಚರಣೆ ನಡೆಯುತ್ತದೆ. ಇಲ್ಲಿರುವ ಬಹುಪಾಲು ಮಂದಿ ಮ್ಯಾಸಬೇಡರೇ. ಜಹಗೀರಾಗಿ ಪಡೆದ ಜಮೀನು ಇಲ್ಲಿರುವ

ಕಾರಣಕ್ಕೆ ಒಂದು ಬ್ರಾಹ್ಮಣ ಕುಟುಂಬದವರೂ ಈ ಆಚರಣೆಯಲ್ಲಿ ಜಾತಿಭೇದವಿಲ್ಲದೆ ಪಾಲ್ಗೊಳ್ಳುತ್ತಾರೆ. ಪ್ರತಿಮನೆಯವರೂ ಸ್ವಲ್ಪ ಸ್ವಲ್ಪ ಹುರುಳಿಯನ್ನು ದೇವಸ್ಥಾನಕ್ಕೆ ಕೊಡುತ್ತಾರೆ. ರಾತ್ರಿ ೯-೧೦ ಗಂಟೆ ಮೂರು ಹಟ್ಟಿಯ ಮ್ಯಾಸರು ಇಲ್ಲಿ ಸೇರುತ್ತಾರೆ. ಈ ವೇಳೆಗಾಗಲೇ ಮಧ್ಯಾಹ್ನವೇ ಬಂದ ಕೆಲವರು ಗುಗ್ಗರಿಯನ್ನು ಬೇಯಿಸುತ್ತಾರೆ. ಹಟ್ಟಿಗಳಿಂದ ಹೆಂಗಳೆಯರು ಕಳಶಗಳನ್ನು ಹಿಡಿದು ಬರುತ್ತಾರೆ. ಮಲೆಯಮ್ಮನನ್ನು ಪೂಜಿಸಿ ಗುಗ್ಗರಿ ನೈವೇದ್ಯವನ್ನು ಮಾಡುತ್ತಾರೆ. ಎಲೆ ಪೂಜೆ ಎಂದರೆ ಎಲೆ ಮತ್ತು ಹೂವುಗಳಿಂದ ಅಲಂಕರಿಸಿ ಹೊಸ ಸೀರೆ ಕೆಂಪು ಅಥವಾ ಬಿಳಿ ಬಣ್ಣದ್ದನ್ನು ಉಡಿಸುತ್ತಾರೆ. ಬಳೆ, ಅರಿಷಿಣ, ಕುಂಕಮ ಇಟ್ಟು ಅಲಂಕರಿಸುತ್ತಾರೆ. ಕಳಶಗಳನ್ನು ಬೆಳಗಿ ಮಂಗಳಾರತಿ ಮಾಡಿ ಜನ ಆ ರಾತ್ರಿಯೇ ಊರಿಗೆ – ಹಟ್ಟಿಗಳಿಗೆ ಮರಳುತ್ತಾರೆ. ಬುಧವಾರ ಬೆಳಿಗ್ಗೆ ಅಲ್ಲಿ ಉಳಿದಿದ್ದ ಒಬ್ಬಿಬ್ಬರು ಪೂಜೆಯನ್ನು ಇಳಿಸುತ್ತಾರೆ. ಅಂದರೆ ಎಲೆ, ಹೂವುಗಳಿಂದ ಮಲೆಯಮ್ಮನನ್ನು ಹಿಂದಿನ ದಿನ ಅಲಂಕರಿಸಲಾಗಿದ್ದುದನ್ನು ತೆಗೆಯುತ್ತಾರೆ. ನಂತರ ಹಟ್ಟಿಯು ಎಲ್ಲರಿಗೂ ಗುಗ್ಗರಿ, ಬಾಳೆಹಣ್ಣು, ಎಲೆ, ಅಡಿಕೆಯ ಪ್ರಸಾದವನ್ನು ಹಂಚುತ್ತಾರೆ. ಮರ್ಲಹಳ್ಳಿ ಊರಲ್ಲಿಯೂ ಇತ್ತೀಚಿಗೆ ಒಂದು ಗುಡಿಯನ್ನು ಕಟ್ಟಿ ಅಲ್ಲಿ ಮಲೆಯಮ್ಮನ ಮೂರ್ತಿಯನ್ನು ಇರಿಸಿದ್ದಾರಾದರೂ ಆದಿನ ಅಲ್ಲಿ ವಿಶೇಷವಾದ ಪೂಜೆಯೇನೋ ನಡೆಯುವುದಿಲ್ಲ.

ಪ್ರತಿ ಮೂರು ವರ್ಷಕ್ಕೊಮ್ಮೆ ಇದೇ ಗುಗ್ಗರಿ ಹಬ್ಬದ ಆಚರಣೆಯಲ್ಲಿ ಮಲೆಯಮ್ಮನಿಗೆ ಮತ್ತೊಂದು ಆಚರಣೆ ನಡೆಯುತ್ತದೆ. ಒಂದು ಸೋಮವಾರ (ಮಾಘಮಾಸ)ದ ದಿನ ಸಂಜೆಯೇ ಎತ್ತಿನ ಗೂಡಿನ ಬಳಿ ಗುಗ್ಗರಿ ನೈವೇದ್ಯವನ್ನು ಪಡೆದು ಮಲೆಯಮ್ಮ ಆಗ ಅಲ್ಲಿಯೇ ತಾತ್ಕಾಲಿಕವಾಗಿ ನಿರ್ಮಿಸಿದ ರಥದಲ್ಲಿ ಕುಳಿತು ಊರೊಳಗೆ ವಿಜೃಂಭಣೆಯಿಂದ ಬರುತ್ತಾಳೆ. ಊರಲ್ಲಿರುವ ಗುಡಿಯಲ್ಲಿ ಕೂರಿಸುತ್ತಾರೆ. ಊರಿಗೆ ಅನ್ನ ಚೆಲ್ಲಿ ಶಾಂತಿ ಮಾಡುತ್ತಾರೆ. ಬೆಳಗಿನ ಜಾವ ನಾಲ್ಕು ಗಂಟೆಯ ವೇಳೆಗೆ ಮತ್ತೆ ಮೂಲ ಗೂಡಿಗೆ ಮರಳುತ್ತವೆ. ಆಗ ಅಲ್ಲಿ ಕೋಣ ಕಡಿದು ಗಂಡಾದೀಪ ಹಚ್ಚಿ ಪೂಜೆ ಮಾಡುತ್ತಾರೆ. ಕೋಣ ಕಡಿಯುವಾಗ ಮಲೆಯಮ್ಮನ ವಿಗ್ರಹಕ್ಕೆ ಅಡ್ಡವಾಗಿ ಪರದೆಯನ್ನು ಕಟ್ಟಿರುತ್ತಾರೆ. ಮ್ಯಾಸರೇ ಮೊದಲು ಗಬ್ಬದ ಕುರಿ ಕಡಿದು ನಂತರ ಕೋಣ ಕಡಿಯುತ್ತಾರೆ. ಗಂಡಾದೀಪ ಹಚ್ಚಿ ಪೂಜೆ ಮಾಡಿದ ತಕ್ಷಣವೇ ಮಲೆಯಮ್ಮನನ್ನು ಅಲಂಕರಿಸಿದ ಬಳೆ, ಕುಂಕಮ, ಹೂವು, ಮೂಗುತಿ ತೆಗೆದು ಬಿಡುತ್ತಾರೆ. ನಂತರ ಜನರೆಲ್ಲಾ ತಮ್ಮ ತಮ್ಮ ಹರಕೆಯಂತೆ ಕುರಿ, ಮೇಕೆ ಕಡಿಯುತ್ತಾರೆ. ಆ ದಿನವೆಲ್ಲಾ ದೇವತೆಗೆ ಹರಕೆ ತೀರಿಸುವ ವಿಧಿ ನಡೆಯುತ್ತದೆ. ಕೆಲವರು ಬೇವಿನ ಸೀರೆ ಉಡುತ್ತಾರೆ. ಉಳಿದವರು ಸಾಂಕೇತಿಕವಾಗಿ ಕೈಯಲ್ಲಿ ಬೇವಿನಸೊಪ್ಪನ್ನು ಹಿಡಿದು ಪ್ರದಕ್ಷಣೆ ಮಾಡಿ ಬೇವಿನ ಸೀರೆ ಉಟ್ಟು ಶಾಸ್ತ್ರ ಮಾಡುತ್ತಾರೆ. ಅಲ್ಲಿಂದ ಯುಗಾದಿಯವರೆಗೂ ಮಲೆಯಮ್ಮನಿಗೆ ಬಳೆ, ಮೂಗುತಿ ಇಡುವುದೇ ಇಲ್ಲ. ಯುಗಾದಿಯ ಮರುದಿನ ಊರ ಹಿರಿಯರೆಲ್ಲಾ ಹತ್ತಿರದ ರಾಯದುರ್ಗದ ಬಳಿ ಇರುವ ಗಾಳಿಮಾರಮ್ಮನ ದೇವಾಲಯದ ಬಳಿ ಹೋಗಿ ಅಲ್ಲಿ ಕುರಿ ಕಡಿದು ಪೂಜೆ ಮಾಡಿ ಊಟ ಮಾಡಿ ನಂತರ ಆ ಪ್ರಾಂತ್ಯದಲ್ಲಿಯೇ ಒಂದು ಕೋಣವನ್ನು ಖರೀದಿಸಿಕೊಂಡು ತರುತ್ತಾರೆ. ಅದನ್ನು ಮಲೆಯಮ್ಮನ ಹೆಸರಿನಲ್ಲಿ ಊರಿಗೆ ತಂದು ಊರಲ್ಲಿ ಪ್ರತಿಮನೆಯ ಮುಂದೂ ಬರಲು ಜನ ಅದರ ನೆತ್ತಿಗೆ ಎಣ್ಣೆ ಹಾಕಿ, ಕಾಯಿ ಒಡೆದು ಊದಿನ ಕಡ್ಡಿ ಬೆಳಗಿ ಪೂಜಿಸಿ ತಿನ್ನಲು ಅಕ್ಕಿ ಇಡುತ್ತಾರೆ. ಇದನ್ನು ಹಿಡಿದಿರುವವರು ಮಾತ್ರ ಮಾದಿಗರು. ಇದಕ್ಕೆ ಮೂರು

ವರ್ಷವಾದ ನಂತರ ಗುಗ್ಗರಿ ಹಬ್ಬದಲ್ಲಿ ಅದನ್ನು ಕಡಿಯುತ್ತಾರೆ. ಯುಗಾದಿ ಹಬ್ಬದ ನಂತರ ಊರಿಗೆ ಕೋಣ ಬಂದು ಮೇಲೆಯೇ ಮತ್ತೆ ಮಲೆಯಮ್ಮನಿಗೆ ಕುಂಕಮ, ಮೂಗುತಿ, ಬಳೆ ಇಟ್ಟು ಅಲಂಕರಿಸಲಾಗುತ್ತದೆ. ರಥದಲ್ಲಿ ಮೆರವಣಿಗೆ ಮಾಡಲೆಂದೇ ಮಲೆಯಮ್ಮನ ಒಂದು ವಿಗ್ರಹವನ್ನು ಮಾಡಿಸಿದ್ದಾರೆ. ಮರ್ಲಹಳ್ಳಿ ಎಂದರೆ ಮೂರು ಮ್ಯಾಸರ ಹಟ್ಟಿಗಳು ಸೇರಿ ಆದ ಒಂದು ಗ್ರಾಮ.

**ಕಾರ್ತಿಕದ ಹಬ್ಬ :**

ಶುಕ್ರವಾರ ಇಲ್ಲವೆ ಮಂಗಳವಾರ ರಾತ್ರಿ ಎಲೆ ಮತ್ತು ಹೂವುಗಳಿಂದ ಮಲೆಯಮ್ಮನನ್ನು ಅಲಂಕರಿಸಿ ದೀಪ ಬೆಳಗುತ್ತಾರೆ. ಊರ ಮಹಿಳೆಯರೂ ಕಳಶ ಬೆಳಗಿ ಕಾಯಿ, ಬಾಳೆಹಣ್ಣಿನ ನೈವೇದ್ಯ ಮಾಡುತ್ತಾರೆ.

ಹಿಂದೆ ದೆಡ್ಡಿಸೂರನಾಯಕನ ಎತ್ತಿನ ಗೂಡುಗಳನ್ನು ಇಲ್ಲಿ ಇಟ್ಟುಕೊಂಡಿದ್ದರು. ಎತ್ತಿನಗೂಡಿನಲ್ಲಿ ಒಂದು ಆಲದ ಮರದ ಕೊಂಬೆಯನ್ನು ಊರಿ ಅದನ್ನೇ ಮಜ್ಜಿಗೆ ಕಡೆಯುವ ಕಂಬವನ್ನಾಗಿ ಮಾಡಿಕೊಂಡಿದ್ದು ಆ ಕೊಂಬೆ ಚಿಗುರಿ ಈಗ ಅದೇ ದೊಡ್ಡ ಮರವಾಗಿದೆ. ಅದರ ಬುಡದಲ್ಲಿರುವ ಕಪ್ಪುಆಕೃತಿಯೇ ಮಲೆಯಮ್ಮ. ದೆಡ್ಡಿಸೂರನಾಯಕನಿಗೆ ಸೇರಿದ ಎತ್ತಿನ ಗೂಡು ಈಗ ಗುಡೇಕೋಟೆ (ಕೂಡ್ಲಿಗೆ ಬಳಿ) ಬೆಟ್ಟಗಳ ತಪ್ಪಲಿನಲ್ಲಿವೆ. ಪ್ರತಿವರ್ಷ ದೆಡ್ಡಿಸೂರನಾಯಕನ ಗುಗ್ಗರಿ ಹಬ್ಬಕ್ಕೆ ಎತ್ತುಗಳು ಚಳ್ಳಕೆರೆ ತಾಲ್ಲೂಕಿನ ಹಿರೇಹಳ್ಳಿಗೆ ಬರುತ್ತವೆ. ಅಲ್ಲಿಯೇ ದೆಡ್ಡಿಸೂರನಾಯಕನ ಗುಡಿ ಇರುವುದು. ಬರುವಾಗ ಮಾರ್ಗಮಧ್ಯದಲ್ಲಿ ಮರ್ಲಹಳ್ಳಿಯ ಈ ಮಲೆಯಮ್ಮನ ಗುಡಿಯ ಬಳಿ ಬರುತ್ತವೆ. ಅಲ್ಲಿ ಒಂದು ರಾತ್ರಿ ಕಳೆದು ಆ ಹಟ್ಟಿಗಳ ಜನರ ಆತಿಥ್ಯ ಪಡೆದು ಮಲೆಯಮ್ಮನನ್ನು ಪೂಜಿಸಿ ಹಿರೇಹಳ್ಳಿಯ ಕಡೆ ಪ್ರಯಾಣ ಬೆಳೆಸುತ್ತವೆ.

ಹಿಂದೆ ವಿವರಿಸಲಾದ ಮಲೆಯಮ್ಮನ ಅರಾಧನೆ ಆಚರಣೆಗಳನ್ನು ಮುಖ್ಯವಾಗಿ ಹೀಗೆ ವಿಂಗಡಿಸಿಕೊಳ್ಳಬಹುದು.

೧. ಗುಗ್ಗರಿ ಹಬ್ಬದ ಆಚರಣೆ

೨. ಕೋಣನ ಬಲಿಕೊಟ್ಟು ಆಚರಿಸುವ ಮಾರಿಯ ಆರಾಧನೆ.

೩. ಮಲೆಯಮ್ಮ ಅಂದು ನಡೆಸಿದ ಕಾರ್ಯಾಚರಣೆಯ ಪುನರಭಿನಯ

೪. ಇತರೆ ಶ್ರಾವಣ, ಕಾರ್ತೀಕದ ಹಬ್ಬಗಳು.

೧. ಮಲೆಯಮ್ಮನಿಗೆ ಈಗ ಗುಗ್ಗರಿ ಹಬ್ಬದ ಆಚರಣೆ ನಡೆಯುವುದು ಮೊಳಕಾಲ್ಮುರು ತಾಲ್ಲೂಕಿನ ಮರ್ಲಹಳ್ಳಿ ಗ್ರಾಮದಲ್ಲಿ ಮಾತ್ರ. ಮಾಘ ಮಾಸದಲ್ಲಿ ಮ್ಯಾಸಮಂಡಲದಲ್ಲಿ ಎಲ್ಲಾ ದೇವತೆಗಳಿಗೂ ಸಾಮಾನ್ಯವಾಗಿ ನಡೆಸುವ ಆರಾಧನೆ ಇದು. ಸಂಸ್ಕೃತಿಯ ಒಂದು ಧಾರ್ಮಿಕ ಆರಾಧನೆಯ ಪದ್ಧತಿಯಾಗಿ ಇದು ಇಲ್ಲಿ ಉಳಿದುಬಂದಿದೆ. ಮ್ಯಾಸರಲ್ಲಾ ಸೇರಿ ಹಬ್ಬ ಆಚರಿಸಿ ಮರುದಿನ ಈ ಗುಗ್ಗರಿ ಪ್ರಸಾದವನ್ನು ಮನೆ ಮನೆಗೂ ವಿತರಿಸುವಲ್ಲಿ ಒಟ್ಟು ಸಮುದಾಯದ ಸಾಮೂಹಿಕ ಪಾಲ್ಗೊಳ್ಳುವಿಕೆ ಇಲ್ಲಿ ಕಂಡುಬರುತ್ತದೆ.

೨. **ಕೋಣ, ಕುರಿ ಬಲಿ** – ಎರಡು ಕಡೆ ಈ ಆಚರಣೆ ನಡೆಯುತ್ತದೆ. ಮೇಲೆ ವಿವರಿಸುವ ಮರ್ಲಹಳ್ಳಿಯಲ್ಲಿ ಮೂರು ವರ್ಷಕ್ಕೊಮ್ಮೆ ಈಕೆಗಾಗಿಯೇ ಮೀಸಲಾಗಿರಿಸಿದ್ದ ತೊಂಡು ಮೇಯ್ದು ಕೋಣವನ್ನು ಕಡಿದು ತಕ್ಷಣ ಮಲೆಯಮ್ಮನ ವಿಗ್ರಹದ ಮೂಗುತಿ, ಬಳೆ, ಹೂವು ತೆಗೆದು ಆಕೆಯನ್ನು ವಿಧವೆಯಾಗಿಸುತ್ತಾರೆ. ಮಾರಿಯ ಪುರಾಣದ ಕಥೆ ಏನಿದೆ– ಬಲಿಯಾಗುವ ಕೋಣ ಆಕೆಯ ಗಂಡನ ಪ್ರತೀಕ ಎಂಬ ನಂಬಿಕೆ ಒಳಸೇರಿ ಇದೂ ಒಂದು ಆಚರಣೆಯಾಗಿದೆ. ಬುಡಕಟ್ಟಿನ ನಾಯಕಿ ದೈವೀಕರಣಗೊಂಡು ನಂತರ ಊರು ಮಾರಮ್ಮನಾಗಿರುವ ಈ ಪರಿ ವಿಶೇಷವಾದುದಾಗಿದೆ.

೩. **ಮುತ್ತಿಗಾರರಹಳ್ಳಿ** – ಮೊಳಕಾಲ್ಮುರು ತಾಲ್ಲೂಕು ಇಲ್ಲಿಯ ರಕ್ಷಿತ ಅರಣ್ಯದಲ್ಲಿ ಎತ್ತಿನ ಗೂಡುಗಳ ಬಳಿ ಈ ವಿಶೇಷವಾದ ಆರಾಧನೆ ಮಾಡಲಾಗುತ್ತದೆ. ಮೂರು ವರ್ಷಕ್ಕೊಮ್ಮೆ ಆಚರಿಸುವ ಈ ಆಚರಣೆ ಮಲೆಯಮ್ಮನ ಪೂಜೆ, ಮಲೆದೇವರ ಪೂಜೆ ಎಂದೂ ಕರೆಸಿಕೊಳ್ಳುತ್ತದೆ. ಹನ್ನೆರೆಡು ಗುಡಿಸಿಲಿನವರು ಎಂದು ಕರೆಯಲ್ಪಡುವ ಹನ್ನೆರಡು ಬೆಡಗಿನವರು ಇಲ್ಲಿ ಪಾಲ್ಗೊಳ್ಳಲೇ ಬೇಕು. ಮಲೆಯಮ್ಮನ ನೇತೃತ್ವದಲ್ಲಿ ಮಧ್ಯಕರ್ನಾಟಕದ ಕಡೆ ಬಂದವರಿವರು. ಹಾಗಾಗಿ ಇವರೆಲ್ಲರ ಉಪಸ್ಥಿತಿ ಇಲ್ಲಿ ಅಗತ್ಯ. ಇವರಲ್ಲದೆ 'ಕಡೇಲುನಾಯಕ' ಎಂಬ ಬೆಡಗಿಗೆ ಸೇರಿದವ ಇವರನ್ನೆಲ್ಲಾ ಒಂದೆಡೆ ಸೇರಿಸಿ ಪ್ರಜೆಯ ಬಗ್ಗೆ ಚರ್ಚಿಸಲು ಅನುವು ಮಾಡಿಕೊಡುತ್ತಾನೆ. ಅಂದರೆ ಸಮುದಾಯಕ್ಕೆ ಸೇರಿದ ಪ್ರಮುಖ ವ್ಯಕ್ತಿಗೆ ಆರಾಧನೆ ಸಲ್ಲಿಸುವಾಗ ಸಮುದಾಯದವರ ಉಪಸ್ಥಿತಿ ಅಲ್ಲಿ ಕಡ್ಡಾಯ. ಈ ಮೂಲಕ ತಮ್ಮ ಒಗ್ಗಟ್ಟನ್ನೇ ತಮ್ಮ ಸಂಸ್ಕೃತಿಯನ್ನು ಕಾಯ್ದುಕೊಂಡು ಬರಲೂ ಸಾಧ್ಯವಾಗುತ್ತದೆ. ಹೊಸ ಗುಡಿಸಲಿನಲ್ಲಿ 'ಮಲೆಯಮ್ಮ' ಎಂದು ಮಣ್ಣಿನ ಮೂರ್ತಿ ಮಾಡಿ ಇಟ್ಟಿರುತ್ತಾರೆ. ಅಂದು ಗೆದ್ದವಲ್ಲಿ ರಾಜನ ಸೇನೆಯನ್ನು ಎದುರಿಸುವ ಸಂದರ್ಭದಲ್ಲಿ ಮಲೆಯಮ್ಮ ಹೀಗೆಯೇ ಮಾಡಿದ್ದಳಂತೆ ಅದರ ಪುನರಭಿನಯವಿದು ಯಾವುದೇ ಸಮುದಾಯವೊಂದರಲ್ಲಿ ರೂಢಿಯಲ್ಲಿರುವ ಆಚರಣೆ ಆ ಸಮುದಾಯದ ಕಳೆದ ಬದುಕಿನ ವಿಶಿಷ್ಟತೆಯನ್ನು ವರ್ತಮಾನದಲ್ಲಿ ಸ್ಮರಿಸುವ ಒಂದು ವಿಧಾನವೇ ಹೊರತು ಬೇರೆ ಏನೂ ಅಲ್ಲ. ಆಚರಣೆಯ ಹಿಂದೆ ಸಂಬಂಧಿಸಿದ ಪುರಾಣ ಇರುತ್ತದೆ. ಶ್ರೀಶೈಲದ ಮುತ್ತೈಗಳ ಮೊಕ್ಕು ಎಂದು ಹಿರಿಯರನ್ನು ಜ್ಞಾಪಿಸಿಕೊಂಡು ಸಾಮೂಹಿಕವಾಗಿ ನಮಸ್ಕಾರ ಮಾಡಿ ನಂತರ ಬೋಡೇಪಾಲ ಬೆಡಗಿನವರು ಕುರಿಯನ್ನು ಕಡಿದು ಅದರ ಬಲಗಾಲನ್ನು ಅದರ ಬಾಯಿಯಲ್ಲಿಟ್ಟು ನಂತರ ಅದರ ಹೊಟ್ಟೆಯೊಳಗಿನ ಕರಸು – ಹಿಕ್ಕೆ ಅನ್ನದಲ್ಲಿ ಕಲೆಸಿ ಎತ್ತಿನ ಗೂಡಿನ ಸುತ್ತ ಮೂರು ಬಾರಿ ಚೆಲ್ಲುತ್ತಾನೆ. ಹೀಗೆ ಚೆಲ್ಲುವುದಕ್ಕೆ ಅವರು ಕೊಡುವ ಕಾರಣ ಮಲೆಯಮ್ಮ ಹಿಂದೆ ಅರಸನ ಸೇನೆಯನ್ನು ಮಣಿಸಲು ಇದೇ ತಂತ್ರ ಮಾಡಿದಳು ಎಂದು ಹೇಳಿ ಅವರ ಪುನರ್ ಅಭಿನಯ ಸಾಂಕೇತಿಕ ಆಚರಣೆ ಹೀಗೆ ಮೂರು ಮಂಗಳವಾರ ಮಾಡುತ್ತಾರೆ. ಮಲೆಯಮ್ಮ ಮೂರು ಬಾರಿ ಗೂಡಿನ ಸುತ್ತ ತಿರುಗಿ ಯುಕ್ತಿಯಿಂದ ಕಾರ್ಯ ಸಾಧನೆ ಮಾಡಿದವಳು. ದೇವತೆಗೆ ಸಂಬಂಧಿಸಿದ ಸೈದ್ಧಾಂತಿಕ ಭಾಗ ಪುರಾಣವಾದರೆ ಅದಕ್ಕೆ ಸಂಬಂಧಿಸಿದ ಕ್ರಿಯಾಭಾಗ ಆಚರಣೆ ಆಗುತ್ತದೆ ಎನ್ನುತ್ತಾರೆ ಡಾ. ಸಿದ್ಧಲಿಂಗಯ್ಯನರು(ಗ್ರಾಮದೇವತೆಗಳು ಪುಟ.–೨) ಇಲ್ಲಿ ಆಚರಣೆಯಲ್ಲಿ ಆಕೆ ಅಂದು ಮಾಡಿದ ಕ್ರಿಯೆ ಪುನರಾವರ್ತನೆ ಆಗಿ ಆ ಮೂಲಕ ಆಕೆ ಸ್ಮರಣೆಯಲ್ಲಿರಿಸಿಕೊಂಡು ಬರುತ್ತಿರುವ ವಿಧಾನವಿದು. ಆಕೆ ಮಣ್ಣು ಕಲಸಿ ಮಾರಮ್ಮ ಎಂದು ಪೂಜಿಸಿದ್ದ ಕಾರಣ ಇಂದಿಗೂ ಅದೇ ಬಗೆಯ ಆಚರಣೆ ಇದ್ದು ಈ ಮೂರ್ತಿಯನ್ನೆ

ಮಲೆಯಮ್ಮ ಎಂದು ಅರ್ಥೈಸುವುದು ವಿಪರ್ಯಾಸದ ಸಂಗತಿಯಾಗಿದೆ. ಇದು ಮಾರಮ್ಮನ ಆರಾಧನೆಯಂತೆ ತೋರಿದರೂ ಅದಲ್ಲ. ಕಾರಣ ಮೂರು ವಾರಗಳು ಹೀಗೆ ಮಾಡಿ ನಂತರ ಸಾರನ್ನು ಹಾಕಿ ಮುತ್ತಿಗಾರರ ಮಾರಮ್ಮನ ಜಾತ್ರೆಯನ್ನು ಮಾಡುತ್ತಾರೆ.

ಜುಮ್ಮೋಬನಹಳ್ಳಿ ಕೂಡ್ಲಿಗೆ ತಾಲ್ಲೂಕು ಇಲ್ಲಿಯೂ ಊರು ಮಾರಮ್ಮನ ಜಾತ್ರೆ ಮಾಡಿದಂತೆ ಕೋಣ ಕುರಿ ಕಡಿದು ಪೂಜಿಸುತ್ತಾರೆ. ಗಾವು ಸಿಗಿಯುತ್ತಾರೆ. ಇಲ್ಲಿ ಪ್ರಧಾನ ಪಾತ್ರ ಮ್ಯಾಸನಾಯಕರಾದರೂ ಊರ ಇತರ ಸಮುದಾಯದವರೂ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಆದರೆ ವಿಧಿಗಳನ್ನು ನಡೆಸುವವರು ಮಾತ್ರ ನಾಯಕರೇ.

ಜೋಳಿಗೆ ತೂಗುವ ಆ ಮೂಲಕ ಭವಿಷ್ಯ ಕೇಳುವ ವಿಧಾನ ಜುಮ್ಮೋಬನಹಳ್ಳಿಯಲ್ಲಿ ಮಾತ್ರ ಇದೆ. ಕೆಂಪು ಬಟ್ಟೆಯಿಂದ ಮಾಡಿದ ಜೋಳಿಗೆಯದು. ಕೊರಚರು ಸೊಂಡೂರು ಗಂಡಿಯಿಂದ ಬರುವಾಗ ಇವರಿಗೆ ಮ್ಯಾಸರು ಪೂಜಿಸಿ ಹೋಗಿದ್ದ ಮಣ್ಣಿನ ಮೂರ್ತಿ ಸಿಕ್ಕು ಅದನ್ನು ತಂದು ಇವರಿಗೆ ಕೊಟ್ಟರಂತೆ. ಮಲೆಯಮ್ಮ ಪೂಜಿಸಿದ್ದ ಆ ಮಣ್ಣಿನ ಮೂರ್ತಿಯನ್ನೇ ಇವರು ಮಲೆಯಮ್ಮ ಎಂದು ಪೂಜಿಸಲು ತೊಡಗಿದರಂತೆ. ಜೋಳಿಗೆಯಲ್ಲಿ ಇದನ್ನು ಸಂರಕ್ಷಿಸಿ ತಂದು ಕೊಟ್ಟ ಕಾರಣ ಜೋಳಿಗೆಗೆ ಪ್ರಾತಿನಿಧ್ಯವಿದೆ ಎಂದು ಹೇಳುತ್ತಾರೆ.

ಜುಮ್ಮೋಬನಹಳ್ಳಿಯಲ್ಲಿ ಶ್ರಾವಣದಲ್ಲೂ, ಮರ್ರಿಹಳ್ಳಿಯಲ್ಲಿ ಕಾರ್ತೀಕಮಾಸದಲ್ಲೂ ನಡೆಸುವ ಆಚರಣೆಗಳು ಮಲೆಯಮ್ಮ ಗ್ರಾಮ್ಯೀಕರಣಗೊಂಡು ನಾಗರೀಕ ಪೂಜೆಗಳನ್ನು ಶುಭದಿನಗಳಲ್ಲಿ ಪಡೆಯುವ ವಿಧಾನವಾಗಿದೆಯಷ್ಟೇ.

**೯) ಮುಂಗಲು ದೇವಮ್ಮನ ಆರಾಧನೆ, ಆಚರಣೆ :**

ಗೌತಮಮಹರ್ಷಿಯಿಂದ ಶಾಪಗ್ರಸ್ತಳಾಗಿ ಅಂದರೆ ಪರಿತ್ಯಕ್ತೆಯಾಗಿ ಕಲ್ಲಾಗಿ ಜಡಭಾವದಿಂದ ಮೂಲೆಗೆ ಸರಿದ ಅಹಲ್ಯೆಯಂತೆಯೇ ಸಮುದಾಯದಿಂದ ಪರಿತ್ಯಕ್ತಳಾದಂತೆ ಗಲಗಲ್ಲಿನ ಮೂಲೆಯೊಂದರಲ್ಲಿ ಪುಟ್ಟದಾದ ಹುಲ್ಲಿನ ಗುಡಿಸಲಿನಲ್ಲಿ ಮುಂಗಲು ದೇವಮ್ಮ ಮುದುಡಿ ಕುಳಿತಂತೆ ಭಾಸವಾಗುತ್ತದೆ. ಆಕೆಯ ಸ್ಮರಣಾರ್ಥವಾಗಿ ಪುಟ್ಟದೊಂದು ಪೆಟ್ಟಿಗೆ. ಅದರಲ್ಲಿ ಆಕೆಗೆ ಸಂಬಂಧಿಸಿದ ವಸ್ತುಗಳಿವೆ ಎಂದು ಹೇಳಲಾಗುತ್ತದೆ. ಅದರ ಹಿಂಭಾಗದಲ್ಲಿ ಗುಡಿಸಿಲ ಗೋಡೆಗೆ ಒರಗಿಸಿ ಇಟ್ಟಿರುವ ಕೆಲವು ಆಯುಧಗಳು ಇಂದು ಪೂಜೆಗೊಳ್ಳುತ್ತಿವೆ. ಗೌರಸಮುದ್ರದ ಮಾರಮ್ಮನಿಗೆ ಶಿವರಾತ್ರಿ ಅಮಾವಾಸ್ಯೆ ಸಂದರ್ಭದಲ್ಲಿ ಹುರುಳಿ ಬೇಯಿಸಿ ಗುಗ್ಗರಿ ಮಾಡಿ ನೈವೇದ್ಯ ಮಾಡುತ್ತಾರೆ. ಇದಕ್ಕಾಗಿ ಅಲ್ಲಿ ಸೇರಿದ್ದ ಬುಟ್ಟುಗಲವರು ಮನೆಗೊಂದು ಸೇರು ಅಕ್ಕಿ, ಸೇರು ಹುರುಳಿ, ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿ, ಹಾಲಿನ ಮೀಸಲು ಇತರೆ ಪೂಜೆಯ ಸಾಮಾನುಗಳನ್ನು ತಂದಿದ್ದು ಅದನ್ನು ಅಲ್ಲಿ ಬಳಸಿ ಉಳಿದ ಸ್ವಲ್ಪ ಭಾಗವನ್ನು ಗಲಗಲ್ಲಿನಲ್ಲಿರುವ ಮುಂಗಲು ದೇವಮ್ಮನಿಗೆ ಗುಗ್ಗರಿ ಹಬ್ಬ ಮಾಡಲು ತೆಗೆದುಕೊಂಡು ಹೋಗುತ್ತಾರೆ. 'ಎಂಜಿ ಮುತ್ತಿವಾಡು', ಸೆಂಟಿನಡು, ಸುಕ್ಕೆಬಾಪುನಡು, ಸಿಲುಕನಾಡು, ಕನಕನಾಡು ಇವರೆಲ್ಲಾ

ಬುಟ್ಟುಗಲವರ ಬೆಡಗಿನ ಒಳ ಗುಂಪುಗಳು. ಮೂಲತಃ ಇವರೆಲ್ಲಾ ಅಣ್ಣತಮ್ಮಂದಿರೇ. ಇವರು ಈ ಹಬ್ಬದಲ್ಲಿ ಭಾಗವಹಿಸಲು ಹೋಗುತ್ತಾರೆ. ಬುಟ್ಟುಗಲವರಲ್ಲಿ ಇನ್ನೂ ಕೆಲವು ಗುಂಪುಗಳಿದ್ದು ಅವರು ಅಲ್ಲಿಗೆ ಬರುವುದಿಲ್ಲ. 'ನಲ್ಲೆವರು' ಎಂಬ ಬೆಡಗಿನವನಿಗೆ ಮದುವೆ ಮಾಡಿಕೊಟ್ಟಿದ್ದ ತಮ್ಮ ಹೆಣ್ಣು ಮಗಳ ಮಗನಿಗೆ ಈ ನಾಯಕಿಗೆ ಸಂಬಂಧಿಸಿದ ಪೂಜಾಕಾರ್ಯಗಳನ್ನು ನಿರ್ವಹಿಸುವ ಅವಕಾಶ ಮಾಡಿಕೊಟ್ಟಿದ್ದಾರೆ. ಸಂಜೆ ಈ ಮುಂಗಲು ದೇವಮ್ಮನ ಗುಡಿಯ ಬಳಿ ಸೇರಿದ ಆಕೆಯ ತವರಿನವರು ಪೂಜಾ ಕಾರ್ಯಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಉರುಮೆ, ಕಹಳೆ ವಾದ್ಯಗಳವರೂ ಬರುತ್ತಾರೆ. ಆ ವೇಳೆಗಾಗಲೇ ಪುಜಾರಿಯ ಮನೆಯವರು ದೇವಮ್ಮನ ಗುಡಿಯನ್ನು ಬಳಿದು ಕಾರಣಿ ಮಾಡಿ ಶುಚಿಗೊಳಿಸಿರುತ್ತಾರೆ. ರಾತ್ರಿಯಿಡೀ ಗುಗ್ಗರಿಯನ್ನು ಬೇಯಿಸುತ್ತಾರೆ. ಜೊತೆಗೆ ಅನ್ನವನ್ನು ಮಾಡುತ್ತಾರೆ. ಇವರೆ ತಂದ ಮೀಸಲು ಮೊಸರನ್ನು ಸೇರಿಸಿ ದೇವಮ್ಮನಿಗೆ ಬೆಳಗಿನ ಜಾವದಲ್ಲಿ ಅಂದರೆ ಸೂರ್ಯೋದಯಕ್ಕೆ ಮೊದಲು ಪೂಜೆ ಮಾಡಿ ನೈವೇದ್ಯ ಮಾಡಲಾಗುತ್ತದೆ. ಪೂಜಾರಿ ಪೂಜೆ, ನೈವೇದ್ಯ ಮಾಡುವವನು. ಒಳಗೆ ಮುಂಗಲು ದೇವಮ್ಮನ ಪೆಟ್ಟಿಗೆ ಮತ್ತು ಆಯುಧಗಳಿಗೆ ಈತ ಪೂಜೆ ಮಾಡಿ ಹೊರಬರುತ್ತಾನೆ. ಗುಡಿಯ ಮುಂದೆ ಕರಿಕಂಬಳಿ ಗದ್ದಿಗೆ ಹಾಸಿ ತಾವು ತಂದ ಕಾಸು (ದಕ್ಷಿಣೆಯ ಹಣ) ಇಡುತ್ತಾರೆ. ಗೌರವಪೂರ್ವಕವಾಗಿ ಭಕ್ತಿಯಿಂದ ನಾಯಕಿಗೆ ಅರ್ಪಿಸುವ ಕಾಣಿಕೆಯಿದು. ನಂತರ ಎಲ್ಲರೂ ಒಟ್ಟಾಗಿ ನಿಂತು ಸೂರ್ಯನಿಗೆ ನಮಸ್ಕರಿಸಿ ನಂತರ ಮುಂಗಲು ದೇವಮ್ಮನಿಗೆ ನಮಸ್ಕರಿಸುತ್ತಾರೆ. ನಂತರ ತಾವು ತೆಗೆದುಕೊಡು ಹೋಗಿದ್ದ ಬಾಳೆಹಣ್ಣು, ತೆಂಗಿನಕಾಯಿಯ ನೈವೇದ್ಯ ಮಾಡುತ್ತಾರೆ. ನಂತರ ಬಂದ ಈ ಭಕ್ತರಿಗೆ ಮತ್ತು ನೆರೆದ ಜನರಿಗೆಲ್ಲಾ ದಾಸೋಹ ಮಾಡುತ್ತಾರೆ. ಇದು ಮುಂಗಲು ದೇವಮ್ಮನಿಗೆ ಮಾಡುವ ವರ್ಷದ ಪ್ರಮುಖ ಪೂಜೆಯಾಗಿದೆ.

**ಗಂಗೆ ಪೂಜೆ :**

ಮೂರು ವರ್ಷಕ್ಕೊಮ್ಮೆ ಗುಗ್ಗರಿ ಹಬ್ಬ ಮಾಡುವ ದಿನ ಸಂಜೆಯೇ ಮುಂಗಲು ದೇವಮ್ಮನ ಪೆಟ್ಟಿಗೆಯನ್ನು ವಾದ್ಯವಿಶೇಷಗಳೊಂದಿಗೆ ನಲ್ಲೆನವರು ಬೆಡಗಿನ ಪೂಜಾರಿಗೆ ಹೊರಿಸಿಕೊಂಡು ಬುಟ್ಟುಗಲವರ ಹಿಂದೆ ಸೂಚಿಸಿದ ಐದು ಗುಂಪಿನವರು ಗಂಗೆಪೂಜೆಗೆ ಸಮೀಪದ ಹಳ್ಳಕ್ಕೆ ಹೋಗುತ್ತಾರೆ. ಅಲ್ಲಿ ಕರಿಕಂಬಳಿ ಗದ್ದಿಗೆಯನ್ನು ಹಾಸಿ ಅದರ ಮೇಲೆ ಪೆಟ್ಟಿಗೆಯನ್ನಿರಿಸಿರುತ್ತಾರೆ. ಅದರಲ್ಲಿರುವ ದೇವಮ್ಮನಿಗೆ ಸಂಬಂಧಿಸಿದ ಅಪೂರ್ವವಾದ ವಸ್ತುಗಳನ್ನೂ ತೊಳೆದು, ಅದರೊಂದಿಗೆ ಆಕೆಯ ಆಯುಧಗಳನ್ನೂ ತೊಳೆದು ಗಂಗೆಗೆ ಮತ್ತು ಎಲ್ಲಕ್ಕೂ ಪೂಜೆ ಸಲ್ಲಿಸುತ್ತಾರೆ. ಚಿಗಳಿ, ತಂಬಿಟ್ಟು, ಎಲೆ, ಅಡಿಕೆ, ಹೊಂಬಾಳೆ, ಹೂವು, ತೆಂಗಿನಕಾಯಿ ಇಟ್ಟು ಗಂಗೆ ಪೂಜೆ ಮಾಡುತ್ತಾರೆ. ಛತ್ರಿ, ಚಾಮರ, ಕಳಶ ವಾದ್ಯ ವಿಶೇಷಗಳೊಂದಿಗೆ ಗಲಗಲ್ಲಿಗೆ ಮರಳಿ ಬರುತ್ತಾರೆ, ಬಂದು ಗುಡಿ ತುಂಬಿಸುತ್ತಾರೆ. ನಂತರ ಗುಗ್ಗರಿ ಬೇಯಿಸಿ ನೈವೇದ್ಯ ಮಾಡುತ್ತಾರೆ. ಹೀಗೆ ಆಕೆಯ ತವರಿನವರು ಮಾತ್ರ ಯಾವುದೇ ಅತಿಯಾದ ವಿಜೃಂಭಣೆಯಿಲ್ಲದೆ, ಸದ್ದಿಲ್ಲದೆ ವರ್ಷಕ್ಕೊಮ್ಮೆ ಬಂದು ಈಕೆಯ ಈ ನೆಲೆಯಲ್ಲಿ ಸ್ಮರಿಸಿಕೊಳ್ಳುವುದು ಆಕೆಯ ಬಗೆಗೆ ಆಕೆಯ ತವರಿನವರಿಗಿರುವ ಅಭಿಮಾನವನ್ನು ತೋರಿಸುತ್ತದೆ. ಹೀಗೆ ಜಗತ್ತು ನಿರಾಕರಿಸಿದರೂ, ಅಪಮಾನಿಸಿದರೂ

ತಾಯಿಯ ತವರಿನ ಮಡಿಲು ಮಾತ್ರ ಬರಸೆಳೆದು ಅಪ್ಪಿಕೊಳ್ಳುತ್ತದೆಯಲ್ಲವೆ. ತವರಿನವರ ಸ್ಮರಣೆಯಲ್ಲಿ ಉಳಿದು ಬಂದಿದ್ದಾಳೆ. ಸಮುದಾಯದವರ ಸ್ಮರಣೆಯಲ್ಲಿ ಕಡೆಗಣಿಸಲ್ಪಟ್ಟಿದ್ದಾಳೆ. ಸಮಷ್ಟಿಯ ಉಳಿವಿಗಾಗಿ ಪ್ರಯತ್ನಿಸಿದ, ಉಳಿಸಿದ ಮುಂಗಲು ದೇವಮ್ಮನನ್ನು ಇಡೀ ಮ್ಯಾಸಬೇಡ ಸಮುದಾಯವೇ ಪುರಸ್ಕರಿಸಿ ಸಾಂಸ್ಕೃತಿಕ ನಾಯಕಿ ಎಂದು ಗುರುತಿಸಬೇಕಾದ ಅಗತ್ಯವಿದೆ. ಈಕೆಯ ತವರಿನವರು ತಮ್ಮ ಮಕ್ಕಳಿಗೆ ದೇವಮ್ಮ, ದೇವಯ್ಯ ಎಂದು ನಾಮಕರಣ ಮಾಡುವ ಪದ್ಧತಿ ಇದೆ. ಹೀಗೆ ಸದಾ ಅವರ ಸ್ಮರಣೆಯಲ್ಲಿ ಆಕೆ ಉಳಿದು ಬಂದಿದ್ದಾಳೆ. ಈ ಮುಂಗಲು ದೇವಮ್ಮನ ಆರಾಧನೆ ಆಚರಣೆಯನ್ನು ಅವಲೋಕಿಸಿದಾಗ ಕಂಡುಬರುವ ಸೂಕ್ಷ್ಮವೆಂದರೆ ಈಕೆಯ ತವರಿನವರು ಮಾತ್ರ ಆಚರಿಸುವ ಹಬ್ಬವಾಗಿದೆ ಇದು. ಊರ ಜನ ಜೊತೆ ಸೇರುವುದು ಇಲ್ಲಿ ಮುಖ್ಯವಲ್ಲ. ಸಮುದಾಯದ ಇತರ ಬೆಡಗಿನವರು ಇಲ್ಲಿಗೆ ಬರುವುದಿಲ್ಲ. ಬುಟ್ಟುಗಲವರಲ್ಲಿ ಐದು ಬೆಡಗಿನವರು ಇಲ್ಲಿ ಸೇರಿ ಗುಗ್ಗರಿಹಬ್ಬ ಮಾಡುತ್ತಾರೆ. ಮೂರು ವರ್ಷಕ್ಕೊಮ್ಮೆ ಗಂಗೆ ಪೂಜೆಗೆ ಹೋಗಿ ಆಕೆಯ ಪೆಟ್ಟಿಗೆ, ಅದರಲ್ಲಿರುವ ಆಕೆಯ ವಿಶೇಷವಾದ ವಸ್ತುಗಳು ಮತ್ತು ಆಕೆಯ ಆಯುಧಗಳನ್ನು ತೊಳೆದು ತರಲಾಗುತ್ತದೆ. ಸಮಷ್ಟಿಯ ಉಳಿವಿಗಾಗಿ ಶ್ರಮಿಸಿದ ಈ ಮಹಿಳೆಯನ್ನು ದೈವೀಕ ನೆಲೆಯಲ್ಲಿರಿಸಿದರೂ ಆರಾಧನೆಯಲ್ಲಿ ಪಾಲ್ಗೊಳ್ಳಲು ಆತಂಕ, ಅಳುಕು ಎಂದು ಭಾವಿಸುವ ಸಮುದಾಯದ ಒಂದು ಮುಖವನ್ನು ಇದು ತೋರ್ಪಡಿಸುತ್ತದೆ. ಹಾಗೆಯೇ ಊರು ತೊರೆದರೂ ತವರು ತೊರೆಯದು ಎಂಬ ಮಾತಿನಂತೆ ಅಭಿಮಾನದಿಂದ ಸ್ಮರಿಸುವ ಆಕೆಯ ತವರಿನವರ ಶ್ರದ್ಧೆ ನಮ್ಮ ಅಭಿಮಾನಕ್ಕೂ ಪಾತ್ರವಾಗುತ್ತದೆ.

**ಈ) ಕಂಚವ್ವ –ಕಾಮವ್ವನ ಆರಾಧನೆ:**

ಈ ಮಹಿಳೆಯರ ಗಂಡನಾದ ಗಾದ್ರಿಪಾಲನಾಯಕನನ್ನು ಸಮುದಾಯದಾದ್ಯಂತ ಗುಡಿ ಕಟ್ಟಿ ಸಂಭ್ರಮದಿಂದ ಪೂಜಿಸುವ ಪದ್ದತಿ ಇದೆ. ಈ ಮಹಿಳೆಯರು ಸಹಗಮನ ಮಾಡಿದ ಸ್ಥಳವಾದ ಗಂಜಿಗಟ್ಟೆಯಲ್ಲಿ ಸತಿಕಲ್ಲುಗಳಿವೆ. ಇವು ಮುಚ್ಚಿ ಹೋಗಿದ್ದಾಗ, ತಾಳ್ಯದ ಕರಿಯಪ್ಪನಾಯಕನೆಂಬ ಪಾಳೆಯಗಾರ ತನ್ನ ಬಂಧುವಾದ ಚಿತ್ರದುರ್ಗದ ಅರಸ ಕಸ್ತೂರಿ ರಂಗಪ್ಪನಾಯಕನಿಗೆ ಕಷ್ಟ ಬಂದ ಸಮಯದಲ್ಲಿ ಹರಕೆ ಮಾಡಿಕೊಂಡು ಕಷ್ಟ ನಿವಾರಣೆಯಾದ ಕಾರಣ ಈ ಕಂಚವ್ವ ಕಾಮವ್ವರ ಪೂಜೆಗೆ ದೇಣಿಗೆಯಾಗಿ ಜಮೀನು ಕೊಟ್ಟು ಶಾಸನ ಬರೆಸಿ ಈ ಸತಿ ಕಲ್ಲುಗಳಿಗೆ ಪೂಜೆ ಮಾಡುವ ವ್ಯವಸ್ಥೆ ಮಾಡುತ್ತಾನೆ. ಈ ಮಹಿಳೆಯರ ತವರಿನವರ ಬೆಡಗು ಕಾಮಗೇತಿ. ಚಿತ್ರದುರ್ಗದ ಪಾಳೆಯಗಾರರು ಇದೇ ಬೆಡಗಿಗೆ ಸೇರಿದವರು. ಬಹುಶಃ ಈ ಕಾರಣದಿಂದಾಗಿ ತನ್ನ ತವರನ್ನು ರಕ್ಷಿಸಲಿ ಎಂಬ ಆಸೆಯಿಂದ ತಾನು ಹರಕೆ ಮಾಡಿಕೊಳ್ಳುತ್ತಾನೆ. ಹರಕೆಗೆ ಫಲ ಸಿಕ್ಕ ನಂತರ ಆ ಸ್ಥಳದ ಜೀರ್ಣೋದ್ಧಾರ ಮಾಡಿಸಿ, ಸತಿಕಲ್ಲುಗಳಿಗೆ ಪೂಜೆಯ ಏರ್ಪಾಡು ಮಾಡುತ್ತಾನೆ. ಪೂಜಾರಿಗಳು ಕಾಮಗೇತಿಗಳೇ. ಚಂದ್ರಪ್ಪ ಮತ್ತು ಜಯಪ್ಪ ಸಹೋದರರು ಈಗಿನ ಪೂಜಾರಿಗಳು. ಇದೇ ಊರಿನಲ್ಲಿ ಕಂಪಳರಂಗ, ಕಂಪಳಮಾರಮ್ಮ, ನರಸಿಂಹಸ್ವಾಮಿಯ ದೇವಾಲಯಗಳನ್ನು ಹಿಂದೆ ಗಾದ್ರಿಪಾಲನಾಯಕನೇ ನೆಲೆಗೊಳಿಸಿದ್ದು. ಆತನ ಕಾಲಾನಂತರ ಗಾದ್ರಿಪಾಲನಾಯಕನಿಗೂ ಪೂಜೆ ಸಲ್ಲುತ್ತಿದೆ. ಪ್ರತಿ ವರ್ಷ ವಾರ್ಷಿಕ ಆಚರಣೆಯ ಗುಗ್ಗರಿ ಹಬ್ಬವನ್ನು ಇಲ್ಲಿಯೂ ಮಾಡುತ್ತಾರೆ. ನರಸಿಂಹಸ್ವಾಮಿಯ ಗುಡಿಯಲ್ಲಿ ಗುಗ್ಗರಿ ಬೇಯಿಸಿ ಎಲ್ಲಾ

ದೇವರುಗಳಿಗೂ ನೈವೇದ್ಯ ಮಾಡುತ್ತಾರೆ. ಕಂಚವ್ವ ಕಾಮವ್ವರಿಗೆಂದೇ ವಿಶೇಷ ಪೂಜೆ ಇಲ್ಲ. ಪ್ರತಿ ಐದು ವರ್ಷಕ್ಕೊಮ್ಮೆ ಈ ಸತಿಕಲ್ಲುಗಳಿರುವ ಗುಡಿಯಲ್ಲಿ 'ದೊಡ್ಡ ಹಬ್ಬ' ಎಂದು ಆಚರಿಸುತ್ತಾರೆ. ಇದನ್ನು ಹುಲಿ ಹೋತದ ಹಬ್ಬ ಎಂದು ಕರೆಯುಲಾಗುತ್ತದೆ. ಗುಡಿಯ ಮುಂದೆ ರಂಗದ ಗುಂಡಿ ತೆರೆಯುತ್ತಾರೆ. ಇದರ ಆಸುಪಾಸಿನಲ್ಲೇ ಎನುಮಲವರು, ಪೂವಲವರು, ಮಳೇಲವರು, ಲಕ್ಕಿಮಿಲರು ಬೆಡಗಿನವರು ಒಂದೊಂದು ಪಾಳೆಯ ಹಾಕಿಕೊಂಡಿರುತ್ತಾರೆ. ತಮ್ಮ ಪಾಳೆಯದಿಂದ ಕಳಶ ಕಂಕಣದೊಂದಿಗೆ ಹೋತವನ್ನು ವಾದ್ಯ ಸಮೇತ ಗುಡಿಗೆ ತರುತ್ತಾರೆ. ಕಾಮಗೇತಲವರು ಹುಲಿವೇಷ ಹಾಕಿಕೊಳ್ಳುತ್ತಾರೆ. ಮೊದಲು ಎನುಮಲವರು ತಂದಿರುವ ಅಚ್ಚ ಬಿಳಿ ಹೋತದ ಎದೆಗೆ ಕಾಮಗೇತಲ ಪೂಜಾರಿ ಬಾಕು ಹಾಕುತ್ತಾರೆ, ರಕ್ತ ಸುರಿಸುತ್ತಾರೆ. ಪ್ರತಿ ಬೆಡಗಿನವರ ಹೋತಿಗೂ ಹೀಗೆ ಮಾಡುತ್ತಾರೆ. ಹುಲಿ ಮತ್ತು ಗಾದ್ರಿಪಾಲನಾಯಕನ ಮಧ್ಯೆ ನಡೆದ ಹೋರಾಟದ ಸಾಂಕೇತಿಕವಾದ ಆಚರಣೆ ಇದು. ಆ ರಾತ್ರಿಯೇ ಆಯಾ ಗುಂಪಿನವರು ತಮ್ಮ ತಮ್ಮ ಪಾಲಿನ ಹೋತಿನ ಮಾಂಸದ ಅಡಿಗೆ ಮಾಡಿ ಊಟ ಮಾಡಿ ಹೋಗುತ್ತಾರೆ. ಈ ಹಬ್ಬ ಮಾಡಲಾಗದ ಉಳಿದ ನಾಲ್ಕು ವರ್ಷ ಮಂಚೇರಿ ಗುಡ್ಡಕ್ಕೆ ಹೋಗಿ ಗಾದ್ರಿಪಾಲನಾಯಕನ ಸಮಾಧಿಗೆ ಪೂಜೆ ಸಲ್ಲಿಸಿ ಬರುತ್ತಾರೆ. ಕಂಚವ್ವ-ಕಾಮವ್ವನ ಸತಿಕಲ್ಲುಗಳ ಮುಂದೆ ನಡೆಯುವ ಈ ಆಚರಣೆ ಅಪ್ಪಟ ಗಾದ್ರಿಪಾಲನಾಯಕನಿಗೆ ಸಂಬಂಧಿಸಿದುದಾಗಿದೆ. ಈತ ಇವರ ಗಂಡನಾಗಿದ್ದರೂ ಇಲ್ಲಿ ಸಹಗಮಿಸಿದ ಇವರನ್ನು ಕುರಿತು ಯಾವ ಆಚರಣೆಯೂ ಇಲ್ಲದಿರುವುದು ಅಚ್ಚರಿಯಾದರೂ ವಾಸ್ತವಿಕ ಸತ್ಯ, ಜೊತೆಗೆ ಸಮುದಾಯದ ನಿರ್ಲಕ್ಷ್ಯವೂ ಇದಕ್ಕೆ ಕಾರಣವಾಗಿದೆ.

**ಗೌರ ಸಮುದ್ರದ ಮಾರಮ್ಮನ ಆರಾಧನೆ, ಆಚರಣೆ :**

ತನಗೆ ಸಹಾಯ ಸಹಕಾರ ನೀಡಿದ ಮಾರಮ್ಮನನ್ನು ದೊರೆಯಾದ ಯರಮಂಚಿನಾಯಕ ಐವೋದಿ ಮಠದಲ್ಲಿ ಸ್ಥಾಪನೆ ಮಾಡಿ ನಗಾರಿ, ನೌಬತ್ತು, ಛತ್ರಿ, ಚಾಮರ, ಕೋರಿನಿಶಾನೆ ಇವೆಲ್ಲವುಗಳನ್ನು ಗೌರವಪೂರ್ವಕವಾಗಿ ಸಮರ್ಪಿಸುತ್ತಾನೆ. ಪ್ರತಿವರ್ಷ ಗುಗ್ಗರಿ ಹಬ್ಬ ಮತ್ತು ವಿಶೇಷವಾಗಿ ಜಾತ್ರೆಯನ್ನು ಮಾಡಬೇಕೆಂದು ನಿರ್ಧರಿಸುತ್ತಾನೆ. ಆ ಪ್ರಕಾರವಾಗಿ ಇಂದಿಗೂ ಅತ್ಯಂತ ವಿಜೃಂಭಣೆಯಿಂದ ಭಕ್ತಿ ಪೂರ್ವಕವಾಗಿ ಇಲ್ಲಿ ಪೂಜಾ ಕಾರ್ಯಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. ಹಿಂದಿನ ಐವೋದಿ ಮಠವನ್ನು ಈಗ ಗೌರಸಮುದ್ರ ಎಂದು ಕರೆಯಲಾಗುತ್ತದೆ. ಮ್ಯಾಸಮಂಡಲದಲ್ಲಿ ಯರಮಂಚಿನಾಯಕ ಘರ್ಷಣೆ ಮಾಡಿಕೊಂಡು ನಲಕುಲದಿಂದ ಪ್ರತ್ಯೇಕಗೊಂಡು ತನ್ನದೇ ಕಂಪಳವನ್ನು ಮಾರಮ್ಮ ಮತ್ತು ಆಕೆಯ ಬಂಧುಗಳಾದ ಬುಟ್ಟಗಲವರು ಮತ್ತು ಬೋಡಿದಾಸರಿಯ ಸಹಾಯದಿಂದ ಕಟ್ಟಿಕೊಳ್ಳುತ್ತಾನೆ. ನಲಗುಲದಲ್ಲಿ ಅಕ್ಕರಾಯಮ್ಮ ಆರಾಧ್ಯದೇವತೆಯಾಗಿ ಪೂಜೆಗೊಳ್ಳುತ್ತಿರಲು ಯರಮಂಚಿನಾಯಕ ನಿಡುಗಲ್ಲು ಕಡೆ ಯಿಂದ ಬಂದು ತನಗೆ ಸಹಾಯ್ ಮಾಡಿದ ಮಾರಮ್ಮನಲ್ಲೇ ಅಕ್ಕ ರಾಯಮ್ಮನನ್ನುಕಂಡುಕೊಳ್ಳುತ್ತಾನೆ. ಭಕ್ತಿ ಭಾವದಿಂದ ಇಂದಿಗೂ ಈಕೆಯ ಆರಾಧನೆ ಆಚರಣೆ ನಡೆಯುತ್ತಾ ಬರುತ್ತಿವೆ. ಗೌರಸಮುದ್ರದಲ್ಲಿ ಮಾರಮ್ಮನನ್ನು ಎರಡು ಪ್ರಮುಖ ಸಂದರ್ಭಗಳಲ್ಲಿ ಆರಾಧಿಸಲಾಗುತ್ತದೆ. ಶಿವರಾತ್ರಿ ಅಮಾವಾಸ್ಯೆ ಸಂದರ್ಭದಲ್ಲಿ ನಡೆಯುವ ಗುಗ್ಗರಿ ಹಬ್ಬದ ಆಚರಣೆ ಮತ್ತು ಬಾದ್ರಪದ ಮಾಸದಲ್ಲಿ ನಡೆಯುವ ವಿಶೇಷವಾದ ಜಾತ್ರೆ. ಇದಲ್ಲದೆ ಅಶ್ವಯುಜಮಾಸದ ಮರು ಪರಿಷೆ, ಮತ್ತು ನವರಾತ್ರಿಯ ವಿಜಯ

ದಶಮಿಯಂದು ಬನ್ನಿಮುಡಿಯಲು ಮಾರಮ್ಮ ಊರ ಹೊರಗಡೆ ಇರುವ ಬನ್ನಿಮರಕ್ಕೆ ಮೆರವಣಿಗೆಯಲ್ಲಿ ಹೋಗಿ ಬರುವುದು. ಇವು ಇಲ್ಲಿ ಪ್ರಮುಖವಾಗಿ ಆಚರಿಸುವ ಹಬ್ಬಗಳು.

**ಗುಗ್ಗರಿಹಬ್ಬ:**

ಶಿವರಾತ್ರಿ ಅಮಾವಾಸ್ಯೆ ನಂತರ ಬರುವ ಒಂದು ಗುರುವಾರದ ದಿನ ಈ ಹಬ್ಬವನ್ನು ಆಚರಿಸಲಾಗುತ್ತದೆ. ಸಾಯಂಕಾಲದ ವೇಳೆಗೆ ದೇವಸ್ಥಾನಕ್ಕೆ 'ಬುಟ್ಟುಗಲವರು' ಬೆಡಗಿಗೆ ಸೇರಿದವರೆಲ್ಲಾ ಮನೆಗೊಬ್ಬರಂತೆಯಾದರೂ ಬರುತ್ತಾರೆ. ತಮ್ಮ ಶಕ್ತ್ಯಾನುಸಾರ ಒಂದೆರಡು ಸೇರು ಹುರುಳಿ ಮತ್ತು ಅಕ್ಕಿಯನ್ನು ತೆಗೆದುಕೊಂಡುಬಂದಿರುತ್ತಾರೆ. ಮೀಸಲು ಹಾಲು ಮತ್ತು ಕಾಸು ದಕ್ಷಿಣೆಯ ಹಣವನ್ನು ತಂದಿರುತ್ತಾರೆ. ತಮ್ಮ ಅಣ್ಣತಮ್ಮಂದಿರು ಅಂದರೆ ಬುಟ್ಟುಗಲವರೆಲ್ಲಾ ಅಲ್ಲಿ ಸೇರಿದ ಮೇಲೆ ದೊರೆಯರಮಂಚಿನಾಯಕನ ಕಡೆಯವರೂ ಬಂದುಜೊತೆಗೂಡುತ್ತಾರೆ. ಅವರ ಸಮಕ್ಷಮದಲ್ಲಿ ಮಾರಮ್ಮನ ದೇವಾಲಯದಲ್ಲಿ ಗರ್ಭಗುಡಿಯ ಮುಂಭಾಗದಲ್ಲಿ ತಾವುತಂದ ಹುರುಳಿ ಮತ್ತು ಅಕ್ಕಿಯಲ್ಲಿ ಅರ್ಧ, ಅರ್ಧ ಭಾಗವನ್ನು ಸುರಿಯುತ್ತಾರೆ. ಜಂಗಮರನ್ನು ಕರೆಸಿ ರಾಶಿಗೆ ಪೂಜೆ ಮಾಡಿ ಮೊದಲು ಅವರ ಜೋಳಿಗೆ ತುಂಬಿಸಲಾಗುತ್ತದೆ. ನಂತರ ಅದನ್ನು ಅಳೆಯುತ್ತಾರೆ. ಬೇಯಿಸಬೇಕಾದ ಭಾಗ ಎಷ್ಟು, ಪೂಜಾರಿಯನ್ನು ಒಳಗೊಂಡಂತೆ ದೇವರ ಕಾರ್ಯಗಳನ್ನು ನಿರ್ವಹಿಸುವವರಿಗೆ ಕೊಡಬೇಕಾದ ಭಾಗ ಎಷ್ಟೆಷ್ಟು ಎಂದು ಬೇರ್ಪಡಿಸಿ ಇಡುತ್ತಾರೆ. ದೇವಸ್ಥಾನಕ್ಕೆ ಮಡಕೆಗಳನ್ನು ತಂದು ಕೊಡುವ ಕುಂಬಾರರಿಗೆ, ನಡೆಮುಡಿ ಹಾಸುವ ಅಗಸರಿಗೆ, ವಾದ್ಯ ಬಾರಿಸುವ ಉರುಮೆಯವರು, ಕಹಳೆಯವರಿಗೆ ಇತ್ಯಾದಿಯಾಗಿ ಹಂಚಲ್ಪಡುತ್ತದೆ. ನಂತರ ಬೇಯಿಸಿ ಗುಗ್ಗರಿ ಮಾಡಬೇಕಾದ ಭಾಗವನ್ನು ಎತ್ತಿಟ್ಟು, ಬೊಮ್ಮದೇವರ ಗುಡಿ ಪಕ್ಕದಲ್ಲಿಯೇ ಇದ್ದು ಅಲ್ಲಿಯೂ ಇದೇ ರೀತಿ ಮಾಡುತ್ತಾರೆ. ನಂತರ ಬೊಮ್ಮದೇವರ ಮತ್ತು ಮಾರಮ್ಮನ ಪಾಲಿನ ಹುರುಳಿಯನ್ನು ಒಟ್ಟಾಗಿಯೇ ಬೇಯಿಸುತ್ತಾರೆ. ಅನ್ನವನ್ನು ಮಾಡುತ್ತಾರೆ. ಬೊಮ್ಮ ದೇವರು ಬುಟ್ಟುಗಲವರಿಗೆ ಮನೆದೇವರು, ಅಂದರೆ ತಮ್ಮ ಬೆಡಗಿನ ಕೊಳುಗುಳದ ಬೊಮ್ಮನೇ ಈತ ಎಂದು ಹೇಳುತ್ತಾರೆ. ವೀರನಾತ ಗುಗ್ಗರಿ ಮತ್ತು ಅನ್ನ ಸಿದ್ಧವಾಗುವ ವೇಳೆಗೆ ಬೆಳಗಿನ ಜಾವ ಆಗುತ್ತದೆ. ಸೂರ್ಯೋದಯಕ್ಕೆ ಮುಂಚೆ ಮೊದಲು ಹೂವು ಹೊಂಬಾಳೆಗಳಿಂದ ಅಲಂಕರಿಸಲ್ಪಟ್ಟ ಮಾರಮ್ಮನಿಗೆ ಗುಗ್ಗರಿ ನೈವೇದ್ಯ ಮಾಡುತ್ತಾರೆ. ಅನ್ನ, ಜನ್ನಿಗೆ ಹಸುವಿನ ಮೀಸಲು ಮೊಸರು, ಬಾಳೆ ಹಣ್ಣು, ತೆಂಗಿನಕಾಯಿಗಳ ನೈವೇದ್ಯ ನಡೆಯುತ್ತದೆ. ಪೂಜೆ ಮುಗಿದ ನಂತರ ಎಲ್ಲರೂ ಗುಡಿಯ ಮುಂಭಾಗದಲ್ಲಿ ನಿಂತು ಸೂರ್ಯನಿಗೆ ನಮಸ್ಕರಿಸಿ ಮಾರಮ್ಮನಿಗೂ ಸಾಮೂಹಿಕವಾಗಿ ನಮಸ್ಕರಿಸುತ್ತಾರೆ. ನಂತರ ಬೊಮ್ಮದೇವರಿಗೂ ಇದೇ ಮಾದರಿಯಲ್ಲಿ ಪೂಜೆ ಸಲ್ಲುತ್ತದೆ. ನಂತರ ಊರಿನ ಜನ ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಇಲ್ಲಿ ನಡೆಯುವ ಹಬ್ಬದ ಆಚರಣೆಗೆ ಸಾರ್ವಜನಿಕರಿಂದ ಮುಡಿಪಾಗಿ ಬಂದ ಹಣವನ್ನು ಬಳಸುವುದಿಲ್ಲ. ಸಮುದಾಯದ ನಿರ್ದಿಷ್ಟವಾದ ಬೆಡಗಿಗೆ ಸೇರಿದವರು ಮಾತ್ರ ಖರ್ಚು ವೆಚ್ಚಗಳನ್ನು ನಿಭಾಯಿಸುತ್ತಾರೆ.

**ಜಾತ್ರೆ :**

ಬಾದ್ರಪದ ಮಾಸದ ಮೊದಲ ಮಂಗಳವಾರ ಈ ಜಾತ್ರೆ ವೈಭವದಿಂದ ನಡೆಯುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ನಾಯಕನ ಹಟ್ಟಿ ಶರಣ ತಿಪ್ಪೇಸ್ವಾಮಿಯ ಜಾತ್ರೆಯನ್ನು ಬಿಟ್ಟರೆ ಅತೀ ವಿಜೃಂಬಣೆಯಿಂದ ನಡೆಯುವ ಜಾತ್ರೆಯೆಂದರೆ ಈ ಗೌರಸಂದ್ರದ ಮಾರಮ್ಮನದೇ ಗೌರಸಮುದ್ರಕ್ಕೆ ಒಂದು ಮೈಲಿ ದೂರದಲ್ಲಿರುವ 'ತುಮ್ಮಲು' ಎಂಬ ಪ್ರದೇಶದಲ್ಲಿ ಈ ಜಾತ್ರೆ ನೆರೆಯುತ್ತದೆ. ಸಹಸ್ರಾರು ಮಂದಿ ಸೇರುವ ಜಾತ್ರೆ ಇದು. ಇದಕ್ಕೆ ಸಂಬಂಧಿಸಿದ ವಿಧಿ ವಿಧಾನಗಳು ಈ ಕೆಳಕಂಡಂತಿವೆ. ಈ ಆರಾಧನಾ ವಿಧಿಗಳಲ್ಲಿ ಪ್ರಮುಖವಾಗಿ ಪಾಲ್ಗೊಳ್ಳುವವರು ವ್ಯಾಸನಾಯ್ಕಕರು.

ಸಾರಿನ ದಿನ ಗೌರಸಮುದ್ರದಲ್ಲಿ ಮತ್ತು ಸುತ್ತಮುತ್ತಲಹಳ್ಳಿಗಳಲ್ಲಿರುವ ಬುಟ್ಟುಗಲವರು ಬೆಡಗಿನವರು ಮನೆಯ ನೆಲ, ಒಲೆ ಎಲ್ಲಾ ಸಾರಿಸಿ ಭಯಭಕ್ತಿಯಿಂದ ಸಂಜೆಯ ವೇಳೆಗೆ ಮಾರಮ್ಮನಿಗೆ ಹಣ್ಣು, ತೆಂಗಿನಕಾಯಿ ತಂದು ಪೂಜೆ ಮಾಡಿಸುತ್ತಾರೆ. ಆ ರಾತ್ರಿಯೇ ಈ ಪ್ರಮುಖರೆಲ್ಲಾ ಸೇರಿ ಜಾತ್ರೆಯ ಬಗ್ಗೆ ಚರ್ಚಿಸುತ್ತಾರೆ. ಮಣಿಗಾರ ಅಂದರೆ 'ಮಾದಿಗ' ಸಮುದಾಯಕ್ಕೆ ಸೇರಿದ ವ್ಯಕ್ತಿಗೆ 'ಸಾರು' ಹಾಕುವುದು ಇಲ್ಲೊಂದು ವಿಶೇಷ. 'ಸಾರು'ವ ಮಾದಿಗ ಸಮುದಾಯದವರಿಗೆ ಅಂದು ವಿಶೇಷವಾದ ದಿನ. ಏಕೆಂದರೆ ಇಡೀ ವರ್ಷ ತಮಗಾದ ಅನ್ಯಾಯ, ಅಪಮಾನ, ನೋವನ್ನು ಊರ ಪ್ರಮುಖರ ಮುಂದಿಟ್ಟು, ಹೀಗೆ ನಿಮ್ಮಿಂದ ಹಿಂಸೆ ಅನುಭವಿಸಿದ ನಾವು 'ಸಾರು' ಹಾಕುವುದಿಲ್ಲ. ನಾವು ಊರ ಕಾರ್ಯದಲ್ಲಿ ಸಹಕರಿಸುವುದಿಲ್ಲ ಎಂದು ಪ್ರತಿಭಟಿಸಲು ಅಂದು ಅವಕಾಶವಿದೆ. ಎಷ್ಟೇ ದೊಡ್ಡ ಜಮಿನ್ದಾರನಾಗಿರಲಿ ಹೌದು ನಾನು ಮಾಡಿದ್ದು ತಪ್ಪು. ಇನ್ನೆಂದಿಗೂ ಹಾಗೆ ಮಾಡೆನು ಎಂದು ತಿಳಿಸುತ್ತಾರೆ. ಆಗ ಆ ದಲಿತ ಊರೆಲ್ಲೆಲ್ಲಾ ತಮಟೆ ಹೊಡೆಯುತ್ತಾ ಇಂದಿಗೆ ೧೫ ದಿನಗಳ ನಂತರದಲ್ಲಿ ಬರುವ ಮಂಗಳವಾರದ ದಿನ ಜಾತ್ರೆ ಎಂದು ಸಾರುತ್ತಾ ಬರುತ್ತಾನೆ. ಈ ಸಾರಿನ ಮರುದಿನದಿಂದ ಜಾತ್ರೆಯ ಹಿಂದಿನ ಗುರುವಾರದ ದಿನದವರೆಗೆ ಬುಟ್ಟುಗಲು, ಮತ್ತು ಯರ ಮಂಚಿನಾಯಕನ ಪರಂಪರೆಯವರು ಮತ್ತು ಆಗ್ರಾಮದ ಜನ ಸ್ಥಾನ ಮಾಡುವಂತಿಲ್ಲ. ತಲೆ ಬಾಚುವಂತಿಲ್ಲ. ಕರಿವ ಪದಾರ್ಥಗಳನ್ನು ತಯಾರಿಸುವಂತಿಲ್ಲ. ಪರವೂರಿನಿಂದ ಬಂದವರನ್ನು ಮನೆಗೆ ಸೇರಿಸುವುದಿಲ್ಲ.

**ವಾಸುಕೊಯ್ಯುವುದು :**

ಮಾರಮ್ಮನ ಗುಡಿಯ ಪಕ್ಕದಲ್ಲೇ ಬೊಮ್ಮದೇವರ ಗುಡಿ ಇರುವುದನ್ನು ಗುಗ್ಗರಿ ಹಬ್ಬದ ಆಚರಣೆಯ ವಿವರಗಳನ್ನು ಕೊಡುವಾಗಲೇ ತಿಳಿಸಿದ್ದೇನೆ. ಗುರುವಾರದ ದಿನ ಅಂದರೆ ಸಾರು ಹಾಕಿದ ೧೧ನೆಯ ದಿನದಂದು ಮನೆಯನ್ನೆಲ್ಲಾ ಬಳಿದು ಸ್ನಾನ ಮಾಡಿ ಶುಚಿರ್ಭೂತರಾಗಿ ಬೊಮ್ಮದೇವರ ಗುಡಿಬಳಿ ಬರುತ್ತಾರೆ. ಈ ಬೊಮ್ಮದೇವರು ಮತ್ತು ಮಾರಮ್ಮ ಅಕ್ಕ ತಮ್ಮ ಎಂದು ಸಮುದಾಯದವರ ನಂಬಿಕೆ. ಈ ಇಬ್ಬರಿಗೆ ಸಂಬಂಧಿಸಿದ ಆರಾಧನೆಗಳು ಪರಸ್ಪರ ಸೇರಿಹೋಗಿವೆ. ದೇವಸ್ಥಾನದ ಬಳಿ ಸೇರಿದ ಬುಟ್ಟುಗಲವರು ಮತ್ತು ಯರಮಂಚಿನಾಯಕನ ಪರಂಪರೆಯವರು ಮಾರಮ್ಮನಿಗೆ ನಮಸ್ಕರಿಸಿ ನಂತರ ಬೊಮ್ಮದೇವರ ಭರಣಿಯನ್ನು ಪೂಜಾರಿಗೆ ಹೊರಿಸಿಕೊಂಡು ಒಂದು ಕುರಿ ಸಮೇತ ಉರುಮೆ, ತಮ್ಮಟೆ ವಾದ್ಯಗಳೊಟ್ಟಿಗೆ ಅಲ್ಲಿಗೆ ಸುಮಾರು ೨ ಕಿ.ಮೀ. ದೂರದಲ್ಲಿರುವ ದೇವರಹಳ್ಳಿ ಸಮೀಪದ ಲಿಂಗದ ಗುಡಿಗೆ

ಹೋಗುತ್ತಾರೆ. ಅಲ್ಲಿ ೧೦೧ ಲಿಂಗಗಳಿವೆ. ಕೋಟಿ ಲಿಂಗಗಳಿವೆ ಎನ್ನುತ್ತಾರೆ. ಆದರೆ ಒಂದೂ ಕಾಣುವುದಿಲ್ಲ. ಈಗ ಅದರ ಜೀರ್ಣೋದ್ಧಾರ ಕಾರ್ಯ ನಡೆಯುತ್ತಿದೆ. ಆ ಗುಡಿಯನ್ನು ಹಿಂದೆ ಎಕ್ಕದ ಜಂತೆ, ತೊಲೆಗಳಿಂದ ನಿರ್ಮಿಸಿದ್ದರು. ಎನ್ನುತ್ತಾರೆ. ಇದೇ ಮಾರಮ್ಮನ ಮತ್ತು ಬೊಮ್ಮನ ನೆಲೆಯಾಗಿತ್ತು. ಇದನ್ನೇ ರಾಯದುರ್ಗದ ದೊರೆ ಹಾಳು ಮಾಡಿ ಹೋಗಿದ್ದುದಾಗಿ, ಮಾರಮ್ಮ ಪ್ರತಿದಾಳಿ ನಡೆಸಿ ಉಪಾಯದಿಂದಲೇ ಆತನನ್ನು ಕೊಂದಳು ಎಂಬ ವಿವರಗಳಿವೆ ಸಮುದಾಯದಲ್ಲಿ. ಇದನ್ನು ಪುರಾಣಗಳು ಭಾಗದಲ್ಲಿ ವಿವರವಾಗಿ ಕೊಟ್ಟಿರುತ್ತೇನೆ. ಈ ಲಿಂಗದ ಗುಡಿ ಬಂದು ಸೇರಿದಾಗ ಮೊದಲು ನಡೆಸುವ ಆಚರಣೆಯೇ ಮಾರಮ್ಮನಿಗೆ ಸಂಬಂಧಿಸಿದುದು. ಕರಿಕಂಬಳಿಯ ಗದ್ದಿಗೆಯನ್ನು ಹಾಸಿ ಅದರ ಮೇಲೆ 'ಕಾಸು' ಎಂದು ಇಡುತ್ತಾರೆ. ಇದು ಮಾರಮ್ಮನಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸುವ ಕಾಣಿಕೆ. ಇದನ್ನು ನಂತರ ಬುಟ್ಟುಗಲವರಲ್ಲೇ ಪೂಜಾರಿ ಯಾಗಿರುವವರು ತೆಗೆದುಕೊಳ್ಳುತ್ತಾರೆ. ಎಲ್ಲರೂ ಕೂಡಿ ಮಾರಮ್ಮನಿಗೆ ನಮಸ್ಕರಿಸುತ್ತಾರೆ. ಇಲ್ಲಿ ೧೦೧ ದೀಪಗಳನ್ನು ಹಚ್ಚುತ್ತಾರೆ. ಇದನ್ನು ಮಾರಮ್ಮನಿಗೆ ನೋಮು ಎತ್ತುವುದು ಎನ್ನುತ್ತಾರೆ. ಹೀಗೆ ಮಾರಮ್ಮನಿಗೆ ಮೊದಲ ಪೂಜೆ ನಂತರ ನಾಗರ ಹಬ್ಬ ಮಾಡುತ್ತಾರೆ. ಅಂದರೆ ಹುತ್ತಕ್ಕೆ ಹಾಲೆರೆಯುತ್ತಾರೆ. ಬುಟ್ಟುಗಲವರು ಮನೆಗಳಿಂದ ತಂದಿದ್ದ ಮೀಸಲು ಹಾಲನ್ನು ಕಲೆಸುತ್ತಾರೆ. ಎತ್ತುಗಳ ಗದ್ದಿಗೆ ಎಂದು ಮತ್ತೆ ಎರಡು ಕಂಬಳಿ ಹಾಸಿ ಅದರ ಮೇಲೆ ಕಾಸು ಇಟ್ಟು ನಮಸ್ಕರಿಸುತ್ತಾರೆ. ನಂತರ ಯರಮಂಚಿ ನಾಯಕನ ವಂಶಸ್ಥರೇ ಕೊಟ್ಟ ಕುರಿಯನ್ನು ಆತನೇ ಕೊಡುವ ಆಯುಧದಿಂದ ಸಿಲುಕ ನಾನು. (ಬುಟ್ಟುಗಲವರು ಬೆಡಗಿನಲ್ಲೇ ಒಂದು ಒಳ ಗುಂಪಿನವರು) ವಾಸು ಬಂಡೆ ಅಂದರೆ ದುಂಡನೆಯ ಕಲ್ಲು. ಇದರ ಮೇಲೆ ಕುರಿಯ ಕತ್ತನ್ನು ಇರಿಸಿ ಕೊಯ್ಯುತ್ತಾನೆ. ಇದನ್ನೇ ವಾಸು ಕೊಯ್ಯುವುದು ಎನ್ನುತ್ತಾರೆ. ನಂತರ ಎಲ್ಲರೂ ವಾದ್ಯ ಬಡಿಯದೆ ಮೌನವಾಗಿ ಹಿಂತಿರುಗುತ್ತಾರೆ. ನಂತರ ಅಮಾವಾಸ್ಯೆ ದಿನ ಮಾರಮ್ಮನಿಗೆ ವಿಶೇಷವಾದ ಪೂಜೆ ಸಲ್ಲುತ್ತದೆ. ಆದಿನ ಬೆಳಗಿನ ಜಾವದಲ್ಲಿ ಕೋಣನ ಬಲಿಕೊಟ್ಟು ತಲೆ ಮೇಲೆ ಗಂಡಾದೀಪ ಹಚ್ಚುತ್ತಾರೆ. ಈಗ ಸರ್ಕಾರ ಬಲಿಯನ್ನು ವಿರೋಧಿಸಿ ಕಾಯಿದೆ ಮಾಡಿರುವುದರಿಂದ ದೇವಸ್ಥಾನದ ಮುಂದೆ ಕಡಿಯದೆ ಎಲ್ಲಾದರೂ ಹೊಲಗಳಲ್ಲಿ ಮರೆಯಲ್ಲಿ ಕಡಿದು ನೇಮ ತೀರಿಸುತ್ತೇವೆ ಎಂದು ಹೇಳುತ್ತಾರೆ. ನಂತರ ಮಂಗಳವಾರದ ದಿನ ತುಮ್ಮಲುವಿನಲ್ಲಿ ಜಾತ್ರೆ ನೆರೆಯುತ್ತದೆ. ಅಲ್ಲಿಗೆ ಮಾರಮ್ಮ ವಿಜೃಂಬಣೆಯಿಂದ ಹೊರಡುತ್ತಾಳೆ. ಮಾರಮ್ಮನಿಗೆ ಇತ್ತೀಚೆಗೆ ವಿಗ್ರಹ ಮಾಡಿಸಿದ್ದು ಅದು ಗುಡಿಯಲ್ಲೇ ಇರುತ್ತದೆ. ಮೂಲ ಪುಟ್ಟಿಯೇ ಮಾರಮ್ಮ ಪುಟ್ಟಿಯಲ್ಲಿ ಸಾಲಿಗ್ರಾಮ, ಚಿನ್ನದ ಪುಟ್ಟ ಸನಿಕೆ, ಗುದ್ದಲಿ (ಉಪ್ಪಾರ ಸಂಕೇತ) ಇವೆ ಎಂದು ಹೇಳಲಾಗುತ್ತದೆ. ಇವನ್ನೆಲ್ಲಾ ಬಟ್ಟೆಯಲ್ಲಿ ಕಟ್ಟಿ ಇಡಲಾಗಿರುತ್ತದೆ. ಇದನ್ನೆಲ್ಲಾ ಯಾರಿಗೂ ತೋರಿಸಬಾರದು ಎಂಬ ನಂಬಿಕೆ ಇದೆ. ಬಿದಿರಿನ ಪುಟ್ಟಿಗೆ ಸುತ್ತಲೂ ಹೊಸ ಕೆಂಪು ಬಟ್ಟೆಯನ್ನು ಸುತ್ತಿ ಅದಕ್ಕೆ ಬೆಳ್ಳಿಯ ಆಭರಣಗಳನ್ನು ಮುಖ ಪದ್ಮವನ್ನು ಸಿಕ್ಕಿಸುತ್ತಾರೆ. ವಡ್ಯಾಣ, ಗೆಜ್ಜೆ, ನಾಗರ ಹೆಡೆ, ಕುಚ್ಚುಗಳು ಛತ್ರಿಕೆಗಳು ಇವೆಲ್ಲಾ ಬೆಳ್ಳಿಯವೇ. ಹೂವು, ಹೊಂಬಾಳೆಯಿಂದ ಅಲಂಕೃತವಾಗಿರುವ ಪುಟ್ಟಿ ದಿವ್ಯ ಸ್ವರೂಪವನ್ನು ಪಡೆಯುತ್ತದೆ.

"ದೇವರೊರುವಣ್ಣಾಗೆ ವೀರ ಕುಮಾರಗೆ, ಕಾಶೀದಟ್ಟಿಯವರ ನಡುವೀಗೆ – ಏರಿದಳೂ ರಥವಾ, ದೇವರ ಹೊರಿಸ್ಯಾರೆ ವೀರ ಕುಮಾರಗೆ, ನೀಲಮ್ಮ ರಡದಾ ಮಗ ನೀಗೆ – ಏರಿದಳೂ ರಥವಾ, ನೀಲಮ್ಮ ರಡದಾ ಮಗನೇ ಸಿದ್ದಣ್ಣಗೆ, ದೇವರೊರಿಸ್ಯಾರೆ ಹಿರಿಯಾರು ಏರಿದಳೂ ರಥವಾ"– ಹೀಗೆ ಉಪ್ಪಾರ ಸಮುದಾಯದವರೇ ಪೂಜಾರಿಗಳಾಗಿದ್ದು ಅವರ ತಲೆಯ ಮೇಲೆ ಅಲಂಕರಿಸಲ್ಪಟ್ಟ ಮಾರಮ್ಮನ ಪುಟ್ಟಿಯನ್ನು ಹೊರಿಸಲಾಗುತ್ತದೆ.

"ಆರೇನೆ ಛತ್ತರಿಕೆ ಹದಿನಾರು ಜಗಜಂಪ, ಮೇಲೆ ದುರುಗದಲಿ ಹಣುದಾರೆ ||, ಮೇಲೇನೆ ದುರುಗದಲಿ ಹಣುದಂಥ ಛತ್ತರಿಕೆ, ತಾಯವ್ವೋಗಲುವಾಗ ಹಿಡುದಾರೆ ||"

ಹೀಗೆ ಛತ್ರಿ, ಚಾಮರಗಳೊಂದಿಗೆ ಉರುಮೆ, ತಮ್ಮಟೆ, ಭೇರಿ ಮುಂತಾದ ರಣ ವಾದ್ಯಗಳ ಧ್ವನಿಯ ಮಧ್ಯೆ ಮಾರಮ್ಮ ತುಮ್ಮಲಿಗೆ ಹೊರಡುತ್ತಾಳೆ. ಹಿಂದೆ ತುಮ್ಮೆಯ ಮರಗಳೇ ಹೆಚ್ಚಾಗಿದ್ದ ಪ್ರದೇಶವಿದು. ಮಾರಮ್ಮನ ಮೂಲನೆಲೆ ಅದೇ ಆಗಿತ್ತು. ಈಟಿ, ಭರ್ಚಿ, ಕೋಲು ಇವೆಲ್ಲವುಗಳನ್ನು ಸಂಬಂಧಿಸಿದ ಬೆಡಗಿನವರು ಹಿಡಿದಿರುತ್ತಾರೆ. ಯರಮಂಚಿನಾಯಕ ಅಂದು ಆಕೆಗೆ ಗೌರವಪೂರ್ವಕವಾಗಿ ಒಪ್ಪಿಸಿದ ಕೋರಿ ನಿಶಾನೆ – ಅಂದರೆ ಕಂಬಳಿಯ ತುಂಡೊಂದನ್ನು ಉದ್ದನೆಯ ಕೋಲಿಗೆ ಸಿಕ್ಕಿಸಿದ್ದು – ಈ ಬಾವುಟವನ್ನು ಆಕೆ ಗೌರವಾರ್ಥವಾಗಿ ಹಿಡಿದಿರುತ್ತಾರೆ. ವೈಭವದಿಂದ ಈಕೆ ದೇವಸ್ಥಾನದಿಂದ ಹೊರಗೆ ಅಂಗಳಕ್ಕೆ ಬಂದು ನಿಲ್ಲುತ್ತಾಳೆ. ಪಕ್ಕದ ಗುಡಿಯಿಂದ ಬೊಮ್ಮದೇವರ ಪೆಟ್ಟಿಗೆಯನ್ನು ಹೊತ್ತ ಪೂಜಾರಿಯೂ ಬಂದು ಜೊತೆ ಸೇರುತ್ತಾನೆ. ಊರ ಬಾಗಿಲಿಗೆ ಬಂದಾಗ ಒಂದು ಕುರಿಯನ್ನು ನಿವಾಳಿಸಿ ಎರಡೂ ಕಡೆ ಮಾರಿಗೆ ಅಡ್ಡವಾಗಿ ಕುರಿಯನ್ನು ನಾಲ್ಕು ಜನ ಹಿಡಿದು ನಿಂತಿರಲು ಒಂದೇ ಏಟಿಗೆ ಮಚ್ಚಿನಿಂದ ಅದರ ದೇಹದ ಸರಿ ಅರ್ಧಭಾಗಕ್ಕೆ ಹೊಡೆದು ಭಯಂಕರವಾಗಿ ಕೊಲ್ಲುತ್ತಾರೆ. ನಂತರ ಈಕೆ ಊರಬಾಗಿಲಿಗೆ ಬರುತ್ತಾಳೆ. ಊರಮಾರಮ್ಮನ ಗುಡಿಯ ಮುಂದೆ ಒಂದು ಕ್ಷಣ ನಿಲ್ಲುತ್ತಾರೆ. ಆ ವೇಳೆಗೆ ಅಲ್ಲಿಗೆ ಮಾದಿಗರ ಕೇರಿಯಿಂದ ಮಾತಂಗಿಯಮ್ಮನನ್ನು ಹೊತ್ತ ಪೂಜಾರಿಯೂ ಬಂದು ಜೊತೆ ಸೇರುತ್ತಾನೆ.

"ಹತ್ತಲಾರದ ಬೆಟ್ಟ ಹತ್ಯಾಳೆ ಮಾರಕ್ಕ, ಕೂಗ್ಯಾಳೆ ಕುರಿಹಟ್ಟಿ ಗೌಡರನ ಏರಿದಳೂ ರಥವಾ, ಕೂಗ್ಯಾಳೆ ಕುರಿಹಟ್ಟಿ ಗೌಡ ಕರಿಯಣ್ಣ ನಾ, ಧೂಳ ಮರಿ ಮುಂದಾಗಿ ಬರಬೇಕು ||, ಧೂಳು ಮರಿ ಮುಂದಾಗಿ ಬಾರದಿದ್ದರೆ ನಾನು, ಬಾಲಗೆ ಚಳಿ ಜ್ವರ ತರಿಸೋನು ||"

"ಬಿತ್ತಿದ ಹೊಲದಾಗೆ ಬಿತ್ತಿರದ ಹೊಲದಾಗೆ, ಅವಳ ರಾಜ್ಯಣದ ಬಯಲಾಗೆ ||, ಅವಳ ರಾಜ್ಯಣದ ಬಯಲಾಗೆ ಮಾರಕ್ಕ ಛತ್ರಿಕೆ ಸಾಲಿಟ್ಟು ನಡೆದಾಳು" –

ಹೀಗೆ ಹೊಲಗದ್ದೆಗಳ ಮಧ್ಯೆನಡೆಯುತ್ತಾ ತುಮ್ಮಲಿಗೆ ಬರುತ್ತಾಳೆ. (ಈಗ ದಾರಿಯನ್ನೇ ಮಾಡಲಾಗಿದೆ). ಮಾರ್ಗ ಮಧ್ಯೆ ಬಳೆಗಾರಜ್ಜನ ಸಮಾಧಿಯ ಬಳಿ ಒಂದು ಕ್ಷಣ ಇಳಿಸಿ ಪೂಜೆ ಮಾಡುತ್ತಾರೆ. ದಾರಿಯುದ್ದಕ್ಕೂ ಭಕ್ತಾದಿಗಳು ಒಪ್ಪಿಸುವ ಹರಕೆ ಒಂದೇ, ಎರಡೇ ಹತ್ತಾರು ವಿಧಗಳು. ಬಿರುಸಾಗಿ ಜನಜಂಗುಳಿಯ ಮಧ್ಯೆ ಈ ದೇವರುಗಳನ್ನು ಹೊತ್ತವರು ನಡೆದು ಬರುತ್ತಿರಲು ಜಾತ್ರೆಗೆ ನೆರೆದ

ಜನ ಮಂಡಕ್ಕಿ, ದವನ, ಬೆಲ್ಲ ಎಸೆಯುತ್ತಾರೆ. ಬೆಳೆದ ಈರುಳ್ಳಿಯನ್ನು ಗೊಂಚಲು ಗೊಂಚಲಾಗಿ ಕಟ್ಟಿ ಎಸೆಯುತ್ತಾರೆ. ಬಾಳೆಹಣ್ಣು, ಹೂವಿನಹಾರ ಎಸೆಯುತ್ತಾರೆ. ಕೋಳಿಮರಿಗಳನ್ನು ಎಸೆಯುತ್ತಾರೆ. ದೇವಿಯು ಬರುವಾಗ ಮೇಲೆ ಬಗೆ ಬಗೆಯ ಪಕ್ಷಿಗಳು ಹಾರಾಡಿದಂತೆ ಮೋಹಕವಾಗಿ ಕಂಡುಬರುತ್ತವೆ. 'ಹಾರು ಕೋಳಿಯು ನಿನಗೆ, ಸೂರುಬೆಲ್ಲವು ನಿನಗೆ' ಎಂದು ಕಥನದಲ್ಲಿ ಇದನ್ನೆ ಹಾಡುತ್ತಾರೆ. ಹೀಗೆ ವೈಭವದಿಂದ ಈಕೆ ತುಮ್ಮಲಿಗೆ ಬರುತ್ತಾಳೆ. ಈಗ ಈ ದೇವಸ್ಥಾನ ಮುಜರಾಯಿ ಇಲಾಖೆಗೆ ಸೇರಿರುವುದರಿಂದ ಸಮಸ್ತ ಸಿಬ್ಬಂದಿಯೇ ಅಲ್ಲಿ ನೆರೆದಿರುತ್ತದೆ. ತುಮ್ಮಲಿನಲ್ಲಿ ಈ ಮಾರಮ್ಮನ ಸಮಾಧಿ ಇದೆ ಎಂದು ಹೇಳುತ್ತಾರೆ. ಒಂದು ಪೌಳಿಯನ್ನು ಇಲ್ಲಿ ಕಟ್ಟಿದ್ದು ಒಳಗೆ ಕಟ್ಟೆಗಳಿವೆ. ಪೌಳಿಯಲ್ಲೇ ಒಂದು ಎತ್ತರದ ಗರುಡಗಂಭವಿದೆ. ಮಾರಮ್ಮನ ಪೆಟ್ಟಿಗೆಯನ್ನು ಹೊತ್ತ ಪೂಜಾರಿ ಬಂದು ಪೌಳಿಯ ಬಾಗಿಲಿಗೆ ನಿಲ್ಲುತ್ತಾನೆ. ಇಲ್ಲಿಗೆ ಬಂದು ತಲುಪುವಾಗ ದಾರಿಯಲ್ಲಿ ಬರವಾಗಿನ ದೃಶ್ಯವೇ ಅದ್ಭುತ, ರಮ್ಯ.

ಹಿರೇಹಳ್ಳೀ ಚಿತ್ರದುರ್ಗ ಜಿಲ್ಲೆಗೆ ಸೇರಿದ ಗೌರಸಮುದ್ರಕ್ಕೆ ೬-೭ ಮೈಲಿಗಳ ಅಂತರದಲ್ಲಿರುವ ಗ್ರಾಮ. ಇಲ್ಲಿ ಮ್ಯಾಸಬೇಡರು ಸಾಕಷ್ಟು ನೆಲೆಸಿದ್ದಾರೆ. ಇಲ್ಲಿರುವ ಬುಟ್ಟುಗಲವರು ಬೆಡಗಿನವರು ಜಾತ್ರೆಯ ದಿನ ಬೆಳಿಗ್ಗೆ ಎಲ್ಲರೂ (ಹಿರಿಯರ) ಒಂದು ಮನೆಯಲ್ಲಿ ಸೇರಿ ಮೀಸಲು ಹಾಲು ತುಂಬಿದ ಕುಡಿಕೆ, ಅರಿಷಿಣ ಕುಂಕುಮ, ತೆಂಗಿನಕಾಯಿಯನ್ನು ಒಂದು ಹೊಸ ಬಿದಿರಿನ ಪುಟ್ಟಿಯಲ್ಲಿಟ್ಟು ಉಪವಾಸ ವ್ರತ ಹಿಡಿದಿರುವ ಮನೆಯ ಸೊಸೆಗೆ ಹೊರಿಸಿಕೊಂಡು ಎಲ್ಲರೂ ಒಟ್ಟಾಗಿ ಕಾಲ್ನಡಿಗೆಯಲ್ಲಿ ಉರುಮೆ ವಾದ್ಯಗಳೊಂದಿಗೆ ಗೌರ ಸಮುದ್ರ ತಲುಪಿ ದೇವರನ್ನು ತುಮ್ಮಲಿಗೆ ಹೊತ್ತು ಹೊರಟಾಗ ತಾವೂ ಜೊತೆಯಲ್ಲಿ ನಡೆದು ಬಂದು ತುಮ್ಮಲಿನಲ್ಲಿ ಸೇರುತ್ತಾರೆ. ಅಲ್ಲೇ ಇರುವ ಹುತ್ತಕ್ಕೆ ಪೂಜಿಸಿ ತಾವು ತಂದ ಮೀಸಲು ಹಾಲನ್ನು ಹುತ್ತದ ಮೇಲೆ ಸುರಿದು, ಅದನ್ನು ಕಲೆಸಿ ಹುತ್ತದ ಬಂಗಾರ ಎಂದು ತರುತ್ತಾರೆ. ಇದನ್ನು ತಂದ ಮೇಲೆ ಮಾರಮ್ಮನ ಪುಟ್ಟಿಯನ್ನು ಪೌಳಿಯ ಒಳಗೆ ಕೊಂಡೊಯ್ಯುತ್ತಾರೆ. ನಂತರ ಕಟ್ಟೆಯ ಮೇಲೆ ಬೊಮ್ಮದೇವರು ಮತ್ತು ಮಾತಂಗಿಯೊಂದಿಗೆ ಮಾರಮ್ಮನನ್ನು ಕೂರಿಸುತ್ತಾರೆ. ಈ ವೇಳೆಗೆ ನಿಡುಗಲ್ಲಿನಿಂದ ಮೀಸಲುಬರುತ್ತದೆ. ಈಕೆ ನಿಡುಗಲ್ಲಿನಿಂದ ಬಂದವಳು. ಅದೇ ಆಕೆಯ ತವರು ಎಂಬ ಅಭಿಪ್ರಾಯವಿದೆ.

"ಕಲುಕಂಬ ನತ್ಯಾರೆ ದೀಪವನಚ್ಯಾರೆ, ಕಲುಕಂಬನತ್ತಿ ಇಳುದಾರೆ ॥ ಏರಿದಳೂರಥವಾ, ಕಲ್ಲು ಕಂಬಾನೆತ್ತಿ ಇಳುದಾರೆ ಸಿಲುಕನಾರು, ಕಾಯೊಡೆದು ಕಯ್ಯ ಮುಗದಾರ ॥"

ಕಲ್ಲುಕಂಬ ಹತ್ತಿ ದೀಪಹಚ್ಚಿದ 'ಸಿಲುಕನಾಸು' ಎಂಬ ಬೆಡಗಿನವನು ನಿಡುಗಲ್ಲಿನ ಮೀಸಲು, ಹಿರೇಹಳ್ಳಿ ಬೇವಿನ ಸೀರೆ ಬಂತು ಎಂದು ಕೂಗುತ್ತಾನೆ. ನಂತರ ಜನರ ಪೂಜೆ ಹರಕೆಗಳು ಪ್ರಾರಂಭವಾಗುತ್ತವೆ. ಹುತ್ತದ ಮಣ್ಣನ್ನು ತಂದು ಪೌಳಿಯಲ್ಲಿ ಕಟ್ಟೆಯ ಮೇಲೆ ಇಟ್ಟಿರುತ್ತಾರೆ. ಇದನ್ನು ಯಾರಾದರೂ ಸ್ವಲ್ಪ ತೆಗೆದು ಕೊಂಡು ಹೋಗಿ ತಮ್ಮ ತಮ್ಮವರಿಗೆ ಕೊಡುತ್ತಾರೆ. ಅದನ್ನು ಹಣೆಯ ಮೇಲೆ ಧರಿಸಿಯೇ ಹರಕೆಗಳನ್ನು ತೀರಿಸುತ್ತಾರೆ. ಕುರಿ, ಕೋಳಿ, ಕೋಣ ಸರ್ಕಾರದ ತಡೆಯಾಜ್ಞೆಯ ಮಧ್ಯೆಯೂ ಸಾಕಷ್ಟು ಬಲಿಯಾಗುತ್ತವೆ.

"ಒಪ್ಪೊತ್ತಿನಾ ಊಟ ಚುಚ್ಚಿದ ಬಾಯಿಬೀಗ, ಚುಚ್ಚಾರೆ ಗಲ್ಲಾಕೆ ಬರುಲಾರೆ ॥, ಚುಚ್ಚಾರೆ ಗಲ್ಲಾಕೆ ಬರುಲಾರೆ ಮಾರಕ್ಕ, ಒಪ್ಪಿಸಿಕೊಳ್ಳೆ ಮನದರಕೆ ॥"

ಜನಜಂಗುಳಿಯ ಮಧ್ಯೆ ಬಾಯಿಬೀಗ ಹಾರಿಸಿಕೊಂಡ ಮಹಿಳೆ ಪ್ರದಕ್ಷಿಣೆ ಮಾಡಲಾಗದೆ ಅಸಹಾಯಕತೆಯಿಂದ ಕೇಳಲು ಮಾರಮ್ಮ ಸುಮ್ಮನೆ ಬಿಡುವವಳಲ್ಲ.

"ಒಪ್ಪಿಕೊಂಬಾಕೆ ಎತ್ತೇನೆ ಎಮ್ಮೇನೆ, ಸುತ್ತಿಬಾ ನನ್ನ ಪುವುಳೀಯ ॥, ಸುತ್ತೀ ಬಾ ನನ್ನ ಪುವಳೀ ಬಾಗಿಲ ಮುಂದೆ, ಚೊಚ್ಚಲಮಗನೀಗೆ ನನ್ನ ಹೆಸರೀಡೆ ॥" - ಹೀಗೆ ಬಾಯಿಬೀಗದ ಹರಕೆ, ಬೇವಿನ ಸೀರೆ ಉಟ್ಟ ತಲೆಯ ಮೇಲೆ ಮಣ್ಣಿನ ಹಣತೆ ಹೊತ್ತು ಪ್ರದಕ್ಷಿಣೆ ಮಾಡುವ ಹರಕೆ, ಕೈಯಲ್ಲಿ ಬೇವಿನ ಸೊಪ್ಪನ್ನು ಹಿಡಿದು ಸಾಂಕೇತಿಕವಾಗಿ ಬೇವಿನ ಸೀರೆ ಉಡುವ ಹರಕೆ ಹೀಗೆ ಜಾತ್ರೆಗೆ ನೆರೆದ ಎಲ್ಲರೂ ಮಾರಮ್ಮ ಕೂತಿರುವ ಪೌಳಿಯನ್ನು ಮೂರು ಸುತ್ತು ಪ್ರದಕ್ಷಿಣೆ ಮಾಡಿ ಬೇವಿನ ಸೊಪ್ಪನ್ನು ಕೆಳಗೆ ಹಾಕಿ ನಮಸ್ಕರಿಸಿ ಹಣ್ಣು ಕಾಯಿ ಪೂಜೆ ಒಪ್ಪಿಸುತ್ತಾರೆ. ದೇವಸ್ಥಾನ ಪ್ರವೇಶ ಮಾಡಲು ಜನಜಂಗುಳಿ ಕಾರಣವಾಗಿ ಸಾಧ್ಯವಾಗದಿದ್ದರೆ ತಮ್ಮ ಬಂಡಿಗಳ ಪಕ್ಕದಲ್ಲಿಯೇ ಒಂದು ತಂಗಟೆ ಗಿಡಕ್ಕೇ ಪೂಜೆ ಮಾಡಿ ನೈವೇದ್ಯ ಮಾಡಿಬಿಡುತ್ತಾರೆ. ಬೇವಿನ ಸೀರೆ ಉಟ್ಟುಬಂದ ನಂತರ ಹೊಸ ಬಟ್ಟೆ ಧರಿಸುತ್ತಾರೆ. ಇಲ್ಲವೇ ಸಾಂಕೇತಿಕವಾಗಿ ಕೈಗೆ ಅಂಗುನೂಲು (ಅರಿಷಿಣಹಚ್ಚಿದ ದಾರ) ಕಟ್ಟಿಕೊಳ್ಳುತ್ತಾರೆ. ಸುಮಾರು ೩-೪ ಗಂಟೆಯ ವೇಳೆಗಾಗಲೇ ಅರ್ಧ ಜಾತ್ರೆ ಖಾಲಿಯಾಗಿರುತ್ತದೆ. ಮರಳಿ ಊರಿಗೆ ಹೊರಟುಬಿಡುತ್ತಾರೆ. ಎತ್ತಿನ ಬಂಡಿಗಳೇ ಹೆಚ್ಚು. ಈಗ ವಾಹನಗಳೂ ಬರುತ್ತವೆ. ಸಂಜೆಯ ವೇಳೆಗೆ ಮಾರಮ್ಮ ಮತ್ತು ಇತರ ದೇವರುಗಳನ್ನು ಹೊತ್ತು ಮರಳಿ ಗೌರಸಮುದ್ರಕ್ಕೆ ತರುತ್ತಾರೆ. ತುಮ್ಮಲುವಿನಲ್ಲಿ ಯಾರೂ ಉಳಿಯುವುದಿಲ್ಲ. ಊರ ಬಳಿಗೆ ಬಂದು ಒಂದು ಊರ ಗೌಡರ ಜಮೀನಿನಲ್ಲಿ ಕಟ್ಟೆಯ ಮೇಲೆ ಕೂರಿಸುತ್ತಾರೆ. ಪೂಜಾರಿಗಳನ್ನುಳಿದು ಜನ ಊರೊಳಗೆ ಬರುತ್ತಾರೆ. ಊಟ ಮುಗಿಸಿಕೊಂಡು ರಾತ್ರಿ ೮-೯ ಗಂಟೆಯ ವೇಳೆಗೆ ಆರತಿ ಹಿಡಿದ ಹೆಂಗೆಳೆಯರೊಂದಿಗೆ ಮತ್ತೆ ಬಂದು ಪೂಜಾರಿಯ ತಲೆಯ ಮೇಲೆ ಮತ್ತೆ ಮಾರಮ್ಮನನ್ನು ಹೊರಿಸಿಕೊಂಡು ಊರಿಗೆ ಪ್ರವೇಶ ಮಾಡಿ ಆ ರಾತ್ರಿ ಊರೆಲ್ಲೆಲ್ಲಾ ಮೆರವಣಿಗೆ ಮಾಡುತ್ತಾರೆ. ಜೊತೆಗೆ ಬೊಮ್ಮದೇವರು ಮತ್ತು ಮಾತಂಗಿಯೂ ಇರುತ್ತಾರೆ.

**ಸಿಡಿ :**

ಬುಧವಾರ ಸಂಜೆ ಸುಮಾರು ೪ ಗಂಟೆಯ ವೇಳೆಗೆ ಮಾರಮ್ಮನಿಗೆ ಸಿಡಿಯನ್ನು ಆಡುವ ಸೇವೆ ಆರಂಭವಾಗುತ್ತದೆ. ಸಿಡಿಗಂಬ ದೇವಸ್ಥಾನದ ಮುಂಭಾಗದಲ್ಲಿದೆ. ಬುಟ್ಟುಗಲವರ ಬೆಡಗಿಗೆ ಸೇರಿದ ಕೋನಸಾಗರದಲ್ಲಿರುವ 'ಕೊಡಗನವರು' ಎಂಬ ಗುಂಪಿನವರು ಸಿಡಿ ಸೇವೆ ಸಲ್ಲಿಸುತ್ತಾರೆ. ದೇವಸ್ಥಾನದ ಹೊರಗೆ ಕಟ್ಟೆಯ ಮೇಲೆ ಮಾರಮ್ಮನ ಪೆಟ್ಟಿಗೆಯನ್ನು ಇಟ್ಟಿರುತ್ತಾರೆ. ಆಕೆಯ ಸಮಕ್ಷಮದಲ್ಲೇ ಸಿಡಿಯ ಸೇವೆ ನಡೆಯಬೇಕೆನ್ನುವುದು ಇಲ್ಲಿಯ ಉದ್ದೇಶ. 'ಕೋನಸಾಗರ' ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಗೌರಸಮುದ್ರಕ್ಕೆ ೫ ಕಿ.ಮೀ.ಗಳ ಅಂತರದಲ್ಲಿದೆ. ಮೊದಲು ಸಿಲಿಕಿನಾನು ಬೆಡಗಿನವರು ಸಿಡಿ ಆಡುತ್ತಿದ್ದು ಈಗ ಅದು 'ಕೊಡಗಿನವನ' ವಂಶಕ್ಕೆ ಬಂದಿದೆ. 'ಕೊಡಗನಾನು' ಅಂದರೆ ಕೊಳುಗುಳದ

ಬೊಮ್ಮನವಂಶಸ್ಥರು. ಇವರೆಲ್ಲರೂ ದಾಯಾದಿಗಳೇ. ಕಾರಣಾಂತರಗಳಿಂದ ಬೇರೆ ಬೇರೆ ಒಳಗುಂಪುಗಳಾಗಿದ್ದಾರಷ್ಟೆ. ಆದಿನ ಮಧ್ಯಾಹ್ನದ ವೇಳೆಗೆ ಉಪವಾಸ ವ್ರತ ಹಿಡಿದಿರುವ ಸಿಡಿ ಆಡುವ ವ್ಯಕ್ತಿಯನ್ನು ಭಯಭಕ್ತಿಯಿಂದ ಆತನ ಮನೆಯವರು ದೇವಾಲಯಕ್ಕೆ ಕರೆತರುತ್ತಾರೆ. ಸಿಡಿ ಆಡುವ ಮುನ್ನ ಮತ್ತೊಮ್ಮೆ ಮೈಮೇಲೆ ತಣ್ಣೀರು ಸುರಿದು, ಹೊಸ ಬಟ್ಟೆಯನ್ನು ಉಡಿಸುತ್ತಾರೆ. ಚಲ್ಲಣ ಇಲ್ಲವೇ ಕಚ್ಚೆಯನ್ನು ಹಾಕಿರುತ್ತಾನೆ. ಸಿಡಿ ಮರದ ತುದಿಗೆ ಹಗ್ಗದಿಂದ ಕಟ್ಟಿರುವ ಈತನ ಸೊಂಟಕ್ಕೆ ಬಿಗಿಯಾಗಿ ಬಟ್ಟೆಯನ್ನು ಕಟ್ಟಿರುತ್ತಾರೆ. ಈ ಬಟ್ಟೆಗೆ ಜೋಡಿಸಿದಂತೆ ಹಗ್ಗ ಸಿಡಿಮರದಕೊನೆಗೆ ಬಿಗಿದಿರುತ್ತಾರೆ. ಹೀಗೆ ಕಟ್ಟಲ್ಪಟ್ಟ ಆತ ಭಂಡಾರ, ಬೇವಿನ ಸೊಪ್ಪು, ಮತ್ತು ಕುಡುಗೋಲನ್ನು ಕೈಯಲ್ಲಿ ಹಿಡಿದು ದೇವಿಗೆ ಕೈಜೋಡಿಸಿರುವಂತೆಯೇ ಮರವನ್ನು ಎತ್ತಿ ಆತನನ್ನು ಮೇಲಕ್ಕೆ ಕಳಿಸಲಾಗುತ್ತದೆ. ಕೊರಳಿಗೆ ಹೂವಿನ ಆಹಾರ ಹಾಕಿರುತ್ತಾರೆ. ಮೂರು ಬಾರಿ ಆತನನ್ನು ಸುತ್ತಿಸಲಾಗುತ್ತದೆ. ಸಾಕಷ್ಟು ಜನ ಕೆಳಗೆ ನೆರೆದಿರುತ್ತಾರೆ. ಅವರ ಮೇಲೆ ಭಂಡಾರ ಚೆಲ್ಲುತ್ತಾ ತನ್ನ ಕೈಯ್ಯಲ್ಲಿರುವ ಕುಡುಗೋಲಿನಿಂದ ಬೇವಿನ ಸೊಪ್ಪನ್ನು ಕತ್ತರಿಸಿ ಕೆಳಗೆ ಎಸೆಯುತ್ತಾ, ಒಮ್ಮೊಮ್ಮೆ ಬಾಯಲ್ಲಿ ಕುಡುಗೋಲು ಬೇವಿನಸೊಪ್ಪು ಹಿಡಿದು ದೇವಿಗೆ ನಮಸ್ಕರಿಸುತ್ತಾ ಈತ ಭಯ ಭಕ್ತಿಯಿಂದ ಸಿಡಿಯಾಡುತ್ತಾನೆ.

**ಓಕುಳಿ ಸೇವೆ :**

ಮರುದಿನ ಅಂದರೆ ಗುರುವಾರ ರಾತ್ರಿ ಓಕುಳಿ ಆಡುತ್ತಾರೆ. ಓಕುಳಿ ಕುಣಿ ಮಾರಮ್ಮನ ದೇವಸ್ಥಾನದ ಮುಂದೆಯೇ ಇದ್ದು ಅದರಲ್ಲಿ ಓಕುಳಿ ಕಲೆಸುತ್ತಾರೆ. ದೇವಿಯನ್ನು ಅಲ್ಲಿಗೆ ಕರೆತಂದು ಓಕುಳಿ ನೀರನ್ನು ಚಿಮುಕಿಸುತ್ತಾರೆ. ಸೇರಿದ ಭಕ್ತಾದಿಗಳು ಓಕುಳಿಯನ್ನು ಪರಸ್ಪರ ಎರಚಿಕೊಳ್ಳುತ್ತಾರೆ.

**ನವರಾತ್ರಿ ಹಬ್ಬದ ಆಚರಣೆ :**

ಸಾಮಾನ್ಯವಾಗಿ ನವರಾತ್ರಿಯ ವಿಜಯದಶಮಿಯ ದಿನ ಎಲ್ಲಾ ಊರಿನ ದೇವರುಗಳನ್ನು ಮೆರವಣಿಗೆಯಲ್ಲಿ ಬನ್ನಿಮರಕ್ಕೆ ಬನ್ನಿ ಮುಡಿಯಲೆಂದು ಕರೆದೊಯ್ಯುವುದುಂಟು. ಇಲ್ಲೂ ಅದೇ ಬಗೆಯ ಆಚರಣೆ ಇದೆ. ದಶಮಿಯ ದಿನ ಸಂಜೆ ದೇವಸ್ಥಾನದ ಬಳಿ ಊರ ಜನ ಸೇರುತ್ತಾರೆ. ಪೂಜಾರಿ ದೇವರ ವಿಗ್ರಹಕ್ಕೆ ಅಲಂಕರಿಸಿ ಪೂಜೆ ಮಾಡಿರುತ್ತಾನೆ. ಮಾರಮ್ಮನ ಪುಟ್ಟಿಯನ್ನು ಅಲಂಕರಿಸಿ ಪೂಜಾರಿಗೆ ಹೊರಿಸಿಕೊಂಡು ವಾದ್ಯಘೋಷಗಳ ಛತ್ರಿಚಾಮರಗಳ ಮಧ್ಯೆ ಊರ ಹೊರಗೆ ಒಂದು ಫರ್ಲಾಂಗಿಗೂ ದೂರವಿರುವ ಕರಿಯಮ್ಮನ ಕಟ್ಟೆಯ ಬಳಿ ಬರುತ್ತಾರೆ. ಈ ಕಟ್ಟೆಯ ಬಳಿಯೇ ಬನ್ನಿಮರವಿದ್ದು ಈ ಕಟ್ಟೆಯ ಮೇಲೆ ಮಾರಮ್ಮನನ್ನು ಕೂರಿಸುತ್ತಾರೆ. ಬನ್ನಿಮರಕ್ಕೆ ಪೂಜೆ ಸಲ್ಲಿಸಿ ಬನ್ನಿ ಪತ್ರೆಯನ್ನು ಕಿತ್ತು ದೇವಿಗೆ ಮುಡಿಸಿ ಜನ ಪರಸ್ಪರ ಕೊಟ್ಟುಕೊಂಡು ಶುಭಾಶಯ ಹೇಳಿಕೊಳ್ಳುತ್ತಾರೆ. ಸ್ವಲ್ಪ ಹೊತ್ತು ಅಲ್ಲಿದ್ದು ನಂತರ ಊರ ಕಡೆಗೆ ಮೆರವಣಿಗೆ ಹೊರಡುತ್ತದೆ. ಸಾಕಷ್ಟು ಮಂದಿ ಹೆಂಗೆಳೆಯರು ಕಲಶ, ಆರತಿಗಳನ್ನು ಹಿಡಿದು ನಿಂತಿರುತ್ತಾರೆ. ಜಾತ್ರೆಯ ಸಂದರ್ಭದಂತೆ ಇಲ್ಲಿ ಅವಸರವಾಗಿ ಪೂಜಾರಿ ನಡೆದುಬರುವುದಿಲ್ಲ. ನಿಧಾನವಾಗಿ ಕಲಶಗಳ ಮಧ್ಯೆ ಕಳೆಯಿಂದ, ಸೊಬಗಿನಿಂದ ದೇವಿ ಮತ್ತೆ ಊರಿಗೆ ಆಗಮಿಸಿ ಮೆರವಣಿಗೆಯೊಂದಿಗೆ ಬೆಳಗಿನ ಜಾವ ಗುಡಿ ತುಂಬುತ್ತಾಳೆ.

ಗೌರಸಮುದ್ರದ ಮಾರಮ್ಮನ ಒಟ್ಟು ಆರಾಧನಾ ವಿಧಿಗಳನ್ನು ಎರಡು ಭಾಗಗಳಾಗಿ ಮಾಡಬಹುದಾಗಿದೆ.

೧. ಗುಗ್ಗರಿ ಹಬ್ಬದ ಆಚರಣೆ

೨. ಜಾತ್ರೆ ಮತ್ತು ನವರಾತ್ರಿ.

**ಗುಗ್ಗರಿಹಬ್ಬ :**

'ಮ್ಯಾಸ ಬೇಡರ ಸಾಂಸ್ಕೃತಿಕ ನಾಯಕ/ನಾಯಕಿ/ಕುಲದೇವರಿಗೆ ಸಲ್ಲಿಸುವ ವಿಶಿಷ್ಟ ಆಚರಣೆ ಎಂದು ಈಗಾಗಲೇ ವಿವರಿಸಲಾಗಿದೆ. ಗೌರಸಮುದ್ರದ ಮಾರಮ್ಮ, ಸಾಂಕ್ರಾಮಿಕ ರೋಗಗಳ ನಿವಾರಕಿಯಾಗಿ, ಸಮೃದ್ಧಿಕಾರಕ ದೇವತೆಯಾಗಿ ಕೋಣ, ಕುರಿ, ಕೋಳಿಗಳ ಬಲಿಯಲ್ಲಿ ಮುಳುಗಿ ಏಳುತ್ತಿರುವಾಗ ಈಕೆ ನಾಡಿನಾದ್ಯಂತ ಎಲ್ಲೆಡೆ ಪೂಜೆಗೊಳ್ಳುತ್ತಿರುವ ಮಾರಿಯಷ್ಟೆ ಎನಿಸುತ್ತದೆ. ಇದೇ ಇಲ್ಲಿ ಪ್ರಧಾನವಾದ ಆಚರಣೆಯಾಗಿದೆ. ಆದರೆ ಅಲ್ಲಿ ನಡೆಯುವ ಅಪ್ರಧಾನವಾಗಿರುವ ಇತರೆ ಆಚರಣೆಯೆಂದರೆ ಗುಗ್ಗರಿ ಹಬ್ಬದ ಆಚರಣೆ, 'ಮಾರಿ'ಯ ಪ್ರಾಧಾನ್ಯತೆಯೇ ಹೆಚ್ಚಾಗಿ ಇಲ್ಲಿ ಗುಗ್ಗರಿಹಬ್ಬ 'ಬುಟ್ಟುಗಲವರು' ಬೆಡಗಿನ ಮನೆದೇವರಾದ ಬೊಮ್ಮದೇವರಿಗೆ ತಾನೇ ಎಂಬಂತೆ ಭಾಸವಾಗುತ್ತದೆ. ಆದರೆ ಇಲ್ಲಿ ಪ್ರತಿಮನೆಯವರೂ ಹುರುಳಿದಾನ್ಯ ತೆಗೆದುಕೊಂಡು ಹೋಗಿ ಎರಡೂ ಕಡೆ ಸುರಿದು ಭಾಗ ಮಾಡುವಲ್ಲಿಯೇ ಮಾರಮ್ಮನಿಗೂ ಸಲ್ಲುವ ಗುಗ್ಗರಿಹಬ್ಬ ಗಮನಕ್ಕೆ ಬರುತ್ತದೆ. ಕೇವಲ ಹೊಂದಾಣಿಕೆ ಕಾರಣವಾಗಿ ಎರಡು ದೇವತೆಗಳಿಗೂ ಒಂದೇ ಕಡೆ ಗುಗ್ಗರಿ ಬೇಯಿಸಿ ಮೊದಲು ಮಾರಮ್ಮನಿಗೆ ನಂತರ ಬೊಮ್ಮದೇವರಿಗೆ ಗುಗ್ಗರಿ ನೈವೇದ್ಯ ಮಾಡಲಾಗುತ್ತದೆ.

ಬೊಮ್ಮದೇವರಿಗೆ ಮಾರಮ್ಮನ ಜಾತ್ರೆಗೆ ಮೊದಲು ಲಿಂಗದ ಗುಡಿಯ ಬಳಿ 'ವಾಸೆ' ಕೊಯ್ಯುವಾಗ ಮೊದಲು ಮಾರಮ್ಮನ ನೋಮು ಎಂದು ಕರಿಕಂಬಳಿ ಗದ್ದಿಗೆಯ ಮೇಲೆ 'ಕಾಸು' ಇಟ್ಟು ನಮನ ಸಲ್ಲಿಸುವಲ್ಲಿ ಆಕೆಗೆ ಈ ಸಮುದಾಯ ಕೊಡುತ್ತಿರುವ ಪ್ರಾಧಾನ್ಯತೆ ಗಮನಕ್ಕೆ ಬರುತ್ತದೆ. ಮತ್ತು ಮಾರಮ್ಮನಿಗೆ ಸಂಬಂಧಿಸಿದ ಆಚರಣೆಗಳೆಲ್ಲವೂ ನಡೆಯುವುದು ದೊರೆ ಯರಮಂಚಿನಾಯಕನ ಪರಂಪರೆಯವರ ಸಮಕ್ಷಮದಲ್ಲಿ. ಆತನೇ ಸ್ವತಃ ನಿಂತು ಈ ಆಚರಣೆಗಳನ್ನು ನಿರ್ದೇಶಿಸುವಲ್ಲಿ ಪಾಲ್ಗೊಳ್ಳುವಿಕೆಯಲ್ಲಿ ತನ್ನನ್ನು ತನ್ನ ಸಮುದಾಯವನ್ನು ಕಾಪಾಡಿದ ಅವಳ ಬಗ್ಗೆ ಆತನಿಗಿರುವ ಆತನ ಪರಂಪರೆಗಿರುವ ಋಣದ ಭಾವನೆ ಸ್ಪಷ್ಟವಾಗುತ್ತದೆ. ಹೀಗೆ ಸಮುದಾಯದ ನಾಯಕಿಯಾಗಿ ಪೂಜೆಗೊಳ್ಳುತ್ತಿರುವ ನಾಯಕಿಯ ಈ ಆರಾಧನೆ ಜನಪ್ರಿಯ ಮಾರಿಯ ಆರಾಧನೆಯ ವೈಭವದ ಮುಂದೆ ಮಂಕಾಗಿ ಹೋಗಿದೆ.

ಇನ್ನು ಜಾತ್ರೆಯಲ್ಲಿ ಅಲ್ಲಿ ಸೇರಿದ ಜನಸಮೂಹವನ್ನು ನೋಡಿದರೆ ಜನಮನದಲ್ಲಿ ಈಕೆ ಹೇಗೆ ನೆಲೆಸಿದ್ದಾಳೆ ಎಂದು ಬೆರಗನ್ನು ಉಂಟುಮಾಡುತ್ತದೆ. ಆಕೆ ತನ್ನ ಮೂಲನೆಲೆಯಾದ ತುಮ್ಮಲಿಗೆ ಹೋಗುವಾಗಿನ ವೈಭವ, ಬಿರುಸು, ಭೀಕರತೆ ನೋಡಿದರೆ ಬಹುಶಃ ಅಂದು ರಾಯದುರ್ಗದ ದೊರೆಯ

ಮೇಲೆ ಸೇಡು ತೀರಿಸಿಕೊಳ್ಳಲು ಇದೇ ಆವೇಶದಿಂದ ನಡೆದಿದ್ದಳೇನೋ ಎನಿಸುತ್ತದೆ. ಮ್ಯಾಸಬೇಡರು ಮಾತ್ರವಲ್ಲದೆ ಸಮಸ್ತ ಸಮುದಾಯ ಕುಲಭೇದವಿಲ್ಲದೆ ಅಲ್ಲಿ ನೆರೆಯುತ್ತದೆ. ಅಂದು ಯರಮಂಚಿನಾಯಕನಿಗೆ ಕುಲ ಇಲ್ಲದವರಿಗೆ ಕುಲಕೊಟ್ಟು ಎಲ್ಲರನ್ನು ನಿನ್ನ ಸಮುದಾಯವೇ ಎಂದು ಭಾವಿಸಿಕೋ ಎಂದು ಹೇಳಿದ ಈಕೆಗೆ ಕುಲಭೇಧವಿರಲು ಸಾಧ್ಯವೇ? ಹಾಗಾಗಿ ಎಲ್ಲರೂ ಈಕೆಗೆ ಭಕ್ತರೇ. ಆದರೆ ಪ್ರಧಾನವಾಗಿ ಇಲ್ಲಿ ಮೀಸಲು ಹಾಲನ್ನು ತರುವವರು ಮಾತ್ರ ಮ್ಯಾಸನಾಯಕರೇ. ಭಯಭಕ್ತಿಯಿಂದ ಮೀಸಲುಹಾಲಿನ ಗಡಿಗೆಯನ್ನು ಹೊತ್ತು, ಕಂಬಳಿ ಹೆಗಲಿಗೇರಿಸಿ ಕೈಯಲ್ಲೊಂದು ಕೋಲು ಹಿಡಿದು, ಬುಟ್ಟಿಯಲ್ಲಿ ಹಾಲಿನ ಗಡಿಗೆ ಮತ್ತು ಹಣ್ಣು, ಕಾಯಿ, ಕಾಸು ಇಟ್ಟು ನಡೆದು ಬರುವ ಸಮುದಾಯದ ಮಹಿಳೆಯರನ್ನು, ಪುರುಷರನ್ನು ಕಂಡಾಗ ಅವರ ಭಕ್ತಿ, ಶ್ರದ್ಧೆ, ತಮ್ಮ ಪಶು, ಎಮ್ಮೆಯ ಹಾಲನ್ನು ಈ ಪಶುಪಾಲಕಿಯಾದ ಮಾರಮ್ಮನಿಗೆ ವರ್ಷಕ್ಕೊಮ್ಮೆಯಾದರೂ ಸಲ್ಲಿಸಲೇ ಬೇಕೆಂಬ ಶ್ರದ್ಧೆ ಅಚ್ಚರಿಮೂಡಿಸುತ್ತದೆ. ಮತ್ತುಈ ಹಾಲನ್ನು ಮಾರಮ್ಮನಿಗೆ ಎಂದು ಹೆಸರಿಸಿ ಹುತ್ತಕ್ಕೆ ಸುರಿದು ಅದನ್ನು ಕಲೆಸಿ 'ಹುತ್ತದ ಬಂಗಾರ' ಎಂದು ಆ ಮಣ್ಣನ್ನೇ ಹಣೆಗಿಟ್ಟು ಕೊಂಡು ಸಂಭ್ರಮಿಸುವ ಅವರ ಮನಸ್ಸು ಮಾತೃರೂಪೀ ಆರಾಧನೆಯ ಮೂಲಕ್ಕೇ ಹೊರಟು ಹೋಗಿರುತ್ತದೆ. ಹಾಗೆಯೇ ಗಿಡಕ್ಕೇ ಕುರಿ, ಕೋಳಿ, ಕೋಣ ಕಡೆದು ಆ ಗಿಡವನ್ನೇ ಮಾರಮ್ಮ ಎಂದು ಭಾವಿಸಿಕೊಳ್ಳುವ ಮನಸ್ಸು ವೃಕ್ಷರೂಪಿಯಾಗಿ, ಹಸುರಿನ ಸಮೃದ್ಧಿಯ ದೇವತೆಯಾಗಿ ಆಕೆಯನ್ನು ಗ್ರಹಿಸಿಕೊಳ್ಳುವ ವಿಧಾನಕ್ಕೆ ಸಾಕ್ಷಿಯಾಗುತ್ತದೆ.

ಆಕೆಯನ್ನು ಮಾರಿಯಾಗಿ ರೂಪಾಂತರಿಸಿಕೊಂಡಾಗಲೇ ರೋಗ ನಿವಾರಕಳಾಗಿ ಸಿಟ್ಟುಬಂದರೆ ರೋಗ ತರಿಸುವವಳಾಗಿ ಬಿಡುತ್ತಾಳೆ. ಜನಮನದಲ್ಲಿ ಹಾಗಾಗಿಯೇ. "ಹರಕೆ ಬರದಿದ್ದರೆ ನಾನು ಬಾಲಗೆ ಚಳಿಜ್ವರವ ಬರಿಸೇನು..."ಬೇವಿನ ಸೀರೆ ಉಡುವುದು, ಬಾಯಿಬೀಗ ಹಾಕಿಸಿಕೊಳ್ಳುವುದು ಈ ಆಚರಣೆಗಳೆಲ್ಲಾ ಇಲ್ಲಿ ನಡೆಯುತ್ತವೆ.

ತುಮ್ಮಲಿನಿಂದ ಸಂಜೆ ಊರಿಗೆ ಮರಳಿ ರಾತ್ರಿಯೆಲ್ಲಾ ಊರಲ್ಲಿ ಆಕೆಯ ಮೆರವಣಿಗೆಯಾಗುತ್ತದೆ. ಆಗ ಹರಕೆ ಮಾಡಿಕೊಂಡವರು 'ಮಣೇವು' ಇಡುತ್ತಾರೆ. ದೇವಿಯ ಮುಂದೆ ಇದು ನಡೆಯುತ್ತದೆ.

**ಕಳಶಾರತಿ** : ಬೆಳಗಿನ ಜಾವದ ವೇಳಿಗೆ ಗುಡಿಯ ಬಳಿಗೆ ಬಂದಾಗ ಹರಕೆ ಮಾಡಿಕೊಂಡ ಮಹಿಳೆಯರು ಹೂವಿನಿಂದ ತಟ್ಟೆಯನ್ನು ಅಲಂಕರಿಸಿಕೊಂಡು ಮಧ್ಯೆ ದೀಪ, ಕಳಶವಿಟ್ಟುಕೊಂಡು ಮಾರಮ್ಮನಿಗೆ ಬೆಳಗುತ್ತಾರೆ.

**ಸಿಡಿ** : ಮರುದಿನದ ಸಿಡಿಯಾಚನೆಯಲ್ಲಿ ಬಹಳ ವಿಶೇಷತೆಯಿದೆ. ಸಿಡಿಯಾಡುವ ರೀತಿಯಲ್ಲಿ ಅದು ಎಲ್ಲಾ ಕಡೆ ಆಡುವಂತಹದೇ. ಸಿಡಿಯಾಡುವುದರ ಹಿನ್ನೆಲೆ ವಿಶೇಷವಾಗಿದೆ. ಹಿಂದೆ ಯರಮಂಚಿನಾಯಕನಿಗೆ ಸಹಾಯ ಮಾಡಿ ಪೆಟ್ಟಿಗೆ ದೇವರುಗಳನ್ನು ಪಶುಸಂಪತ್ತನ್ನು ನರಪತಿ ದೊರೆಯಿಂದ ಬಿಡಿಸಿಕೊಟ್ಟ ಕೊಳುಗುಳದ ಬೊಮ್ಮಯ್ಯ ಕಾಲಾಂತರದಲ್ಲಿ ತನ್ನ ಸಮುದಾಯಕ್ಕೆ ಕಂಟಕನಾದಾಗ ಯರಮಂಚಿನಾಯಕನ ಕಡೆಯವರು ಹೇಗೋ ಅವನನ್ನು ಮುತ್ತಿಗಾರರ ಹಳ್ಳಿ ಕಮರದ ಕಾವಿನಲ್ಲಿ ಮುಗಿಸಿಬಿಡುತ್ತಾರೆ. ಅವನ ಸಂತತಿಯವನಾದ ಯರಬೊಮ್ಮನಾಳನಾಯಕ ರಾಯದುರ್ಗವನ್ನು ಆಳುತ್ತಿದ್ದು

ಹಳೆಯ ದ್ವೇಷ ಕಾರಣಕಾಗಿ ಸೇಡು ತೀರಿಸಿಕೊಳ್ಳಲೆಂದೇ ಯರಮಂಚಿನಾಯಕ ಮತ್ತು ಮಾರಮ್ಮ ಕಟ್ಟಿದ್ದ ಲಿಂಗದ ಗುಡಿಯನ್ನು ನಾಶಮಾಡಿ, ಮಾರಮ್ಮನ, ಆಕೆಯ ತಮ್ಮನ ಮನೆಯನ್ನು ನಾಶಮಾಡಿ ಈ ಮೂಲಕ ಸಮುದಾಯದ ನಾಶ ಮಾಡುವ ಸೂಚನೆ ಕೊಟ್ಟ ಹೋಗಿದ್ದ. ಪ್ರತಿಯಾಗಿ ಆತನನ್ನು ಮಾರಮ್ಮ ಕೊಂದು ಬರುವಾಗ ಅದೇ ವಂಶದವನು ಎದುರಾದಾಗ ಕೊಳುಗುಳದ ಬೊಮ್ಮನ ವಂಶದವರೂ ಯಾರೂ ಉಳಿಯದಂತೆ ಮಾಡಿಬಿಡುತ್ತೇನೆ. ಇವರು ಕುಲಕ್ಕೇ ಕಂಟಕರು ಎಂದು ಹಿಡಿದು ದೇಹದ ಸರಿ ಅರ್ಧಭಾಗಕ್ಕೆ ಕತ್ತಿ ಹಾಕಿ ಕೊಂದು ಬಿಡುತ್ತಾಳೆ. ಆ ಪರಂಪರೆಯವರಿಗೆ ಅಂದಿನಿಂದಲೂ ಆಕೆಯನ್ನು ಕಂಡರೆ ಆತಂಕ ಭಯ. ಆದರೆ ಆಕೆ ತಮ್ಮ ಹೆಣ್ಣುಮಗಳೇ. ಉಳಿದ ಸಹೋದರರರೆಲ್ಲಾ ಆಕೆಯೊಂದಿಗಿದ್ದು, ಬೊಮ್ಮನ ಮೂಲದವರು ಮಾತ್ರ ದೂರ ಉಳಿದಿದ್ದರು. ಕಾಲಾಂತರದಲ್ಲಿ ಆಕೆಯನ್ನು ಐವೋದಿ ಮಠದಲ್ಲಿ ಯರಮಂಚಿನಾಯಕ ನೆಲೆಗೊಳಿಸಿ ದೈವೀಕರಣಗೊಳಿಸಿದಾಗ ಅವರು ಹರಕೆ ಹೊರುತ್ತಾರಂತೆ, ನಮ್ಮನ್ನು ಕ್ರೂರವಾಗಿ ನೋಡಬೇಡ, ಹಿರಿಯರ ತಪ್ಪನ್ನು ಕ್ಷಮಿಸು, ಪ್ರತಿವರ್ಷ ನಿನ್ನ ಗುಡಿಯ ಮುಂದೆ ಸಾಂಕೇತಿಕ ಬಲಿಯಾಗಿ ಸಿಡಿಯಾಡುತ್ತೇವೆ ಎಂದು ಹೀಗೆ ಹರಸಿಕೊಂಡು ತಮ್ಮ ಬಳಗವನ್ನು ಸೇರಿಕೊಂಡರು. ಇಂದಿಗೂ ಇದೇ ಬೆಡಗಿನವರೇ ಇಲ್ಲಿ ಸಿಡಿಯಾಡುವುದು. ಸಿಡಿಯಾಡುವ ಆಚರಣೆ ಸರಿಸುಮಾರು ಎಲ್ಲಾ ಅಮ್ಮನ ಗುಡಿಗಳ ಮುಂದೆ ಇದೆ. ಆದರೆ ಸಮುದಾಯದವರು ಈ ಆಚರಣೆಯ ಹಿಂದಿನ ಉದ್ದೇಶವನ್ನು ಹೀಗೆ ವಿವರಿಸುವುದರ ಮೂಲಕ ಸಮುದಾಯದ ನಾಯಕಿ ಈಕೆ ಮತ್ತು ಸಂಬಂಧಿಸಿದ ಉದ್ದೇಶವೂ ಇದ್ದು ಈ ಆಚರಣೆ ಈ ಕಾರಣಕ್ಕಾಗಿ ಎಂದು ಹೇಳುವಲ್ಲಿ ಅರ್ಥವಿದೆ ಎನಿಸುತ್ತದೆ.

ಓಕುಳಿ ಆಟ ಮತ್ತು ನವರಾತ್ರಿಯ ಆಚರಣೆ ಸಾಮಾನ್ಯವಾಗಿ ಊರಮಂದಿ ಮನರಂಜನೆಗಾಗಿ, ನವರಾತ್ರಿ ಆದಿಶಕ್ತಿಗೆ ಪೂಜೆಯ ಅಂಗವಾಗಿ ನಡೆಯುವ ಆಚರಣೆಗಳಷ್ಟೇ.

ಒಟ್ಟು ಈ ಎಲ್ಲಾ ವಿವಿಧ ಆಚರಣೆಗಳ ಮೂಲಕ ಮೂಲತಃ ಸಮುದಾಯದ ನಾಯಕಿಯಾಗಿದ್ದು ದೈವತ್ವಕ್ಕೇರಿ ಸಂಬಂಧಿಸಿದ ಸಮುದಾಯದಿಂದ ಆರಾಧನೆಗೆ ಒಳಗಾಗಿ ಅದರೊಂದಿಗೆ ಊರಿನದೇವತೆಯಾಗಿಯೂ ಮಾತೃರೂಪೀ ಪರಂಪರೆಯ ಆರಾಧನೆಯನ್ನು ಪಡೆದಿರುವ ವಿಶಿಷ್ಟವಾದ ದೇವತೆಯಾಗಿದ್ದಾಳೆ ಈಕೆ. ಜನ ಹರಕೆಗಾಗಿ ಬೇಕಾದ ಬಲಿಕೊಡುತ್ತಾರೆಯೇ ವಿನಃ ಇಲ್ಲಿ ಬೇರೆ ಮಾರಿ ಪುರಾಣದಲ್ಲಿ ಬರುವಂತೆ ಗಂಡನ ಸಂಕೇತವಾಗಿದ್ದು ಕೋಣನನ್ನು ಕಡಿದು ಆಕೆಯನ್ನು ವಿಧವೆಯನ್ನಾಗಿಸುವ ಆಚರಣೆ ಇಲ್ಲ. ಈ ಮೂಲಕವಾಗಿಯೂ ಈಕೆ ಸಾಮಾನ್ಯ ಮಾರಿಗಿಂತ ಭಿನ್ನಳಾಗಿ ಸಮುದಾಯದ ನಾಯಕಿಯಾಗುತ್ತಾಳೆ.

ಜಾತ್ರೆ ಮುಗಿದ ನಂತರ ಮರುತಿಂಗಳಿನಲ್ಲಿ ಬರುವ (ನವರಾತ್ರಿಗೆ ಮುನ್ನ) ಮಂಗಳವಾರದಂದು 'ತಿಂಗಳ ಪರಿಷೆ' ಎಂದು ಮರುಜಾತ್ರೆ ನಡೆಯುತ್ತದೆ. ಆಗ ತುಮ್ಮಲಿಗೆ ಮಾರಮ್ಮನ ಪುಟ್ಟಿ ಬರುವುದಿಲ್ಲ. ಭಂಡಾರದ ಭರಣಿ ಬರುತ್ತದೆ. ಆಗಲೂ ಸಾಕಷ್ಟು ಮಂದಿ ಬರುತ್ತಾರೆ. ಮೊದಲ ಜಾತ್ರೆಗೆ ಹೋಲಿಸಿದರೆ ಕಡಿಮೆ ಎಂದು ಹೇಳಬಹುದು.

**ಆಚರಣೆಗೆ ಸಂಬಂಧಿಸಿದಂತೆ ಇತರ ಸಮುದಾಯುದವರ ಪಾತ್ರ :**

ಮುಜರಾಯಿ ಇಲಾಖೆಗೆ ಈಗ ಈ ದೇವಸ್ಥಾನ ಸೇರಿವುದರಿಂದ ಸರ್ಕಾರ ಈ ದೇವಾಲಯುದ ಉಸ್ತುವಾರಿಗೆ ಕಮಿಟಿಯೊಂದನ್ನು ಮಾಡಿದೆ. ೯ ಮಂದಿ ಈ ಸಮಿತಿಯಲ್ಲಿ ಇರುತ್ತಾರೆ. ಸಭೆಯಲ್ಲಿ ಚರ್ಚಿಸಿ ಜಾತ್ರೆಯ ನಿರ್ವಹನೆಗೆ ಇಂತಿಷ್ಟು ಹಣ ಬೇಕಾಗಬಹುದು ಎಂದು ತೀರ್ಮಾನಿಸಿ ದೇವಸ್ಥಾನದ ಖಾತೆಯಿಂದ ಹಣತೆಗೆದು ಖರ್ಚು ವೆಚ್ಚಕ್ಕಾಗಿ ಬಳಸುತ್ತಾರೆ. ಹೀಗಾಗಿ ಎಲ್ಲವೂ ವ್ಯವಹಾರಿಕವಾಗಿಬಿಟ್ಟಿದೆ.

ಸುಣ್ಣಬಣ್ಣ : ವನ್ನು ಗುಡಿಗೆ ನಾಯಕರೇ ಬಳಿಯುತ್ತಾರೆ.

ಹರಿಜನರು : ಸಾರು ಹಾಕುವುದು, ಮತ್ತು ಊರ ಸ್ವಚ್ಛತಾ ಕಾರ್ಯ ಮತ್ತು ತಮಟೆ ಬಾರಿಸುವುದು, ಕಹಳೆ ಊದುವುದು, ದೇವಸ್ಥಾನ ಪ್ರವೇಶ ಮಾಡುವುದಿಲ್ಲ. ಈಗ ಯಾರೂ ನಿರ್ಬಂಧಿಸುವುದಿಲ್ಲ, ಆದರೆ ಅವರಲ್ಲಿ ಇರುವ ಭಯ ಇನ್ನೂ ಪ್ರವೇಶಕ್ಕೆ ಅನುವು ಮಾಡಿಕೊಟ್ಟಿಲ್ಲ.

ಛಲವಾದಿಗಳು : 'ಉರುಮೆ' ಬಾರಿಸುವುದು.

ಅಗಸರು : ಪಂಜುಗಳನ್ನು ಜಾತ್ರೆಗೆಂದೇ ವಿಶೇಷವಾಗಿ ತಯಾರಿಸಿಕೊಂಡಿದ್ದು ದೇವಿಯ ಮೆರವಣಿಗೆಯಲ್ಲಿ ಹಿಡಿದು ಬೆಳಕನ್ನು ತರುತ್ತಾರೆ. ಮತ್ತು ದೇವಿ ತುಮ್ಮಲಿಗೆ ಹೋಗುವಾಗ, ನವರಾತ್ರಿಯಲ್ಲಿ ಬನ್ನಿ ಮುಡಿಯಲುಹೋಗುವಾಗ ಊರ ಬುಡದ ಕಲ್ಲಿನವರೆಗೆ, ಹಿಂದಿರುಗುವಾಗ ಗುಡಿತುಂಬುವವರೆಗೆ ನಡೆಮಡಿಯನ್ನು ಹಾಸುತ್ತಾರೆ.

ನಾಯಕರು : ಅದೇ ಗ್ರಾಮದ ಮತ್ತು ಸುತ್ತಮುತ್ತಲ ಊರುಗಳಲ್ಲಿನ 'ಬುಟ್ಟುಗಲವರು' ಬೆಡಗಿನವರು ಕಾಸು, ತಮಮ್ಮಲಿಗೆ ಮೀಸಲು ತಂದು ಹುತ್ತಕ್ಕೆ ಹಾಲು ಹಾಕಿ ಪೂಜೆ ಮಾಡಿ ನಂತರ ತುಮ್ಮಲ ಪೌಳಿಯಲ್ಲಿ ಮಾರಮ್ಮನಿಗೆ ಭಕ್ತಾದಿಗಳು ತರುವ ಹೂವು, ಹಣ್ಣನ್ನು ನೈವೇದ್ಯ ಮಾಡಿಕೊಡುತ್ತಾರೆ. ಇಲ್ಲಿ ಇವರೇ ಪೂಜೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಾರೆ.

**ಗೊಲ್ಲರು :**

ಅದೇ ಊರಿನ ಮತ್ತು ಪರ ಊರಿನಿಂದ ಬಂದ ಪಶುಸಂಗೋಪನಾ ಮೂಲದವರಾದ ಇವರೂ ತುಮ್ಮಲಿಗೆ ಮೀಸಲು ತರುವ ವಾಡಿಕೆ ಇದೆ. ತಮ್ಮ ಸಾಂಪ್ರದಾಯಿಕ ಉಡುಗೆಯಲ್ಲಿಯೇ ಕಾಣಿಸಿಕೊಳ್ಳುವ ಇವರು ದೇವಿ ತುಮ್ಮಲಿಗೆ ಬರುವಾಗ ಜೊತೆಯಲ್ಲಿ ಸಾಗಿಬರುತ್ತಾರೆ.

**ಊರ ಮಹಿಳೆಯುರು :**

ಸ್ತ್ರೀದೇವತೆಯಾದರೂ ಪೂಜಿಸುವ ಅವಕಾಶ ಪುರುಷರದೇ. ಜಾತ್ರೆಯ ದಿನ ತುಮ್ಮಲಿಸಿಂದ ಮಾರಮ್ಮ ಊರಿಗೆ ಹಿಂದಿರುಗಿ ರಾತ್ರಿಯೆಲ್ಲಾ ಮೆರವಣಿಗೆಯಲ್ಲಿ ಬಂದು ಗುಡಿತುಂಬುವ ಸಂದರ್ಭದಲ್ಲಿ ಉಪವಾಸ ವ್ರತಹಿಡಿದು ಶ್ರದ್ಧಾಭಕ್ತಿಗಳಿಂದ ಮಹಿಳೆಯರು ತಂಬಿಟ್ಟಿನ ಆರತಿ ಮಾಡಿ ತಂದು ಬೆಳಗುತ್ತಾರೆ. ಮಾರಮ್ಮನಿಗೆ ಆರತಿ ಮತ್ತು ಕಳಶವನ್ನು ಬಣ್ಣದ ಹೂಗಳಿಂದ ಮತ್ತು ೬-೭ ದಿನಗಳ ಕಾಲ ಬೆಳಸಿದ ರಾಗಿ ಇತ್ಯಾದಿ ಸಸಿಯಿಂದ ಅಲಂಕರಿಸಿದ್ದು ಅವರ ಕಲಾ ನೈಪುಣ್ಯತೆ ಇಲ್ಲಿ ಎದ್ದುಕಾಣುತ್ತದೆ.

**ಬಳೆಗಾರಜ್ಜನ ಗುಡ್ಡೆ (ಸಮಾಧಿ:)**

ಜಾತ್ರೆ ನೆರೆದ ತುಮ್ಮಲುವಿನಲ್ಲಿ ಆ ರಾತ್ರಿ ಯಾರೂ ಉಳಿಯುವುದಿಲ್ಲ. ಕುರಿ,ಕೋಳಿ ಬಲಿ ಕೊಟ್ಟ ಜಾಗದಲ್ಲಿ ನೆತ್ತರು ಹರಿದಿರುತ್ತದೆ. ಹಿಂದೆ ದಟ್ಟವಾದ ಕಾಡಿದ್ದು ಕ್ರೂರ ಮೃಗಗಳೂ ಆನೆತ್ತರಿನ ವಾಸನೆಗೆ ಅಲ್ಲಿಗೆ ಬರುತ್ತಿದ್ದಿರಬಹುದು. ರಾತ್ರಿ ಉಳಿಯಬಾರದು ಎಂಬ ಪ್ರತೀತಿ ಕಾರಣವಾಗಿ ಎಲ್ಲರೂ ತಮ್ಮ ಅಂಗಡಿ ಮುಗ್ಗಟ್ಟುಗಳನ್ನು ಮುಚ್ಚಿಕೊಂಡು ಹೊರಟು ಬಿಡುತ್ತಾರೆ. ಒಮ್ಮೆ ಹೀಗೆ ಎಲ್ಲರೂ ಹೋಗಿದ್ದು ಒಬ್ಬ ಬಳೆಗಾರ ಶೆಟ್ಟಿ ಮಾತ್ರ ಅಂಗಡಿಯನ್ನು ಮುಚ್ಚದೆ ಹಾಗೆಯೇ ಕುಳಿತಿದ್ದ. ಇವನಿಗೆ ತೊಂದರೆಯಾಗುತ್ತದೆ ಎಂದು ಭಾವಿಸಿದ ಮಾರಮ್ಮ ಒಬ್ಬ ಹಿರಿಮುತ್ತೈದೆಯಂತೆ ಬಂದು ಬಳೆತೊಡು ಎನ್ನುತ್ತಾಳೆ. ಆತ ಎಷ್ಟು ಬಳೆ ತೊಟ್ಟರೂ ಆಕೆಯ ಕೈ ತುಂಬುವುದೇ ಇಲ್ಲವಂತೆ. ರೋಸಿದ ವ್ಯಾಪಾರಿ ನೀನ್ಯಾರು ಎಂದು ಕೇಳುತ್ತಾನೆ. ನಾನು ಯಾರಾದರೂ ಆಗಿರಲಿ ನೀನು ರಾತ್ರಿ ಇಲ್ಲಿರಬೇಡ, ಕಾರಣ ಕೇಳಬೇಡ. ಈಗಲೇ ಇಲ್ಲಿಂದ ನಡೆ ಎಂದು ಹೊರಡಿಸಿಕೊಂಡು ಹೋಗಿ ಸ್ವಲ್ಪ ದೂರ ಬಿಟ್ಟು ತಾನು ಮರೆಯಾಗುತ್ತಾಳೆ. ವ್ಯಾಪಾರಿಗಾದರೋ ಕುತೂಹಲ ಇವಳೇಕೆ ಹೀಗೆ ಇರಬಾರದು ಎನ್ನುತ್ತಿದ್ದಾಳೆ? ಇದ್ದರೆ ಏನಾಗುತ್ತಿತ್ತು? ರಾತ್ರಿಯಾದ ಮೇಲೆ ಅಲ್ಲಿ ಏನಾಗುತ್ತದೆ. ಒಮ್ಮೆ ನೋಡೋಣ ಎಂದು ತಿರುಗಿ ನೋಡುತ್ತಾನೆ ಆಗ ಅಲ್ಲಿಯೇ ರಕ್ತಕಾರಿ ನೆಲಕ್ಕೆ ಬಿದ್ದು ಸತ್ತು ಹೋಗುತ್ತಾನೆ. ಅದೇ ಸ್ಥಳದಲ್ಲಿ ಆತನ ಸಮಾಧಿ ಮಾಡಲಾಗಿದೆ. ಪ್ರತಿವರ್ಷ ಮಾರಮ್ಮ ತುಮ್ಮಲಿಗೆ ಹೋಗುವಾಗ ಇಲ್ಲಿ ಒಂದು ಕ್ಷಣ ಕುಳಿತು ಹೊರಡುತ್ತಾಳೆ. ತಮ್ಮಲಿನಲ್ಲಿ ರಾತ್ರಿ ಉಳಿಯಬಾರದು ಎಂಬುದಕ್ಕೆ ಈ ಐತಿಹ್ಯ ಎಚ್ಚರಿಕೆಯ ಸೂಚನೆಯಾಗಿದೆ.

ಬಹುಶಃ ಯಾವುದೋ ಕ್ರೂರ ಪ್ರಾಣಿಯನ್ನು ನೋಡಿಯೋ, ಅಥವಾ ಅದು ಕಚ್ಚಿಯೋ ಈತ ಸತ್ತಿರಬಹುದು. ರಕ್ತ ಚೆಲ್ಲಾಡಿದ ಸ್ಥಳ ರಣಮಯವಾಗಿರಲು ಅದರ ವಾಸನೆಗೆ ಕ್ರೂರಪ್ರಾಣಿಗಳು ಅಲ್ಲಿಗೆ ಬಂದಿರುವ ಸಾಧ್ಯತೆಗಳಿವೆ. ಒಟ್ಟು ಇಂದಿಗೂ ಸಹ ಯಾರೂ ಜಾತ್ರೆಯ ದಿನ ರಾತ್ರಿ ಅಲ್ಲಿ ಉಳಿಯುವುದಿಲ್ಲ.

ನಂಬಿಕೆ, ಶ್ರದ್ಧೆ, ಭಕ್ತಿ ಆರಾಧನೆ ಮಾಡುವ ಮನಸ್ಸನ್ನು ರೂಪಿಸುತ್ತದೆ. ಹಲವು ಮನಸ್ಸುಗಳು ಸಮುದಾಯವೇ ಒಟ್ಟೊಟ್ಟಾಗಿ ಒಬ್ಬ ವ್ಯಕ್ತಿಯನ್ನು ಕುರಿತು ತನ್ನನ್ನು ಆರಾಧನೆಯಲ್ಲಿ ತೊಡಗಿಸಿಕೊಂಡಿರಬೇಕಾದರೆ ಅದರ ಹಿಂದೆ ಇರುವ ಆ ಮನಸ್ಸು ಅವರ ಶ್ರದ್ಧೆ ಅದಕ್ಕೆ ಕಾರಣ ಮುಖ್ಯವಾಗುತ್ತದೆ. ಇದುವರೆಗೂ ನಾವು ಗಮನಿಸಿದ ಸಾಂಸ್ಕೃತಿಕ ನಾಯಕಿಯರಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಭಿನ್ನತೆ ಇದ್ದೇ ಇದೆ. ಒಂದು ಬುಡಕಟ್ಟಿಗೆ ಸಂಬಂಧಿಸಿದ ಸಾಂಸ್ಕೃತಿಕ ಲಕ್ಷಣಗಳಿಂದ ಕೂಡಿದ ಆಚರಣೆಯಾದರೆ ಮತ್ತೊಂದೆಡೆ ಮಾತೃರೂಪೀ ಆಚರಣೆ. ಮತ್ತೊಂದೆಡೆ 'ಮಾರಿ'ಯ ಆರಾಧನೆ. ಹೀಗೆ ವೈವಿಧ್ಯತೆಯನ್ನು ಗುರುತಿಸಬಹುದು. ವೈದಿಕ ಧರ್ಮ ಹುಟ್ಟುಹಾಕಿದ ಭಕ್ತಿ ಪಂಥದ ಸಾಂಸ್ಕೃತಿಕ ದಾಳಿ ಈ ಸಮುದಾಯದ ಮೇಲೂ ಆಗಿದೆ. ಹಾಗಾಗಿಯೇ ಶೈವಾರಾಧನೆಯೊಂದಿಗೆ ವಿಷ್ಣುವಿನ ಆರಾಧನೆಯೂ ಮಿಳಿತಗೊಂಡಿದೆ. ವ್ಯಾಸಮಂಡಲದಾದ್ಯಂತ ಇಂದು ಆರಾಧಿಸಲ್ಪಡುತ್ತಿರುವ ದೈವ

ಅಹೋಬಿಲಂನ ನರಸಿಂಹಸ್ವಾಮಿ [ಮೂಲತಃ ಕೃಷ್ಣನನ್ನು ಆರಾಧಿಸುವ ರೂಢಿ ಇದ್ದಿತು. ಪಶುಪಾಲಕ ಸಮುದಾಯ ಬೆಟ್ಟ ಗುಡ್ಡಗಳಲ್ಲಿನ ಯಾವುದೇ ಒಂದು ಶಕ್ತಿಯನ್ನು ಕೃಷ್ಣ ಎಂದು ಕರೆದು ಒಂದು ಕಲ್ಲಿನ ರೂಪದಲ್ಲಿ ಸಂಕೇತಿಸಿ ಬಲಿ ಕೊಟ್ಟು ಆರಾಧಿಸುತ್ತಿದ್ದರು. ಈತ ಭಾಗವತ ಕೃಷ್ಣನಲ್ಲ. ಅಹೋಬಿಲಂ ಪರಿಸರದಲ್ಲಿ ವಾಸ ಪ್ರಾರಂಭವಾದಾಗ ಇದಕ್ಕೆ ವೈದಿಕ ಆಚರಣೆಗಳು ಸೇರಿಕೊಂಡವು. ಆಧಾರ: ಸಂತಮಯುರು, Postoral Diety in Western india, 1989 by Oxford University Press.] ಇದರ ಮಧ್ಯೆ ಸಾಂಸ್ಕೃತಿಕ ನಾಯಕರ-ನಾಯಕಿಯರ ಆರಾಧನೆ. ಇದರ ಮಧ್ಯೆ ಬುಡಕಟ್ಟುಗಳ ಮಾತೃರೂಪೀ ನೆಲೆಯಿಂದ ರೂಪುಗೊಂಡು ಬಂದ ಮಾತೃದೇವತಾರಾಧನೆ ಇದರೊಂದಿಗೆ ಮತ್ತೆ ಆರ್ಯಧರ್ಮದ ಪ್ರಭಾವದಿಂದಾಗಿ ಈ ಸಂದರ್ಭದಲ್ಲಿ ಬುಡಕಟ್ಟಿನ ತನ್ನದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡು ಪ್ರಭಾವಗಳನ್ನು ಹೊಂದಿಸಿಕೊಂಡು ಸಾಗುತ್ತಿರುವ ರೀತಿಯೇನೋ ಎನಿಸುತ್ತದೆ. ಸಂಸ್ಕೃತಿ ಏಕಕಾಲಕ್ಕೆ ಸ್ಥಿರವೂ ಮತ್ತು ಚಲನಶೀಲವೂ ಆಗಿರುತ್ತದೆ ಎಂಬ ಹರ್ಕೋವಿಟ್ಸನ ಮಾತು ಬಹುಶಃ ಇಲ್ಲಿ ಅನ್ವಯವಾಗುತ್ತದೆ. ಬುಡಕಟ್ಟು ಸಮುದಾಯದಲ್ಲಿದ್ದದ್ದು ಸಾಮೂಹಿಕ ದುಡಿಮೆ ಸಮೂಹದ ಬದುಕು ಸಮಾನ ಉತ್ಪಾದನೆ ಸಮಾನ ಹಂಚಿಕೆ, ಅಂತೆಯೇ ಕುಲದೇವತಾರಾಧನೆಯಲ್ಲಿಯೂ ಸಮಾನವಾಗಿ ತೊಡಗಿಸಿಕೊಳ್ಳುವಿಕೆ, ಖರ್ಚುವೆಚ್ಚಗಳನ್ನೆಲ್ಲಾ ಹಂಚಿಕೊಳ್ಳುವಿಕೆ ಇಂದಿಗೂ ಮುಂದುವರೆದಿದೆ. ಇಲ್ಲಿ ಯಾರೂ ದೊಡ್ಡವರಲ್ಲ ಯಾರೂ ಚಿಕ್ಕವರಲ್ಲ. ಇಲ್ಲಿ ಮೂಲತಃ ಇರುವುದು 'ಕೈಮೊಕ್ಕು' ಅಂದರೆ ಪರಸ್ಪರರಿಗೆ ಕೈಗೆ ಕೈಗೆ ತಾಗಿಸಿ ನಮಸ್ಕರಿಸಿಕೊಳ್ಳುವುದೇ ಹೊರತು ಕಾಲಿಗೆ ಬಾಗಿ ನಮಸ್ಕರಿಸುವ ಪದ್ಧತಿ ಇಲ್ಲ. ಬಹುಶಃ ಇದೂ ಒಂದು ಬಗೆಯ ಸಮಾನತಾವಾದವೇ. ಸಾಂಸ್ಕೃತಿಕ ನಾಯಕಿಯರ ಆರಾಧನೆಯಲ್ಲಿಯೂ ಸಂಬಂಧಿತ ಬೆಡಗುಗಳ ಜನರು ಇಲ್ಲಿ ಒಟ್ಟಾಗಿ ಪಾಲ್ಗೊಳ್ಳುತ್ತಾರೆ. ಪಾಲ್ಗೊಳ್ಳಲೇಬೇಕು. ಹೀಗೆ ಎಲ್ಲರನ್ನು ತನ್ಮೂಲಕ ಏಕಸೂತ್ರಕ್ಕೆ ತಂದುಕೊಳ್ಳುವ ಶಕ್ತಿ ಈ ಬುಡಕಟ್ಟಿನ ದೇವತೆಗಳಿಗಿರುವುದು ವಿಶೇಷ. ಪೂಜೆಗೊಳ್ಳುತ್ತಿರುವವರು ಮಹಿಳೆಯರಾಗಿದ್ದರೂ ಪೂಜಿಸುವವರು ಇಲ್ಲಿ ಪುರುಷರೇ. ಮಹಿಳೆಯರಿಗೆ ಪ್ರಾತಿನಿಧ್ಯ ಇಲ್ಲಿ ಕಡಿಮೆಯೇ. ಅಂದರೆ ಔನ್ನತ್ಯಕ್ಕೇರಿದ ಅಬ್ರಾಹ್ಮಣರಾದ ರಾಮಕೃಷ್ಣರನ್ನು ಬ್ರಾಹ್ಮಣರು ತಮ್ಮ ದೈವವಾಗಿಸಿಕೊಂಡು ಪೂಜಿಸುತ್ತಿರುವಂತೆ ಇಲ್ಲಿಯೂ ಎತ್ತರಕ್ಕೇರಿದ ಸಮುದಾಯದ ಮಹಿಳೆಯರು ಪುರುಷರಿಂದ ಪೂಜಿಸಲ್ಪಡುತ್ತಿರಬಹುದೇ ಎನಿಸುತ್ತದೆ. ಮಾತೃರೂಪೀ ವ್ಯವಸ್ಥೆಯಿಂದ ರೂಪುತಳೆದ ಬುಡಕಟ್ಟಿನ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನ ಪ್ರಮುಖವಾದುವೇ. ಹಾಗಾಗಿಯೇ ಇಲ್ಲಿ ಸಾಂಸ್ಕೃತಿಕ ನಾಯಕರ ಆರಾಧನೆ ಬಳಕೆಯಲ್ಲಿರಬಹುದು. ಇದು ಬುಡಕಟ್ಟಿನ ಸ್ತ್ರೀವಾದ; ಇತರರಿಗೆ ಮಾದರಿಯಾಗಬಲ್ಲದು ಎಂದು ಭಾವಿಸುತ್ತಿರುವಾಗಲೇ ಮತ್ತೊಂದೆಡೆ ಸ್ತ್ರೀ ಅಪ್ರಧಾನಳಾಗುವ ಮಾದರಿ ಕಂಡುಬರುತ್ತದೆ. ದಾನಸಾಲಿಯಮ್ಮ, ಕಂಚಮ್ಮ, ಕಾಮವ್ವ ಹೀಗೆ ಪ್ರಾಮುಖ್ಯತೆ ಪಡೆಯಲಾರದೆ ಹೋದ ಮಹಿಳೆಯರ ಪಾಲಿಗೆ ಸೇರುತ್ತಾರೆ. ಹೀಗೆ ಗೌರವಿಸುವ, ಅಲಕ್ಷಿಸುವ ಎರಡೂ ಮಾದರಿಗಳನ್ನು ಈ ಆಚರಣೆಗಳಲ್ಲಿ ಕಾಣಬಹುದಾಗಿದೆ. ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು ಮಾತ್ರ ಮುಖ್ಯವಾಗುವ ಮತ್ತು ಹೀಗೆ ಹೋರಾಟಗಳಲ್ಲಿ ತೊಡಗಿಸಿಕೊಳ್ಳದೆ ಇರುವವರು ಮರೆಗೆ ಸಂದಿರುವ ವೈರುಧ್ಯಗಳು ಇಲ್ಲಿವೆ.

ಖಾಸೀ ಜನಾಂಗದಲ್ಲಿ ಸ್ತ್ರೀದೇವತೆಗಳೇ ಪ್ರಧಾನವಾಗಿದ್ದು, ನಾರೀ ಪ್ರಧಾನವಾಗಿರುವ ಈ ಸಮಾಜದ ವ್ಯವಸ್ಥೆಯಲ್ಲಿ ಪುರುಷ ಪುರೋಹಿತ ಧಾರ್ಮಿಕ ಕ್ರಿಯಾವಿಧಿ ಆಚರಿಸುವಾಗ ಅವನ ಬಳಿಯಲ್ಲಿಯೇ ಒಬ್ಬ ಮಹಿಳಾ ಪುರೋಹಿತಳೂ ಇರುತ್ತಾಳೆ. ಅವಳಿಲ್ಲದಿದ್ದರೆ ಪುರುಷ ಪುರೋಹಿತನಿಗೆ ಬೆಲೆಯೇ ಇಲ್ಲ ಎಂದು ಡಾ. ದೇವಿ ಪ್ರಸಾದ ಚಟ್ಟೋಪಾಧ್ಯಾಯರು ತಮ್ಮ 'ಮಾತೆಯರು ಮಾನ್ಯರಾಗಿದ್ದಾಗ' ಕೃತಿಯಲ್ಲಿ ವಿವರಿಸುತ್ತಾ 'ಹಿಂದೊಂದು ಕಾಲದಲ್ಲಿ ಸ್ತ್ರೀಯರಿಗೇ ಪೂರ್ಣ ದಕ್ಷತೆ ಇತ್ತು' ಎಂಬುದನ್ನು ಈ ಮೂಲಕ ಗುರುತಿಸಬಹುದು ಎಂದು ಹೇಳುತ್ತಾರೆ.[೬೬] ಸ್ತ್ರೀದೇವತಾರಾಧನೆ ವ್ಯಾಪಕವಾಗಿರುವ ಮ್ಯಾಸಬೇಡರಲ್ಲಿ ಪೂಜಾರಿಣಿಯರು ಏಕಿಲ್ಲ. ಜೈವಿಕ ಸಹಜ ಕ್ರಿಯೆಯಾದ ಮಾಸಿಕ ಋತುಚಕ್ರದ ದಿನಗಳನ್ನೇ ಅಪವಿತ್ರ, ಮೈಲಿಗೆ ಎಂದು ಭಾವಿಸುವ ಸಮುದಾಯದ ಆಲೋಚನೆ ಇದಕ್ಕೆ ಒಂದು ಕಾರಣವಾದರೆ – ಶ್ರೇಷ್ಠವಾದುದು ಎಂದು ಭಾವಿಸಲ್ಪಡುವುದಕ್ಕೆಲ್ಲಾ ತಾನೇ ವಾರಸುದಾರನಾಗುವ ಪುರುಷಶಾಹೀ ಮನೋಭಾವನೆಯೂ ಇದಕ್ಕೆ ಕಾರಣವಾಗಿರಬಹುದು. (ಇಂದು ರಾಮ–ಕೃಷ್ಣರನ್ನು ಪೂಜಿಸುವವರು ಸಂಬಂಧಿಸಿದ ಆ ಪರಂಪರೆಯವರನ್ನೇ ಹೊರಗೆ ನಿಲ್ಲಿಸಿದಂತೆ) ನಾಯಕಿಯರಾದ ರಾಯಮ್ಮ, ಮಲೆಯಮ್ಮ ತಾವೇ ಸ್ವತಃ ಮಾರಮ್ಮನ ಮೂರ್ತಿ ಮಾಡಿ ಪೂಜೆ ಮಾಡಿದವರು ಎಂಬ ಉಲ್ಲೇಖಗಳು ಸಿಗುತ್ತಿರುವಲ್ಲಿ ಹಿಂದೊಮ್ಮೆ ಇದ್ದಿರಬಹುದಾದ ದಕ್ಷತೆಯನ್ನೇ ಇದು ಸೂಚಿಸುತ್ತದೆ. ಕಾಲಾಂತರದಲ್ಲಿ ಬಹುಶಃ ಮಹಿಳೆಯರನ್ನು ದೂರವಿರಿಸಿ ತಾವು ಆಕ್ರಮಿಸಿಕೊಂಡಿರಬಹುದಾದ ಸಾಧ್ಯತೆಗಳು ಇಲ್ಲಿವೆ. ತನ್ನ ಅಹಮಿಕೆಯನ್ನು ಬದಿಗೊತ್ತಿ ನಾಯಕಿಯರಿಗೆ ನಮಿಸಿ ಆರಾಧಿಸುವ ಸೌಜನ್ಯ ಪುರುಷನಿಗೆ ಇಲ್ಲಿ ಇದೆಯಲ್ಲಾ ಎಂಬುದನ್ನು ಕುರಿತು ಆಲೋಚಿಸುವ ಅಗತ್ಯವಿದೆ ಎನಿಸುತ್ತದೆ ಮತ್ತು ಈ ಎಲ್ಲಾ ಆಚರಣೆಗಳು ತಮ್ಮ ಸಂಸ್ಕೃತಿಗೆ ನಿಷ್ಠವಾಗಿರುವುದನ್ನು ಗಮನಿಸಬಹುದು. ಅಮೂರ್ತವಾದ ಅಲೌಕಿಕ ದೈವಕ್ಕಿಂತಲೂ ತಮಗೆ ಬದುಕನ್ನು ಕಟ್ಟಿಕೊಟ್ಟ ನಾಯಕರು ಇಲ್ಲಿ ಮುಖ್ಯ ಹಾಗೆಯೇ ಸಮುದಾಯಕ್ಕೆ ಅವರು ತೋರುವ ನಿಷ್ಠೆಯೇ ಈ ಆರಾಧನೆಗಳು ಈ ಆಚರಣೆ ದೈವಿಕ ನೆಲೆಯಲ್ಲಿ ಎನ್ನುವುದಕ್ಕಿಂತ ಆತ್ಮೀಯವಾದ ಬಂಧುತ್ವದ ಪರಿಸರದಲ್ಲಿ ರೂಪುಗೊಳ್ಳುವುದು ಎಂಬುದೇ ಹೆಚ್ಚು ವಾಸ್ತವ.

ವೈಭವದಿಂದ ಕೂಡಿದ ಇಂತಹ ಆಚರಣೆಗಳೇ ಒಂದು ಸ್ಮರಣೆಯ ವಿಧಾನ. ಇದರಿಂದ ಇಂದಿನ ಮಹಿಳೆಯರಿಗೆ ಏನಾದರೂ ಅನುಕೂಲವಾಗುವುದೇ?" ಎಂಬ ಪ್ರಶ್ನೆಯೂ ಇಲ್ಲಿ ಮೂಡುತ್ತದೆ. ಇಂತಹ ಆರಾಧನೆಗಳನ್ನೇ 'ಮಾತೃತ್ವದ ಹುಸಿ ಆರಾಧನೆಗಳು, ಇದರಿಂದ ಯಾವುದೇ ಪ್ರಯೋಜನವಿಲ್ಲ' ಎಂಬ ಮಾತನ್ನು ಸ್ತ್ರೀವಾದಿಗಳು ಎತ್ತುತ್ತಾರೆ. ಆದರೆ ಆಚರಣೆಗಳ ಹಿನ್ನೆಲೆಯಲ್ಲಿ ಈ ನಾಯಕಿಯರ ಅನನ್ಯತೆಯ ದರ್ಶನವಾಗುತ್ತದೆ. ಈ ಅನನ್ಯತೆಯೇ ಮತ್ತೊಬ್ಬರಿಗೆ ಆದರ್ಶವಾಗಿ, ಸ್ಥೈರ್ಯದಿಂದ ಅವರನ್ನು ಸಾಮಾಜಿಕ ವೈರುಧ್ಯಗಳ ವಿರುದ್ಧ ಮುನ್ನಡೆಸಬಹುದಲ್ಲವೇ?

---

೬೬ ಅನುವಾದ: ಜಿ. ಕುಮಾರಪ್ಪ, ಮೂರನೆಯ ಮುದ್ರಣ: ೨೦೦೪, ನವಕರ್ನಾಟಕ ಪಬ್ಲಿಕೇಷನ್ಸ್, ಮಾತೆಯರು ಮಾನ್ಯರಾಗಿದ್ದಾಗ , ಮೂಲ : ಡಾ. ದೇವಿ ಪ್ರಸಾದ್ ಚಟ್ಟೋಪಾಧ್ಯಾಯರ ಪು.೪೦.

## ೩.೭ ಸಾಂಸ್ಕೃತಿಕ ನಾಯಕಿಯರ ಅವಸ್ಥಾಂತರಗಳು :

ನಿರ್ದಿಷ್ಟವಾದ ಸ್ಥಿತಿ ಅಥವಾ ಆಚರಣೆ ಮತ್ತೊಂದು ರೂಪವನ್ನು ಪಡೆದಾಗ ಅದನ್ನು ಅವಸ್ಥಾಂತರ ಎಂದು ಹೇಳಾಗುತ್ತದೆ. ಇಲ್ಲಿ ಸಾಂಸ್ಕೃತಿಕ ನಾಯಕಿಯರ ಅವಸ್ಥಾಂತರವನ್ನು ಕುರಿತು ಯೋಚಿಸಿದಾಗ, ಮೊದಲನೆಯದಾಗಿ ಸಾಂಸ್ಕೃತಿಕ ನಾಯಕಿ ನಿರ್ದಿಷ್ಟ ಸಂಸ್ಕೃತಿಯೊಂದಕ್ಕೆ ಸೇರಿದವಳಾಗಿರುತ್ತಾಳೆ. ಆ ಬುಡಕಟ್ಟಿನಲ್ಲಿ ಈಕೆ ಆರಾಧನೆನೆಲೆಯಲ್ಲಿದ್ದಾಗ ಆ ಬುಡಕಟ್ಟಿಗೇ ಸಂಬಂಧಿಸಿದ ದೈವಾರಾಧನೆ ಹೇಗಿದೆಯೋ ಆ ಮಾದರಿಯಲ್ಲಿ ಆರಾಧಿಸಲ್ಪಡುತ್ತಿರುವುದು ಸಹಜ. ಬುಡಕಟ್ಟಿನ ಜನ ಕಾಡಿನಿಂದ ನಾಡಿನಂಚಿಗೆ ಬಂದು ಹಟ್ಟಿಗಳನ್ನು ಕಟ್ಟಿಕೊಂಡು ವಾಸ ಮಾಡುತ್ತಿದ್ದು ಕ್ರಮೇಣ ಗ್ರಾಮ್ಯೀಕರಣಗೊಂಡಾಗ ಇವರ ದೇವತೆಗಳೂ ಗ್ರಾಮ್ಯೀಕರಣಗೊಂಡಿರುವ ಸಾಧ್ಯತೆಗಳಿರುತ್ತವೆ. ಸಮುದಾಯದ ಮೇಲಾಗುವ ಅನ್ಯ ಧರ್ಮದ ಪ್ರಭಾವ ಮತ್ತು ಬುಡಕಟ್ಟಿನ ನಾಯಕಿಯನ್ನು ಇಡೀ ಊರಿನ ಜನತೆ ಊರಿನ ದೇವತೆಯನ್ನಾಗಿ ಸ್ವೀಕರಿಸಿದಾಗ ಆ ನಾಯಕಿಯ ದೈವೀಕ ಪ್ರಭಾವ ಜನಮನದಲ್ಲಿ ವ್ಯಾಪಿಸಿದಂತೆಲ್ಲಾ ಇತರರೂ ಆಕೆಯನ್ನು ಆರಾಧಿಸಲು ತೊಡಗುತ್ತಾರೆ. ಸ್ತ್ರೀ ದೇವತೆಯೆಂದಾಗ ಆಕೆ ಮಾತೃದೇವತೆಯಾಗಿ, ಸಮೃದ್ಧಿಯ ಸಂಕೇತವಾದ ವೃಕ್ಷದೇವತೆಯಾಗಿ, ರೋಗ ನಿವಾರಕಳಾಗಿ, ಕುರಿಕೋಣ ಬಲಿಕೇಳುವ ಮಾರಿಯಾಗಿ ಆಕೆ ಅವಸ್ಥಾಂತರಗೊಳ್ಳುತ್ತಾಳೆ. ಇದಕ್ಕೆ ತಕ್ಕಂತೆ ಆರಾಧನೆಯ ಸ್ವರೂಪವೂ ಬದಲಾಗುತ್ತಾ ಹೋಗುತ್ತದೆ. ಇದರಿಂದಾಗಿ ಎಷ್ಟೋ ಸಂದರ್ಭಗಳಲ್ಲಿ ಆಕೆಯ ಮೂಲ ಸ್ವರೂಪವೇ ಬದಲಾಗಿ ಬಿಡುತ್ತದೆ. ಸಮುದಾಯವೊಂದರಲ್ಲಿ ತನ್ನದೇ ಆದ ಅಸ್ತಿತ್ವವನ್ನು ಹೊಂದಿದ್ದ ಆಕೆ ಅದನ್ನು ಕಳೆದುಕೊಂಡರೂ ಕಳೆದುಕೊಳ್ಳಬಹುದು. ಪುರುಷ ರಾಜಕಾರಣದ ಮಧ್ಯೆ ಆಕೆಯ ನೆಲೆಯಲ್ಲಿ ಆಕೆಯೊಂದಿಗೆ ಪುರುಷ ದೇವತೆಯಿದ್ದರೆ ಆ ಪ್ರಾಬಲ್ಯದಿಂದಾಗಿ ಈ ನಾಯಕಿ ಮೂಲೆ ಗುಂಪಾಗುತ್ತಾಳೆ. ಮ್ಯಾಸಬೇಡ ಬುಡಕಟ್ಟಿನಲ್ಲಿಯೂ ಆರಾಧನಾ ನೆಲೆಯಲ್ಲಿರುವ ಸಾಂಸ್ಕೃತಿಕ ನಾಯಕಿಯರು ಅವಸ್ಥಾಂತರ ಗೊಂಡಿರುವುದನ್ನು ಕಾಣಬಹುದು.

**ಅಕ್ಕರಾಯಮ್ಮನ ಅವಸ್ಥಾಂತರ :**

> "ಗುಮ್ಮಡಿ ಕಾಯಿ ತುಂಬುಲೋಪನೆ ಬೇವು ಭಂಡಾರಮು
> ಧರಿಚುಕೋನಿ, ಡಬ್ಬಯ್ಯೇಡು ಮಣವಲು ಒಕ್ಕ ಚಾಟಿ ಏಸುಕೋನಿ,
> ಭೂಮಿ ಭೂಲೋಕ ಪುಟ್ಟಿದದಾನಿಕನ್ನ ಮುನುಪು ಪೆದ್ದಕ್ಕರಾಲುದೇವಿ
> ಪುಟ್ಟಿ ವಡೇಲುಮಾರಿ, ಮುತ್ತಿಗಾರರ ಮಾರಿ, ದಡ್ಡಲು ಮಾರಿ,
> ಗೌರಸಂದ್ರದ ಮಾರಿ ಈ ಬಿರುದಾಂಕಿತಲು ಪೊಗಳಿಂಚನ..."

ಕುಂಬಳ ಕಾಯಿಯ ತುಂಬಿನಲ್ಲಿ ಜನಿಸುವಾಗಲೇ ಬೇವು, ಭಂಡಾರ ಧರಿಸಿ ೭೭ ಮಣ ತೂಕದ ಚಾಟಿ ಹಾಕಿಕೊಂಡು ಭೂಮಿ ಭೂಲೋಕ ಹುಟ್ಟುವುದಕ್ಕಿಂತ ಮೊದಲು ಹುಟ್ಟಿದ ಈ ಹಿರಿಯಳಾದ ಅಕ್ಕರಾಯಮ್ಮದೇವಿ ವಡೇಲು ಮಾರಿ, ಮುತ್ತಿಗಾರರ ಮಾರಿ, ದಡ್ಡಲು ಮಾರಿ, ಗೌರಸಮುದ್ರದ ಮಾರಿ ಈ ಬಿರುದಾಂಕಿತಳಾಗಿ ಹೊಗಳಿಸಿಕೊಳ್ಳುತ್ತಿದ್ದಾಳೆ. ಮೇಲಿರುವ ತೆಲುಗಿನ ಹೊಗಳಿಕೆಯ ಮಾತುಗಳ ಅರ್ಥವಿದು.

ಒಟ್ಟು ಈಕೆ ಸಮುದಾಯದ ಜನಸಮುದಾಯದಲ್ಲಿ ಅವಸ್ಥಾಂತರ ಗೊಂಡಿರುವುದನ್ನು ಈ ಮೇಲಿನ ಹೊಗಳಿಕೆ ಅನಾವರಣಗೊಳಿಸುತ್ತದೆ.

ತನ್ನ ಬಂಧು ಬಳಗಕ್ಕೆ ಪಶುಸಂಪತ್ತನ್ನು ಹಂಚಿದ ನಂತರ ಅವರೆಲ್ಲಾ ತಮ್ಮ ತಮ್ಮ ಪೂರ್ವಿಕರ ಹೆಸರಿನಲ್ಲಿ ಪೆಟ್ಟಿಗೆ ದೇವರುಗಳನ್ನೋ ಅಥವಾ ಯಾವುದಾದರೂ ಸಂಬಂಧಿಸಿದ ವಸ್ತುವನ್ನೊ ತಮ್ಮ ಆರಾಧನೆಯಲ್ಲಿ ಇರಿಸಿಕೊಳ್ಳುವ ಏರ್ಪಾಡನ್ನು ಮಾಡಿಕೊಳ್ಳುತ್ತಾರೆ. ತಮ್ಮ ಪಾಲಿಗೆ ಬಂದ ಅಮೂಲ್ಯ ವಸ್ತುವನ್ನು ಅಂದು ಸಂರಕ್ಷಿಸುವ ಅಂಗವಾಗಿ ಈ ಅಲೆಮಾರಿ ಸಮುದಾಯದಲ್ಲಿ ಬುಟ್ಟಿಗಳ ಬಳಕೆಯಾಗುತ್ತಿತ್ತು. ಅಕ್ಕರಾಯಮ್ಮನ ಹೆಸರಿನಲ್ಲಿಯೂ ಒಂದು ಬುಟ್ಟಿ ಮಾಡಿಸಿದ್ದಲ್ಲದೆ ತಮ್ಮೆಲ್ಲರಿಗೂ ಆಕೆ ನಾಯಕಿಯಾದ್ದರಿಂದ ಆಕೆಗೆ ಹಿರಿಯ ಬುಟ್ಟಿ ಇಡಬೇಕು ಎಂದು, ಗಾತ್ರದಲ್ಲಿ ದೊಡ್ಡದಾದ ಬುಟ್ಟಿ ಮಾಡಿಸಿ ಆಕೆಯ ಅಮೂಲ್ಯ ವಸ್ತುಗಳನ್ನಿರಿಸಿ ಆರಾಧಿಸುತ್ತಾ ಬಂದರು. ಹೀಗೆ ಅವರು ಪೆಟ್ಟಿಗೆಯನ್ನು ಮಾಡಿಸುವಾಗಲೇ ಈ ಸಮುದಾಯದಲ್ಲಿ ಆಕೆಯ ಬಗೆಗಿದ್ದ ಭಾವನೆಯೆಂದರೆ, ಆಕೆ ಸಾಮಾನ್ಯಳಲ್ಲ. ಇಡೀ ನಮ್ಮ ಸಮುದಾಯವನ್ನು ಪೊರೆದ ತಾಯಿ, ಸದಾ ಸ್ಮರಣೆಯಲ್ಲಿರಬೇಕಾದವಳು ಎಂಬ ಪೂಜ್ಯ ಭಾವನೆಯಿಂದ ನಮ್ಮ ೭೭ ಹಟ್ಟಿಗಳಿಗೆ ಈಕೆ ಅಕ್ಕ, ೭೭ ಭೂಚಕ್ರ, ಛತ್ರಿ, ಛಾಮರಗಳ ಸೇವೆ ಇವಳಿಗೆ ಸಲ್ಲಬೇಕು. ಈಕೆ ಶಕ್ತಿಸ್ವರೂಪಿಣಿ ನಮ್ಮ ಹಟ್ಟಿಗಳಿಗೆಲ್ಲಾ ಈಕೆಯೇ ಮಾರಮ್ಮ. (ಮೂಲತಃ ಮಾತೃರೂಪೀ ವ್ಯವಸ್ಥೆಯಿದ್ದ ಸಮುದಾಯಗಳಲ್ಲಿ ಮಾತೃದೇವತಾರಾಧನೆ ಇತ್ತು. ಇದನ್ನೇ ಮಾರಮ್ಮನ ಹೆಸರಿನಲ್ಲಿ ಸಮುದಾಯ ಪೂಜಿಸುತ್ತಿತ್ತು.) ಈಕೆ ಸ್ವತಃ ನಮ್ಮನ್ನು ಕಾಪಾಡುವ ಮಾರಮ್ಮ ಎಂಬರ್ಥದಲ್ಲಿ ಪೂಜಿಸಲು ತೊಡಗುತ್ತಾರೆ. ಆದರೆ ಆರಾಧನೆ ಆಚರಣೆಗಳ ಸ್ವರೂಪ ಮಾತ್ರ ಬುಡಕಟ್ಟಿನ ಮಾದರಿಯಲ್ಲೇ ಉಳಿಯುತ್ತದೆ. ಕ್ರಮೇಣ ಆಕೆ ೭೭ ಹಟ್ಟಿಗಳಿಗೆ ಮಾರಮ್ಮ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಆಕೆಗೆ ಕುರಿ, ಕೋಣನ ಬಲಿ ಅನಿವಾರ್ಯವಾಗುತ್ತದೆ. ಬಲಿಯಂತಹ ಆರಾಧನೆ ರೂಢಿಗೆ ಬಂದಾಗಲೂ ಸಮುದಾಯಕ್ಕೆ ಈಕೆ ಮೂಲತಃ ಮಾರಮ್ಮನಲ್ಲ. ರಾಯಮ್ಮ ಎಂಬ ತಿಳುವಳಿಕೆ ಇದ್ದೇ ಇದೆ. ಹಾಗಾಗಿಯೇ ಆಕೆಯ ಮುಂದೆ ಬಲಿ ಕೊಡದೆ ಆಕೆಯ ಗುಡಿಯ (ಗುಡಿಸಲೇ ದೇವಾಲಯ) ಎದುರಿಸಿ ಸ್ವಲ್ಪ ದೂರದಲ್ಲಿ ಒಂದು ಹಸಿರು ಸೊಪ್ಪಿನ ಗುಡಿಯನ್ನು ಹಾಕಿ ಅಲ್ಲಿ ಮಣ್ಣಿನ ಮೂರ್ತಿಯನ್ನಿಟ್ಟು ಇದೇ ಮಾರಮ್ಮ ಎಂದು ಕರೆದು ಬಲಿ, ಚರಗ, ಈ ಮೂಲಕ ಊರಿಗೆ ಶಾಂತಿ ಎಂಬ ಆರಾಧನೆಗಳು ನಡೆಯುತ್ತಿವೆ. ಮೂಲಗುಡಿಯಲ್ಲಿರುವ ಆಕೆಯ ಪೆಟ್ಟಿಗೆಯ ಮುಂದೆ ಮಾಂಸಾಹಾರದ ನೈವೇದ್ಯವೇ ಇಲ್ಲ. ಮೊಸರು ಅನ್ನದ ನೈವೇದ್ಯ ಇಲ್ಲಿ ಸಾಮಾನ್ಯ.

ರಣಗಂಬಳ ಬಳಿ ರಾಯಮ್ಮನ ಸಮಕ್ಷಮದಲ್ಲೇ ಮ್ಯಾಸರೆಲ್ಲಾ ತಮ್ಮ ತಮ್ಮ ಪಾಲಿನ ಪಶುಸಂಪತ್ತನ್ನು ಪಡೆದು ತಮ್ಮ ಇಚ್ಛೆಗನುಗುಣವಾಗಿ ಚದುರಿ ಹೋದರು ಈ ವಿಷಯನ್ನು ಹಿಂದೆಯೇ ಪ್ರಸ್ತಾಪ ಮಾಡಲಾಗಿದೆ. ಹೀಗೆ ಚದುರಿ ಹೋದ ಒಂದು ಗುಂಪು ಅಂದರೆ ರೆಪ್ಪಲಸೂರಿಯ ಪಾಲಿಗೆ ಸೇರಿದ ಎತ್ತುಗಳನ್ನು 'ಒಡೇಲವರು' ಎಂದರೆ 'ಒಡೆಯನ ಗುಂಪಿನವರು' ಎಂಬುವವರು ನೋಡಿಕೊಳ್ಳುತ್ತಿದ್ದಾರೆ. ಗೋಣೂರು ಕಟ್ಟಿಮನೆಗೆ ಸೇರಿದವರೂ ಇದಕ್ಕೆ ಸಂಬಂಧಿಸುತ್ತಾರೆ. ಈ ಎತ್ತುಗಳನ್ನು 'ಒಡೆಯರ ಎತ್ತುಗಳು' ಎಂದು ಕರೆಯಲಾಗುತ್ತದೆ. ಇವು ಚಳ್ಳಕೆರೆ ತಾಲ್ಲೂಕಿಗೆ ಸೇರಿದ ಅಬ್ಬೇನಹಳ್ಳಿ ಮಲ್ಲೂರಹಳ್ಳಿ

ಪ್ರಾಂತ್ಯದ 'ಪಿಲ್ಲಿಗುಂಡ್ಲು' ಎಂಬ ಕುರುಚಲು ಕಾಡಿನಲ್ಲಿವೆ. ಇವರು ಅಕ್ಕರಾಯಮ್ಮನ ನೆಲೆಯಾದ ದೇವರಹಳ್ಳಿ ದೆಡ್ಲುಮಾರಮ್ಮನ ಬಳಿ ಸಮುದಾಯದ ಮಧ್ಯೆ ಉಂಟಾದ ಸಂಘರ್ಷವೇ ಕಾರಣವಾಗಿ ಬರುವುದಿಲ್ಲ. ಹಾಗಾಗಿ ಇವರು ತಮ್ಮ ಎತ್ತಿನಗೂಡಿನಲ್ಲಿ 'ವಡೇಲು ಮಾರಮ್ಮ' ಎಂಬ ಹೆಸರಿನಲ್ಲಿ ಅಕ್ಕರಾಯಮ್ಮನನ್ನು ನೆಲೆಗೊಳಿಸಿಕೊಂಡು ಪೂಜಿಸುತ್ತಿದ್ದಾರೆ. ಇಲ್ಲಿಯೂ 'ಗುಗ್ಗರಿ ಹಬ್ಬ' ಆಚರಿಸಲಾಗುತ್ತದೆ. ಹಾಗೆಯೇ ಶೂನ್ಯಮಾಸದಲ್ಲಿ ಬೇಟೆ ಬಲಿಯೂ ಇದೆ.

ಮುತ್ತಿಗಾರರ ಹಳ್ಳಿ ಕಮರದ ಕಾನಿನಲ್ಲೂ ಎತ್ತಿನಗೂಡುಗಳಿದ್ದು ಶ್ರೀಶೈಲದಿಂದ ಎರಡನೆಯ ತಂಡದಲ್ಲಿ ಬಂದವರು ಅಲ್ಲಿ ಗೂಡುಗಳನ್ನಿಟ್ಟುಕೊಂಡು ನೆಲೆಸಿದ್ದಾರೆ. ಇವರೂ ತಮಗೆ ರಾಯಮ್ಮನ ಬಗೆಗೆ ಇರುವ ಭಕ್ತಿ, ಗೌರವ ಕಾರಣವಾಗಿ ರಾಯಮ್ಮನನ್ನು ಮುತ್ತಿಗಾರರ ಮಾರಮ್ಮ ಎಂದು ಸ್ಥಾಪಿಸಿಕೊಂಡಿದ್ದಾರೆ. ಮಲೆಯಮ್ಮನ ಪೂಜೆಯ ನಂತರ ೧೨ ಗುಡಿಸಿಲಿನವರು ಪ್ರತ್ಯೇಕವಾಗಿ ೧೨ ಉಗುಡ (ಸೊಪ್ಪಿನ ಪದಿ –ಆವರಣ) ಕಟ್ಟಿಕೊಂಡು ಮುತ್ತಿಗಾರರ ಮಾರಮ್ಮನ ಜಾತ್ರೆ ಮಾಡುತ್ತಾರೆ. ಹನ್ನೆರಡು ಗುಡಿಸಿಲಿನ ೧೨ ದೇವರುಗಳನ್ನೂ ಅಲ್ಲಿಗೆ ಕರೆತರುತ್ತಾರೆ. ದೇವರಹಳ್ಳಿಯಿಂದ ದಡ್ಡಲು ಮಾರಮ್ಮನ ಪೆಟ್ಟಿಗೆಯನ್ನೂ ತರುತ್ತಾರೆ. ಒಂದು ದಿನ ದಡ್ಡಲು ಮಾರಮ್ಮ ಅಂದರೆ ಅಕ್ಕರಾಯಮ್ಮನ ಪೆಟ್ಟಿಗೆ ಅಲ್ಲಿರುತ್ತದೆ. ಆಕೆಗೆ ಮೊಸರು ಅನ್ನದ ನೈವೇದ್ಯ ಮಾಡುತ್ತಾರೆ. ಈಕೆಯ ಬಳಿ ಇರುವ ಮೀಸಲು ರೊಟ್ಟಿಯನ್ನು ಮುತ್ತಿಗಾರರ ಎತ್ತುಗಳಲ್ಲಿ ಮೊದಲ ದೇವರ ಎತ್ತುಗೆ ತಿನ್ನಿಸಿದ ಮೇಲೆ ಉಪವಾಸ ವ್ರತಹಿಡಿದವರೆಲ್ಲಾ 'ಒಪ್ಪತ್ತು' ಬಿಡುತ್ತಾರೆ. ಆಕೆ ದೇವರ ಹಳ್ಳಿಗೆ ಹಿಂದಿರುಗಿದ ನಂತರ ಕೋಣ ಕಡಿದು ಗಂಡಾದೀಪ ಹಚ್ಚಿ ಪೂಜೆ ಮಾಡುತ್ತಾರೆ.

ಗೌರಸಮುದ್ರದಲ್ಲಿ ಯರಮಂಚಿನಾಯಕ ಮಾರಮ್ಮನನ್ನು ನೆಲೆಗೊಳಿಸುವಾಗ ಆಕೆಗಿಂತ ಹಿರಿಯಳಾದ ಅಕ್ಕರಾಯಮ್ಮನನ್ನು ಇವಳೊಂದಿಗೆ ಸಮೀಕರಿಸುತ್ತಾನೆ. ಹುಣೀಸೆಕಟ್ಟೆಯಲ್ಲಿ,'ದೊಡ್ಡ ಹಬ್ಬ' ಗಡಿಮಾಕುಂಟೆಯಲ್ಲಿ ಗುಗ್ಗರಿ ಹಬ್ಬವಲ್ಲದೆ ಕುರಿ ಬಲಿಕೊಟ್ಟ ಆರಾಧಿಸುವ ಪರಿಪಾಠವೂ ಇದೆ. ಇದೆಲ್ಲವನ್ನೂ ಒಟ್ಟಾರೆ ಸಮೀಕ್ಷಿಸಿ ನೋಡಿದಾಗ ಮೂಲತಃ ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಿಗೆ ಸಲ್ಲುವ ಗುಗ್ಗರಿಹಬ್ಬದ ಸೇವೆಯೂ ಇವಳಿಗೆ ಸಲ್ಲುತ್ತಿದ್ದು ಅದರೊಂದಿಗೆ ಈ ಕೆಲವು ಸ್ಥಳಗಳಲ್ಲಿ ಕುರಿ ಕೋಣ ಬಲಿಕೊಟ್ಟು ಆರಾಧಿಸುವ ಅಮ್ಮನಾಗಿಯೂ ಅವಸ್ಥಾಂತರ ಗೊಂಡಿರುವುದು ಸ್ಪಷ್ಟವಾಗುತ್ತದೆ. ರಾಯಮ್ಮನ ಪೆಟ್ಟಿಗೆಯನ್ನು ದೇವರಹಳ್ಳಿಯಿಂದ 'ವೀಳ್ಯ' ಕೊಟ್ಟು ಬೇರೆ ಬೇರೆ ಹಟ್ಟಿಗಳವರೂ ಕರೆದೊಯ್ಯುತ್ತಾರೆ. ಅಲ್ಲಿಯೂ ಒಂದು ನಿರ್ದಿಷ್ಟವಾದ ಕಟ್ಟೆಯ ಮೇಲೆ ಕೂರಿಸಿ ಸ್ವಲ್ಪ ಮುಂದೆ ಒಂದು ಸೊಪ್ಪಿನ ಗುಡಿಸಲು ಹಾಕಿ ಅಲ್ಲಿ ಮಣ್ಣಿನ ಮಾರಮ್ಮನನ್ನಿರಿಸಿ ಕೋಣ ಬಲಿ, ಚರಗ ಚೆಲ್ಲುವುದು ಬಾಯಿಬೀಗ ಬೇವಿನ ಸೀರೆ, ಗಾವು ಸಿಗಿಯುವುದು ಇತ್ಯಾದಿ ಅಮ್ಮನಿಗೆ ಸಂಬಂಧಿಸಿದ ಆಚರಣೆಗಳನ್ನು ಮಾಡುತ್ತಾರೆ. ಉದಾ : ಗೋಣೂರು, ಮ್ಯಾಸರಹಟ್ಟಿಯವರು ಕರೆದೊಯ್ಯುತ್ತಾರೆ. ಈ ಬೇವಿನಸೀರೆ ಬಾಯಿಬೀಗ ರಾಯಮ್ಮನ ಪೂಜೆಯಲ್ಲಿ ಏಕೆ ಮಾಡುತ್ತೀರಿ ಎಂದರೆ ಅದಕ್ಕೆ ಅವರು ಕೊಡುವ ಕಾರಣ ವಿಶಿಷ್ಟವಾಗಿದೆ. ಆಕೆ ನಮ್ಮ ಹೆಣ್ಣುಮಗಳು ಮಹಾಸಾಹಸವಂತೆ, ತನಗೆ, ತನ್ನ ಸಮುದಾಯಕ್ಕೆ ಪ್ರತಿರೋಧ

ಒಡ್ಡಿದವರನ್ನೆಲ್ಲಾ ನಿಗ್ರಹಿಸಿದವಳು. ಈಗಲೂ ನಮ್ಮನ್ನು ಕಾಪಾಡುತ್ತಾಳೆ. ಹಿಂದೆ ಈಕೆ ನನ್ನ ಎದುರಿಗೆ ಯಾರಾದರೂ ಅಹಂಕಾರದಿಂದ ಮಾತನಾಡಿದರೆ ಅವರ ಬಾಯಿಗೆ ದಬ್ಬಳ ಏರಿಸುತ್ತೇನೆ.

ನನಗೆ ಮಿಕ್ಕ ನಡೆದವರ ಉಡುದಾರ ಬಿಚ್ಚಿ ಮೂರು ಸುತ್ತು ಬೆತ್ತಲೆಯಾಗಿ ತಿರುಗಿಸುತ್ತೇನೆ ಎಂದು ಶಪಥ ಮಾಡಿದ್ದಳಂತೆ. ಹಾಗಾಗಿ ಈ ಸೇವೆ ಎನ್ನುತ್ತಾರೆ. ತಪ್ಪು ಮಾಡಿದವರು, ರೋಗ ರುಜಿನ ಇತ್ಯಾದಿ ಸಂಕಷ್ಟ ಅನುಭವಿಸಿ ಈ ಸೇವೆ ಮಾಡಬೇಕು ಎಂಬುದು ಸಮುದಾಯದವರ ನಂಬಿಕೆಯಾಗಿದೆ.

ಕೆಲವು ಕಡೆ ಉದಾಹರಣೆಗೆ ದೇವರಹಳ್ಳಿಯಲ್ಲಿ ಈಕೆಯ ಜಾತ್ರೆ ಮಾಡುವಾಗ ಕೇವಲ ಮ್ಯಾಸಬೇಡರು ಮಾತ್ರವಲ್ಲದೆ ಇಡೀ ಹಳ್ಳಿಯ ಎಲ್ಲಾ ಜಾತಿಯವರೂ ಪಾಲ್ಗೊಳ್ಳುತ್ತಾರೆ. ಜಮೀನ್ದಾರ (ಗೊಂಚಿಗಾರ)ರೇ ಚರಗದ ಸೇವೆ ಹೊತ್ತು ನಡೆಯುವುದು ವಿಶೇಷವೆನಿಸುತ್ತದೆ. ಅಂದರೆ ಹಟ್ಟಿಯ ಮ್ಯಾಸರ ನಾಯಕಿ ಊರಮ್ಮನ ಹಂತಕ್ಕೆ ಏರಿ ಗ್ರಾಮದೇವತೆಯಂತೆ ಪೂಜಿಸಲ್ಪಡುತ್ತಿರುವುದೇ ಇಲ್ಲಿ ವಿಶೇಷ.

**ಅ) ಮಲೆಯಮ್ಮನ ಅವಸ್ಥಾಂತರ :**

ಮಲೆಯಮ್ಮ ಮ್ಯಾಸಬೇಡ ಸಮುದಾಯದ ಜನಮನದಲ್ಲಿ ನೆಲೆಗೊಂಡಿರುವ ನಾಯಕಿ. ಮುತ್ತಿಗಾರರ ಮಾರಮ್ಮನ ಜಾತ್ರೆಗೆ ಮೊದಲು ಎರಡು ಮೂರು ವರ್ಷಗಳಿಗೊಮ್ಮೆ ಎತ್ತಿನ ಗೂಡುಗಳ ಬಳಿ ಮಲೆಯಮ್ಮನ ಆರಾಧನೆಯನ್ನು ಮಾಡಲಾಗುತ್ತದೆ. 'ಮಲೆದೇವರು' ಎಂದೂ ಕರೆಯಲಾಗುತ್ತದೆ. ಹನ್ನೆರಡು ಗುಡಿಸಿಲಿನವರು ಸೇರಿ ಮೂರು ಮಂಗಳವಾರ ಕುರಿಯನ್ನು ಮಾರಮ್ಮನಿಗೆ ಮಲೆಯಮ್ಮನ ಹೆಸರಿನಲ್ಲಿ ಬಲಿ ಕೊಟ್ಟು ಎತ್ತಿನ ಗೂಡುಗಳಿಗೆ 'ಸರಗ' ಚೆಲ್ಲುತ್ತಾರೆ. ಇದು ಹಿಂದೆ ಮಲೆಯಮ್ಮ ಮಾಡಿದ್ದಳು. ಗತಶಕ್ತಿಯೇ ಇಂದು ಮರು ಆಚರಣೆಯಾಗಿ ಉಳಿದುಬಂದಿದೆ. ಗೆದ್ದಲಕಟ್ಟೆ ರಾಜನ ಸೇನೆಯನ್ನು ಹಿಮ್ಮೆಟ್ಟಿಸುವ ಪ್ರಸಂಗದಲ್ಲಿ ಎಂದು ಹೇಳುವ ಸಮುದಾಯ ಅದರ ಪುನರಾಚರಣೆಯೆನ್ನುತ್ತಾರೆ. ಈ ಆರಾಧನಾ ವಿಧಿ ಇದು ಮೂಲರೂಪದಲ್ಲಿದೆ. ಹಾಗೆಯೇ ಮರ್ಲಹಳ್ಳಿ, ಮೊಳಕಾಲ್ಮುರು ತಾಲ್ಲೂಕು ಇಲ್ಲಿ 'ಗುಗ್ಗರಿ ಹಬ್ಬ' (ಮ್ಯಾಸರಲ್ಲಿ ಮತ್ತು ಕಾಡುಗೊಲ್ಲರಲ್ಲಿ ವಿಶಿಷ್ಟವಾಗಿರುವ ಆಚರಣೆ ಇದು)ವನ್ನು ಆಚರಿಸಲಾಗುತ್ತದೆ. ಈ ಹಳ್ಳಿಯಲ್ಲಿ ಊರ ಒಳಗಡೆ ಒಂದು ಗುಡಿ, ಮೂಲ ಎತ್ತಿನಗೂಡುಗಳಿದ್ದ ಜಾಗದಲ್ಲಿ ಒಂದು, ಹೀಗೆ ಎರಡುಗುಡಿಗಳಿವೆ. ಮೂಲಗುಡಿಯಲ್ಲಿ ಹಿಂದೆ ಎಂದೋ ಮಾಡಿ ಇರಿಸಿದ್ದ ಮಣ್ಣಿನ ಮೂರ್ತಿ ಹಳೆತಾಗಿ ಅದಕ್ಕೆ ಪಶುಪಾಲಕರಾದ ಈ ಮ್ಯಾಸಬೇಡರು ಹಾಲು, ಮೊಸರು, ಸುರಿದು ಅದು ನುಣುಪಾದ ಕಪ್ಪನೆಯ ಆಕಾರ ಪಡೆದಿದೆ. ಊರಲ್ಲೊಂದು ಗುಡಿಕಟ್ಟಿ ಅಲ್ಲಿ ಕುದುರೆ ಮೇಲೆ ಕುಳಿತ ಮಹಿಳೆಯ ಕಲಾಕೃತಿಯನ್ನು ಇರಿಸಿದ್ದಾರೆ. ಇದು ಮರದಿಂದ ಮಾಡಿ ಸಿದ್ದರಾಗಿದ್ದು ಹೀಗೆ ದೇವತೆಯ ನೆಲೆ ಒಂದಕ್ಕೆ ಎರಡಾಗಿ ಅಗತ್ಯಕ್ಕೆ ತಕ್ಕಂತೆ ಕೆತ್ತಿದ ಕಲಾಕೃತಿಯಾಗಿ ಅವಸ್ಥಾಂತರಗೊಂಡಿದೆ. ಊರಗುಡಿಯ ಮೂಲಗುಡಿಯಲ್ಲಿ ಗುಗ್ಗರಿಹಬ್ಬ ಮತ್ತು ಕಾರ್ತೀಕ ಹಬ್ಬದಲ್ಲಿ ಎಲೆಪೂಜೆ ಮಾಡುತ್ತಾರೆ. ವೀಳ್ಯೆಯ ಎಲೆಗಳಿಂದ ಅಲಂಕರಿಸುವುದು. ಇದೂ ಕೂಡ ಸಮುದಾಯದ ಆಚರಣೆಯಲ್ಲ. ಶಿಷ್ಟರಿಂದ ಪಡೆದ ವಿಧಾನವಿದು ಮತ್ತು ಊರದೇವತೆಯಂತೆ ಆಕೆಯನ್ನು ಭಾವಿಸಿಕೊಂಡು ಕೋಣ ಕುರಿ ಕಡಿಯುವ, ಬೇವಿನ ಸೀರೆ ಉಡುವ ಪದ್ಧತಿ ಅಲ್ಲಿದೆ. ಕೋಣ ಕಡಿದ ನಂತರ ಆಕೆಯನ್ನು

ವಿಧವೆಯನ್ನಾಗಿಸುವ ಕ್ರಮವಂತೂ ವೈದಿಕ ಧರ್ಮದ ಪ್ರಭಾವದಿಂದಾಗಿಯೇ ಬಂದುದು. ಮಲ್ಲಹಳ್ಳಿ ವ್ಯಾಪ್ತಿಗೆ ಸೇರುವ ಸಾಕಷ್ಟು ಜಮೀನು ಬ್ರಾಹ್ಮಣರಿಗೆ ಜಹಗೀರಾಗಿ ಬಂದಿದ್ದು ಒಂದು ಬ್ರಾಹ್ಮಣ ಕುಟುಂಬ ಅಲ್ಲಿದ್ದು ಅವರ ಜಮೀನಿನ ವ್ಯಾಪ್ತಿಯಲ್ಲೇ ಮೂಲ ಮಲೆಯಮ್ಮನ ಗುಡಿ ಇದೆ. ಇವರೂ ತುಂಬಾ ಶ್ರದ್ಧೆಯಿಂದ ಈ ಪೂಜಾ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ ಎಂದು ಅಲ್ಲಿಯ ಮ್ಯಾಸರು ಹೇಳುತ್ತಾರೆ. ಮಾರಿಗೆ ಕೋಣ, ಕುರಿ ಕಡಿಯುವ ಪದ್ಧತಿ ಮ್ಯಾಸನಾಯಕರಲ್ಲಿ ಇದೆ. ಆದರೆ ಬಲಿಯಾದ ನಂತರ ವಿಧವೆಯಾಗಿಸುವ ಸಂಪ್ರದಾಯ ಇದಕ್ಕೆ ಪೂರಕವಾಗಿರುವ 'ಮಾರಿಯ ಪುರಾಣ' ಈ ಬುಡಕಟ್ಟಿನಲ್ಲಿ ಇಲ್ಲ. ಇದು ಎಂದಿನಿಂದ ಪ್ರಾರಂಭವಾಯಿತು ಎಂಬುದಕ್ಕೆ ಉತ್ತರವಿಲ್ಲ. ಕೋಣನ ಬಲಿಯಾದ ನಂತರ ಊರ ಜನರೂ ಕುರಿ, ಮೇಕೆ ಬಲಿಕೊಟ್ಟು, ಬೇವಿನಸೀರೆ ಉಟ್ಟು ಹರಕೆ ತೀರಿಸುತ್ತಾರೆ. ಮಲೆಯಮ್ಮ ಮಾರಮ್ಮನಾಗಿ ರೋಗಕಾರಕ ನಿವಾರಕಳಾಗಿ, ಮಾರಿಪುರಾಣದ ಕೋಣನ ಬಲಿ ಪಡೆದು ಈ ಮೂಲಕ ತನ್ನ ಗಂಡನ ಸಾಂಕೇತಿಕ ಬಲಿ ತೆಗೆದುಕೊಂಡ ಬ್ರಾಹ್ಮಣಳಾಗಿ ಈಕೆ ಅವಸ್ಥಾಂತರಗೊಂಡಿದ್ದಾಳೆ.

ವೈಧಿಕ ಧರ್ಮದ ಪ್ರಭಾವ ಇಲ್ಲಿ ಸ್ವಲ್ಪಮಟ್ಟಿಗೆ ಆಗಿರುವುದನ್ನು ಗಮನಿಸಬಹುದು. ಜಹಗೀರುದಾರರೆಂದರೆ' ಶ್ರೀಮಂತ ಜಮೀನ್ದಾರರು. ಸಹಜವಾಗಿಯೇ ಇವರ ಹೊಲಗದ್ದೆಗಳಲ್ಲಿ ದುಡಿಯುವ ಮ್ಯಾಸರಿಗೆ ಇವರ ಮೇಲೆ ಗೌರವ, ಭಯ, ಭಕ್ತಿ ತಿಳಿದವರು ಎಂದು ಇವರು ಹಿಂದೆ ಯಾರಾದರೂ ಹೇಳಿದ್ದರ ಪರಿಣಾಮ ಈ ಅವಸ್ಥಾಂತರ ಎನಿಸುತ್ತದೆ. ಊರಲ್ಲಿರುವ 'ಮಾದಿಗ' ಸಮುದಾಯದವರೂ ಇಲ್ಲಿಯ ಆಚರಣೆಗಳಲ್ಲಿ ಭಾಗಿಯಾಗುತ್ತಾರೆ. ಕೋಣನ ಬಲಿಯ ನಂತರ ಮತ್ತೆ ಮೂರು ವರ್ಷದ ನಂತರ ಕಡಿಯಲು ಮತ್ತೊಂದು ಕೋಣದ ಆಯ್ಕೆ ನಡೆದು ಅದನ್ನು ತಂದಾಗ ಅದನ್ನು ಹಿಡಿದು ಊರಲ್ಲಿ ಮೆರವಣಿಗೆ ತರುವವರು ಇವರೇ. ಜುಮ್ಮೋಬನಹಳ್ಳಿಯಲ್ಲೂ ಕೂಡ ಹಳ್ಳಿಯಲ್ಲಿ ಮತ್ತು ಹಟ್ಟಿಯ ಹೊರಬಾಗದಲ್ಲಿ ಎಂದು ಎರಡು ದೇವಾಲಯಗಳಿವೆ. ಮ್ಯಾಸರ ಹಟ್ಟಿಯ ಬಳಿ ಇರುವ ಗುಡಿಯ ಎದುರಿಗೆ ಮಾತಂಗಿಯ ಗುಡಿ ಎಂದು ಕಟ್ಟಿದ್ದಾರೆ. ಮಲೆಯಮ್ಮನ ಗುಡಿಯಲ್ಲಿ ಹಿಂದೆ ಕೊರಚರು ಕೊಟ್ಟು ಹೋದರು ಎಂದು ಹೇಳಲಾಗುವ ಒಂದು ಹಳೆಯ ಗಟ್ಟಿಯಾಗಿರುವ ಮಣ್ಣಿನ ಮೂರ್ತಿ ಇದೆ. ಬಹುಕಾಲದ ಮೂರ್ತಿಯಂತೆ ಕಾಣುತ್ತದೆ. ಪಕ್ಕದಲ್ಲಿ ಕುದುರೆಯ ಮೇಲೆ ಕುಳಿತಿರುವ ಮಹಿಳೆಯ ಚಿಕ್ಕ ವಿಗ್ರಹ ಮರದಲ್ಲಿ ಮೂಡಿಸಿದ್ದಾರೆ. ಅದಕ್ಕೊಂದು ಬಿಳಿಸೀರೆ ಉಡಿಸಿದ್ದಾರೆ. ಊರಲ್ಲಿರುವ ಗುಡಿಯಲ್ಲಿ ಮರದ ಕುದುರೆಯ ಮೇಲೆ ಮಹಿಳೆ ಕುಳಿತಿರುವ ವಿಗ್ರಹವನ್ನೇ ಬಿಚ್ಚಿ ಮುಖವನ್ನು ಮಾತ್ರ ಒಂದು ಆಯತಾಕಾರದ ಪೆಟ್ಟಿಗೆಯಲ್ಲಿಟ್ಟು ಉಳಿದ ಭಾಗವನ್ನು ಕಟ್ಟಿ ಇಟ್ಟಿದ್ದಾರೆ. ಜಾತ್ರೆ, ಹಬ್ಬದಲ್ಲಿ ಜೋಡಿಸುತ್ತಾರೆ ಎಂದು ತಿಳಿಸಲಾಯಿತು. ಇಲ್ಲಿಯೂ ಸಹ 'ಮಲೆಯಮ್ಮ' ಮಾರಮ್ಮ ನಂತೆ ಪೂಜಿಸಲ್ಪಡುತ್ತಿದ್ದಾಳೆ ಗ್ರಾಮದೇವತೆಯಾದ ಮಾರಮ್ಮನಿಗೆ ಮಾಡುವಂತೆ 'ಸಾರು' ಹಾಕುವುದು. ಮೆರವಣಿಗೆಯಲ್ಲಿ ಹೋಗುವಾಗ ಪ್ರತಿ ಮನೆಯವರೂ ಮಡಿಲಕ್ಕಿ ಹಾಕುವುದು ಹೊರಗುಡಿಗೆ ಬಂದು ಸೇರಿದಾಗ ಕೋಣ ಕಡಿದು ಬಾಯಿಬೀಗ, ಬೇವಿನಸೀರೆಯ ಹರಕೆಗಳನ್ನು ತೀರಿಸುತ್ತಾರೆ. ಮೂಗುತಿ-ಬಳೆ ತೆಗೆಯುವುದಿಲ್ಲ. ಗ್ರಾಮದೇವತೆಗೆ ಮಾಡುವ ಇನ್ನೊಂದು ಆಚರಣೆ 'ಗಾವು ಸಿಗಿಯುವುದು' ಆದಿಮ ಸಂಸ್ಕೃತಿಯ ಮಾನವನ ಮೂಲಪ್ರವೃತ್ತಿಯ ಒಂದು ಅಂಶವಾಗಿ ಇದು ಆಚರಣೆಯಲ್ಲಿ ಉಳಿದುಬಂದಿದೆಯಾದರೂ

‘ಮಲೆಯಮ್ಮ’ನಿಗೆ ಗಾವು ಸಿಗಿಯುವ ಪದ್ಧತಿ ಆರಂಭವಾದದ್ದು ಮಲೆಯಮ್ಮ ಊರಮ್ಮನಾಗಿ ಅವಸ್ಥಾಂತರಗೊಂಡು ಪೂಜೆಗೊಳ್ಳುತ್ತಿರುವ ಒಂದು ವಿಧಾನವೇ ಆಗಿದೆ.

**ಗೌರಸಮುದ್ರದ ಮಾರಮ್ಮ – ಅವಸ್ಥಾಂತರ :**

ಆಕೆಯ ಬಗೆಗೆ ಪ್ರಚಲಿತವಿರುವ ಕಥೆಗಳು, ಐತಿಹ್ಯಗಳು ಮತ್ತು ಆಚರಣೆಗಳ ಮೂಲಕ ಈಕೆಯನ್ನು ಮ್ಯಾಸಬೇಡ ಬುಡಕಟ್ಟಿನ ನಾಯಕಿ ಎಂದು ಗುರುತಿಸಲು ಸಾಧ್ಯವಾಗುತ್ತದೆ. ಈ ನಾಯಕಿಗೆ ಸಮುದಾಯದ ಬಹು ವಿಶೇಷ ಆರಾಧನೆಯಾದ ‘ಗುಗ್ಗರಿ ಹಬ್ಬದ’ ಆಚರಣೆಯೂ ಬಳಕೆಯಲ್ಲಿದೆ. ಹಿಂದೆ ಛತ್ರಿ, ಚಾಮರ, ಕೋರಿ ನಿಶಾನೆ, ನಗಾರಿ, ನೌಬತ್ತುಗಳನ್ನು ಕೊಟ್ಟ ಯರಮಂಚಿನಾಯಕ ಆಕೆಯ ನೆಲೆಯಾಗಿದ್ದ (ಸಮಾಧಿಸ್ಥಳ ಎಂಬ ಐತಿಹ್ಯವನ್ನೂ ಹೇಳುತ್ತಾರೆ) ತುಮ್ಮಲಿಗೆ ವರ್ಷಕ್ಕೊಮ್ಮೆ ಸಾಂಕೇತಿಕವಾಗಿ ಬುಟ್ಟಿಯನ್ನು ತೆಗೆದುಕೊಂಡು ಹೋಗಿ ಪೂಜೆ ಸಲ್ಲಿಸಿ ಬರುವ ಏರ್ಪಾಡನ್ನು ಮಾಡಿದ್ದ. ಈಗ ಎಷ್ಟರಮಟ್ಟಿಗೆ ಈಕೆ ಅವಸ್ಥಾಂತರಗೊಂಡಿದ್ದಾಳೆಂದರೆ ಈಕೆಯ ಮೂಲವೇ ಮರೆತು ಹೋಗುವಷ್ಟು ಮೂಲದಲ್ಲಿ ಹುಲ್ಲಿನ ಗುಡಿಸಲೇ ದೇವಾಲಯವಾಗಿತ್ತು ಎಂದು ಹೇಳುತ್ತಾರೆ. ಈಗ ಕಲ್ಲು, ಇಟ್ಟಿಗೆ ಸಿಮೆಂಟ್ ಬಳಸಿದ ಗುಡಿ ಕಟ್ಟಲಾಗಿದೆ. ಮೊದಲು ಬರೀ ಅಲಂಕರಿಸಿದ, ತನ್ನ ಮಡಿಲಲ್ಲಿ ಮಾರಮ್ಮನಿಗೆ ಸಾಂಕೇತಿಕವಾಗಿ ಆಕೆಯ ವಿಶೇಷ ವಸ್ತುಗಳನ್ನು ಅಡಗಿಸಿಕೊಂಡಿದ್ದ ಬುಟ್ಟಿ ಮತ್ತು ಭಂಡಾರದಭರಣಿ ಮಾತ್ರ ಪೂಜೆಗೊಳ್ಳುತ್ತಿತ್ತು. ಈಗ ಜೊತೆಗೆ ಒಂದು ಬೆಳ್ಳಿಯ ಸೌಮ್ಯಕಳೆಯ ಪ್ರತಿಮೆಯನ್ನೇ ಮಾಡಿಸಿ ಇಟ್ಟಿದ್ದಾರೆ. ಸಿಂಹದ ಮೇಲೆ ಕುಳಿತಿರುವ ಹಲವು ಕೈಗಳನ್ನು ಹೊಂದಿದ್ದು ಆ ಕೈಗಳಲ್ಲಿ ಅಯುಧಗಳನ್ನು ಹಿಡಿದಿರುವ, ಕಿರೀಟಧಾರಣೆಯಾಗಿರುವ ಆದಿಶಕ್ತಿಯ ಪ್ರತಿಮೆಯದು – ತುಮ್ಮಲಿಗೆ ಹೋಗುವಾಗ ಮಾತ್ರ ಈಗ ಬುಟ್ಟಿಯನ್ನು ಅಲಂಕರಿಸಿಕೊಂಡು ಹೋಗುತ್ತಾರೆ. ಹೀಗೆ ಮೂಲದಲ್ಲಿ ವಲಸೆ ಸಮುದಾಯದ ಪ್ರತೀಕವಾಗಿ ಬುಟ್ಟಿಯಲ್ಲಿ ಪೂಜೆಗೊಳ್ಳುತ್ತಿದ್ದ ಮಾರಮ್ಮ ಈ ಮೂರ್ತಿಯಾಗಿ ರೂಪು ಪಡೆದಿದ್ದಾಳೆ. ಬರೀ ರೂಪದಲ್ಲಿ ಮಾತ್ರವಲ್ಲ. ಅಚರಣೆಯಲ್ಲೂ ಬದಲಾವಣೆಗಳಾಗಿವೆ. ಈಗ ಗುಗ್ಗರಿ ಹಬ್ಬ ಅಲ್ಲಿ ವಿಶೇಷವಾದ ಹಬ್ಬವೆ ಅಲ್ಲ. ಎಷ್ಟೋ ಮಂದಿಗೆ ಇದು ತಿಳಿಯದ ಸಂಗತಿ. ಪಕ್ಕದಲ್ಲಿರುವ ಬೊಮ್ಮದೇವರಿಗೆ ಗುಗ್ಗರಿ ಹಬ್ಬ ಎನ್ನುತ್ತಾರೆ. ಅಷ್ಟರ ಮಟ್ಟಿಗೆ ಮಾರಿಯಾಗಿ ಈಕೆ ಪ್ರಭಾವಿಯಾಗಿದ್ದಾಳೆ. ಜಾತ್ರೆಗೆ ಸಾರು ಹಾಕಿದ ಮೇಲೆ ಬೇರೆ ಕಡೆ ಮಾರಮ್ಮನಿಗೆ ಕಡಿದಂತೆ ಇಲ್ಲಿ ಕೋಣ ಕಡಿಯುವ, ವಿಧವೆಯಾಗಿಸುವ ಆಚರಣೆಗಳಿಲ್ಲ. ಅಷ್ಟರಮಟ್ಟಿಗೆ ತನ್ನತನವನ್ನು ಉಳಿಸಿಕೊಳ್ಳಲಾಗಿದೆ. ಮರುದಿನ ತುಮ್ಮಲಿಗೆ ಹೊರಟಾಗ ಬಾನಗುರಿ ಕಡಿಯುವ ಪದ್ಧತಿ ಇದೆ. ಆಗಲೇ ಹರಕೆ ಮಾಡಿಕೊಂಡವರು ಉರುಳುಸೇವೆಯನ್ನು ಮಾಡುತ್ತಾರೆ. ತುಮ್ಮಲಿನಲ್ಲಿಯೂ ದೇವಾಲಯದ ವತಿಯಿಂದ, ಅಂದರೆ ಸಮುದಾಯದ ವತಿಯಿಂದ ಈಕೆಗೆ ಕುರಿ, ಕೋಣದ ಬಲಿ ಇಲ್ಲವೇ ಇಲ್ಲ. ಬರೀ ಮೀಸಲಾಗಿರಿಸುವ ಹಾಲು, ಮೊಸರು, ತೆಂಗು, ಬಾಳೆಹಣ್ಣು, ಹೂವಿನ ನೈವೇದ್ಯವಷ್ಟೇ. ಆದರೆ ಹರಕೆ ಮಾಡಿಕೊಂಡ ಜನ ಕುರಿ, ಕೋಣ, ಕೋಳಿ ಕಡಿಯುತ್ತಾರೆ. ರಾಶಿ ರಾಶಿ ಬಲಿ ಇಲ್ಲಿ ಸರ್ಕಾರದ ಕಟ್ಟೆಚ್ಚರದ ಮಧ್ಯೆಯೂ ನಡೆಯುತ್ತದೆ. ಭಯಭಕ್ತಿಯಿಂದ ಜನ ಬೇವಿನ ಸೀರೆ ಉಡುವಲ್ಲಿ, ಬಾಯಿಬೀಗ ಹರಕೆಯಲ್ಲಿ ಆಕೆ ರೋಗಕಾರಕ – ರೋಗ ನಿವಾರಕಳಾಗಿ ಅವಸ್ಥಾಂತರ ಗೊಂಡಿರುವುದು ಕಂಡುಬರುತ್ತದೆ. ತುಮ್ಮಲಿನಲ್ಲಿ ಯಾವುದಾದರೂ ತಂಗಟೆ ಗಿಡಕ್ಕೆ ಪೂಜೆ ಮಾಡುವ ಬಲಿ

ಕೊಡುವ ಜನರನ್ನು ಕಂಡಾಗ ಈಕೆ ವೃಕ್ಷರೂಪೀ ದೇವತೆಯಾಗಿಯೂ ಅವಸ್ಥಾಂತರ ಗೊಂಡಿರುವುದು ಕಂಡುಬರುತ್ತದೆ.

ಹುತ್ತಕ್ಕೆ ಮೀಸಲಾಗಿ ತಂದ ಹಾಲನ್ನು ಸುರಿದು ಒದ್ದೆಯಾದ ಮಣ್ಣನ್ನೇ ಬಂಗಾರ ಎಂದು ಧರಿಸುವ ಜನರ ಭಕ್ತಿಯ ಹಿಂದೆ ಮಾತೃದೇವತಾರಾಧನೆಯ ಆಶಯ ಕೆಲಸ ಮಾಡುತ್ತಿದೆ ಎನಿಸುತ್ತದೆ.

ಮರುದಿನದ ಸಿಡಿಯ ಆಚರಣೆ ಸಮುದಾಯಕ್ಕೇ ಸಂಬಂಧಿಸಿದ ಆಚರಣೆಯೇನೂ ಅಲ್ಲ. ವ್ಯಕ್ತಿ ದೈವತ್ವಕ್ಕೇರಿದಾಗ ಆ ದೇವರನ್ನು ಸಂಪ್ರೀತಗೊಳಿಸಲು ಮಾಡುವ ಒಂದು ಪ್ರಯತ್ನವಷ್ಟೇ.

**ಓಕುಳಿಯಾಟ :**

ಮ್ಯಾಸಬೇಡ ಬುಡಕಟ್ಟಿನ ಯಾವ ದೈವದ ಆರಾಧನಾ ನೆಲೆಯಲ್ಲಿಯೂ ಈ ಆಚರಣೆಯಿಲ್ಲ. ಇಲ್ಲಿ ಮಾತ್ರ ನಡೆಯುವ ಆಚರಣೆ ಅನ್ಯಸಂಸ್ಕೃತಿಯ ಪ್ರಭಾವದಿಂದ ಪ್ರವೇಶವಾಗಿರಬಹುದಾದ ಶುದ್ಧ ಮನರಂಜನಾತ್ಮಕವಾದ ಆಚರಣೆ ಎಂದು ಹೇಳಬಹುದು.

ಬುಡಕಟ್ಟಿನ ನಾಯಕಿ ಬುಡಕಟ್ಟಿನಲ್ಲೇ ದೈವತ್ವಕ್ಕೇರಿ ನಂತರ ಊರಿನ ದೇವತೆಯನ್ನೂ ಬದಿಗೆ ಸರಿಸಿ ಬರೀ ಗೌರಸಮುದ್ರ ಊರಿಗೆ ಮಾತ್ರವಲ್ಲದೆ ಆ ಪ್ರಾಂತ್ಯಕ್ಕೆಲ್ಲಾ ಪ್ರಸಿದ್ಧಿ ಪಡೆದ ದೇವತೆಯೆನಿಸಿ ಅದ್ಧೂರಿಯಾಗಿ ಜಾತ್ರೆ ನಡೆಯುವ ಹಂತ ತಲುಪಿದಾಗ ಸಹಜವಾಗಿಯೇ ಅಲ್ಲಿ ವ್ಯವಹಾರಿಕತೆಯೂ ಪ್ರವೇಶ ಮಾಡುತ್ತದೆ. ಇಲ್ಲೂ ಸಹ ಈ ವ್ಯವಹಾರಿಕ ಅಂಶಗಳೇ ಕಾರಣವಾಗಿ ಚೌಡಿಕೆಯವರೂ, ಗೊರವರೂ, ಜೋಗತಿರೂ ಸಾಕಷ್ಟು ಸಂಖ್ಯೆಯಲ್ಲಿ ಇಲ್ಲಿ ಸೇರುತ್ತಾರೆ. ತಮ್ಮ ತಮ್ಮ ವಾದ್ಯಗಳನ್ನು ಬಾರಿಸುತ್ತಾ ಆವೇಶಗೊಂಡವರಂತೆ ಕುಣಿಯುತ್ತಾ ದೇವಿಗೆ ಸೇವೆಯನ್ನೂ ಸಲ್ಲಿಸುತ್ತಾರೆ. ಅದರೊಂದಿಗೆ ನೆರೆದ ಭಕ್ತಾದಿಗಳಿಂದ ಮುಲಾಜಿಲ್ಲದೆ ಹಣವನ್ನೂ ಪಡೆಯುತ್ತಾರೆ. ಇವರೆಲ್ಲಾ ಈ ಮಾರಮ್ಮ ನಮ್ಮ ದೇವತೆ ಇದು ನಮ್ಮದೇ ಹಬ್ಬ ಎಂದು ಹೇಳುತ್ತಾರೆ. ಹೀಗೆ ಇಷ್ಟರ ಮಟ್ಟಿಗೆ ಈಕೆ ಅವಸ್ಥಾಂತರಗೊಂಡು ಜನಪ್ರಿಯ ದೇವತೆಯಾಗಿ ಪರಿಗಣಿಸಲ್ಪಟ್ಟಿದ್ದಾಳೆ. ಹೀಗಾಗಿ ಗೌರಸಮುದ್ರದ ಮಾರಮ್ಮನನ್ನು ಕೇವಲ ಗೌರಸಮುದ್ರದಲ್ಲಿ ಮಾತ್ರವಲ್ಲದೆ ಭಕ್ತಾದಿಗಳು ತಮಗೆ ಬೇಕಾದ ಕಡೆಯಲ್ಲೆಲ್ಲಾ ಒಂದು ಬೇವಿನಮರಕ್ಕೆ ಕಟ್ಟೆಯನ್ನು ಕಟ್ಟಿಯೋ, ಕೆಲವೊಮ್ಮೆ ಗುಡಿಯನ್ನು ಕಟ್ಟಿಯೋ ಬಲಿಕೊಟ್ಟು ಆರಾಧಿಸುತ್ತಾರೆ. ರಾಯದುರ್ಗದಲ್ಲಿ ಕೋಟೆಯ ಬಾಗಿಲಲ್ಲಿಯೂ ಗುಡಿಯಿದ್ದು ಈ ಜಾತ್ರೆಯ ದಿನದಂದೇ ಅಲ್ಲಿಯೂ ಜಾತ್ರೆಯನ್ನು ಮಾಡಲಾಗುತ್ತದೆ.

**ನವರಾತ್ರಿಯ ಆಚರಣೆ :**

ವಲಸೆ ಮೂಲದಿಂದ ಬಂದ ಬುಡಕಟ್ಟಿನ ದೇವತೆ ಶಿಷ್ಟರೂಪಕ್ಕೆ ಅವಸ್ಥಾಂತರಗೊಂಡಾಗ ವಿಜಯದಶಮಿಯ ದಿನ ಬನ್ನಿ ಮುಡಿಯಲು ಹೋಗುವುದು ಸಹಜವಾಗಿಯೇ ಇದೆ.

ಈ ಮಾರಮ್ಮನ ಜಾತ್ರೆಯ ದಿನದಿಂದ ಹಿಡಿದು ಒಂದು ತಿಂಗಳವರೆಗೆ ನಾಲ್ಕೂ ಮಂಗಳವಾರ ಮ್ಯಾಸನಾಯಕರು ನೆಲೆಸಿರುವ ಊರು ಹಟ್ಟಿಗಳಲ್ಲಿ ಮಾರಮ್ಮನ ಹಬ್ಬದ ಸಂಭ್ರಮ. ಒಂದೊಂದು ಹಟ್ಟಿ

ಹಳ್ಳಿಯಲ್ಲಿ ನಿರ್ದಿಷ್ಟ ಮಂಗಳವಾರವನ್ನು ಗುರುತಿಸಿಕೊಂಡು ಮನೆ ಮನೆಗೂ ಕುರಿ, ಮೇಕೆ ಕಡಿದು ಇಷ್ಟ ಮಿತ್ರರನ್ನೂ, ಬಂದುಗಳನ್ನೂ ಕರೆದು ಮಾಂಸಹಾರದ ಊಟ ಮಾಡುತ್ತಾರೆ. ಸರ್ಕಾರದ ಯಾವ ಕಾಯಿದೆಯೂ ಇದನ್ನು ನಿಯಂತ್ರಿಸಲಾಗುತ್ತಿಲ್ಲ. ಮ್ಯಾಸನಾಯಕರಲ್ಲಿ ಮಾರಿಗೆ ಕುರಿ ಕಡಿದರೆ ಕುರಿ ಕಡಿದೆವು ಎನ್ನುವುದಿಲ್ಲ. ಬದಲಾಗಿ ಬೇಟೆ ಕಡಿದೆವು ಎನ್ನುತ್ತಾರೆ. ಬೇಟೆಯ ಮೂಲದಿಂದ ಬಂದ ಈ ಸಮುದಾಯಕ್ಕೆ ಹಿಂದೆ ಬೇಟೆಯಾಡಿ ಪ್ರಾಣಿಯನ್ನು ಕತ್ತರಿಸಿ ಮಾಂಸ ತರುವುದು ತೀರಾ ಸಾಮಾನ್ಯವಾಗಿತ್ತು. ಬಹುಶಃ ಈ ಅಂಶವೇ ಕಾರಣವಾಗಿ ಈಗ ಸಾಕಿದ ಕುರಿಯನ್ನು ಬಲಿಕೊಟ್ಟರೂ 'ಬೇಟೆ' ಕಡಿವೆವು ಎಂಬ ಪದ ಬಳಕೆಯಾಗುತ್ತದೆ. ಒಟ್ಟಾಗಿ ಈ ಎಲ್ಲಾ ವಿವರಗಳನ್ನು ಸಮೀಕ್ಷಿಸಿ ಆಗಿರುವ ಅವಸ್ಥಾಂತರಗಳನ್ನು ಹೀಗೆ ವಿಭಾಗಿಸಬಹುದಾಗಿದೆ.

ಅ. ದೇವಾಲಯಗಳ ಸ್ವರೂಪದ ಅವಸ್ಥಾಂತರ

ಆ. ರೂಪದ ಸ್ವರೂಪದ ಅವಸ್ಥಾಂತರ

ಇ. ಕಥನಗಳ ಮತ್ತು ಆರಾಧನೆಯ ಅವಸ್ಥಾಂತರ

**೩.೭.೨ ದೇವಾಲಯುಗಳ ಅವಸ್ಥಾಂತರ :**

ಮರದ ಪೊಟರೆಗಳಲ್ಲಿ, ಬೆಟ್ಟದ ಗುಹೆಗಳಲ್ಲಿ ವಾಸ ಮಾಡುತ್ತಿದ್ದ ಮಾನವ ಕ್ರಮೇಣ ಗುಡಿಸಲ ನಿವಾಸಿಯಾದ. ಅಲ್ಲಿಂದ ಸ್ಥಿತ್ಯಂತರಗೊಂಡು ಕಾಂಕ್ರೀಟ್ ಮನೆಗಳಲ್ಲಿ ವಾಸಮಾಡುವುದನ್ನು ಅಭ್ಯಾಸ ಮಾಡಿಕೊಂಡ. ಮೂಲತಃ ಸೌಲಭ್ಯಾಕಾಂಕ್ಷಿಯಾದ ಮನುಷ್ಯ ಮೊದಲು ಸಂಪ್ರದಾಯ ನಂಬಿಕೆಗಳಿಗೆ ಕಟ್ಟುಬಿದ್ದು ಬದಲಾವಣೆಯನ್ನು ಒಪ್ಪದೇ ಹೋದರೂ ಕಾಲಕ್ರಮೇಣ ಸೌಲಭ್ಯವನ್ನು ಮನಗೊಂಡು ಅನುಕೂಲ ಸಿಂಧು ನೀತಿಗೇ ತಲೆಬಾಗಿರುವುದು ಸಹಜ. ಹೀಗೆ ಬದಲಾವಣೆಗೆ ಒಳಗಾಗದೆ ಆದಷ್ಟೂ ಮೂಲಸ್ಥಿತಿಯಲ್ಲಿಯೇ ಉಳಿಯಲು ಪ್ರಯತ್ನಿಸುತ್ತಿರುವ ನಿರ್ದಿಷ್ಟ ಪ್ರದೇಶದಲ್ಲಿ ಸಾಮಾನ್ಯವಾಗಿ ಕಾಡು ಅಥವಾ ಕಾಡಿನಂಚಿನಲ್ಲಿ ತನ್ನದೇ ಆದ ಬದುಕಿನ ವಿಧಾನವನ್ನು ರೂಪಿಸಿಕೊಂಡು ರೀತಿ–ನೀತಿಗಳನ್ನು ಅಳವಡಿಸಿಕೊಂಡು ಬಾಳುತ್ತಿರುವ ಜನಸಮುದಾಯಗಳು ಬುಡಕಟ್ಟುಗಳು ಎಂದು ಕರೆಸಿಕೊಂಡವು. ಇವರಲ್ಲೂ ಬದಲಾವಣೆ ಸಾಧ್ಯವೇ ಇಲ್ಲ ಎಂದಲ್ಲ. ಬದಲಾವಣೆಯ ಚಲಿಸುವುದು ಮನುಷ್ಯನ ಒಂದು ಲಕ್ಷಣವೂ ಹೌದು. ಆದರೆ ತಮ್ಮ ಕಟ್ಟುಪಾಡುಗಳೇ ಕಾರಣವಾಗಿ ಇತರ ಜನ ಸಮುದಾಯಗಳೊಂದಿಗೆ ಬೆರೆಯುವ ಅವಕಾಶಗಳೂ ಕಡಿಮೆ. ಈ ಕಾರಣವಾಗಿ ಇವರು ಬದಲಾವಣೆಯನ್ನು ಹೊಂದುವುದು ನಿಧಾನವಾಗಿಯಷ್ಟೆ. ಹಾಗಾಗಿಯೇ ಹಿಂದೆ ಸೊಪ್ಪಿನ, ಹುಲ್ಲಿನ ಗುಡಿಸಲುಗಳಲ್ಲಿ ವಾಸಮಾಡುತ್ತಿದ್ದ ಬುಡಕಟ್ಟು ಜನರು ನಿಧಾನವಾಗಿ ಕಾಂಕ್ರೀಟ್ ಮನೆಗಳಲ್ಲಿ ವಾಸಿಸುವುದನ್ನು ಅಭ್ಯಾಸ ಮಾಡಿಕೊಳ್ಳುತ್ತಿದ್ದಾರೆ. ತಮ್ಮ ದೈವದ ನೆಲೆಗಳೂ ಕೂಡ ಹಿಂದೆ ಹುಲ್ಲಿನ ಗುಡಿಸಿಲುಗಳೇ ಆಗಿದ್ದವು. ದೈವದ ಭಯ ಕಾರಣವಾಗಿ ತಮ್ಮ ದೇವರನ್ನು 'ಮನೆ'ಯಲ್ಲಿ ಕೂಡಿಸಿದರೆ ತಮಗೇನಾದರೂ ಕೆಡುಕುಂಟಾಗುತ್ತದೆ ಎಂದು ದೇವರನ್ನು ಮೂಲ ಗುಡಿಸಲಲ್ಲೇ ಇಟ್ಟಿದ್ದುಂಟು. ಮ್ಯಾಸಬೇಡರ ಮತ್ತು ಕಾಡುಗೊಲ್ಲರ ದೇವಾಲಯುಗಳೆಲ್ಲಾ ಗುಡಿಸಲುಗಳೇ. ಅರೆ ಅಲೆಮಾರಿಗಳಾಗಿದ್ದ ಇವರು ತಾವು ಹೋದಡೆಯಲ್ಲೆಲ್ಲಾ ಈ ಗುಡಿಸಿಲುಗಳನ್ನೂ

ಹೊತ್ತುಯ್ಯುತ್ತಿದ್ದುದುಂಟು. ಸಾಂಸ್ಕೃತಿಕ ನಾಯಕ/ನಾಯಕಿ ದೈವೀಕರಣಗೊಂಡು ಆರಾಧನಾ ಸ್ವರೂಪದಲ್ಲಿದ್ದಾಗ ಅವರಿಗೆ ಸಂಬಂಧಿಸಿದ ವಸ್ತುವನ್ನು ಪೆಟ್ಟಿಗೆ ಅಥವಾ ಬುಟ್ಟಿಯಲ್ಲಿಟ್ಟು ಅವನ್ನೇ ದೇವರೆಂದು ಗುಡಿಸಿಲುಗಳಲ್ಲಿ ಇಟ್ಟಿರುತ್ತಿದ್ದರು. ಈಗ ಕೆಲವು ಆರಾಧನಾ ನೆಲೆಗಳ ಸ್ವರೂಪ ಬದಲಾವಣೆಯಾಗಿದೆ. ಸಾಂಸ್ಕೃತಿಕ ನಾಯಕಿಯಾದ 'ಮುಂಗಲು ದೇವಮ್ಮನ' ಗುಡಿ ಮಾತ್ರ ಮೂಲ ಸ್ಥಿತಿಯಲ್ಲಿಯೇ ಇದೆ. ಮೊದಲ ಹಂತದ ಬದಲಾವಣೆಯೆಂದರೆ ನೆಲಗುಡಿಸಿಲಿಗೆ ಬದಲಾಗಿ ದುಂಡನೆಯ ಆಕಾರದಲ್ಲಿ ಕಲ್ಲಿನ ಗೋಡೆ ೪-೫ ಅಡಿಗಳಷ್ಟು ಎತ್ತರ ನಿರ್ಮಿಸಿ ಅದರ ಮೇಲೆ ಬಾದೆ ಹುಲ್ಲನ್ನು ಹೊದಿಸಿ ಗುಡಿಸಿಲನ್ನು ನಿರ್ಮಾಣ ಮಾಡಲಾಗಿತ್ತು. ಈಗ ಮುಂಗಲು ದೇವಮ್ಮನ ಗುಡಿ ಇದೇ ಸ್ವರೂಪದಲ್ಲಿಯೇ ಇರುವುದು.

ದಡ್ಡಲು ಮಾರಮ್ಮನ ಗುಡಿಯೂ ಗುಡಿಸಲೇ ಆಗಿದೆ. ಆಧುನಿಕ ಶೈಲಿಯ ದೇವಸ್ಥಾನ ನಿರ್ಮಾಣದ ಹಂತದಲ್ಲಿದೆ. ಅಬ್ಬೇನಹಳ್ಳಿ ಬಳಿಯ ಮ್ಯಾಸರಹಟ್ಟಿ, ನಾಯಕನ ಹಟ್ಟಿ ಬಳಿಯ ಮಾದೇನಹಟ್ಟಿಯಲ್ಲಿ ಗುಡಿಸಲುಗಳಲ್ಲಿಯೇ ಅಕ್ಕರಾಯಮ್ಮನನ್ನು ಪೂಜಿಸಲಾಗುತ್ತದೆ. ಆದರೆ ಚಿನಮಜ್ಜನಹಳ್ಳಿ, ಆವಳೇನಹಳ್ಳಿ, ಗಡಿಮಾಕುಂಟೆ, ಹುಣಿಸೇಕಟ್ಟೆಯಲ್ಲಿ ಗುಡಿಸಿಲಿಗೆ ಬದಲಾಗಿ ಕಾಂಕ್ರೀಟ್ ದೇವಾಲಯಗಳು ನಿರ್ಮಾಣವಾಗಿವೆ. ಹಾಗೆಯೇ ಮಲೆಯಮ್ಮನ ಗುಡಿಯೂ ಜುಮ್ಮೋಬನಹಳ್ಳಿ ಮತ್ತು ಮರ್ಲಹಳ್ಳಿಯಲ್ಲಿ ಇಟ್ಟಿಗೆ, ಸಿಮೆಂಟ್ ಬಳಸಿ ಕಟ್ಟಿಸಿದ ದೇವಾಲಯಗಳು, ಇನ್ನು ಗೌರಸಮುದ್ರದ ಮಾರಮ್ಮನ ನೆಲೆಯೂ ಮೂಲತಃ ಗುಡಿಸಲೇ ಆಗಿತ್ತು ಎನ್ನುವುದಕ್ಕೆ ಕಥನದಲ್ಲೇ ವಿವರ ಸಿಗುತ್ತದೆ.

ಎಲ್ಲಿ ನೋಡಿದರೂ ಹುಲ್ಲೇನಗುಡಿಸಲು ಕಾಣೆ ತಾಂದಾನ್ನ

ಮುತ್ತಿನ ಹಣುತ ಹಣುದಾರೆ ॥ ಮಾರಕ್ಕನ

ಭಕ್ತರಿನ್ನೆಂಥಾ ಧನಿಕಾರೆ.

ಹೀಗೆ ವರ್ಣಿಸಲ್ಪಟ್ಟ ಹುಲ್ಲಿನ ಗುಡಿಸಿಲ ಜಾಗದಲ್ಲಿ ಈಗ ಇಟ್ಟಿಗೆ, ಕಲ್ಲು ಬಳಸಿದ ದೇವಾಲಯವನ್ನು ಕಟ್ಟಲಾಗಿದೆ.

ಹೀಗೆ ಬುಡಕಟ್ಟು ಜನರ ಬದುಕೂ ಸ್ಥಿತ್ಯಂತರಗೊಳ್ಳುತ್ತಿರುವಾಗ ತಮ್ಮ ಆರಾಧನಾ ನೆಲೆಗಳ ಸ್ವರೂಪವೂ ಬದಲಾವಣೆಯ ರೂಪ ಪಡೆಯುತ್ತಿರುವುದು ಸಹಜವಾಗಿಯೇ ಇದೆ.

**೩.೭.೩. ರೂಪದವಸ್ಥಾಂತರ :**

ಪಶುಪಾಲಕರಾಗಿದ್ದ ಮ್ಯಾಸಬೇಡರು ತಮ್ಮ ದನಕರುಗಳಿಗೆ ಹುಲ್ಲು ನೀರನ್ನು ಅರಸುತ್ತಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ತಮ್ಮ ಪಶುಸಂಪತ್ತಿನೊಂದಿಗೆ ಅಲೆಯುವುದು ಅನಿವಾರ್ಯವಾಗಿತ್ತು. ತಮ್ಮ ಜೀವನದ ವಿಧಾನವೇ ಹೀಗಿದ್ದಾಗ ಇದಕ್ಕನುಗುಣವಾಗಿ ತಕ್ಕ ಏರ್ಪಾಡುಗಳನ್ನೂ ಅವರು ಮಾಡಿಕೊಂಡಿದ್ದರು. ತಾವು ಹೀಗೆ ಹೋಗುವಾಗ ತಮ್ಮ ಕಂಪಳದೊಂದಿಗೆ 'ಮ್ಯಾಸಗಂಪ' ಎಂದು ಕರೆಯಲ್ಪಡುವ ಪುಟ್ಟಿಗಳಲ್ಲಿ ತಮ್ಮ ವಸ್ತುಗಳನ್ನಿರಿಸಿಕೊಂಡು ಹೊತ್ತು ಕೊಂಡೊಯ್ಯುತ್ತಿದ್ದರು. ತಳ

ಚಿಕ್ಕದಾಗಿದ್ದು ಮೇಲೆ ಅಗಲವಾಗಿರುತ್ತಿದ್ದ ಬಿದಿರಿನ ಬುಟ್ಟಿಯಿದು. ಇದನ್ನು ತಮಗೆ ಬಿದಿರಮ್ಮನೇ ಹೋಲೆದು ಕಟ್ಟಿದ್ದಳು ಎಂದು ಬಿದಿರಮ್ಮನ ಹಾಡನ್ನೂ ಇವರು ಹಾಡುತ್ತಾರೆ. ಈಗಲೂ ತಮ್ಮ ತಮ್ಮ ದೈವೀಕ ನೆಲೆಗಳಿಗೆ ಮೀಸಲನ್ನು ತರುವಾಗ ಇಂತಹ ಪುಟ್ಟಿಯಲ್ಲಿಯೇ ಇಟ್ಟು ತರುವುದು ಅಂದರೆ ಹೊತ್ತು ಸಾಗಿಸುವ ಒಂದು ಪರಿಕರವಾಗಿ ಇದು ಈ ಸಮುದಾಯದಲ್ಲಿ ಬಳಕೆಯಾಗುತ್ತಿತ್ತು. ತಮ್ಮ ಸಾಂಸ್ಕೃತಿಕ ನಾಯಕ ಅಥವಾ ನಾಯಕಿಯನ್ನು ದೈವೀಕ ನೆಲೆಯಲ್ಲಿರಿಸಿ ಪೂಜಿಸಲು ಆರಂಭಿಸಿದಾಗ ಅವರಿಗೆ ಸಾಂಕೇತಿಕವಾಗಿ ಪೂಜಿಸಲಾಗುವ ಅವರಿಗೆ ಸಂಬಂಧಿಸಿದ ವಸ್ತುವನ್ನೋ ಅಥವಾ ಸಾಲಿಗ್ರಾಮವನ್ನೋ ಬುಟ್ಟಿಯಲ್ಲಿಟ್ಟುಕೊಂಡು ಸಾಗಿಸುತ್ತಿದ್ದರು. ನೆಲೆ ನಿಂತ ಕಡೆ ಒಂದು ಗುಡಿಸಲಿನಲ್ಲಿ ಈ ಬುಟ್ಟಿಯನ್ನಿಟ್ಟು ಪೂಜಿಸುವ ಪದ್ಧತಿ ಇತ್ತು. ಕಾಲಾಂತರದಲ್ಲಿ ಈ ದೇವರನ್ನಿಡುವ ಬುಟ್ಟಿಯ ರೂಪ ಮಾರ್ಪಾಡಾಯಿತು. ಸುಮಾರು ಎರಡರಿಂದ ಮೂರು ಅಡಿ ಎತ್ತರ, ೧ ೧/೨ ಅಡಿ ಅಗಲವಿರುವ ದುಂಡನೆಯ ಬುಟ್ಟಿಗೆ ಮುಚ್ಚಳವಿದ್ದು ಇದರಲ್ಲಿ ದೇವರನ್ನು ಇರಿಸಿ ಮೇಲೊಂದು ಬುಟ್ಟಿಯನ್ನು ಕಟ್ಟಿ ಇದಕ್ಕೆ ಬೆಳ್ಳಿಯ ಡಾಬನ್ನು ಇಟ್ಟು ಬೆಳ್ಳಿಯ ಛತ್ರಿ, ಗೆಜ್ಜೆಯ ಕುಚ್ಚು, ನಾಗರಹೆಡೆ, ಮುಖಪದ್ಮ ಇಟ್ಟು ಅಲಂಕರಿಸಲಾಗುತ್ತದೆ. ಈ ಬುಟ್ಟಿ ದೇವರೇ ಕ್ರಮೇಣ ಪೆಟ್ಟಿದೇವರು ಪೆಟ್ಟಿಗೆ ದೇವರು ಎಂದು ಕರೆಸಿಕೊಳ್ಳುತ್ತಿದೆ. ಈಗಲೂ ಬಹುಪಾಲು ಇದೇ ವಿಧಾನ ಬಳಕೆಯಲ್ಲಿದೆ. ಮ್ಯಾಸಬೇಡರಲ್ಲಿ ಹನ್ನೆರಡು ಪುಟ್ಟಿಗಳಿಗೆ ತುಂಬಾ ಪ್ರಾಶಸ್ತ್ಯವಿದೆ. ಸಾಂಸ್ಕೃತಿಕ ನಾಯಕಿಯಾದ ರಾಯಮ್ಮನನ್ನು ಈ ಹನ್ನೆರಡು ಪೆಟ್ಟಿಗೆಗಳಲ್ಲಿ ಶ್ರೇಷ್ಟವಾದ ಪೆಟ್ಟಿಗೆ ಎಂದು ಮ್ಯಾಸರೆಲ್ಲ ತೀರ್ಮಾನಿಸಿ ಸ್ಥಾನ ಕೊಟ್ಟಿದ್ದರು. ಈಗಲೂ ದೇವರಹಳ್ಳಿ, ಚಿನಮಜ್ಜಿನಹಳ್ಳಿ, ಆವಳೇನಹಳ್ಳಿ, ಮಾದಯ್ಯನಹಟ್ಟಿ, ಗಡಿಮಾಕುಂಟೆ, ಮ್ಯಾಸರಹಟ್ಟಿಯಲ್ಲಿ ಈ ಪೆಟ್ಟಿಯೇ ಪೂಜೆಗೊಳ್ಳುತ್ತಿದೆ. ಹುಣಿಸೇಕಟ್ಟೆಯಲ್ಲಿ ಮೂಲತಃ ಹೀಗಿಯೇ ಇದ್ದದ್ದು ಈಗ ಬದಲಾಗಿ ಒಂದು 'ಮುಖಪದ್ಮ'ವನ್ನಿಟ್ಟು (ದೇವಿಯ ಮುಖ) ಪೂಜಿಸಲಾಗುತ್ತಿದೆ.

'ಮಂಗಲು ದೇವಮ್ಮ' ಪೆಟ್ಟಿಗೆಯ ರೂಪದಲ್ಲೇ ಪೂಜಿಸಲ್ಪಡುತ್ತಿದ್ದಾಳೆ, ಬದಲಾವಣೆಯಾಗಿಲ್ಲ.

ಮಲೆಯಮ್ಮ ಪೆಟ್ಟಿಗೆ ರೂಪದಲ್ಲಿ ಮೊದಲಿನಿಂದಲೂ ಪೂಜಿಸಲ್ಪಟ್ಟಿಲ್ಲ. ಬದಲಾಗಿ ಮಲೆಯಮ್ಮ ಅಂದು ಮಣ್ಣಿನಲ್ಲಿ ಮಾರಮ್ಮನನ್ನು ಮಾಡಿ ಪೂಜಿಸಿದಂತೆಯೇ ಇಂದೂ ಮಣ್ಣಿನಮೂರ್ತಿಯನ್ನು ಮಾಡಿ ಪೂಜಿಸುವ ಪರಿಪಾಠವಿದ್ದು ಅದನ್ನೇ ಮಲೆಯಮ್ಮ ಎಂದು ಕರೆಯಲಾಗುತ್ತದೆ. ಜುಮ್ಮೋಬನಹಳ್ಳಿಯ ಹಟ್ಟಿಯ ಗುಡಿಯಲ್ಲಿ ಅಂದು ಕೊರಚರು ಕೊಟ್ಟು ಹೋಗಿದ್ದರು ಎನ್ನಲಾಗುವ ಈ ಮಣ್ಣಿನ ಮೂರ್ತಿ ಇದೆ. ಅದರ ಪಕ್ಕದಲ್ಲಿ ಕುದುರೆ ಮೇಲೆ ಕುಳಿತ ಮಹಿಳೆಯ ಒಂದು ಮರದಿಂದ ಮಾಡಿದ ಕಲಾಕೃತಿಯನ್ನಿಟಿದ್ದು ಅದಕ್ಕೆ ಬಿಳಿಯ ಸೀರೆಯನ್ನು ಉಡಿಸಿರುತ್ತಾರೆ. ಊರಲ್ಲಿರುವ ಮಲೆಯಮ್ಮನೂ ಹೀಗೆ ಕಟ್ಟಿಗೆಯಿಂದ ಮಾಡಿದ ಕಲಾಕೃತಿಯಲ್ಲಿ ಆದರೆ ಅದನ್ನು ಬಿಚ್ಚಿ ಮುಖವನ್ನು ಒಂದು ಆಯತಾಕಾರದ ಪೆಟ್ಟಿಗೆಯಲ್ಲಿರಿಸಿ ಉಳಿದ ಭಾಗವನ್ನು ಕಟ್ಟಿ ಸೂರಿಗೆ ಕಟ್ಟಿದ್ದಾರೆ. ಜಾತ್ರೆಯ ದಿನ ಜೋಡಿಸಿ ಇಡುತ್ತಾರೆ. ಜಾತ್ರೆಯಲ್ಲದೆ ಬೇರೆ ಸಮಯದಲ್ಲಿ ಪೂಜೆ ಮಾಡುವಾಗ ಪೆಟ್ಟಿಗೆಯ ಮುಚ್ಚಳ ತೆಗೆದು ಹಾಗೆಯೇ ಆ ಮುಖಕ್ಕೆ ಪೂಜೆ ಮಾಡುತ್ತಾರೆ.

ಮರ್ಲಹಳ್ಳಿಯಲ್ಲಿಯೂ ಮಲೆಯಮ್ಮನಿಗೆ ಊರಿನಲ್ಲಿ ಕುದುರೆ ಮೇಲೆ ಕುಳಿತ ಭಂಗಿಯ ಮಹಿಳೆಯ ಮರದಿಂದ ಮಾಡಿದ ಶಿಲ್ಪವಿದ್ದು ಅದನ್ನು ಪೂಜಿಸಲಾಗುತ್ತದೆ. ಹೊರಗುಡಿ ಅಂದರೆ ಎತ್ತಿನಗೂಡು ಇದ್ದ ಸ್ಥಳದಲ್ಲಿರುವುದು ಮಣ್ಣಿನದೇ ಮೂರ್ತಿ.

ಗೌರಸಮುದ್ರದ ಮಾರಮ್ಮ ದೊರೆಯರಮಂಚಿನಾಯಕನಿಂದಲೇ ಪ್ರತಿಷ್ಠಾಪಿಸಲ್ಪಟ್ಟ ಈಕೆ ಅಂದೇ ಸಕಲ ಸೌಲಭ್ಯಗಳನ್ನೂ ಪಡೆದು ವೈಭವ ಆಡಂಬರಗಳನ್ನು ಪಡೆದ ನಾಯಕಿ ಈಕೆ. ಮೂಲತಃ ಇಲ್ಲಿಯೂ ಇದ್ದದ್ದು ಬಿದಿರಿನ ಬುಟ್ಟಿಯೇ. ಸ್ವಲ್ಪ ಅಗಲವಾಗಿದ್ದು, ಈಗಲೂ ತುಮ್ಮಲಿಗೆ ಹೋಗುವಾಗ ಇದನ್ನೇ ಅಲಂಕರಿಸಿಕೊಂಡು ಕೊಂಡೊಯ್ಯಲಾಗುತ್ತದೆ. ಮೂಲತಃ ಗುಡಿಯಲ್ಲಿ ಈ ಬುಟ್ಟಿಗೆ ಕೆಂಪುಬಟ್ಟೆಯನ್ನು ಸುತ್ತಿ ಬೆಳ್ಳಿಯ ಡಾಬನ್ನು ಕಟ್ಟಿ ಅದಕ್ಕೆ ಸುತ್ತಲೂ ಬೆಳ್ಳಿಯ ಆಭರಣಗಳನ್ನೂ ಮುಂಭಾಗಕ್ಕೆ ಮುಖಪದ್ಮವನ್ನೂ ಇಟ್ಟು ಅಲಂಕರಿಸಲಾಗುತ್ತಿತ್ತು. ಈಗ ಜಾತ್ರೆಯ ದಿನ ಮಾತ್ರ ಈ ಅಲಂಕಾರ ಬುಟ್ಟಿಯೂ ಈಗ ಗುಡಿಯ ಮೂಲೆ ಸೇರಿರುತ್ತದೆ. ಬೆಳ್ಳಿಯ ಆದಿಶಕ್ತಿ ಸ್ವರೂಪಿಣಿಯ, ದೇವಿಯ ವಿಗ್ರಹವೊಂದನ್ನು ಮಾಡಿಸಲಾಗಿದ್ದು ಸೌಮ್ಯಕಳೆಯಿಂದ ಕೂಡಿದ, ಹಲವು ಕೈಗಳನ್ನು ಹೊಂದಿರುವ, ಸಿಂಗಾರರೂಢಳಾಗಿರುವ ಈಕೆಯೇ ಈಗ ಪೂಜೆಗೊಳ್ಳುತ್ತಿರುವ ನಾಯಕಿ. ಈಗ ಸಮುದಾಯದ ನಾಯಕಿಯಾಗಿದ್ದವಳು ಜಗಜ್ಜನನಿ ಆದಿಶಕ್ತಿಯ ರೂಪ ಧರಿಸಿದ್ದಾಳೆ.

**೩.೭.೪. ಕಥನಗಳ ಮತ್ತು ಆರಾಧನೆಗಳ ರೂಪಾಂತರ :**

ಜನಪದರು ಕಾಲಾಂತರದಲ್ಲಿ ತಮ್ಮ ನಡುವೆಯೇ ಇದ್ದ ಐತಿಹಾಸಿಕ ವ್ಯಕ್ತಿಯನ್ನು ಪುರಾಣೀಕೃತಗೊಳಿಸುತ್ತಾರೆ. ದೈವೀಕ ನೆಲೆಯಲ್ಲಿರಿಸಿ ಪೂಜಿಸುತ್ತಾ ಬರುತ್ತಾರೆ. ನಿರ್ದಿಷ್ಟ ಸಮುದಾಯಕ್ಕೆ ಸೇರಿದ ಸಾಂಸ್ಕೃತಿಕ ನಾಯಕರು ದೈವೀಕರಣಗೊಂಡಾಗ ಸಹಜವಾಗಿಯೇ ಅವರ ಬಗ್ಗೆ, ಅವರ ಯಶಸ್ಸಿಗೆ ಸಂಬಂಧಿಸಿದಂತೆ ಕಥನಗಳೂ ಕಟ್ಟಲ್ಪಟ್ಟು ಮೌಖಿಕ ಸಂಪ್ರದಾಯದಲ್ಲಿ ಅವು ಸಾಗಿ ಬರುತ್ತವೆ. ಆರಾಧನಾ ನೆಲೆಯಲ್ಲಿರುವವರು ಪುರುಷರಾಗಿದ್ದರೆ ಅವರಿಗೆ ಸಂಬಂಧಿಸಿದ ಕಥನಗಳು ಬದಲಾವಣೆಯಾಗುವ ಸಾಧ್ಯತೆಗಳು ಕಡಿಮೆ. ಸೂರಪ್ಪ 'ಸೂರಲಿಂಗೇಶ್ವರ', ಕಾಟಪ್ಪ, ಕಾಟಮಲಿಂಗೇಶ್ವರ ಹೀಗೆ ಹೆಸರುಗಳು ಶಿಷ್ಟವಾಗಬಹುದಷ್ಟೆ. ಆದರೆ ಹೀಗೆ ದೈವೀಕ ನೆಲೆಯಲ್ಲಿರುವವರು ಮಹಿಳೆಯರಾಗಿದ್ದರೆ ಒಟ್ಟಾಗಿ ಅವರನ್ನು 'ಮಾತೃದೇವತೆಯರನ್ನಾಗಿ' ಕಾಣುವುದೇ ಹೆಚ್ಚು. ಪ್ರತಿಯೊಂದು ನಾಡಿನ ಪ್ರಾಚೀನ ನಿವಾಸಿಗಳಲ್ಲೆಲ್ಲಾ ಒಂದಲ್ಲ ಒಂದು ರೀತಿಯಲ್ಲಿ ಮಾತೃದೇವತೆಯ ಉಪಾಸನೆ ನಡೆಯುತ್ತಲೇ ಇವೆ. ದ್ರಾವಿಡ ಮೂಲದ ಬುಡಕಟ್ಟು ಸಮಾಜಗಳಲ್ಲಿ ಮೂಲತಃ ಇದ್ದದ್ದು ಮಾತೃಮೂಲೀಯ ವ್ಯವಸ್ಥೆ. ಹಾಗಾಗಿ ತಾಯಿಯೇ ಅಲ್ಲಿ ಮುಖ್ಯ ಶ್ರೇಷ್ಠವಾದವಳು. ಆಹಾರ ಸಂಗ್ರಹಣೆ, ಜೋಪಾನ ಮಾಡುವುದು, ಕೃಷಿ ಮಾಡುವುದು, ಗೃಹಕೃತ್ಯ ನಿರ್ವಹಣೆ ಇವೆಲ್ಲವೂ ಒಂದು ಜ್ಞಾನಶಿಸ್ತಾಗಿದ್ದು ಇದನ್ನು ಹೊಂದಿರುವ ಸ್ತ್ರೀ ಸಹಜವಾಗಿಯೇ ಪೂಜ್ಯಸ್ಥಾನ ಪಡೆದಳು. ಹೆಣ್ಣಿನಲ್ಲಿ ಗುರುತಿಸಿದ ಅದ್ಭುತ ಸೃಷ್ಟಿ ಶಕ್ತಿ, ಪೋಷಣಾ ಶಕ್ತಿಗೆ ಮಾನ್ಯತೆ ಕೊಡುವ ಒಂದು ಪರಿಕಲ್ಪನೆಯೇ 'ಮಾತೃದೇವತಾರಾಧನೆ'. ಹೀಗಾಗಿ ಇಂತಹ ಪರಿಕಲ್ಪನೆ ಆರಾಧನೆಗೆ ಒಳಗಾಯಿತು. ಮ್ಯಾಸಬೇಡ ಸಮುದಾಯವೂ ಕೂಡ ಇದರಿಂದ ಹೊರತಲ್ಲ. ಬೇಟೆಯ ಮೂಲದಿಂದ ಕ್ರಮೇಣ

ಪಶುಪಾಲಕ ಸಮುದಾಯವಾಗಿ ಮಾರ್ಪಾಡಾದಾಗ ಪುರುಷದೇವತೆಗಳ ಆರಾಧನೆ ಮೊದಲಾಯಿತು. ಅಂದರೆ ಮೂಲತಃ ಇದ್ದದ್ದು ಅಮ್ಮನ ಆರಾಧನೆಯೇ. ಹೀಗೆ ಮಾತೃಶಕ್ತಿಯನ್ನಾಗಿ ಗ್ರಹಿಸಿಕೊಂಡಾಗ ಕ್ರಮೇಣ ಅವರ ಬಗ್ಗೆ ಮೂಲದಲ್ಲಿದ್ದ ಕಥನವೇ ಮರೆಯಾಗಿ ಮಾತೃದೇವತಾರಾಧನೆಗೆ ಸಂಬಂಧಿಸಿದ ಕಥನ ರೂಪುಗೊಳ್ಳುತ್ತವೆ. ತಮ್ಮ ೭೭ ಹಟ್ಟಿಗಳಿಗೆ ಈಕೆಯೇ ಕಾಪಾಡುವ ಶಕ್ತಿ, ಈಕೆಯೇ ಅಕ್ಕ. ಈಕೆಯೇ ಅಮ್ಮ ಎಂದು ಭಾವಿಸಿ ದೆಡ್ಡಲುಮಾರಮ್ಮ ಅಂದರೆ ತಮ್ಮ ಪೆಟ್ಟಿಗೆಗಳಿಗೆಲ್ಲಾ ಈಕೆಯೇ ತಾಯಿ ಎಂದು ಅಂದೇ 'ಅಕ್ಕರಾಯಮ್ಮ'ನನ್ನು ಆಕೆಯ ಸಮುದಾಯ ಅಭಿಮಾನದಿಂದ ಅವಸ್ಥಾಂತರಿಸಿತು. ಹಾಗಾಗಿಯೇ ವಡೇಲು ಎತ್ತುಗಳಿಗೆ ವಡೇಲುಮಾರಿ, ಪನಿಮುತ್ತೈಲ ಎತ್ತುಗಳಿಗೆ ಪದಿಮಾರಮ್ಮ ಅಥವಾ ಮುತ್ತಿಗಾರರ ಮಾರಮ್ಮ ಯರಮಂಚಿನಾಯಕನಿಗೆ ತಾನು ಕಟ್ಟಿದ ಕಂಪಳಕ್ಕೆ ಮಾರಮ್ಮ 'ತಾಯಿ'ಯಾಗಿ ರೂಪುಗೊಂಡರು.[೬೮] ಹಾಗಾಗಿಯೇ ಈ ನಂಬಿಕೆಗೆ ಪೂರಕವಾದ ಕಥನಗಳೇ ರೂಪುಗೊಂಡವು.

"ಹುತ್ತದ ಗದ್ದೆ ಮೇಲೇ ಹುಟ್ಟಿತು ಬೇವಿನಮರ, ಹುಟ್ಟುತ ತಲೆ ಕಾಯಿ ಜಡುದೇವೆ ॥ ಮಾರಕ್ಕ ಹುಟ್ಟಾಳು ಬೇವಿನ ಮರದಾಗೆ."

ಎಂದೇ ಸಾಮಾನ್ಯವಾಗಿ ಎಲ್ಲಾ ಕಥನಗಳೂ ಆರಂಭವಾಗುತ್ತವೆ. ಚಿನಮಜ್ಜನಹಳ್ಳಿಯಲ್ಲಿ ರಾಯಮ್ಮನನ್ನು ಕುರಿತು ಹಾಡುವ ಕಥನ ಮಾತ್ರ ಮೂಲಸ್ವರೂಪದಲ್ಲಿದೆ. 'ಹುತ್ತ' ನಮ್ಮಲ್ಲಿ ಸೃಷ್ಟಿಕ್ರಿಯೆಗೆ ಸಾಂಕೇತಿಕವಾಗಿ ಪೂಜೆಗೊಳ್ಳುತ್ತ ಬಂದಿರುವುದು ತಿಳಿದಿರುವ ಸಂಗತಿಯೇ ಆಗಿದೆ. ಮಾತೃದೇವತಾರಾಧನೆ ಇರುವ ಕಡೆಯಲ್ಲೆಲ್ಲಾ ಸಾಮಾನ್ಯವಾಗಿ ಈ ಆರಾಧನೆ ಇದೆ. ಹಾಗೆಯೇ ಬೇವು, ಆಲ, ಅರಳಿ, ಗೋಣಿ ಇವೆಲ್ಲಾ ಹಾಲನ್ನು ಒಸರುವ ಮರಗಳಾಗಿದ್ದು ಪೂಜೆಗೊಳ್ಳುತ್ತಾ ಬಂದಿವೆ. ಜಗತ್ತಿನ ಬೇರೆ ಬೇರೆ ಭಾಗದಲ್ಲೂ ಹೀಗೆ ಮರಗಳನ್ನು ಆರಾಧಿಸುವ ಪದ್ಧತಿ ಇದೆ. ಜೆ.ಜಿ. ಫ್ರೇಜರ್‌ರವರ "The Golden Bough" ಕೃತಿಯ ಒಂಬತ್ತನೆಯ ಅಧ್ಯಾಯದಲ್ಲಿ ಮರಗಳ ಆರಾಧನೆಯ ವಿವರ ಬರುತ್ತದೆ. ಯೂರೋಪ್‌ನಲ್ಲೂ 'ಓಕ್' ಮರವನ್ನು ಪವಿತ್ರಮರವೆಂದು ಪೂಜಿಸುತ್ತಿದ್ದ ವಿವರ ಸಿಗುತ್ತದೆ.

ಹಾಗೆಯೇ ನಾಯಕಿಯನ್ನು ದೈವೀಕರಣಗೊಳಿಸಿ, ಕೊಲ್ಲುವ, ಮತ್ತು ಕಾಪಾಡುವ ಶಕ್ತಿ ಅವಳು ಎಂದು ಪರಿಭಾವಿಸಿಕೊಂಡಾಗ ದುಷ್ಟ ಶಿಕ್ಷಕಿ, ಶಿಷ್ಟ ರಕ್ಷಕಿಯಾದಾಗ

"ಆಕೆ ಹೆಣಗಳಾ ತಿಂಬೋಳು ರಣದುಂಡಿ ಬರುತಾಳೆ, ಬೆಳಗಿ ತೋರಣದಾ ಗುಡಿಕಟ್ಟಿ ॥ ರಾಜ್ಯದ ಮೇಲೆ, ಹೆಣಗಳ ಸೂರಾಡುತಾ ಬರುತಾಳೆ"

ಇಂಥಾ ಯುದ್ಧದೇವತೆಯನ್ನು ಸಂಪ್ರೀತಗೊಳಿಸಲು ಕುರಿ ಕೋಣಗಳ ಬಲಿ ಆಗಲೇಬೇಕು. ಬುಡಕಟ್ಟಿನ ಸಂಸ್ಕೃತಿಗೆ ತಕ್ಕಂತೆ ತಮ್ಮ ಶ್ರಮದ ಪಾಲನ್ನು ಮೊದಲು ತಮ್ಮ ಇಷ್ಟದೈವಕ್ಕೆ ಅರ್ಪಿಸಿ ಬಳಸುವ ಕ್ರಮದೊಂದಿಗೆ 'ಬಲಿ'ಯನ್ನು ಕೊಡುವ ಪರಿಪಾಠವೂ ರೂಢಿಗೆ ಬಂದಿರಬಹುದು. ಇಲ್ಲಿ

---

೬೮ ಹೆಳವರು ಹೇಳಿದ ಕಥನಗಳಲ್ಲಿ ಖಂಡುಗ ಭಂಡಾರ, ಬೇವಿನಸೊಪ್ಪು, ಉಕ್ಕಿನ ಚಾಟಿಯೊಂದಿಗೆ ಮಾರಮ್ಮ ಅಕ್ಕರಾಯಮ್ಮನ ಹೆಸರಿನಲ್ಲಿ ಹುಟ್ಟಿದಳು ಎಂದೇ ಹೇಳುತ್ತಾರೆ.

ಕುರಿಯನ್ನು ಬಲಿ ಕೊಟ್ಟೆವು ಎನ್ನುವುದಿಲ್ಲ. ಬದಲಾಗಿ ಬೇಟೆ ಕಡಿದೆವು ಎನ್ನುತ್ತಾರೆ. ಮೂಲತಃ ಇವರಲ್ಲಿದ್ದ ಬೇಟೆಗಾರಿಕೆ, ಮಾಂಸಾಹಾರದ ಅಭ್ಯಾಸ ಅಮ್ಮನಿಗೂ ಈ ನೈವೇದ್ಯ ಮಾಡುವ ಹಾಗೆ ಮಾಡಿರಬಹುದು. ತಾನು ತಿನ್ನುವ ಆಹಾರವೇ ತನ್ನ ದೈವಕ್ಕೂ ಆಹಾರವಾಗಬೇಕಲ್ಲವೇ. ಹೀಗಾಗಿ

"ಅಲ್ಲಿಂದ ಬರುತಾವೆ ಹತ್ತು ಸಾವಿರ ಕೋಣ, ಸುತ್ತಗಟ್ಯಾವೆ ಪವಳೀಯ ॥ ಬಾಗಿಲು ಮುಂದೆ, ಒಪ್ಪಿಸಿ ಕೊಟ್ಟಾಳೆ ದೂತರಿಗೆ"

"ಮೂಡ್ಲಿಂದ ಬಂದಾವೆ ಮೂರುಸಾವಿರ ಕುರಿ, ಸಾಲುಗಟ್ಯಾವೆ ಪವುಳೀಯ ॥ ಬಾಗಿಲ ಮುಂದೆ, ಹಾರ ಕೊಟ್ಟಾಳೆ ದೂತರೀಗೆ"

"ಬೊಮ್ಮಳ ನಾಯಕನ ಹೊಟ್ಟೆಬಗದೈದಾಳೆ, ಮುತ್ಕಾಳರ ಹಲ್ಲು ಮುರುದಾಳೆ । ಮಾರಮ್ಮ, ದುಷ್ಟರಿಗೆ ಬುದ್ಧಿ ಕಲಿಸ್ಯಾಳೆ."

ಹೀಗೆ ಸಾಂಸ್ಕೃತಿಕ ನಾಯಕಿಯರು ಕ್ರಮೇಣ ಅಮ್ಮನಾಗಿ ಸಮೀಕರಣಗೊಂಡಾಗ ಅಮ್ಮನ ಆರಾಧನೆಯ ಇತರ ವಿವರಗಳೂ ಕಥನದಲ್ಲಿ ಸೇರುತ್ತವೆ. ಬಾಯಿಬೀಗ, ಬೇವಿನಸೀರೆಯಂತಹ ಆಚರಣೆಗಳೂ ಪ್ರವೇಶ ಮಾಡಿವೆ. ಪಶುಪಾಲನೆಯಿಂದ ಕೃಷಿಯ ಕಡೆ ಪರಿವರ್ತನೆಯಾಗಿರುವಾಗ ಮುಖ್ಯವಾಗಿ ಹಟ್ಟಿಯ, ಸಮುದಾಯದ ದೇವತೆ ಗ್ರಾಮ್ಯೀಕರಣಗೊಂಡು ಗ್ರಾಮದೇವತೆಯ ಸ್ಥಾನ ಪಡೆದಾಗ ಭೂಮಿಯ ಫಲವಂತಿಕೆಯನ್ನು ಹೆಚ್ಚಿಸಲು 'ಚರಗ ಚೆಲ್ಲುವ ಆಚರಣೆ', ಸಮೃದ್ಧಿ ದೇವತೆಯಾದಾಗ ಆಕೆಯ ಹೆಸರಿನಲ್ಲಿ ಹಸಿರಿನ ಗಿಡವನ್ನು ಪೂಜಿಸುವ ವಿಧಾನಗಳು ಬಳಕೆಗೆ ಬಂದಿವೆ ಎಂದು ಹೇಳಬಹುದು.

ಅನ್ಯಸಂಸ್ಕೃತಿಯ ಪರಿಣಾಮದಿಂದ ಅವಸ್ಥಾಂತರ : ಒಂದೋ ಎರಡೋ ಬ್ರಾಹ್ಮಣ ಕುಟುಂಬವಿದ್ದರೂ ವೈದಿಕ ಧರ್ಮದ ಪ್ರಭಾವ. ಅಂದರೆ ಅವರ ಮಾರ್ಗದರ್ಶನದ ಮೇರೆಗೆ ಪೂಜೆ ನಡೆಯುವ ಅನಿವಾರ್ಯ ಸೃಷ್ಟಿಯಾದಾಗ ಮಾರಿಪುರಾಣದ ಮಾರಿಯಂತೆ ಇಲ್ಲಿ ಸಾಂಸ್ಕೃತಿಕ ನಾಯಕಿಯೂ ಕೋಣ ಬಲಿಯ ನಂತರ ವಿಧವೆಯಾಗುತ್ತಾಳೆ. ಇದು ಅತ್ಯಂತ ಗಮನ ಸೆಳೆಯುವ ಬುಡಕಟ್ಟಿಗೆ ಹೊರತಾದ ಆಚರಣೆಯಾಗಿದೆ.

ಪುರುಷ ದೈವಗಳ ಪ್ರಭಾವ : ಪುರುಷ ದೈವಗಳ ಪ್ರಭಾವದಿಂದಾಗಿ ಸಾಂಸ್ಕೃತಿಕ ನಾಯಕಿಯರ ಚಿತ್ರಣವೇ ಬದಲಾಗುತ್ತದೆ. ಅನ್ಯಸಂಸ್ಕೃತಿಯಿಂದ ಆಮದಾಗಿ ಬಂದು ಇಲ್ಲಿ ಸ್ಥಿರನೆಲೆಯನ್ನು ಪಡೆದಿರುವ ಅಹೋಬಲಂ ನರಸಿಂಹಸ್ವಾಮಿ ಮ್ಯಾಸಮಂಡಲದಾದ್ಯಂತವಾಗಿ ಪೂಜೆಗೊಳ್ಳುತ್ತಿದೆ. ಇಲ್ಲಿ ಮ್ಯಾಸಮಂಡಲದ ತಿಳುವಳಿಕೆಯ ಪ್ರಕಾರವಾಗಿ ಅಕ್ಕರಾಯಮ್ಮನ ಮುತ್ತಿನ ಸೆರಗು ಇತರ ಕೆಲವು ಅಮೂಲ್ಯ ವಸ್ತುಗಳು ಈ ಅಲಿಕಿ ಓಬಳದೇವರ (ಹುಣಿಸೇಕಟ್ಟೆ) ಪಟ್ಟಿಯಲ್ಲಿ ಇದೆ. ಅಂದರೆ ಇಲ್ಲಿ ಪೂಜೆ ಸಲ್ಲಬೇಕಾದದು ವಿಶೇಷವಾಗಿ ರಾಯಮ್ಮನಿಗೆ. ಆದರೆ ಇಲ್ಲಿ ರಾಯಮ್ಮ ಪ್ರಾಧಾನ್ಯತೆಯನ್ನು ಪಡೆದೇ ಇಲ್ಲ. ಗುಗ್ಗರಿಹಬ್ಬ ಅಲಿಕೋಬಳದೇವರಿಗೆ, ಶ್ರಾವಣ ದೀಪಾವಳಿಯ ಪೂಜೆ ಎಲ್ಲವೂ ಅಲಿಕೋಬಳ ದೇವರಿಗೇ ಎನ್ನುತ್ತಾರೆ. ರಾಯಮ್ಮ ಇಲ್ಲಿ ಕಡೆಗಣಿಸಲ್ಪಟ್ಟಿದ್ದಾಳೆ ಎನಿಸುತ್ತದೆ.

ಹಾಗೆಯೇ ಇಂದು ಕೆಂಚವ್ವ ಕಾಮವ್ವರಿಗೆ ಮ್ಯಾಸಮಂಡಲದಲ್ಲಿ ಪೂಜೆ ಇಲ್ಲ. ಇವರು ಸಹಗಮನ ಮಾಡಿದ ಸ್ಥಳದಲ್ಲಿ ಸತೀಕಲ್ಲನ್ನು ನಿಲ್ಲಿಸಲಾಗಿದ್ದು ಇಲ್ಲಿ ಆ ಕಲ್ಲಿಗೆ ಪೂಜೆ ಸಲ್ಲಿಸುತ್ತಾರಾದರೂ ಸಮುದಾಯದಾದ್ಯಂತ ಪೂಜೆ ಇಲ್ಲ. ಸಾಕ್ಷಿಯಾಗಿ ಆ ಕಲ್ಲುಗಳು ಇದ್ದರೂ ಅವುಗಳ ಮುಂದೆಯೇ ಅವಕ್ಕೆ ಪೂಜೆ ಸಲ್ಲಿಸಿ ಇದು ಗಾದರಿಪಾಲನಾಯಕಗೆ ಸಂಬಂಧಿಸಿದ ಆಚರಣೆ ನಡೆಸುವುದು ವಿಚಿತ್ರವೆನಿಸುತ್ತದೆ. ಇತರ ಸಮುದಾಯ ಅಂದರೆ ಕಾಡುಗೊಲ್ಲರಲ್ಲಿ ಇಂತಹಸ್ತ್ರೀಯರನ್ನು ಸಾಂಸ್ಕೃತಿಕ ನಾಯಕಿಯರು ಎನ್ನುತ್ತಾರೆ. ಈರಗಾತಿಯರು ಎನ್ನುತ್ತಾರೆ.[೬೯] ಆದರೆ ಈ ಪದ ಈ ಸಮುದಾಯದಲ್ಲಿ ಬಳಕೆಯಾಗುತ್ತಿಲ್ಲ.

ಆದರೆ ಮಾತೃದೇವತಾರಾಧನೆಯನ್ನು ನಡೆಸುತ್ತಾ ಬಂದಿರುವ ಸಾಂಸ್ಕೃತಿಕ ನಾಯಕಿಯರನ್ನು ಮಾನ್ಯ ಮಾಡಿ ಆರಾಧಿಸುವ ಇತರ ಬುಡಕಟ್ಟುಗಳಿಗೆ, ಅಥವಾ ಜಗತ್ತಿಗೇ ಮಾದರಿಯಾಗಬಹುದಾದಂತಹ ಸ್ತ್ರೀಪರ ಕಾಳಜಿಯನ್ನು ಹೊಂದಿರುವ ಮ್ಯಾಸಬೇಡ ಸಮುದಾಯದಲ್ಲಿ ಕೆಲವೆಡೆ ಇಂತಹ ಅಭಾಸ ಕಂಡುಬಂದಿದ್ದು ಅಲ್ಲಿಯೂ ಪುರುಷ ರಾಜಕಾರಣ ಪ್ರಾರಂಭವಾಗಿರುವ ಸೂಚನೆಯಿದು ಎನಿಸುತ್ತದೆ.

ಒಟ್ಟಾರೆ ಅನೇಕ ಕಾರಣಗಳಿಂದಾಗಿ ಅವಸ್ಥಾಂತರಗೊಂಡಿರುವ ಸಾಂಸ್ಕೃತಿಕ ನಾಯಕಿಯರು ಅವಸ್ಥಾಂತರಗೊಂಡರೂ ಸಮುದಾಯದ ಸ್ಮರಣೆಯಲ್ಲಿ ಉಳಿದು ಆರಾಧಿಸಲ್ಪಡುತ್ತಿರುವುದು ಸತ್ಯ.

ಕೇವಲ ಸಮುದಾಯಕ್ಕೆ ಸೇರಿದ ಮಂದಿ ಮಾತ್ರವಲ್ಲದೆ ಊರ ಇತರರೆಲ್ಲಾ ಅಂದರೆ ಎಲ್ಲಾ ಜಾತಿಯವರೂ ಈಗ ಆರಾಧನೆ, ಆಚರಣೆಗಳಲ್ಲಿ ಪಾಲ್ಗೊಂಡು ಜಾತ್ರೆ ಏರ್ಪಾಡು ಮಾಡುತ್ತಾರೆ. ಅಂದರೆ ಸಮುದಾಯದ ನಾಯಕಿಯರು ಗ್ರಾಮದೇವತೆಗಳಲ್ಲದಿದ್ದರೂ ಹಟ್ಟಿಯ ದೇವತೆ ಹೀಗೆ ಗ್ರಾಮ್ಯೀಕರಣಗೊಂಡು ಊರ ಜನತೆ ಹಾಗೆ ಸ್ವೀಕರಿಸಿಕೊಂಡಿರುವುದು ಕಂಡುಬರುತ್ತದೆ. ಗೌರಸಮುದ್ರದ ಮಾರಮ್ಮ, ಜುಮ್ಮೋಬನಹಳ್ಳಿ ಮಲೆಯಮ್ಮ, ಹುಣಿಸೇಕಟ್ಟೆ, ದೇವರಹಳ್ಳಿಯಲ್ಲಿ ರಾಯಮ್ಮನ ಗುಗ್ಗರಿ ಹಬ್ಬದಲ್ಲಿ ತನ್ನ ಸಮುದಾಯ ಮಾತ್ರ ಆರಾಧನಾ ವಿಧಿಗಳಲ್ಲಿ ಪಾಲ್ಗೊಂಡರೆ ಜಾತ್ರೆ ಸಾರ್ವತ್ರಿಕವಾಗಿ ನಡೆಸಲ್ಪಡುತ್ತದೆ. ಕೆಲವು ವ್ಯಕ್ತಿಗಳು ತಮ್ಮ ತ್ಯಾಗ, ಪಾತಿವ್ರತ್ಯ, ಸದಾಚಾರ, ಸದ್ಗುಣ, ಪವಾಡಗಳಿಂದ ಮೆರೆದು ಸತ್ತ ಬಳಿಕ ಜನರಿಂದ ಗುಡಿಕಟ್ಟಿಸಿಕೊಳ್ಳುವ ದೇವತೆಗಳ ಮಟ್ಟಕ್ಕೇರಿದರು. ಮೊದಲು ಮನುಷ್ಯರಂತೆ ಬಾಳಿ, ಬದುಕಿ ಸತ್ತ ಬಳಿಕ ತಮ್ಮ ವಿಶಿಷ್ಟ ಗುಣಗಳಿಂದ ದೈವತ್ವಕ್ಕೇರಿದವರಿಗೆ ಮಾನವ ಮೂಲದ ಗ್ರಾಮದೇವತೆಗಳೆನ್ನುವರು ಎನ್ನುತ್ತಾರೆ. ಸಮಾಜಶಾಸ್ತ್ರಜ್ಞರಾದ ಪ್ರೊ. ಎಚ್.ವಿ. ನಾಗೇಶ್.[೭೦]

ಈ ಹೇಳಿಕೆ ಮ್ಯಾಸಬೇಡ ಸಮುದಾಯದ ನಾಯಕಿಯರಿಗೂ ಅನ್ವಯವಾಗುತ್ತದೆ. ನಾಯಕಿ ಗ್ರಾಮದೇವತೆಯಾದಾಗ ಆಚರಣೆಗಳೂ ನಮ್ಮ ಸಾಮಾಜಿಕ, ಆರ್ಥಿಕ ರಚನೆಯ ಸಂದರ್ಭಗಳಲ್ಲಿರುವ ವೈರುಧ್ಯಗಳಂತೆಯೇ ಅದನ್ನನುಸರಿಸಿಯೇ ನಡೆಯುತ್ತವೆ. ತಮ್ಮಟೆ ಬಾರಿಸುವ, ಉರುಮೆ, ಕಹಳೆಯುವರೆಲ್ಲಾ

---

೬೯ ಡಾ. ಮೀರ ಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲರ ಬುಡಕಟ್ಟು ವೀರರು. ಪು.೧೭೪

೭೦ ಡಾ. ವಾಲೀಕಾರ ಚೆನ್ನಣ್ಣನವರು, ಉಲ್ಲೇಖ, ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ. ೧೯೯೮.

ಕೆಳಜಾತಿಯವರೇ. ಮೌಢ್ಯವೇ ಕಾರಣವಾಗಿ ಬಳಕೆಗೆ ಬಂದ ಬಾಯಿಬೀಗ, ಬೇವಿನಸೀರೆ ಸೇವೆಯೂ ಕೆಳಜಾತಿಯವರದೇ.

**ಅವಸ್ಥಾಂತರಗಳಿಂದ ಆಗಿರುವ ಪರಿಣಾಮಗಳು :**

**ಅನಾನುಕೂಲ :**

ಬುಡಕಟ್ಟಿನ ನಾಯಕಿಯಾಗಿ ಆರಾಧನಾ ನೆಲೆಯಲ್ಲಿದ್ದಾಗ ಒಟ್ಟು ಸಮುದಾಯ ಒಂದೆಡೆ ಕಲೆಯುವಂತೆ ಮಾಡಿ ಭಾವೈಕ್ಯತೆ, ಪರಸ್ಪರ ಬಂಧುತ್ವ, ಸಹಬಾಳ್ವೆಗೆ ಅನುವು ಮಾಡಿ ಏಕಸೂತ್ರಕ್ಕೆ ಬರುವಂತೆ ಮಾಡುತ್ತಿದ್ದ ದೇವತೆಯಾಗಿರುತ್ತಿದ್ದಳು. ಈಗ ಊರಿಗೆ ಊರೇ ಸಂಭ್ರಮಿಸಿದರೂ ಎಲ್ಲೋ ಈಕೆ ತನ್ನ ತನವನ್ನು ಕಳೆದುಕೊಳ್ಳುತ್ತಿದ್ದಾಳೇನೋ ಎನಿಸುತ್ತದೆ. ಈಗ ಮಾರಮ್ಮ ಮುಜರಾಯಿ ಇಲಾಖೆಗೆ ಸೇರಿದ ಮೇಲಂತೂ ಈ ಬುಡಕಟ್ಟಿನ ನಂಬಿಕೆ, ಶ್ರದ್ಧೆ, ಆಚರಣೆಗಳನ್ನು ತಿಳಿಯದೇ ಇರುವ ಸರ್ಕಾರಿ ಅಧಿಕಾರಿಗಳು ತಮ್ಮ ಕೈಯಲ್ಲಿರುವ ಲಾಠಿಯಿಂದಲೇ ಎಲ್ಲವನ್ನೂ ನಿಯಂತ್ರಿಸ ಹೊರಟಾಗ ಸಮುದಾಯದ ಜನ ಗರ ಬಡಿದವರಂತೆ ಹಿಂದೆ ಸರಿಯುವ ಸಂದರ್ಭಗಳೂ ಇಲ್ಲದಿಲ್ಲ. ಬೆತ್ತಲೆ ಸೇವೆ, ಬಲಿ, ಬಾಯಿಬೀಗ ಹೀಗೆ ಅಂಧಶ್ರದ್ಧೆಯಿಂದ ಕೂಡಿದ ಸಲ್ಲದ ಸಂಪ್ರದಾಯಗಳು ಸೃಷ್ಟಿಗೊಂಡ ಜನತೆಯನ್ನು ಮೌಢ್ಯದ ಕಡೆ ತಳ್ಳುತ್ತಿವೆ.

**ಅನುಕೂಲ :**

ದೇವತೆಗೆ ಸಂಬಂಧಿಸಿದ ಆರಾಧನೆ, ಆಚರಣೆಗಳಿಗೆ ಇಡೀ ಊರಿಗೆ ಊರೇ ಸಿದ್ಧವಾಗುತ್ತದೆ. ಸಾಮರಸ್ಯದಿಂದ ಊರಿಗೆ ಊರೇ ಸಂಭ್ರಮಿಸುತ್ತದೆ. ಸುತ್ತಮುತ್ತಲ ಊರುಗಳಿಂದ ಜನ ಬರತೊಡಗಿದ ನಂತರ ಈ ಮಾರಮ್ಮನ ಮೂಲಕ ಈ ಗ್ರಾಮವೇ ಕರ್ನಾಟಕದ ಗಮನವನ್ನು ಸೆಳೆಯುವಷ್ಟು ಪ್ರಸಿದ್ಧಿ ಪಡೆದಿದೆ.

ವ್ಯವಹಾರಿಕ ದೃಷ್ಟಿಯಿಂದ ನೋಡಿದಾಗ ಜಾತ್ರೆಗೆ ಬರುವ ಅಪರಿಮಿತ ಜನಸಂಖ್ಯೆ ಕಾರಣವಾಗಿ ಹೊರಗಿನಿಂದ ಬಂದು ಅಂಗಡಿ ಮುಂಗಟ್ಟುಗಳನ್ನು ಹೂಡುವವರೂ ಮತ್ತು ವ್ಯಾಪಾರಿಗಳಿಗೂ ಒಂದೇ ದಿನದಲ್ಲಿ ಒಳ್ಳೆಯ ವ್ಯಾಪಾರವಾಗುತ್ತದೆ.

**೩.೭.೮. ಸಮುದಾಯದ ಮಹಿಳೆಯರ ಮೇಲೆ ಸಾಂಸ್ಕೃತಿಕ ನಾಯಕಿಯರ ಪ್ರಭಾವ**

ಸಮುದಾಯವೊಂದರಲ್ಲಿ ಸಾಂಸ್ಕೃತಿಕ ಬಂಧುತ್ವವೆಂಬುದು ಬಹಳ ಗಟ್ಟಿಯಾದುದಾಗಿರುತ್ತದೆ. ಮ್ಯಾಸಬೇಡ ಸಮುದಾಯದ ಸಾಂಸ್ಕೃತಿಕ ನಾಯಕಿಯರು ಇಂದಿನ ಮಹಿಳೆಯರೊಂದಿಗೆ ಇಂತಹ ಬಂಧುತ್ವವನ್ನು ಹೊಂದಿರುವವರು. ತಮ್ಮ ಬದುಕಿನ ಒಂದು ಭಾಗವನ್ನಾಗಿ ಈ ಬಂಧುಗಳನ್ನು ಇವರು ಸ್ವೀಕರಿಸಿದ್ದಾರೆಯೇ ಅಥವಾ ಕೇವಲ ಆರಾಧನಾ ನೆಲೆಯಲ್ಲಿರಿಸಿಕೊಂಡಿದ್ದಾರೆಯೇ ಎಂದು ಇಲ್ಲಿ ವಿಚಾರ ಮಾಡಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಿಂದ ಹುಡುಕ ಹೊರಟಾಗ ಸಮುದಾಯದಲ್ಲಿ ನಡೆದ ಕೆಲವು

ಘಟನೆಗಳ ಮೂಲಕವೇ ಇದನ್ನು ಕಂಡುಕೊಳ್ಳಬೇಕಾಗುತ್ತದೆ. ದಾನಸಾಲಿಯಮ್ಮ, ಅಕ್ಕರಾಯಮ್ಮನ ನಂತರದ ಪೀಳಿಗೆಯಲ್ಲಿ ಬಂದ ಮಲೆಯಮ್ಮ, ಗೌರಸಮುದ್ರದ ಮಾರಮ್ಮ, ಮಂಗಲು ದೇವಮ್ಮ, ಓಬವ್ವ ಇವರಿಗೆಲ್ಲಾ ಸಮುದಾಯದ ರಕ್ಷಣೆ, ಅದರ ಮುನ್ನಡೆಸುವಿಕೆ ಬಹಳ ಮುಖ್ಯವಾದ ಸಂಗತಿಯಾಗಿತ್ತು. ಇದರಿಂದಾಗಿ ಇವರು ತಮ್ಮ ವೈಯುಕ್ತಿಕವಾದ ಬದುಕಿಗಿಂತ ಸಮುದಾಯದ ರಕ್ಷಣೆಯ ಕೆಲಸಕ್ಕೇ ತಮ್ಮನ್ನು ಹೆಚ್ಚು ನಿಯೋಜಿಸಿಕೊಂಡರು. ಯಾವುದೇ ಬಿಕ್ಕಟ್ಟು ಸಮುದಾಯದಲ್ಲಿ ಉಂಟಾದಾಗಲೂ ರಾಯಮ್ಮ, ದಾನಸಾಲಿಯಮ್ಮನ ಪ್ರಭಾವ ಮತ್ತು ಅವರು ಮಾದರಿಗಳಾಗಿ ಉಳಿದದ್ದು. ಸಾಮಾನ್ಯವಾಗಿ ಯಾರಾದರೂ ಒಬ್ಬ ಮಹಿಳೆ ತನ್ನನ್ನು ಹೋರಾಟಗಳಲ್ಲಿ ತೊಡಗಿಸಿಕೊಳ್ಳುವುದೇ ವಿಶೇಷವೆನಿಸುತ್ತದೆ. ಆದರೆ ಈ ಸಮುದಾಯದಲ್ಲಿ ಕಂಡುಬರುವ ಅನೇಕ ಹೋರಾಟಗಾರ್ತಿಯರು ಸಮುದಾಯದ ಗುಣವೇ ಕಾರಣವಾಗಿ ರೂಪಿಸಲ್ಪಟ್ಟವರು. ಅಂದರೆ ಈ ಗುಣ ಅವರ ಸಹಜತೆ, ಆದಾಗ್ಯೂ ತಮ್ಮ ಹಿರಿಯರು ತಮಗೆ ಮಾದರಿಗಳಾಗಿದ್ದು ಈ ಆದರ್ಶವೇ ಇವರ ಸಹಜ ಗುಣವನ್ನು ಪುಷ್ಟೀಕರಿಸಿರಬಹುದೆನಿಸುತ್ತದೆ.

ಸಾಂಸ್ಕೃತಿಕ ನಾಯಕಿಯರ ಪ್ರಭಾವದಿಂದ ರೂಪುಗೊಂಡ ಸಮುದಾಯದ ಮಹಿಳೆಯು ಸಶಕ್ತತೆಯನ್ನು ಎರಡು ಘಟನೆಗಳ ಮೂಲಕ ವಿವರಿಸುವ ಪ್ರಯತ್ನ ಮಾಡಿದ್ದೇನೆ. 'ದೆಡ್ಡಿಸೂರನಾಯಕ' ರೊಪ್ಪಲ ಸೂರಿಯ ಮಗ. ಕಾರಣಾಂತರಗಳಿಂದ ರೊಪ್ಪಲಸೂರಿ ತನ್ನ ಬೇಡ ಗಂಪಳದಿಂದ ಪ್ರತ್ಯೇಕಗೊಂಡು ದೂರದಲ್ಲಿರುತ್ತಾನೆ. ಈತ ಪ್ರತಿನಿತ್ಯ ಸೂರ್ಯೋದಯದ ಸಂದರ್ಭದಲ್ಲಿ ಎತ್ತುಗಳನ್ನು ಹರಿಯಿಸಿ ಸೂರ್ಯನಿಗೆ ತನ್ನ ನೇಮವನ್ನು ನಡೆಸುತ್ತಿದ್ದು, ಎತ್ತುಗಳಿಲ್ಲದೆ ಒಂಟಿಯಾಗಿಯೇ ಪ್ರತ್ಯೇಕಗೊಂಡ ತನ್ನ ತಂದೆಯ ನೇಮ ತಪ್ಪಬಾರದೆಂದು ದೆಡ್ಡಿಸೂರನಾಯಕ ಏಳು ಎತ್ತುಗಳನ್ನು ತೆಗೆದುಕೊಂಡು ಯಾರಿಗೂ ಕಾಣದಂತೆ ತಂದೆಯ ನೇಮಕ್ಕೆ ಹೋಗಿ ಸಹಕರಿಸಿ ಹಿಂದಿರುಗಿ ಬರುತ್ತಾನೆ. ವಿಷಯ ತಿಳಿದ ಸಮುದಾಯದವರು ಆತನನ್ನು, ಆ ಎತ್ತುಗಳನ್ನು ತಮ್ಮಿಂದ ಪ್ರತ್ಯೇಕವಾಗಿಡುತ್ತಾರೆ. ಹೀಗೆ ತಮ್ಮವರಿಂದ ಬಹಿಷ್ಕಾರಕ್ಕೊಳಗಾಗಿ ದೆಡ್ಡಿಸೂರನಾಯಕ ಒಬ್ಬಂಟಿಯಾಗಿ ಅಲೆಯುತ್ತಿರುತ್ತಾನೆ. ತನ್ನ ಮಗನಿಗೆ ಬಂದ ಈ ಪರಿಸ್ಥಿತಿಯಿಂದ ನೊಂದ ರೊಪ್ಪಲ ಸೂರಿ 'ಮೂಗುಮಾಳಿಗೆ'['ಮೂಗುಮಾಳಿಗೆ', ಚಿತ್ರದುರ್ಗ ಜಿಲ್ಲೆಯ 'ತಳಕು' ಹೋಬಳಿ ಕೇಂದ್ರಬಳಿ ಇರುವ 'ಗರಣಿ' ಪರಿಸರದಲ್ಲಿ ಬರುತ್ತದೆ. ಮ್ಯಾಸರೆ ನೆಲೆಯಾಗಿದ್ದ ಇಲ್ಲಿ ಇಂದಿಗೂ 'ಮೂಗು ಮಾಳಿಗೆ' ಇದ್ದ ಕುರುಹುಗಳಿವೆ]ಯಲ್ಲಿ ನನ್ನ ಅಮೂಲ್ಯವಾದ ವಸ್ತುಗಳನ್ನು ಸಂಗ್ರಹಿಸಿಟ್ಟಿದ್ದೇನೆ. ಅವುಗಳನ್ನು ತೆಗೆದುಕೋ ನೀನು ಹೇಗಾದರೂ ಕುಲಸೇರಿಕೊಳ್ಳಬೇಕು. ಕಂಪಳ ದೇವರಹಟ್ಟಿ [ಕಂಪಳದೇವರಹಟ್ಟಿ ಬಳ್ಳಾರಿ ಜಿಲ್ಲೆ ಕೂಡ್ಲಿಗೆ ತಾಲ್ಲೂಕಿನಲ್ಲಿ ಬರುವ ಒಂದು ಮ್ಯಾಸಬೇಡರ ಹಟ್ಟಿ, ಮ್ಯಾಸರ ಪವಿತ್ರ ಆರಾಧನಾ ನೆಲೆಗಳಲ್ಲೊಂದು]ಯಲ್ಲಿ ನಿನ್ನ ಸೋದರತ್ತೆ ಇದ್ದಾಳೆ. ಆಕೆಯ ಬಳಿ ಹೋಗು, ನಿನಗೆ ಸಹಾಯ ಮಾಡುತ್ತಾಳೆ ಎಂದು ತಿಳಿಸುತ್ತಾನೆ. ಆಕೆ ಬಳಿಹೋಗಿ ತನ್ನ ಕಷ್ಟವನ್ನು ಈತ ಹೇಳಿಕೊಳ್ಳುತ್ತಾನೆ. ಆಗ ಆಕೆ ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿ ದೇವರನ್ನು ಹಟ್ಟಿಯಿಂದ ತೆಗೆದುಕೊಂಡು ಹೋಗಿ ಬಯಲಿನಲ್ಲಿ ಗುಡಿಸಲು ಕಟ್ಟಿ ಇರಿಸುತ್ತಾರೆ. ಅಗ ಪೂಜೆಯ ವೇಳೆಗೆ ಎತ್ತುಗಳನ್ನು ಹರಿಯಿಸುವ ಸಂದರ್ಭವಿದ್ದು ನೀನು ಸಮಯಕಾದು ನಿನ್ನ ಎತ್ತುಗಳನ್ನು ಜೊತೆಗೆ ಸೇರಿಸಿ ಓಡಿಸಿಬಿಡು. ಕಂಪಳದೇವರಿಗೇ

ನಿನ್ನ ಎತ್ತುಗಳನ್ನು ಜೊತೆಗೆ ಸೇರಿಸಿ ಓಡಿಸಿಬಿಡು. ಕಂಪಳದೇವರಿಗೇ ನಿನ್ನ ಎತ್ತುಗಳು ಹರಿದ ಮೇಲೆ ನೀನು ಕುಲಕ್ಕೆ ಸೇರಿಕೊಂಡಂತೆಯೇ ಎಂದು ಹೇಳುತ್ತಾಳೆ. ಈಕೆಯ ಸೂಚನೆಯ ಮೇರೆಗೆ ದೆಡ್ಡಿಸೂರನಾಯಕ ಎತ್ತುಗಳನ್ನು ಜೊತೆ ಸೇರಿಸಿ ಹರಿಸಿ ಬಿಡುತ್ತಾನೆ. ಇದರಿಂದ ಈತನ ತಮ್ಮಂದಿರಾದ ದೆಡ್ಡಿ ಕಾಮನಾಯಕ, ದೆಡ್ಡಿಯರಪಾಲನಾಯಕನಿಗೆ ಬೇಸರ ಬರುತ್ತದೆ. ಎತ್ತುಗಳನ್ನೇನೋ ಹರಿಸಿದ್ದಾನೆ. ಆದರೆ ಆತ ತನ್ನ ಹಸುಗಳಿಂದ ದೇವರಿಗೆ ತರುವ ಮೀಸಲನ್ನು ಒಳಗೆ ತೆಗೆದುಕೊಳ್ಳದೇ ತಡೆಯಬೇಕು ಎಂದು ಗುಡಿಸಲ ಬಾಗಿಲಲ್ಲಿ ಕಾವಲು ಕುಳಿತುಕೊಳ್ಳುತ್ತಾರೆ. ಮೀಸಲು ಬರದೆ ಪೂಜೆಯಾಗುವಂತಿಲ್ಲ. ಅವರು ತಮ್ಮ ಮೀಸಲನ್ನು ಕೊಟ್ಟಿಲ್ಲ. ಆಗ ಮತ್ತೆ ಈ ಸೋದರತ್ತೆ ದಡ್ಡಿ ಸೂರನಾಯಕನಿಗೆ ಗುಟ್ಟಾಗಿ ಹಿಂದಿನಿಂದ ಬಂದು ಮೀಸಲು ಕೊಡುವಂತೆ ಹೇಳಿಕಳುಹಿಸುತ್ತಾಳೆ. ಈ ಗುಡಿಯಲ್ಲಿ ಮಹಿಳೆಗೆ ಪ್ರವೇಶವಿಲ್ಲ. ಜನರೆಲ್ಲಾ ತಮ್ಮ ಗಮನವನ್ನು ಗುಡಿಯ ಮುಂಭಾಗದ ಕಡೆ ನೆಟ್ಟಿರುವಾಗ ಆಕೆ ಗುಡಿಯ ಹಿಂಭಾಗದಲ್ಲಿ ದೆಡ್ಡಿಸೂರ ನಾಯಕನ ಮೀಸಲು ಹಾಲು ಪಡೆದು ಗಂಡನ ಕೈಗೆ ಕೊಟ್ಟುಬಿಡುತ್ತಾಳೆ. ದೇವರಿಗೆ ನೈವೇದ್ಯ ಮಾಡಿ ಜೋರಾಗಿ ಭೇರಿಯನ್ನು ಬಾರಿಸುತ್ತಾರೆ. ಮುಂದೆ ಕಾದಿದ್ದ ಈ ಇಬ್ಬರು ತಬ್ಬಿಬ್ಬಾಗುವುದರಲ್ಲಿಯೇ ಭೇರಿಯ ಶಬ್ದ ಬಂದಾಕ್ಷಣ ನೇಮಕ್ಕೆ ಎತ್ತುಗಳನ್ನು ಕಿಲಾರಿಗಳು ಹರಿಯಿಸಿಯೇ ಬಿಡುತ್ತಾರೆ. ಅನಿವಾರ್ಯವಾಗಿ ಎಲ್ಲರೂ ಇದಕ್ಕೆ ತಲೆಭಾಗಬೇಕಾಗುತ್ತದೆ. ಹೀಗೆ ಕುಲಬಹಿಷ್ಕಾರಕ್ಕೆ ಒಳಗಾಗಿದ್ದ ತಮ್ಮವನನ್ನು ಕ್ಷಮಿಸಿ ಸೌಹಾರ್ದದಿಂದ ಕುಲಕ್ಕೆ ಸೇರಿಸಿಕೊಳ್ಳುವಲ್ಲಿ ಈಕೆಯ ಪಾತ್ರವೇ ಮುಖ್ಯವಾದುದಾಗುತ್ತದೆ. ಇಷ್ಟೇ ಅಲ್ಲದೆ ಮತ್ತೆ ಸೋದರಳಿಯರಾದ ದೆಡ್ಡಿ ಪಾಲನಾಯಕ ಮತ್ತು ದೆಡ್ಡಿ ಕಾಮನಾಯಕನನ್ನು ತನ್ನ ಮನೆಗೆ ಊಟಕ್ಕೆ ಆಮಂತ್ರಿಸಿ ಊಟ ಬಡಿಸುತ್ತಾಳೆ. ಮಾತಾಡುತ್ತಾ ಅವರ ಗಮನ ತನ್ನ ಕಡೆ ಇರುವಂತೆ ಮಾಡುತ್ತಾಳೆ. ಹಿಂದಿನಿಂದ ಅವರಿಗೆ ಕಾಣದಂತೆ ದೆಡ್ಡಿ ಸೂರನಾಯಕನಿಗೆ ಅವರ ಎಲೆಯಲ್ಲಿ ಕೈಯಿಡುವಂತೆ ಹೇಳಿರುತ್ತಾಳೆ. ಆತ ಹಾಗೆಯೇ ಮಾಡುತ್ತಾನೆ. ಯಾವುದೋ ಮೂರನೆಯ ಕೈ ತಮ್ಮ ಎಲೆಗೆ ಬರುವುದನ್ನು ಕಂಡ ಇವರು ತಿರುಗಿ ನೋಡಿದಾಗ ಅಲ್ಲಿ ತಮ್ಮ ಅಣ್ಣ ದಡ್ಡಿ ಸೂರನಾಯಕನನ್ನು ನೋಡುತ್ತಾರೆ. ಇದು ಸಾಂಕೇತಿಕವಾಗಿರಬಹುದು. ಕುಲಪದ್ಧತಿಗಳು ಬಿಗಿಯಾಗಿದ್ದ ಸಂದರ್ಭದಲ್ಲಿ, ಹೀಗೆ ಉಪಾಯದಿಂದ ಒಡನೆ ಅವರು ಊಟ ಮಾಡುವಂತೆ ಮಾಡಿ ಕಳೆದುಕೊಂಡಿದ್ದ ಬಾಂಧವ್ಯವನ್ನು ಮತ್ತೆ ಮರುಸ್ಥಾಪಿಸುವಲ್ಲಿ ಇವಳ ಬುದ್ಧಿವಂತಿಕೆ ಇರುವುದನ್ನು ಗಮನಿಸಬಹುದು. ಏನೇ ಆಗಲಿ ಸಮುದಾಯ ಒಡೆಯಬಾರದು. ಆದಷ್ಟು ಒಗ್ಗಟ್ಟು ಸ್ಥಾಪಿಸಬೇಕೆಂಬುದು ಇಲ್ಲಿಯ ಮಹಿಳೆಯರ ಗುಣ. ಇದಕ್ಕೆ ಕಾರಣವಾದದ್ದು ಮೂಲದ ಸ್ತ್ರೀರೂಪಿಗಳ ಪ್ರಭಾವವೇ ಹೊರತು ಬೇರೆ ಏನೂ ಅಲ್ಲ. ಇಂದಿಗೂ ದಡ್ಡಿಸೂರನಾಯಕನ ರೊಪ್ಪದಿಂದ ಬರುವ ಮೀಸಲನ್ನು ಗುಡಿಯ ಹಿಂಭಾಗದಿಂದಲೇ ತೆಗೆದು ಕೊಳ್ಳುತ್ತಾರೆ.

ಮ್ಯಾಸನಾಯಕರು ಬಹುಪಾಲು ವಾಸಿಸುವ ಹೀರೇಹಳ್ಳಿಯಲ್ಲಿ (ಚಿತ್ರದುರ್ಗ ಜಿಲ್ಲೆ) ಈ ಸಮುದಾಯದ ಸಾಂಸ್ಕೃತಿಕ ನಾಯಕರಲ್ಲೊಬ್ಬನಾದ' ದಡ್ಡಿ ಸೂರನಾಯಕನ ಗುಡಿ ಇದ್ದು ಬುಡಕಟ್ಟಿನ ಪದ್ಧತಿಗನುಗುಣವಾಗಿ ವರ್ಷಕ್ಕೊಮ್ಮೆ ಇಲ್ಲಿ ಗುಗ್ಗುರಿ ಹಬ್ಬವನ್ನು ಆಚರಿಸಲಾಗುತ್ತದೆ. ಆರಾಧನಾ

ವಿಧಿಗಳಿಗೆ ಸಂಬಂಧಿಸಿದಂತೆ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವವರ ಮಧ್ಯೆ ವಿರಸ ಉಂಟಾಗಿ, ವಿಷಯ ಬುಡಕಟ್ಟಿನ ನ್ಯಾಯಪಂಚಾಯಿತಿ ಹಂತವನ್ನು ಮೀರಿ ಕೋರ್ಟು, ಕಛೇರಿ ಎಂದು ವ್ಯಾಜ್ಯ ನಡೆಯುತ್ತಿತ್ತು. ಇಲ್ಲಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವವರೆಲ್ಲಾ ಸಾಂಸ್ಕೃತಿಕ ನಾಯಕನ ಪರಂಪರೆಯವರೇ ಆಗಿದ್ದು ಈ ಸಾಂಸ್ಕೃತಿಕ ಬಂಧುತ್ವ ಕಾರಣವಾಗಿಯೇ ದಾಯಾದಿ ಮತ್ಸರವೂ ಪರಸ್ಪರದಲ್ಲಿ ನಿರಂತರ ವಾಗಿರುತ್ತದೆ. ಜಾತ್ರೆಯ ದಿನ ಒಂದು ಗುಂಪಿನವರು ಕೋರ್ಟಿನಿಂದ Stay order ತಂದು ಜಾತ್ರೆಯ ಆರಾಧನೆಗೆ ತಡೆ ಒಡ್ಡಿದರು. ಸೋಮವಾರ ಜಾತ್ರೆ ಪ್ರಾರಂಭ. ಭಾನುವಾರವೇ ಗುಡಿಗೆ ಸುಣ್ಣ ಬಳಿಯಬೇಕು. ಗರ್ಭಗುಡಿಯಾದ ಗುಡಿಸಿಲಿಗೆ ಕೆಮ್ಮಣ್ಣು ಬಳಿಯಬೇಕು. ಇದಾವುದೂ ಆಗಿರಲಿಲ್ಲ. ಗುಡಿಯ ಸುತ್ತಲೂ ಪೊಲೀಸ್ ಪಹರೆ ಸೋಮವಾರ ಮಧ್ಯಾಹ್ನ ಸುಮಾರು ಒಂದು ಗಂಟೆಗೆ ಒಮ್ಮಲೇ ೨೦-೨೫ ಮಂದಿ ಮಹಿಳೆಯರು ಗುಡಿಗೆ ಸುಣ್ಣದ ನೀರನ್ನು ಎರಚಿ ಗುಡಿಯನ್ನು ಮಡಿ ಮಾಡುವ ಕೆಲಸ ಮುಗಿಸಿಯೇ ಬಿಟ್ಟರು. ಇವರು ಪೊಲೀಸ್ ವ್ಯವಸ್ಥೆಯೇ ತಬ್ಬಿಬ್ಬಾಗುವಂತೆ, ಗುಡಿಗೆ ಸುಣ್ಣಬಳಿದು ಕಾರ್ಯಕ್ರಮಕ್ಕೆ ಸಾಂಕೇತಿಕ ಚಾಲನೆ ನೀಡಿದರು. ಗರ್ಭಗುಡಿಯ ಬಾಗಿಲು ತೆರೆಯಲು ಸಾಧ್ಯವಾಗದಿದ್ದರೂ ಬಾಗಿಲಿಗೇ ಕಾಯಿ ಒಡೆದು ಸಾಂಕೇತಿಕವಾಗಿ ಪೂಜೆ ಸಲ್ಲಿಸಿಬಿಟ್ಟರು. ಅದೇ ಹಳ್ಳಿ ನನ್ನ ಹುಟ್ಟೂರಾಗಿದ್ದು, ಪ್ರತ್ಯಕ್ಷವಾಗಿ ಈ ಘಟನೆ ಕಂಡ ನನಗೆ ಆಗ ನೆನಪಿಗೆ ಬಂದದ್ದು ಬುಡಕಟ್ಟಿನ ಸಶಕ್ತ ಸ್ತ್ರೀರೂಪಗಳು. ನನಗಷ್ಟೇ ಅಲ್ಲ, ಅವರು ಪೊಲೀಸ್ ವ್ಯವಸ್ಥೆಗೆ ಕೊಡುತ್ತಿದ್ದ ಉತ್ತರವೂ ಅಷ್ಟೇ ಅರ್ಥಗರ್ಭಿತವಾಗಿತ್ತು. 'ಸ್ವಾಮಿ, ನೋಡಿ ಇದು ಅಣ್ಣತಮ್ಮಂದಿರ ಮಧ್ಯದ ಕಲಹ. ಅವರನ್ನು ಇಲ್ಲಿಗೆ ಬರಲು ಅವಕಾಶಕೊಡದೆ ನಿಮ್ಮ ಕಾನೂನು ಪಾಲಿಸಿ. ಆದರೆ ಈ ನಾಯಕನ ಪರಂಪರೆಯ ಹೆಣ್ಣುಮಕ್ಕಳು ನಾವು. ನಮಗೆ ಇದರಲ್ಲಿ ಯಾವುದೇ ಪಾಲುಗಾರಿಕೆಯಿಲ್ಲ. ಆದರೆ ತಂದೆಯ ಗುಡಿಯನ್ನು ಬೆಳಕು ಮಾಡುವುದು ನಮ್ಮ ಕರ್ತವ್ಯ. ಇದನ್ನು ಮಾಡಲು ಅವಕಾಶಕೊಡಿ ಎಂದು ಗಲಾಟೆಮಾಡುತ್ತಲೇ ಕೆಲಸ ಮುಂದುವರಿಸಿದರು. ಅವರು ನನ್ನ ಬಂಧುಗಳೇ ಆಗಿದ್ದು, ಅವರನ್ನು ನಾನು 'ನಿಮಗದೆಷ್ಟು ಧೈರ್ಯ? ಎಂದು ಪ್ರಶ್ನಿಸಿದಾಗ ಅವರ ಉತ್ತರ, 'ನಾವು ಅಕ್ಕರಾಯಮ್ಮಗಳು ನಾವು ಯಾರಿಗೂ ಹೆದರುವವರಲ್ಲ ಎಂಬುದಾಗಿತ್ತು. ಅಂದರೆ ಸಾಂಸ್ಕೃತಿಕ ನಾಯಕಿಯೊಬ್ಬಳು ಕೇವಲ ಆರಾಧನೆ-ಆಚರಣೆಗೆ ಮಾತ್ರ ಸೀಮಿತಗೊಳ್ಳದೆ ದೈನಂದಿನ ಸಂದರ್ಭಗಳಲ್ಲಿ ಪ್ರಭಾವಬೀರಿ ಜೀವಂತಿಕೆಯನ್ನು ಪಡೆಯುವ ಮತ್ತು ಸಮುದಾಯದ ಮಹಿಳೆಯರಿಗೆ ಶಕ್ತಿ ಸಂಚಯವಾಗುವ ಪರಿಗೆ ಈ ಘಟನೆ ಉದಾಹರಣೆಯಾಗಿತ್ತು. ಈ ಘಟನೆಗಳ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ನಾಯಕಿಯರ ಪ್ರಭಾವದಿಂದ ರೂಪುಗೊಂಡ ಇಲ್ಲಿಯ ಮಹಿಳೆಯ ಮನಸ್ಸುಗಳನ್ನು ಗುರುತಿಸಬಹುದಾಗಿದೆ. ದೆಡ್ಡಿಸೂರನಾಯಕನಿಗೇ ಸಂಬಂಧಿಸಿದ ಘಟನೆಗಳನ್ನು ನಾನು ಹೇಳುತ್ತಿರಲು ಕಾರಣ ನಾನು ಆ ನಾಯಕನ ಆರಾಧನೆಯ ನೆಲೆಯನ್ನೇ ಹುಟ್ಟೂರನ್ನಾಗಿ ಹೊಂದಿರುವವಳು. ಹಾಗಾಗಿ ಅಲ್ಲಿಯ ಆಚರಣೆ, ಆರಾಧನೆ, ನೋಡಿ, ಇತ್ತೀಚೆಗೆ ನಡೆದ ಘಟನೆಗಳನ್ನು ಕೇಳಿ, ಕಂಡು ಪಡೆದ ಅನುಭವವೇ ಕಾರಣವಾಗಿ ಅಲ್ಲಿಯ ಸ್ತ್ರೀ ಶಕ್ತಿಗಳನ್ನು ಅದಕ್ಕೆ ಕಾರಣವಾದ ಪ್ರೇರಣೆ, ಪ್ರಭಾವಗಳನ್ನು ಗ್ರಹಿಸಿರುತ್ತೇನೆ.

ಕೇವಲ ಧಾರ್ಮಿಕ ಆಚರಣೆಗಳಲ್ಲಿ ಮಾತ್ರವಲ್ಲದೆ ದೈನಂದಿನ ಬದುಕಿನಲ್ಲೂ ಸಹ ಈ ಸಮುದಾಯದ ಮಹಿಳೆಯರು ಪರಾಕ್ರಮಿಗಳು. ಆಲಸ್ಯ ಎಂಬುದು ಇಲ್ಲಿ ಸಾಮಾನ್ಯವಾಗಿ ಕಂಡುಬರದು. ಹೊಲ, ಗದ್ದೆ, ಹೈನುಗಾರಿಕೆ ಇತ್ಯಾದಿ ಕೆಲಸಗಳಲ್ಲಿ ತಮ್ಮನ್ನು ಸತತವಾಗಿ ತೊಡಗಿಸಿಕೊಂಡಿರುವವರು. ಶ್ರಮಜೀವಿಗಳಾಗಲು ಅವರ ಬದುಕಿನ ಅನಿವಾರ್ಯವೂ ಕಾರಣವಾಗಿರುವಂತೆ ಸಮುದಾಯದ ಮೂಲದಿಂದ ಪಡೆದ ಸಹಜ ಶಕ್ತಿ ಸ್ವಾಭಿಮಾನಿ ಗುಣವೂ ಕಾರಣವಾಗಿರುವುದರಲ್ಲಿ ಅನುಮಾನವೇ ಇಲ್ಲ. ಹೀಗೆ ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕಿಯರ ಗುಣಗಳು ಹಾಗೂ ಅವರು ನೀಡಿದ ಮಾದರಿಗಳಿಂದ ಶಕ್ತಿಸಂಚಯ ಮಾಡಿಕೊಳ್ಳುವ ಬಗೆಯನ್ನು ಇಂಥ ಸಮುದಾಯಗಳಿಗೆ ಸೇರಿದ, ಆಧುನಿಕ ಮಹಿಳೆಯರಲ್ಲೂ ಕಾಣಬಹುದು.

ಅಧ್ಯಾಯ-೪

# ಸಮಕಾಲೀನ ವ್ಯಾಸಬೇಡ ಮಹಿಳೆಯರ ಸ್ಥಿತಿಗತಿಗಳು

೪.೧. ಶೈಕ್ಷಣಿಕ

೪.೨. ರಾಜಕೀಯ

೪.೩. ಸಾಮಾಜಿಕ

ಅಧ್ಯಾಯ-4

# ಸಮಕಾಲೀನ ವ್ಯಾಸಬೇಡ ಮಹಿಳೆಯರ ಸ್ಥಿತಿಗತಿಗಳು

ಈ ಬುಡಕಟ್ಟಿನಲ್ಲಿ ಮೌಖಿಕವಾಗಿ ಸಾಗಿ ಬಂದಿರುವ ವಿವರಗಳು ಮತ್ತು ಸಾಂಸ್ಕೃತಿಕ ಆಚರಣೆಗಳ ಮೂಲಕ ಹಿಂದೆ ಮಹಿಳೆಗೆ ಈ ಸಮುದಾಯದಲ್ಲಿ ಪ್ರಾತಿನಿಧ್ಯವಿದ್ದ ಸಂಗತಿ ಸ್ಪಷ್ಟವಾಗುತ್ತದೆ. ಆದರೆ ಸಮುದಾಯದ ಮಹಿಳೆಯರ ಇಂದಿನ ಸ್ಥಿತಿಗತಿಗಳು ಹೇಗಿವೆ? ಎಂಬ ವಿಚಾರವೂ ಸಹ ಅಧ್ಯಯನದ ವ್ಯಾಪ್ತಿಯಲ್ಲಿ ಮುಖ್ಯವಾದ ಸಂಗತಿಯಾಗುತ್ತವೆ. ಒಟ್ಟು ಒಂದು ದೇಶದ ಪರಿಸ್ಥಿತಿ ಹೇಗಿದೆ? ಎಂಬ ವಿಚಾರ ಮಾಡ ಹೊರಟಾಗ ಆಯಾ ದೇಶದ ಜನರ ಜೀವನ ಮಟ್ಟ ಮುಖ್ಯವಾಗುತ್ತದೆ. 'ಜನ' ಎಂದಾಗ ಅಲ್ಲಿ ಪುರುಷ ಮತ್ತು ಮಹಿಳೆ ಇಬ್ಬರೂ ಸೇರುತ್ತಾರೆ. ಅಂದರೆ ದೇಶದ ಅಭಿವೃದ್ಧಿಯನ್ನು ಗಮನಿಸಿದಾಗ ಅಲ್ಲಿಯ ಮಹಿಳೆ ಮತ್ತು ಪುರುಷರ ಒಟ್ಟಾರೆ ಅಭಿವೃದ್ಧಿ ಎಂದೇ ನೋಡಬೇಕಾಗುತ್ತದೆ.

ಒಂದು ಸಮಾಜದ ಅಭಿವೃದ್ಧಿಯನ್ನು ಅಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಸಮೀಕ್ಷಿಸುವುದರ ಮೂಲಕ ಗುರುತಿಸಬಹುದು' ಎಂದು ಜೇಮ್ಸ್ ಮಿಲ್ ಹೇಳುತ್ತಾನೆ.[೬೧] ಅಭಿವೃದ್ಧಿಯ ವ್ಯಾಪ್ತಿಯಲ್ಲಿ ಆರ್ಥಿಕ ಸ್ಥಿತಿಗತಿಯನ್ನು ಮಾಪನವಾಗಿಟ್ಟುಕೊಂಡು ಗುರುತಿಸುವ ವಿಧಾನವೇ ಸಾಮಾನ್ಯವಾಗಿದೆ. ವ್ಯಕ್ತಿಯ ನೈತಿಕ ಮಟ್ಟ ಅರ್ಥಾತ್ ಸುಸಂಸ್ಕೃತವಾಗಿ ಆಲೋಚಿಸುವ ವಿಧಾನವೂ ಕೂಡ ಅಭಿವೃದ್ಧಿಯನ್ನು ಮಾಪನ ಮಾಡುವ ಅಳತೆಗೋಲುಗಳಲ್ಲಿ ಒಂದಾಗಬಹುದು. ಈ ಎಲ್ಲಾ ಮಾಪನಗಳ ಮೂಲಕ ಸಂವೀಕ್ಷಿಸಿ ಸಮುದಾಯವೊಂದರ ಮಹಿಳೆಯೂ ನೆಮ್ಮದಿಯಿಂದ ಬಾಳುವ ವ್ಯವಸ್ಥೆಯನ್ನು ಅಲ್ಲಿ ಗುರುತಿಸಲು ಸಾಧ್ಯವಾದರೆ ಅದು ಆ ಸಮುದಾಯದ ಆರೋಗ್ಯಕರ ಅಭಿವೃದ್ಧಿ ಎಂದು ಖಚಿತವಾಗಿ ಹೇಳಬಹುದು.

ಸಮುದಾಯದ ಮೌಖಿಕ ಚರಿತ್ರೆ ಕಟ್ಟಿಕೊಡುವ 'ಸ್ತ್ರೀ' ವಿನ್ಯಾಸವನ್ನು ಗಮನಿಸಿದಾಗ ಪಿತೃಪ್ರಾಧಾನ್ಯತೆಗಿಂತ ಮೊದಲಿನ ಸಹಜವಾದ ಸಮುದಾಯಿಕ ವ್ಯವಸ್ಥೆಯಲ್ಲಿ ಹೆಣ್ಣು ಸಮಾನ ಗೌರವ ಪಡೆದು ನೆಮ್ಮದಿಯಾಗಿಯೇ ಬಾಳುತ್ತಿದ್ದ ವಿವರಗಳು ದೊರೆಯುತ್ತವೆ. ಹಾಗೆಯೇ ಪಿತೃಪ್ರಾಧಾನ್ಯತೆಯೊಂದಿಗೆ ಮೊದಲುಗೊಂಡ ಖಾಸಗೀ ಆಸ್ತಿಯ ಪರಿಕಲ್ಪನೆ, ಇದರೊಂದಿಗೇ ಪ್ರಾರಂಭವಾದ ಆಳುವ ಮನೋಭಾವದ ಪುರುಷನ ಆಳ್ವಿಕೆಗೆ ಒಳಗಾದ ಮಹಿಳೆಯ ಅತಂತ್ರ ಸ್ಥಿತಿಯೂ ಅಲ್ಲಲ್ಲಿ ದಾಖಲಾಗಿದೆ. ಈ ದಾರಿಯಲ್ಲಿ ಸಾಗಿಬಂದ ಸಮುದಾಯದಲ್ಲಿ ಇಂದು ಮಹಿಳೆಯ ಸ್ಥಿತಿ ಹೇಗಿದೆ? ಎಂದು ವಿಚಾರ ಮಾಡ ಹೊರಟಾಗ ಕಂಡುಬರುವ ಸಂಗತಿಗಳು ಅನೇಕ. ಕಾರಣ-ಪರಿಣಾಮಗಳ ಹಿನ್ನೆಲೆಯಲ್ಲಿಯೇ ಇದನ್ನು ಗ್ರಹಿಸಬೇಕಾದ ಅಗತ್ಯವೂ ಇದೆ. ಹಿಂದೆಯೇ ಪ್ರಸ್ತಾಪ ಮಾಡಿದಂತೆ ಕಾಡಿನ ನೆಲೆ ಕಳೆದುಕೊಂಡು ಆ ಮೂಲಕ ಪಶುಪಾಲಕ ತನವನ್ನೂ ಕಳೆದುಕೊಂಡು ಸಮುದಾಯ ಅತಂತ್ರ ಸ್ಥಿತಿಗೆ ತಲುಪಿತು. ನಿಶ್ಚಿತವಾದ ಉದ್ಯೋಗವಿಲ್ಲದಂತಾಯಿತು. ಎಲ್ಲೋ ಒಬ್ಬಿಬ್ಬ ಬಲಿಷ್ಠರು ಕುರಿಸಾಕಾಣಿಕೆ, ಸ್ವತಃ

---

೬೧ ಕನ್ನಡಕ್ಕೆ - ಡಾ. ಎಚ್.ಎಸ್. ಶ್ರೀಮತಿ, ಆಧುನಿಕ ಭಾರತದಲ್ಲಿ ಮಹಿಳೆ, ಇಂಗ್ಲಿಷ್ ಮೂಲ ಜೆರಾಲ್ಡಿನ್ ಫೋರ್ಬ್ಸ್, ೨೦೦೧, ಪ್ರ.ಕ.ವಿ.ವಿ. ಹಂಪಿ, ಉಲ್ಲೇಖ, ಪು.೨೦.

ಭೂಮಿಯನ್ನು ಹೇಗೋ ಸಾಗುವಳಿ ಮಾಡಿಕೊಂಡು ಬದುಕಿದರೆ ಉಳಿದ ಮಂದಿ ಅನಿವಾರ್ಯಕ್ಕೆ ತಲೆಬಾಗಿ ಪರರ ಹೊಲಗದ್ದೆಗಳಲ್ಲಿ ದುಡಿಯುವ ಕೆಲಸಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳಬೇಕಾಯಿತು. ಒಂದೆ ಸಮುದಾಯದ ಪುರುಷರು ಪಶುಪಾಲಕತನ ಮಾಡುತ್ತಿದ್ದಾಗ ಹೈನುಗಾರಿಕೆಯ ಸಂಪೂರ್ಣ ಹೊಣೆಗಾರಿಕೆ ಮಹಿಳೆಯದೇ ಆಗಿರುತ್ತಿತ್ತು. ತನ್ನ ಆ ಉತ್ಪಾದನಾ ಬದುಕನ್ನು ಮಹಿಳೆಯೂ ಇಲ್ಲಿ ಕಳೆದುಕೊಂಡಳು. ಸ್ವಾಯತ್ತವಾಗಿ ಬದುಕುತ್ತಿದ್ದ ಸ್ವಾಭಿಮಾನಿ ಮಹಿಳೆಯರು ಪರರ ಹೊಲಗದ್ದೆಗಳಲ್ಲಿ ಕೃಷಿಕಾರ್ಮಿಕರಾಗಿ ದುಡಿಯಲೇಬೇಕಾದ ಅನಿವಾರ್ಯಕ್ಕೆ ತಲೆಬಾಗಿದರು. ತೀರಾ ಅತಂತ್ರ ಸ್ಥಿತಿಯಲ್ಲಿದ್ದ ಕುಟುಂಬಗಳ ಮಹಿಳೆಯರು ಕಾಡಿನ ಉತ್ಪನ್ನಗಳನ್ನು ಅಂದರೆ ಎಲೆ, ಕಟ್ಟಿಗೆ, ಕವಳೆ, ಕಾರೆಯ ಹಣ್ಣುಗಳನ್ನು ತಂದು ಊರಲ್ಲಿ ಮಾರಿ ಜೀವನ ನಿರ್ವಹಣೆ ಮಾಡುತ್ತಿದ್ದದ್ದೂ ಉಂಟು.

ಹಟ್ಟಿಗಳ ವಾಸದಿಂದ ಕ್ರಮೇಣ ಊರಿನಲ್ಲಿಯೂ ವಾಸ ಮೊದಲಾಯಿತು. ಕೆಲವು ಪ್ರತಿಷ್ಠಿತ 'ಪಾಳೆಯಗಾರಿಕೆ' ಮನೋಭಾವದ ಪುರುಷರು ಪರರ ಹೊಲಗದ್ದೆಗಳಲ್ಲಿ ದುಡಿಯಲಾರದೆ ಹೋದಾಗ ಬದುಕಿನ ಬಂಡಿಯನ್ನು ಹೆಣ್ಣೆ ಎಳೆದಂತಹ ಎಷ್ಟೋ ಉದಾಹರಣೆಗಳು ಕಣ್ಣಿಗೆ ಕಟ್ಟಿದಂತಿವೆ.

ಭಾರತದಲ್ಲಿ ಮಹಿಳೆಯರನ್ನು ಕುರಿತು ಆಲೋಚಿಸಿ ಅವರ ಅಭಿವೃದ್ಧಿಗಾಗಿ ಎಷ್ಟೋ ಯೋಜನೆಗಳನ್ನು ಸರ್ಕಾರ ಹಾಕಿಕೊಂಡಿತು. ಹೀಗೆ ಯೋಜನೆ ರೂಪಿಸುವಂತೆ ಹಕ್ಕೊತ್ತಾಯಗಳನ್ನು ಮಂಡಿಸಲಾಯಿತು. ಇದರ ಹಿಂದೆ ರಾಜರಾಮ ಮೋಹನರಾಯರು, ದಯಾನಂದ ಸರಸ್ವತಿ ಮುಂತಾದವರ ಸ್ತ್ರೀ ಪರ ಕಾಳಜಿಗಳು ಪ್ರಯತ್ನ ಮಾಡಿದ್ದವು. ಆದರೆ ಈ ಸುಧಾರಕರು ಯೋಚನೆ ಮಾಡಿದ್ದು ಯಾವ ಸ್ತ್ರೀಯರ ಬಗ್ಗೆ? ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ನಾಗರೀಕ ಎಂದು ಕರೆಸಿಕೊಂಡ ಜನಸಮುದಾಯದಲ್ಲಿದ್ದ ಮಹಿಳೆಯರೇ ಅವರ ಆಲೋಚನೆಗೆ ಸಿಲುಕಿದ್ದು ಇಲ್ಲಿ ವಾಸ್ತವ. ಬಾಲ್ಯವಿವಾಹ ತಪ್ಪಿಸುವ, ವಿಧವೆಯರ ಪರಿಸ್ಥಿತಿ ಸುಧಾರಿಸುವ, ಸತೀಪದ್ಧತಿಯನ್ನು ತಡೆಯುವ ಈ ಬಗೆಯ ಮುಂದುವರಿದ ವರ್ಗದಲ್ಲಿ ನಿಂತ ಮಹಿಳೆಯರ ಸಮಸ್ಯೆಗಳನ್ನು ನಿವಾರಿಸುವ ಕಡೆಗೆ ಗಮನ ಹರಿಸಿದ್ದರು. ಸರ್ಕಾರ ಇಲ್ಲಿ ಯೋಜನೆ, ನಿಯಮ ಎಂದು ರೂಪಿಸುವಾಗಲೂ ಈ ನೆಲೆಯ ಮಹಿಳೆಯರನ್ನು ಕುರಿತೇ ಆಲೋಚಿಸಿತು. ಆದರೆ ಅತ್ಯಂತ ದಯನೀಯ ಸ್ಥಿತಿಯಲ್ಲಿ ನಾಗರೀಕ ಸಮಾಜದ ಯಾವ ಸೌಲಭ್ಯಗಳನ್ನು ಪಡೆಯದ ಅತಂತ್ರ ಮಹಿಳೆಯರ ಬಗ್ಗೆ ಯೋಚನೆ ಮಾಡಿದ್ದು ಇಲ್ಲವೇ ಇಲ್ಲ ಎನ್ನಿಸುವಷ್ಟು ಕಡಿಮೆ ಪ್ರಮಾಣದಲ್ಲಿ. ಆಡಳಿತ ವ್ಯವಸ್ಥೆ ಬುಡಕಟ್ಟು ಸಮುದಾಯಗಳು ಎಂದು ಕೆಲವು ಸಮುದಾಯಗಳನ್ನು ಗುರುತಿಸಿ ಯೋಜನೆಗಳನ್ನು ರೂಪಿಸುವಾಗಲೂ ಆರಂಭದ ಹಂತದಲ್ಲಿ ಒಟ್ಟು ಸಮುದಾಯಕ್ಕೆ ಎಂದು ರೂಪಿಸಿತೇ ಹೊರತು ಅಲ್ಲಿನ ಮಹಿಳೆಯರಿಗೆ, ಪುರುಷರಿಗೆ ಎಂದು ಪ್ರತ್ಯೇಕವಾಗಿಯಲ್ಲ. ಯಾವುದೇ ಯೋಜನೆಯ ಮೊದಲ ಫಲಾನುಭವಿಗಳು ಪುರುಷರು ಎಂಬುದು ತಿಳಿದಿರುವ ಸಂಗತಿಯೇ ಆಗಿದೆ. ಈ ಹಿನ್ನೆಲೆಯಿಂದ ಈ ಮ್ಯಾಸಬೇಡ ಸಮುದಾಯದ ಇಂದಿನ ಮಹಿಳೆಯರ ಸ್ಥಿತಿಗತಿಗಳನ್ನು ಗುರುತಿಸಬೇಕಾದ ಅಗತ್ಯವಿದೆ.

**೪.೧. ಶೈಕ್ಷಣಿಕ :**

'ಪರಿಶಿಷ್ಟ ಪಂಗಡ' ಎಂದು ಸರ್ಕಾರ ಗುರುತಿಸಿ ಸೌಲಭ್ಯಗಳನ್ನು ನೀಡುವವರೆಗೂ ಈ ಸಮುದಾಯವಲ್ಲಿದ್ದ ಒಟ್ಟು ವಿದ್ಯಾವಂತರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು. ಇದರಲ್ಲಿ ಮಹಿಳೆಯರ

ಸಂಖ್ಯೆ ಎಂದರೆ ಅತ್ಯಂತ ಕಡಿಮೆ. ಅಕ್ಷರದ ಅರಿವಿನ ಮೂಲಕವೇ ಜ್ಞಾನದ ಪರಿಧಿಯನ್ನು ಆಳೆಯುವ ಮತ್ತು ಆ ಮೂಲಕ ಸ್ಥಾನಮಾನ, ಅವರಿಗೆ ಉದ್ಯೋಗ ನೀಡುವ ವ್ಯವಸ್ಥೆಯಡಿಯಲ್ಲಿ ಅಕ್ಷರದ ಅರಿವನ್ನೇ ಪಡೆಯದವರು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವುದು ಸಹಜವೇ ಆಗಿಬಿಟ್ಟಿತ್ತು. ದೈಹಿಕ ಶ್ರಮವನ್ನು ಬಂಡವಾಳವನ್ನಾಗಿ ಹೂಡಿ ದುಡಿಯುವ ಶ್ರಮಜೀವಿಗಳಿಗೆ ಇಂದಿಗೂ ನಮ್ಮಲ್ಲಿ ಸಲ್ಲುತ್ತಿರುವ ಮಾನ್ಯತೆ ಯಾವ ನೆಲೆಯದು ಎಂಬ ಸತ್ಯ ನಮಗೆಲ್ಲಾ ತಿಳಿದಿರುವುದೇ ಆಗಿದೆ.

'ಬೌದ್ಧಿಕ ಹಸಿವಿನಿಂದ ಸಾಯುವುದೂ ಮಹಿಳೆಯ ವಿಧಿ' ಎಂದು ಹೇಳುತ್ತಾಳೆ ಫ್ಲಾರೆನ್ಸ್ ನೈಟಿಂಗೇಲ್. ಇಲ್ಲಿ ಬೌದ್ಧಿಕತೆಯೆಂಬುದೂ ಕೂಡ ಅಕ್ಷರ ಜ್ಞಾನದ ಪರಿಧಿಯಲ್ಲಿಯೇ ವ್ಯಾಖ್ಯಾನಿಸಲ್ಪಡುವಂತಹುದು. ವ್ಯವಸ್ಥೆಯೊಂದು ಒದಗಿಸಿಕೊಡುವ ಯಾವುದೇ ಅನುಕೂಲವನ್ನು ಮೊದಲು ಅನುಭವಿಸುವವನೇ ಪುರುಷ. ಪುರುಷರೇ ಅಪರೂಪಕ್ಕೆಂಬಂತೆ ಅಕ್ಷರಸ್ಥನಾಗುತ್ತಿದ್ದ ಪರಿಸ್ಥಿತಿಯಲ್ಲಿ ಇನ್ನು ಮಹಿಳೆಯರ ಶಿಕ್ಷಣದ ಗುಣಮಟ್ಟ ದೂರದ ಮಾತೇ ಆಗಿದ್ದುದರಲ್ಲಿ ಅಚ್ಚರಿಯೇನೂ ಇಲ್ಲ. ಚಿತ್ರದುರ್ಗ ಜಿಲ್ಲೆ ಮ್ಯಾಸನಾಯಕರು ವ್ಯಾಪಕವಾಗಿ ನೆಲೆಸಿರುವ ಪ್ರದೇಶ. ಹಟ್ಟಿಗಳಿಂದ ಊರು, ಪಟ್ಟಣಗಳವರೆಗೆ ಇಂದು ಮ್ಯಾಸಬೇಡರ ವಾಸ್ತವ್ಯ ವಿಸ್ತರಿಸಲ್ಪಟ್ಟಿದೆ. ಕೇವಲ ಮ್ಯಾಸಬೇಡರು ಮಾತ್ರ ವಾಸಿಸುತ್ತಿರುವ ಒಂದೆರಡು ಹಳ್ಳಿಗಳ ಚಿತ್ರಣದ ಮೂಲಕ ಸಮುದಾಯದ ಮಹಿಳೆಯ ಸಾಕ್ಷರತೆಯ ಪ್ರಮಾಣವನ್ನು ಸುಮಾರಾಗಿ ಗ್ರಹಿಸಲು ಸಾಧ್ಯವಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಿವು.

**ಕಾಕಿಬೋರನಹಟ್ಟಿ :**

ಒಟ್ಟು ಜನಸಂಖ್ಯೆ 419. ಇದರಲ್ಲಿ 209 ಮಂದಿ ಗಂಡಸರು, 210 ಮಂದಿ ಹೆಂಗಸರಿದ್ದು ಇಪ್ಪತ್ತೈದು ವರ್ಷದ ಹಿಂದೆ ಇಲ್ಲಿ ಯಾರೂ ವಿದ್ಯಾವಂತರೇ ಇರಲಿಲ್ಲ. ಈಗಲೂ ಈ ಹಳ್ಳಿಯಲ್ಲಿ ಒಬ್ಬ ಪದವೀಧರರೂ ಇಲ್ಲ. ಎಸ್.ಎಸ್.ಎಲ್.ಸಿ.ಯವರೆಗೆ ಕಲಿತ ಐದು ಮಂದಿ ಗಂಡಸರು, ಇಬ್ಬರು ಮಹಿಳೆಯರಿದ್ದಾರೆ.

**ರುದ್ರಮ್ಮನಹಳ್ಳಿ :**

ಒಟ್ಟು ಜನಸಂಖ್ಯೆ 738. ಮಹಿಳೆಯರು 390, ಪುರುಷರು 470. 25 ವರ್ಷಗಳ ಹಿಂದೆ ಎಸ್.ಎಸ್.ಎಲ್.ಸಿ. ಯವರೆಗೆ ಯಾರೂ ಓದಿದವರಿರಲಿಲ್ಲ. ಈಗ ಒಟ್ಟು 4 ಮಂದಿ ಪದವೀಧರರು ಇದ್ದಾರೆ. ಇದರಲ್ಲಿ ಮಹಿಳೆಯರ ಸಂಖ್ಯೆ ಇಲ್ಲ. ಎಸ್.ಎಸ್.ಎಲ್.ಸಿ.ಯವರೆಗೆ 20 ಮಂದಿ ಕಲಿತವರಿದ್ದಾರೆ. ಹುಡುಗಿಯರು 4 ಮಂದಿ ಮಾತ್ರ.

**ಪಾಲನಕಾಯನ ಕೋಟೆ :**

ಒಟ್ಟು ಜನಸಂಖ್ಯೆ 533. ಪುರುಷರು 274, ಮಹಿಳೆಯರು 259. ಎಸ್.ಎಸ್.ಎಲ್.ಸಿ.ಯವರೆಗೆ ಕಲಿತ ಒಟ್ಟು 12 ಮಂದಿಯಲ್ಲಿ ಹುಡುಗರ ಸಂಖ್ಯೆ 9, ಹುಡುಗಿಯರ ಸಂಖ್ಯೆ 3 ಮಾತ್ರ. ಈ ಮೂರು ಹಳ್ಳಿಗಳಲ್ಲಿ ಶಾಲೆ ಇರುವುದು ಕೇವಲ 4ನೇ ತರಗತಿಯವರೆಗೆ ಮಾತ್ರ.

**ಹಿರೇಹಳ್ಳಿ :**

ನಾಯಕರ ಸಂಖ್ಯೆ 1722, ಪುರುಷರು 921, ಮಹಿಳೆಯರು 801 ಮಾತ್ರ.

ಮೇಲೆ ಸೂಚಿಸಿದ ಮೂರು ಹಳ್ಳಿಗಳೂ ಗ್ರಾಮಕ್ಕೆ ಮಜುರೆ ಗ್ರಾಮಗಳು. ಇದು ಸ್ವಲ್ಪ ಮುಂದುವರಿದಿರುವ ಪ್ರೌಢಶಾಲೆಯನ್ನು ಹೊಂದಿರುವ, ಸಾರಿಗೆ ಸೌಕರ್ಯ ಹೊಂದಿರುವ ಹಳ್ಳಿ, ಸರ್ಕಾರ ಪರಿಶಿಷ್ಟ ಪಂಗಡ ಎಂದು ಸಮುದಾಯವನ್ನು ಪರಿಗಣಿಸುವವರೆಗೆ ಈ ಹಳ್ಳಿಯಲ್ಲಿ ಒಟ್ಟು 6 ಮಂದಿ ಪದವೀಧರರಿದ್ದು, ಮಹಿಳೆಯರಲ್ಲಿ ಪದವೀಧರರೇ ಇರಲಿಲ್ಲ. ಅಂದಿನ ಸಂದರ್ಭದಲ್ಲಿ 7ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದ್ದ ಮಹಿಳೆಯರ ಸಂಖ್ಯೆ ಒಂದೆರಡು ಮಾತ್ರ. ಇತ್ತೀಚೆಗೆ ಅಂದರೆ ಸರ್ಕಾರ ನೀಡುತ್ತಿರುವ ಸೌಲಭ್ಯಗಳ ಕಾರಣದಿಂದಾಗಿ ಮತ್ತು ಪರಿಸರದ ಪ್ರಭಾವ ಕಾರಣವಾಗಿ ವಿದ್ಯಾವಂತರ ಸಂಖ್ಯೆ ಹೆಚ್ಚುತ್ತಿದೆ. ಈಗ ಇದೇ ಹಳ್ಳಿಯಲ್ಲಿ ನಾಯಕ ಸಮುದಾಯದಲ್ಲಿ ಪದವೀಧರರು ಸುಮಾರು 25 ಮಂದಿ ಇದ್ದಾರೆ. ಅದರಲ್ಲಿ ಮಹಿಳೆಯರ ಸಂಖ್ಯೆ 10 ಮಾತ್ರ. ಎಸ್.ಎಸ್.ಎಲ್.ಸಿ.ಯವರೆಗೆ ಸುಮಾರು 200 ಮಂದಿ ಹುಡುಗರು ಕಲಿತಿದ್ದರೆ, ಹುಡುಗಿಯರ ಸಂಖ್ಯೆ ಸುಮಾರು 75 ಮಂದಿ. ಈ ಒಂದು ಕಿರು ಸಮೀಕ್ಷೆಯ ಮೂಲಕ ಸ್ಪಷ್ಟವಾಗುವ ಸಂಗತಿಯೆಂದರೆ ಸಮುದಾಯದಲ್ಲಿ ಒಟ್ಟು ಕಲಿಕೆಯ ಪ್ರಮಾಣವೂ ಕಡಿಮೆ. ಅದರಲ್ಲಿ ಸಾಕ್ಷರ ಮಹಿಳೆಯರ ಸಂಖ್ಯೆ ಇನ್ನೂ ಕಡಿಮೆ ಎಂಬುದು. ಒಟ್ಟು ಸಮುದಾಯವನ್ನು ಸಂವೀಕ್ಷಿಸಿದಾಗ ಅಲ್ಲಲ್ಲಿ ಉತ್ತಮ ವಿದ್ಯಾಭ್ಯಾಸವನ್ನು ಪಡೆದ ಮಹಿಳೆಯರೂ ಇರುವುದು ಕಂಡುಬರುತ್ತದೆ. ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣ, ಸ್ನಾತಕೋತ್ತರ ಶಿಕ್ಷಣ ಪಡೆದು ಸಂಬಂಧಿಸಿದ ಕ್ಷೇತ್ರದಲ್ಲಿ ಸಿಕ್ಕ ಅವಕಾಶವನ್ನು ಬಳಸಿಕೊಂಡು ಹೊಣೆಗಾರಿಕೆಯಿಂದ ಕರ್ತವ್ಯ ನಿರ್ವಹಿಸುತ್ತಿರುವ ಈ ಮಹಿಳೆಯರನ್ನು ಕಂಡಾಗ ಸಮುದಾಯದ ಐತಿಹಾಸಿಕ ಸ್ತ್ರೀರೂಪಗಳನ್ನು ನೆನಪಿಸಿಕೊಳ್ಳುವಂತಾಗುತ್ತದೆ. ಅವಕಾಶ ಸಿಕ್ಕಾಗ ಸಮರ್ಥವಾಗಿ ಮಹಿಳೆಯರೂ ಕಾರ್ಯ ನಿರ್ವಹಿಸಬಲ್ಲರು ಎಂಬುದಕ್ಕೆ ಇವರು ಸಾಕ್ಷಿಯಾಗುತ್ತಾರೆ.

**೪.೨. ರಾಜಕೀಯ :**

ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದಾಗಿನ ಕಾಲಾವಧಿಯಲ್ಲಿ ವಿಧಾನಸಭೆಯ ಸದಸ್ಯರಾಗಿ ಮಂತ್ರಿಪದವಿ ವಹಿಸಿಕೊಂಡಿದ್ದ ಭೀಮಪ್ಪನಾಯಕರಿಂದ ಹಿಡಿದು ಇಂದಿನವರೆಗೆ ಸಮುದಾಯದಲ್ಲಿ ಸುಮಾರು ಹತ್ತು ಮಂದಿ ಧುರೀಣರು ಚಿತ್ರದುರ್ಗ, ಜಗಲೂರು, ಚಳ್ಳಕೆರೆ, ಮೊಳಕಾಲ್ಮುರು, ಕೂಡ್ಲಿಗೆ ಕ್ಷೇತ್ರಗಳಿಂದ ಆರಿಸಿ ಬಂದು ರಾಜ್ಯ ರಾಜಕೀಯ ಪ್ರವೇಶಿಸಿದ್ದಾರೆ. 1960ರ ದಶಕದಿಂದ ಇಂದಿನವರೆಗೆ ಸಾಗಿ ಬಂದ ಈ ರಾಜಕಾರಣದಲ್ಲಿ ಒಬ್ಬ ಮಹಿಳೆಯೂ ಕೂಡ ಈ ರಾಜ್ಯಮಟ್ಟದ ರಾಜಕಾರಣದಲ್ಲಿ ಪ್ರವೇಶಿಸಲು ಅವಕಾಶ ಪಡೆದಿಲ್ಲದಿರುವುದು ವಿಷಾದದ ಸಂಗತಿ. ಗ್ರಾಮಪಂಚಾಯಿತಿ, ತಾಲ್ಲೂಕು, ಜಿಲ್ಲಾ ಪಂಚಾಯಿತಿಗಳಲ್ಲಿ ಸರ್ಕಾರದ ಮೀಸಲಾತಿ ನೀತಿಯ ಅನ್ವಯ ಅನಿವಾರ್ಯವಾಗಿ ತಮ್ಮ ಮಹಿಳೆಯರನ್ನು ಪುರುಷರು ಕಣಕ್ಕಿಳಿಸಬೇಕಾಯಿತು. ಆದರೆ ಅವರ ಹಿಂದಿರುವ ಆಡಳಿತ ಶಕ್ತಿಗಳು ಪುರುಷರೇ. ರಾಜಕೀಯ ಪ್ರಾತಿನಿಧ್ಯವನ್ನು ಪಡೆದರೂ ಮಹಿಳೆ ಆಕೆಗೆ ಸಿಕ್ಕ ಈ ಅಧಿಕಾರ, ಸ್ಥಾನಮಾನವನ್ನು ವಾಸ್ತವವಾಗಿ

ಅನುಭವಿಸುವವನು ಆಕೆಯ ಗಂಡ, ಆಕೆ ಕೇವಲ ಇಲ್ಲಿ ನೆಪ ಮಾತ್ರದವಳಾಗುತ್ತಾಳೆ. ಇದು ಎಲ್ಲಾ ಸಮುದಾಯ ಜನಾಂಗಕ್ಕೂ ಅನ್ವಯವಾಗುತ್ತದೆ. ಮಾತೃರೂಪೀ ವ್ಯವಸ್ಥೆಯ ಮೂಲದಿಂದ ಸಾಗಿಬಂದಂತಹ, ನಿರ್ಣಾಯಕ ಸಂದರ್ಭಗಳಲ್ಲೆಲ್ಲಾ ಮಹಿಳೆಯೇ ಪಾತಿನಿಧಿಕ ಸ್ಥಾನದಲ್ಲಿ ನಿಂತು ನಿರ್ವಹಿಸಿದ ಇತಿಹಾಸದ ಹಿನ್ನೆಲೆ ಇದ್ದೂ ಸಹ ಈ ಮಹಿಳೆಯರು ಹೀಗೆ ಮೂಲೆಗುಂಪಾದುದಕ್ಕೆ ಕಾರಣ ನಿಚ್ಚಳವಾಗಿಯೇ ಇದೆ. ತನ್ನ ಸಾಮರ್ಥ್ಯವನ್ನು ಪ್ರಕಟ ಮಾಡಲು ಅವಳಿಗೆ ಅವಕಾಶವಿರಬೇಕು. ಇದಕ್ಕೆ ಬೇಕಾದ ಪೂರ್ವಸಿದ್ಧತೆಯನ್ನು (ಇದರಲ್ಲಿ ಶಿಕ್ಷಣವೂ ಒಂದು) ಅವಳಿಗೆ ಮಾಡಿಕೊಡುವ ವ್ಯವಸ್ಥೆ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಬೇಕು. ಬಹುಶಃ ಆಕೆಗೂ ಆಗ ಪರಾವಲಂಬಿತನ ಇರದು. ಆಕೆಯ ಅಧಿಕಾರವನ್ನು ತಾನು ಅನುಭವಿಸುವ ಪುರುಷನೂ ಸಹ ಇದರಿಂದ ದೂರ ಉಳಿಯುತ್ತಾನೆ. ಆರಂಭದ ಹಂತದಲ್ಲಿ ಮೀಸಲಾತಿಯನ್ನು ಕೊಡುವಾಗ ಮಹಿಳಾ ಮೀಸಲಾತಿಯ ಬಗ್ಗೆ ಸ್ಪಷ್ಟವಾಗಿ ಆಲೋಚಿಸದ ಕಾರಣ ಇಂತಹ ಅಂತರ ನಿರ್ಮಾಣವಾಗಿದೆಯಲ್ಲದೆ ಬೇರೆ ಏನೂ ಅಲ್ಲ.

**೪.೩. ಸಾಮಾಜಿಕ :**

ಶ್ರಮಜೀವನಕ್ಕೆ ಮತ್ತೊಂದು ಹೆಸರೇ ಈ ಸಮುದಾಯದ ಮಹಿಳೆಯರು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಒಂದಲ್ಲ ಒಂದು ರೀತಿಯಲ್ಲಿ ತಮ್ಮನ್ನು ಉದ್ಯೋಗದಲ್ಲಿ ತೊಡಗಿಸಿಕೊಂಡಿರುತ್ತಾರೆಯೇ ಹೊರತು ಅದರಿಂದ ವಿಮುಖರಾಗಿರುವುದೇ ಇಲ್ಲ. ಇಲ್ಲಿ ನಾನು ಹೆಚ್ಚು ಪ್ರಸ್ತಾಪ ಮಾಡುತ್ತಿರುವುದು ಗ್ರಾಮೀಣ ಮತ್ತು ಹಟ್ಟಿಯ ನೆಲೆಗಳಲ್ಲಿರುವ ಮಹಿಳೆಯರನ್ನು ಕುರಿತು. ಸ್ವಂತ ವ್ಯವಸಾಯವಾಗಿರಲಿ, ಪರರ ಹೊಲಗದ್ದೆಗಳಲ್ಲಿ ದುಡಿಯುವುದಾಗಲೀ, ಹೈನುಗಾರಿಕೆಯಾಗಲೀ, ಕೊನೆಗೆ ಸಂತೆಯಲ್ಲಿ ಒಂದಿಷ್ಟು ತರಕಾರಿ ಕೊಂಡು ಮಾರುವುದಾಗಲೀ ಹೀಗೆ ಒಟ್ಟಿನಲ್ಲಿ ಏನಾದರೂ ಉದ್ಯೋಗ ಮಾಡುವವಳೇ ಹೊರತು ನಿರುದ್ಯೋಗಿಯಾಗಿ ಕುಳಿತಿರುವುದಿಲ್ಲ.

ಕುಟುಂಬ ನಿರ್ವಹಣೆಗಾಗಿ ಈ ದುಡಿಮೆ ಅನಿವಾರ್ಯ ಎಂಬುದು ಒಂದು ಕಾರಣವಾದರೆ ಪರಂಪರಾನುಗತವಾಗಿ ಬಂದ ದುಡಿದು ಉಣ್ಣುವ ಸ್ವಾವಲಂಬಿತನವೂ ಇದಕ್ಕೆ ಹಿನ್ನೆಲೆಯಾಗಿದೆ. ಹೀಗೆ ಕುಟುಂಬದ ಒಟ್ಟು ಆದಾಯಕ್ಕೆ ತನ್ನ ಶ್ರಮವನ್ನು ಬಳಕೆ ಮಾಡುತ್ತಿರುವ ಮಹಿಳೆಗೆ ಆಯಾ ಕುಟುಂಬದಲ್ಲಿ ಯಾವ ಬಗೆಯ ಮಾನ್ಯತೆ ಇದೆ ಎಂದು ಹುಡುಕ ಹೊರಟಾಗ ಮತ್ತೆ ಅಲ್ಲಿಯೂ ಸಿಗುವುದು ಋಣಾತ್ಮಕ ಮತ್ತು ಧನಾತ್ಮಕ ಉತ್ತರಗಳೇ. ಕೆಲವು ಕಡೆ ಸಮಾನ ಪ್ರಾತಿನಿಧ್ಯ ದೊರಕಿದ್ದರೆ ಕೆಲವು ಕಡೆ ಯಾವುದೇ ಪ್ರಾತಿನಿಧ್ಯವಿಲ್ಲದೆ ಮೌನದಿಂದ ಆಕೆ ಮೂಲೆಗುಂಪಾಗಿರುವ ಪರಿಸ್ಥಿತಿಯೂ ಇದೆ.

ಪರಿಶ್ರಮದಿಂದ ಸಂಪಾದಿಸಿ ತಂದ ದಿನಗೂಲಿಯಲ್ಲಿಯೇ ಹೊಣೆಗೇಡಿ ಗಂಡನಿಗೆ ಬೀಡಿ ಭತ್ಯೆ, ಹೆಂಡದ ಭತ್ಯೆ ಕೊಟ್ಟು ಪ್ರತಿಯಾಗಿ ನಾಲ್ಕಾರು ಹೊಡೆತಗಳನ್ನು ಪಡೆಯುವ ಮಹಿಳೆಯರೂ ಇಲ್ಲದಿಲ್ಲ. ತನ್ನ ಇತಿಹಾಸದಲ್ಲಿ ಸಶಕ್ತ ಸ್ತ್ರೀರೂಪಗಳನ್ನು ಹೊಂದಿದ್ದ ಸಮುದಾಯದ ಮಹಿಳೆಯರು ಇಂದು ಅದೇ ಸಶಕ್ತ ಗುಣಕಾರಣವಾಗಿ ತಮಗಾದ ಅನ್ಯಾಯವನ್ನು ಪ್ರತಿರೋಧಿಸುತ್ತಿಲ್ಲವೇ? ಎಂದಾಗ ಇಲ್ಲ ಎಂದೇ ಹೇಳಬೇಕಾಗುತ್ತದೆ. ಕುಟುಂಬದ ಸ್ವಾಸ್ಥ್ಯವನ್ನು ಕಾಪಾಡುವ ದೃಷ್ಟಿಯಿಂದ ಹೊಂದಾಣಿಕೆಯ ಸೂತ್ರಕ್ಕೇ

ಕಟ್ಟುಬಿದ್ದು ಜೀವನ ನಡೆಸುವುದೇ ಸಾಮಾನ್ಯವಾಗಿ ಕಂಡುಬರುವ ಸ್ಥಿತಿ. ಬಹುತೇಕ ಎಲ್ಲಾ ಸಮಾಜದ ಪುರುಷ ಪ್ರಧಾನ ಕುಟುಂಬಗಳ ಚಿತ್ರಣ ಇದೇ ಆಗಿದೆ.

ಉತ್ಪಾದನಾ ವ್ಯವಸ್ಥೆಯೇ ಕಾರಣವಾಗಿ ತಾರತಮ್ಯ ಬೇರೂರಿರುವುದು ಸಾಮಾನ್ಯವಾಗಿ ಎಲ್ಲೆಡೆ ಕೇಳಿಬರುವ ಮಾತು. "ಸ್ತ್ರೀ ವಿಮೋಚನೆ ಜಗತ್ತಿನಾದ್ಯಂತ ಶ್ರಮಶಕ್ತಿಯನ್ನು ಅವಲಂಬಿಸಿದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಒಂದು ಮಹತ್ತರ ಕ್ರಾಂತಿಯಾದಾಗ ಮಾತ್ರ ಅವಳ ಸ್ಥಿತಿಗತಿ ಬದಲಾಗಲು ಸಾಧ್ಯ. ಉತ್ಪಾದನಾ ಸಾಧನಗಳ ಖಾಸಗೀ ಒಡೆತನ ತೊಲಗಿ, ಅವುಗಳ ಸಾಮಾಜೀಕರಣ ಪೂರ್ಣಗೊಂಡಾಗ ಮಹಿಳಾ ವಿಮೋಚನೆಯ ಕನಸು ನನಸಾಗಬಲ್ಲದು" ಎನ್ನುತ್ತಾಳೆ ಸಿಮೋನ್ ಡಿ ಬೋವಾ.[೨]

**ಅಕ್ಷರಸ್ಥ ಮಹಿಳೆಯ ಸ್ಥಿತಿ :**

ಸಮುದಾಯದಲ್ಲಿ ಸಾಕ್ಷರತೆಯ ಬಗ್ಗೆ ಇತ್ತೀಚೆಗೆ ವ್ಯಾಪಕವಾಗಿ ತಿಳುವಳಿಕೆ ಮೂಡುತ್ತಿದೆ. ಅನ್ಯ ಜಾತಿಗಳಿಗೆ ಹೋಲಿಸಿದಾಗ ಉನ್ನತ ವಿದ್ಯಾಭ್ಯಾಸ ಮಾಡುವವರ ಒಟ್ಟು ಸಂಖ್ಯೆ ಸಮುದಾಯದಲ್ಲಿ ಕಡಿಮೆಯೇ. ಇದರಲ್ಲಿ ಉನ್ನತ ವಿದ್ಯಾಭ್ಯಾಸ ಮಾಡಿರುವ ಮಹಿಳೆಯರ ಸಂಖ್ಯೆ ಇನ್ನೂ ಕಡಿಮೆಯೇ. ಈ ಕಾರಣದಿಂದಾಗಿ ಇಂತಹ ಮಹಿಳೆಯರನ್ನು ಸಮುದಾಯ ಸಹಜವಾಗಿಯೇ ಅಭಿಮಾನದಿಂದಲೇ ಕಾಣುತ್ತಿದೆ. ಔದ್ಯೋಗಿಕ ನೆಲೆ ಮತ್ತು ಆರ್ಥಿಕ ಸಬಲೀಕರಣ ಕಾರಣವಾಗಿ ಕುಟುಂಬ ಹಾಗೂ ಸಮುದಾಯದಲ್ಲಿ ಮಾನ್ಯತೆಯನ್ನೂ ಪಡೆದಿದ್ದಾರೆ. ಆದಾಗ್ಯೂ ಅವರ ಸ್ಥಾನ ಎರಡನೆಯದೇ ಹೊರತು ಸಮಾನವಾದದ್ದಲ್ಲ. ಜೊತೆಗೆ ಇವರು ಸಮುದಾಯದ ಸಂಪರ್ಕವನ್ನೂ ಉಳಿಸಿಕೊಂಡು ಮುಖ್ಯವಾಹಿನಿಯೊಂದಿಗೆ ಬೆರೆಯುವ ಪ್ರಯತ್ನವನ್ನೂ ಮಾಡುತ್ತಿದ್ದಾರೆ.

ಈ ಬುಡಕಟ್ಟಿನ ಅನಕ್ಷರಸ್ಥ ಮಹಿಳೆಯರ ಸೃಜನಶೀಲತೆಯನ್ನು ಕುರಿತು ಇಲ್ಲಿ ವಿಚಾರ ಮಾಡಲೇಬೇಕಾಗುತ್ತದೆ. ಕಟ್ಟುವ ಜಾಣ್ಮೆ, ಕಲ್ಪನಾಚಾತುರ್ಯವಿರುವ ವ್ಯಕ್ತಿಯ ಮನಸ್ಸು ಭಾಷಿಕ ಮಾಧ್ಯಮದ ಮೂಲಕ ಅನಾವರಣಗೊಂಡಾಗ ಅದು ಸಾಹಿತ್ಯ ಎನಿಸಿಕೊಳ್ಳುತ್ತದೆ. ಇದರಿಂದ ಓದುಗನಿಗೆ ತಾನು ಅದುವರೆಗೂ ಕಾಣದ ಲೋಕದ ಪರಿಚಯವಾಗುತ್ತದೆ. ಕಂಡಿದ್ದರೆ ಒಂದು ಹೊಸ ನೋಟ ಸಾಧ್ಯವಾಗುತ್ತದೆ.

ರಾಜಾಶ್ರಯಗಳಲ್ಲಿ ಸೃಷ್ಟಿಯಾಗುತ್ತಿದ್ದ ಸಾಹಿತ್ಯಕ್ಕೆ ಉತ್ತಮ ಪೋಷಣೆ ಹಾಗೂ ಪ್ರಚಾರ ಸಿಗುತ್ತಿತ್ತು. ಆದರೆ ಬುಡಕಟ್ಟಿನ ಸಾಹಿತ್ಯ ಹೀಗೆ ಶ್ರೀಮಂತ ಸಂಸ್ಕೃತಿಯಲ್ಲಿ ಸೃಷ್ಟಿಯಾದುದಲ್ಲ. ಬದಲಾಗಿ ಶ್ರಮಿಕ ನೆಲೆಯಲ್ಲಿ ಹುಟ್ಟಿದ್ದು. ಹಾಗೆಯೇ ಆರಾಧನಾ ನೆಲೆಗಳಲ್ಲಿ ಪೋಷಿಸಲ್ಪಟ್ಟಿದ್ದು. ಇಲ್ಲಿ ಪೋಷಿಸಿದ್ದು ಸಂಬಂಧಿಸಿದ ಬುಡಕಟ್ಟಿನ, ನಾಯಕ/ನಾಯಕಿಯ ಬಗೆಗಿನ ಅಭಿಮಾನ ಮತ್ತು ಭಕ್ತಿ.

ನಾಯಕ/ನಾಯಕಿಯರ ಕಥನಗಳನ್ನು ಕಟ್ಟಿ ಹಾಡುವ ಮಹಿಳೆಯರು ಇದರೊಂದಿಗೆ ಸಮುದಾಯದ ಸಾಂಸ್ಕೃತಿಕ ಆರಾಧನಾ ವಿಧಿ ವಿಧಾನಗಳನ್ನು ಮಾತ್ರವಲ್ಲದೆ ಇಡೀ ಒಂದು ಹಳ್ಳಿ ಈ ಆರಾಧನಾ

---

[೨] ಸಿಮೋನ್‌ದ ಬೋವಾ, ಕೃತಿ The Second Sex, Quotes on woman by Internet

ಕ್ರಿಯೆಗಳಲ್ಲಿ ಹೇಗೆ ಪಾಲ್ಗೊಳ್ಳುತ್ತದೆ. ದೇವಸ್ಥಾನ ಕಟ್ಟುವ ಕೆಲಸದಿಂದ ಜಾತ್ರೆಯನ್ನು ಒಳಗೊಂಡಂತೆ ಎಲ್ಲಾ ವಿವರಗಳನ್ನು ಕಟ್ಟಿ ಕೊಡುವಲ್ಲಿ ಅವರ ವಿಶಿಷ್ಟವಾದ ಬೌದ್ಧಿಕತೆ ಕೆಲಸ ಮಾಡುತ್ತದೆ. ಒಟ್ಟು ಸಮಾಜದ ವಿನ್ಯಾಸವನ್ನೇ ಇವರು ತಮ್ಮ ಕಥನಗಳ ಮೂಲಕ ಕಟ್ಟಿಕೊಡುತ್ತಾರೆ. ಮಹಿಳೆ ಕೇವಲ ಮಹಿಳೆಯರನ್ನು ಕುರಿತ ಸಂವೇದನೆಗಳಿಗೆ ಮಾತ್ರ ಮೂರ್ತರೂಪ ಕೊಡಬಲ್ಲಳು. ಅಲ್ಲಿಂದ ಹೊರಬಂದು ಒಟ್ಟು ಸಮಾಜದ ಎಲ್ಲಾ ಸಂಗತಿಗಳ ಬಗ್ಗೆ ಚರ್ಚಿಸುವ ನೆಲೆಯಲ್ಲಿ ಅವಳ ಬೌದ್ಧಿಕತೆ ಕೆಲಸ ಮಾಡಬೇಕು ಎಂಬ ಹೇಳಿಕೆಗಳ ಹಿನ್ನೆಲೆಯಲ್ಲಿ ಈ ಯಾವ ಚರ್ಚೆ, ವಾದಗಳ ಗಂಧ ಗಾಳಿಯ ಸೋಂಕೂ ಇಲ್ಲದ ಈ ಬುಡಕಟ್ಟು ಮಹಿಳೆಯರ ಕಥನಗಳ ವ್ಯಾಪ್ತಿ ಗಮನ ಸೆಳೆಯುತ್ತದೆ.

ಶಿಷ್ಟ ಮಹಿಳೆ ತನಗೆ ದಕ್ಕುವ ಆಧುನಿಕ ಶಿಕ್ಷಣ, ಹೊರ ಜಗತ್ತಿನ ಸಂಪರ್ಕಗಳಿಂದ ಗಳಿಸುವ ತಿಳುವಳಿಕೆಯಿಂದ ತನ್ನ ಬರವಣಿಗೆಯನ್ನು ಶಕ್ತಿಯುತಗೊಳಿಸಿಕೊಳ್ಳಬಲ್ಲಳು. ಆದರೆ ಇದ್ಯಾವುದೂ ಇಲ್ಲದೆ ತನ್ನ ಸಹಜವಾದ ಗ್ರಹಿಕೆಯಿಂದ ಇದೆಲ್ಲವನ್ನೂ ಸಾಧ್ಯ ಮಾಡಿಕೊಂಡ ಇವರ ಸಾಮರ್ಥ್ಯವನ್ನು ಮಾನ್ಯ ಮಾಡಲೇಬೇಕಾಗುತ್ತದೆ. ಒಟ್ಟಾರೆ ಸಮುದಾಯದ ಇತಿಹಾಸ, ಸಂಸ್ಕೃತಿ ಇಂದು ಉಳಿದು ಬಂದಿರುವುದೇ ಇವರ ಮೂಲಕ. ಇದನ್ನು ಇಂದಿಗೂ ಮುಂದುವರಿಸಿಕೊಂಡು ಬರುತ್ತಿರುವವರು ಅನಕ್ಷರಸ್ಥ ಮಹಿಳೆಯರೇ. ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಇಂತಹ ಕಥನಗಳನ್ನು ಮತ್ತು ಮದುವೆ, ನಾಮಕರಣ ಇತ್ಯಾದಿ ಸಾಂಸ್ಕೃತಿಕ ಆಚರಣೆಗಳಲ್ಲಿ ಹಾಡುತ್ತಾ ಆ ಆಚರಣೆಯ ವಿಧಾನವನ್ನೂ ಇಲ್ಲಿ ಹೇಳಿಕೊಡುವವರು ಇವರೇ ಆಗಿದ್ದಾರೆ. ಇವರು ಬಳಸುವ ಧ್ವನಿಗಳಂತೂ ವೈವಿಧ್ಯತೆಯಿಂದ ಕೂಡಿವೆ. ಹೀಗೆ ತಮ್ಮ ಶ್ರಮ ಜೀವನದ ಮಧ್ಯೆ ಇದನ್ನು ಉಳಿಸಿ ಪೋಷಿಸಿಕೊಂಡು ಬರುತ್ತಿರುವ ಇವರ ಶಕ್ತಿಗೆ ಸಲ್ಲುವ ಮನ್ನಣೆ ಎಲೆ ಅಡಿಕೆ ಮರ್ಯಾದೆ ಮಾತ್ರ. ಇವರು ಪ್ರತಿಯಾಗಿ ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ. ಕಾರಣ ಅವರ ಹಾಡುಗಾರಿಕೆ ಅವರ ಭಕ್ತಿಯ ಸಮರ್ಪಣೆ ಮತ್ತು ಈ ಮೂಲಕ ಆತ್ಮತೃಪ್ತಿಯೇ ಹೊರತು ಪ್ರತಿಫಲಾಪೇಕ್ಷೆಯಲ್ಲ.

**ದೇವದಾಸೀ ಪದ್ಧತಿ :**

ಸಮುದಾಯದಾದ್ಯಂತ ಈ ಪದ್ಧತಿ ಇಲ್ಲ. ನಿರ್ದಿಷ್ಟ ಪ್ರದೇಶದಲ್ಲಿ ಮಾತ್ರ ಈ ಸಮಸ್ಯೆ ಇದೆ. ಇದೊಂದು ಅತ್ಯಂತ ವಿಷಾದನೀಯ ಸ್ಥಿತಿ. ದೇವರು, ಧರ್ಮದ ಹೆಸರಿನಲ್ಲಿ ಅಸಹಾಯಕ ಸ್ಥಿತಿಯಲ್ಲಿರುವ ಹೆಣ್ಣನ್ನು ತನ್ನ ಉಪಭೋಗಕ್ಕಾಗಿ ಬಳಸಿಕೊಳ್ಳಲು ವ್ಯವಸ್ಥಿತವಾಗಿ ಅಮಾನವೀಯ ರಾಕ್ಷಸೀಗುಣದ ಕೆಲ ಪುರುಷ ಸಮುದಾಯ ರೂಪಿಸಿದ ಸಂಚಿದು. ದುರಂತವೆಂದರೆ ಇದಕ್ಕೆ ಬಲಿಯಾಗುವ ಮಹಿಳೆಯರು ಕೆಳಜಾತಿಯವರು. ಅಜ್ಞಾನ, ಮೌಢ್ಯ, ಬಡತನದ ಸುಳಿಯಲ್ಲಿ ಸಿಲುಕಿರುವವರೇ ಹೊರತು ಈ ಸ್ತರದಿಂದ ಮೇಲಿರುವವರು ಅಲ್ಲವೇ ಅಲ್ಲ. ಆಳುವ ಶಕ್ತಿಗಳ ಯಾವುದೇ ಬಗೆಯ ಶೋಷಣೆಗೆ ತಮ್ಮ ದೇಹವನ್ನು ಬಾಗಿಸಬೇಕಾದವರು ತಳ ಸಮುದಾಯದ ಜನರೇ ಹೊರತು ಬೇರೆ ಯಾರೂ ಅಲ್ಲ. ದೇವರ ಹೆಸರಿನಲ್ಲಿ ಹೆಣ್ಣು ತನ್ನನ್ನು ಆಳುವ ಬಲಿಷ್ಠ ಶಕ್ತಿಗಳಿಗೆ ಒಪ್ಪಿಸಿಕೊಂಡು ಬದುಕಿನ ಉದ್ದಕ್ಕೂ ಅತಂತ್ರ ಸ್ಥಿತಿಯಲ್ಲಿ ಬಾಳಬೇಕಲ್ಲದೆ ಸಾಮಾಜಿಕ ಅಪಮಾನವನ್ನು ಅನುಭವಿಸಬೇಕಾಯಿತು.

ಸಾಮಾನ್ಯವಾಗಿ ಕಾಡಿನಲ್ಲಿ ತಮ್ಮದೇ ಆದ ಸಾಂಸ್ಕೃತಿಕ ವಿಧಾನಗಳಡಿಯಲ್ಲಿ ಬಾಳುತ್ತಿದ್ದ ಬುಡಕಟ್ಟು ಸಮುದಾಯಗಳಲ್ಲಿ ಈ ಬಗೆಯ ಪದ್ಧತಿ ಇರುವ ಸಾಧ್ಯತೆಗಳೇ ಕಡಿಮೆ. ವಿಷಾದದ ಸಂಗತಿ ಎಂದರೆ ಚಾರಿತ್ರಿಕ ಕಾರಣಗಳಿಂದ ಮ್ಯಾಸಬೇಡ ಸಮುದಾಯದ ಕೆಲವು ಮಹಿಳೆಯರೂ ಇದಕ್ಕೆ ಬಲಿಯಾಗಬೇಕಾದುದು. ಬುಡಕಟ್ಟು ಸಮುದಾಯಗಳು ಊರಿನ ಸಂಪರ್ಕಕ್ಕೆ ಬಂದಾಗ ಪಡೆದ ಸೌಲಭ್ಯಗಳೊಂದಿಗೆ ಕಳೆದುಕೊಂಡದ್ದೂ ಬಹಳಷ್ಟು. ಹೀಗೆ ತಮ್ಮನ್ನು ಕಳೆದುಕೊಂಡವರೇ ಈ ದೇವದಾಸಿಯರು.

ವಿಜಯನಗರದ ಅರಸರ ಪಡೆಯಲ್ಲಿ ಈ ಮ್ಯಾಸನಾಯಕರ, ಕಾಡಿನಲ್ಲಿದ್ದ ಕಟ್ಟಾಳುಗಳು ಮೀಸಲು ಪಡೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದುದಾಗಿ ಸಮುದಾಯದಲ್ಲಿ ವಿವರಗಳು ಸಿಗುತ್ತವೆ. ಬಹಮನಿ ಸುಲ್ತಾನರಿಂದ ಅನೇಕ ಬಾರಿ ಆಕ್ರಮಣಕ್ಕೆ ತುತ್ತಾದಾಗ ವಿಜಯನಗರ ಸಾಮ್ರಾಜ್ಯ ಪ್ರತಿಯಾಗಿ ತಡೆಗಳನ್ನೊಡ್ಡಿದರೂ ಅನಿವಾರ್ಯವಾಗಿ ಸೋಲೊಪ್ಪಿಕೊಳ್ಳಬೇಕಾಯಿತು. ಸೋತ ಈ ರಾಜ್ಯದ ಮೇಲೆ ರಾಜಧಾನಿ ಮತ್ತು ಸುತ್ತಮುತ್ತಲ ಪ್ರದೇಶಗಳ ಮೇಲೆ ಆಕ್ರಮಣಕಾರರು ಅಮಾನವೀಯವಾಗಿ ದಾಳಿಯನ್ನು ಮಾಡಿದರು. ನಗರವನ್ನು ಹಾಳು ಮಾಡುತ್ತಲೇ ಅಲ್ಲಿಯ ಅಮಾಯಕ ಮಹಿಳೆಯರ ಮೇಲೆಯೂ ದೌರ್ಜನ್ಯವೆಸಗಿದರು. ಯುದ್ಧದಲ್ಲಿ ಅನೇಕ ಮಂದಿ ಸೈನಿಕರು ಸಾವನ್ನಪ್ಪಿದರು. ತಮ್ಮ ಕುಟುಂಬದ ಒಡೆಯನನ್ನು ಕಳೆದುಕೊಂಡು, ದೌರ್ಜನ್ಯಕ್ಕೊಳಗಾಗಿ, ಕ್ರೌರ್ಯಕ್ಕೆ ಬಲಿಯಾದ ಅನೇಕ ಮಹಿಳೆಯರು ಬದುಕಿನ ಅನಿವಾರ್ಯ ಕಾರಣವಾಗಿ ತಮ್ಮನ್ನೆ ಈ ಸ್ಥಿತಿಗೆ ಒಪ್ಪಿಸಿಕೊಳ್ಳಬೇಕಾಯಿತು. ಈ ಹಿಂದೆ ವಿಜಯನಗರದ ಅರಸರ ಆಳ್ವಿಕೆಯಲ್ಲಿ ದೇವದಾಸೀ ಪದ್ಧತಿ ಇತ್ತು, ರಾಜ ನರ್ತಕಿಯರಿದ್ದರು. ಕೃಷ್ಣ ದೇವರಾಯನ ಪತ್ನಿ ಚಿನ್ನಾಂಬೆಯೇ ಮೂಲತಃ ರಾಜನರ್ತಕಿಯಾಗಿದ್ದವಳು.

ಯಾವುದೇ ದೇಶದ ಯುದ್ಧಭೂಮಿಗೆ ಹೋಗುವ ವೀರರ ಮುಂದೆ ರಣಕಹಳೆಗಳು ಮೊಳಗುತ್ತಿದ್ದರೆ ಹಿನ್ನೆಲೆಯಾಗಿ ಮಹಿಳೆಯ ಆಕ್ರಂದನದ ಧ್ವನಿ ಇರುತ್ತದೆ. ಯುದ್ಧಭೂಮಿಯಿಂದ ತನ್ನವರು ಮರಳಿ ಬಂದಾಗ ಆಕ್ರಂದನ ನಿಲ್ಲುತ್ತದೆ. ಇಲ್ಲವಾದರೆ ಈ ಆಕ್ರಂದನ ಇನ್ನೂ ತೀವ್ರವಾಗುತ್ತದೆ. ನಿರಂತರವಾದ ಶೋಕಗೀತೆಯಾಗುತ್ತದೆ ಹೀಗೆ ಯುದ್ಧಭೂಮಿಯಲ್ಲಿ ತಮ್ಮವರನ್ನು ಕಳೆದುಕೊಂಡು ತಮ್ಮ ಮೇಲೆ ಆಕ್ರಮಣಕಾರರು ನಡೆಸಿದ ಅಕೃತ್ಯದಿಂದ ತಮ್ಮ ಮಾನವನ್ನೂ ಕಳೆದುಕೊಂಡಾಗ, ಮತ್ತೊಂದು ಕಡೆ ಪವಿತ್ರ ಸಮುದಾಯ ತಮ್ಮನ್ನು ಸ್ವೀಕರಿಸದೆ ಇದ್ದಾಗ ಬದುಕಲು ಬೇರೆ ವಿಧಾನವಿಲ್ಲದೆ ಇದ್ದಾಗ ನರಕದ ಕೂಪದಲ್ಲಿ ನಿರಂತರವಾಗಿ ಬೀಳಬೇಕಾಯಿತು. ಮೂಲತಃ ತಮ್ಮಲ್ಲಿ ದೇವದಾಸಿ ಪದ್ಧತಿ ಇರಲಿಲ್ಲವಾದರೂ ತಮ್ಮ ಪರಿಸರದ ಈ ಒಂದು ಪದ್ಧತಿಯ ಹೆಸರಿನಲ್ಲಿ ಈ ಲಾಂಛನದ ಮೂಲಕ ಕಳೆದುಕೊಳ್ಳುತ್ತಿದ್ದ ಪಾವಿತ್ರ್ಯಕ್ಕೆ ಧಾರ್ಮಿಕ ಮೊಹರನ್ನು ಹಾಕಿಸಿಕೊಳ್ಳಬೇಕಾಯಿತು. ಹೀಗೆ ಸಾಮಾಜಿಕ ಅಪಮಾನಕ್ಕೊಳಗಾಗಿ ಇದೇ ಮನಃಸ್ಥಿತಿಯಲ್ಲಿ ಅನೇಕ ಕುಟುಂಬಗಳು ಕೂಡ್ಲಿಗೆ ಮತ್ತು ಸುತ್ತ ಮುತ್ತಲ ಹಳ್ಳಿಗಳಲ್ಲಿ ವಾಸಿಸುತ್ತಿವೆ. ನಲಜರುವೋ ಬಳ ದೇವರು, ಕಂಪಳದೇವರ ಹೆಸರಿನಲ್ಲಿ ಮುದ್ರೆಯನ್ನು ಹಾಕಿಸಿಕೊಂಡು ಹಿಂದೆ ಗುರುತಿಸಿ ಕೊಳ್ಳುತ್ತಿದ್ದರಾದರೂ ಇತ್ತೀಚಿಗೆ ಈ ದೂರದ ಊರುಗಳ ದೇವರಿಂದಲೂ ದೂರವಾಗಿ ಅಕ್ಕಪಕ್ಕದ ಆಂಜನೇಯ ಇತ್ಯಾದಿ ಹೆಸರಿನಲ್ಲಿ ತಮ್ಮನ್ನು ಈ ಕಾಯಕಕ್ಕೆ ಒಪ್ಪಿಸಿಕೊಳ್ಳುತ್ತಿದ್ದಾರೆ. ಬುಡಕಟ್ಟು

ದೇವದಾಸಿಯರ ಸಂವಾದ – ನಿರ್ಮೂಲನೆ – ಸೌಲಭ್ಯಗಳ ವಿಶ್ಲೇಷಣೆಯ ಕಾರ್ಯಕ್ರಮ 'ಸುಗಮ' ಎಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಅನೇಕ ಮಂದಿ ದೇವದಾಸಿಯರನ್ನು ಲೇಸಿ ಎಂದು ತಮ್ಮನ್ನು ಕರೆದುಕೊಳ್ಳುವ ಇವರನ್ನು ಸ್ವತಃ ಭೇಟಿಯಾಗುವ ಅವಕಾಶ ಸಿಕ್ಕಿತ್ತು. ಅವರ ಅತಂತ್ರ ಸ್ಥಿತಿ ವಿಷಾದನೀಯವಾದುದು. ಸರ್ಕಾರ ಶಿಕ್ಷಣ, ಭದ್ರನೆಲೆಗಟ್ಟನ್ನು ಕೊಡುವ ಪ್ರಯತ್ನ ಮಾಡುತ್ತಿದ್ದಂತೆಯೇ ಸಮುದಾಯ ಅವರನ್ನು ಸಹೃದಯತೆಯಿಂದ ಕಂಡು ಅವರನ್ನು ಈ ಸಾಮಾಜಿಕ ಅಪಮಾನದಿಂದ ಬಿಡುಗಡೆಗೊಳಿಸಬೇಕಾದ ಅವಶ್ಯಕತೆಯಿದೆ. ತಮ್ಮ ಬದುಕು ಮುಂದೆ ತಮ್ಮ ಮಕ್ಕಳಿಗೆ ಬೇಡ ಎಂದು ಅವರು ಹೇಳುವಲ್ಲಿ ತಮ್ಮ ಈ ಸ್ಥಿತಿ ಕಾರಣವಾಗಿ ತಾವು ಅನುಭವಿಸಿದ ಯಾತನೆ ಮಡುಗಟ್ಟಿತ್ತು. ವಸಾಹತುಶಾಹೀ ವ್ಯವಸ್ಥೆಯೊಂದು ನೆಮ್ಮದಿಯಾಗಿದ್ದ ಸಮಾಜದ ಸ್ವಾಸ್ಥ್ಯವನ್ನು ಕಲಕಿದ ಬಗೆಗೆ ಇದು ಉದಾಹರಣೆ. ಬುಡಕಟ್ಟಿನ ಮಹಿಳೆಯರನ್ನು ಪಾಪದ ಕೂಪಕ್ಕೆ ತಳ್ಳಿದುದು ಮತ್ತು ಇದೇ ಕಾರಣದಿಂದ ಅವರ ಕುಟುಂಬಗಳ, ಸ್ವಾಸ್ಥ್ಯವನ್ನು ಹಾಳು ಮಾಡಿದ್ದು ವಿಷಾದದ ಸಂಗತಿ. ಈ ಮಹಿಳೆಯರ ಅನಾಥಸ್ಥಿತಿ ಮತ್ತು ಮಕ್ಕಳ ತಬ್ಬಲಿತನವನ್ನು ಕುರಿತು ಯೋಚಿಸಿ ಪರಿಹಾರವನ್ನು ಹುಡುಕಬೇಕಾದ ಹೊಣೆಗಾರಿಕೆ ಬುಡಕಟ್ಟಿನದಾಗಬೇಕಾಗಿದೆ.

ಬುಡಕಟ್ಟು ಮಹಿಳೆಯರ ಅಭಿವೃದ್ಧಿಗೆಂದೇ ಸರ್ಕಾರ ಹಲವು ಯೋಜನೆಗಳನ್ನು ಹಾಕಿಕೊಂಡಿದೆ.

1. ಗ್ರಾಮೀಣ ಪ್ರದೇಶದ ಬುಡಕಟ್ಟು ಪಂಗಡದ ಬಾಲಕಿಯರಿಗೆ ಹಾಜರಾತಿ ವಿದ್ಯಾರ್ಥಿ ವೇತನ.
2. ಕಷ್ಟದಲ್ಲಿರುವ ಬುಡಕಟ್ಟು ಮಹಿಳೆಯರಿಗೆ ಸಹಾಯಧನ (ಸ್ತ್ರೀ ಶಕ್ತಿಯೋಜನೆಯ ಅಡಿ)
3. ವಿಧವೆಯರಿಗೆ ಆರ್ಥಿಕ ಸೌಲಭ್ಯ ನೀಡಲು 'ನವ ಜೀವನ' ಕಾರ್ಯಕ್ರಮದಡಿಯಲ್ಲಿ ಸಹಾಯಧನ ನೀಡುವುದು.
4. ಜಾಗೃತಿ ಕಾರ್ಯಕ್ರಮದಡಿ ಬುಡಕಟ್ಟು ವರ್ಗದ ಬಾಲಕಿಯರಿಗೆ ಸಹಾಯಧನವನ್ನು ಒದಗಿಸುವುದು.
5. ಕೌಶಲ್ಯ ಅಭಿವೃದ್ಧಿಗೆ ವೃತ್ತಿಪರ ತರಬೇತಿ.
6. ಉದ್ಯೋಗಿನಿ ಯೋಜನೆಯಡಿ ಆರ್ಥಿಕ ಅಭಿವೃದ್ಧಿಗೆ ಗರಿಷ್ಠ ರೂ.7,500/– ರೂಗಳ ಸಹಾಯಧನ.

ಈ ಎಲ್ಲಾ ಯೋಜನೆಗಳೂ ಸರ್ಕಾರದ ಕಡತಗಳಲ್ಲಿವೆ. ಕರ್ನಾಟಕ ಸರ್ಕಾರದ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯವೂ ಈ ಯೋಜನೆಗಳ ಅನುಷ್ಠಾನಕ್ಕೆಂದೇ ಕಾರ್ಯತತ್ಪರವಾಗಿದೆ. ವಿಪರ್ಯಾಸವೆಂದರೆ ಇಷ್ಟೊಂದು ಯೋಜನೆಗಳಿವೆ ಎಂದು ಸ್ಪಷ್ಟವಾಗುವುದು ಬುಡಕಟ್ಟಿನ ಅಧ್ಯಯನವನ್ನು ಮಾಡಹೊರಟಾಗ ಮಾತ್ರ. ನಾನೂ ಇದರಿಂದ ಹೊರತಲ್ಲ. ಪರಿಸ್ಥಿತಿ ಹೀಗಿರುವಾಗ ರಾಜ್ಯದ ಯಾವುದೇ ಮೂಲೆಯ ಹಳ್ಳಿಯಲ್ಲೋ, ಹಟ್ಟಿಯಲ್ಲೋ, ಹಾಡಿಯಲ್ಲೋ ಇದ್ದು ಈ ಅನುಕೂಲ ಪಡೆಯಬೇಕಾದವರಿಗೆ ಇದು ತಲುಪುವ ಮಾರ್ಗ ಯಾವುದು? ತಲುಪಿಸಬೇಕಾದ ಹೊಣೆಗಾರಿಕೆ ಸರ್ಕಾರದ್ದು ಮಾತ್ರ ಎಂದು ನಿರ್ಲಿಪ್ತವಾಗಿ ಉಳಿಯದೆ ಇದು ಸಮುದಾಯದಲ್ಲಿ ಈಗಾಗಲೇ ವಿದ್ಯಾವಂತರಾಗಿರುವ ಸಮ್ಮಂತಹವರ ಕರ್ತವ್ಯದ ಒಂದು ಭಾಗ ಎಂದು ಯೋಚಿಸಬೇಕಾಗಿದೆ. ಈ ಎಲ್ಲಾ ಯೋಜನೆಗಳೂ ಮಹಿಳೆಯ ಆರ್ಥಿಕ

ಮಟ್ಟವನ್ನು ಉತ್ತಮ ಪಡಿಸಬಹುದು. ಸ್ವಾವಲಂಬಿಯನ್ನಾಗಿ ಮಾಡಬಹುದು. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಮೊದಲುಗೊಂಡಾಗಿನಿಂದ ಆರಂಭವಾದ ಲಿಂಗಾಧಾರಿತ ಅಸಮಾನತೆ ಯೋಜನೆಗಳು ಕೊಡಮಾಡುವ ಆರ್ಥಿಕ ಅಭಿವೃದ್ಧಿಯ ಮೂಲಕ ನಿವಾರಿಸಲ್ಪಡುವುದಿಲ್ಲ. ಪುರುಷ ಪ್ರಜ್ಞಾವಂತನಾದಾಗ ಮಾತ್ರ ಆಳವಾಗಿ ನೆಲೆ ನಿಂತಿರುವ ಈ ಅಸಮಾನತೆಯನ್ನು ನಿವಾರಿಸಿ ಸಮಾನವಾಗಿ ಹೆಣ್ಣನ್ನು ಗುರುತಿಸುವ ವ್ಯವಸ್ಥೆ ನೆಲೆಗೊಳ್ಳುತ್ತದೆ.

## ಅಧ್ಯಾಯ-೫

# ಸಮಾರೋಪ

ಮ್ಯಾಸಬೇಡರ ಬುಡಕಟ್ಟು ನನ್ನ ಮೂಲನೆಲೆ. ನಾನು ಅದೇ ಸಮುದಾಯಕ್ಕೆ ಸೇರಿದವಳು ನನಗಿಂತಲೂ ಹಿಂದಿನ ಎರಡು ತಲೆಮಾರಿನಿಂದಲೂ ಅಕ್ಷರಜ್ಞಾನದ ಅವಕಾಶ ಪಡೆದಿದ್ದ ನನ್ನ ಹಿರಿಯರೇ ಕಾರಣವಾಗಿ ಅಕ್ಷರಲೋಕದ ಪರಿಸರ ನನ್ನನ್ನು ಬೆಳೆಸಿ ರೂಪಿಸಿತು. ಆದರೆ, ನನ್ನ ಮೂಲಮಾತೃಕೆಯಾದ ಬುಡಕಟ್ಟಿನ ಪರಿಸರದ ಸರಿಸುಮಾರು ಎಲ್ಲಾ ಆಚರಣೆಗಳೂ ಬಾಲ್ಯದಿಂದಲೂ ನನ್ನ ಆಸಕ್ತಿಯ ಕೇಂದ್ರಗಳಾಗಿದ್ದವು. ಸಾಹಿತ್ಯದ ವಿದ್ಯಾರ್ಥಿಯಾದ ನಂತರವಂತೂ ನನ್ನ ಸಮುದಾಯದ ಮಹಿಳೆಯರು ಹಾಡುತ್ತಿದ್ದ ಕಥನಗಳು ಮತ್ತು ಪುರುಷರು ಹೇಳುತ್ತಿದ್ದ ಗದ್ಯಕಥನಗಳು ನನ್ನ ಕುತೂಹಲವನ್ನು ಇನ್ನಷ್ಟು ಕೆರಳಿಸಿದವು. ತಮ್ಮನ್ನು ವಿವರವಾಗಿ ಅಧ್ಯಯನ ಮಾಡಬೇಕೆಂಬ ಒತ್ತಡಗಳನ್ನು ಅವು ನನ್ನಲ್ಲಿ ಮೂಡಿಸಿದವು. 'ಎನುಮಲವರು' ಎಂಬ ಬೆಡಗಿನ ಮಗಳಾದ ಅಕ್ಕರಾಯಮ್ಮನನ್ನು, ಮಾರಮ್ಮನನ್ನು ಆ ಬೆಡಗಿನವರು ಇಂದಿಗೂ ಕೂಡ ತುಂಬಾ ಗೌರವದಿಂದ ನೆನೆಯುತ್ತಾರೆ. ಉದಾಹರಣೆಗೆ, ನನ್ನ ಹಳ್ಳಿಯಲ್ಲೇ ಆರಾಧನಾ ನೆಲೆಯಲ್ಲಿರುವ ಸಾಂಸ್ಕೃತಿಕ ನಾಯಕ 'ದಡ್ಡಿ ಸೂರನಾಯಕ'ನ ಪರಂಪರೆಯವರೂ ಈ ಬೆಡಗಿಗೇ ಸೇರಿದವರು. ಆ ಬೆಡಗಿನ ಪುರುಷರು, ತಮ್ಮ ಮನೆಯ ಹೆಣ್ಣು ಮಕ್ಕಳನ್ನು, (ನನ್ನ ಅಮ್ಮನನ್ನೂ ಒಳಗೊಂಡಂತೆ) ಸೊಸೆಯರನ್ನೆಲ್ಲ ಸಂದರ್ಭ ಬಂದಾಗಲೆಲ್ಲಾ, "ನೀವು ದೊಡ್ಡವರು, ನಿಮ್ಮದೇ ಎಲ್ಲಾ, ನಿಮ್ಮಿಂದಲೇ ನಾವು" ಎಂದು ಗೌರವಿಸುತ್ತಿದ್ದರು. ಅವರು ಹಾಗೆ ಹೇಳಿದಾಗಲೆಲ್ಲ, ಇದಕ್ಕೆ ಮೂಲಕಾರಣರಾದ ರಾಯಮ್ಮ ಮತ್ತು ಮಾರಮ್ಮರು ನನ್ನ ಆಸಕ್ತಿಯ ಕೇಂದ್ರಗಳಾಗುತ್ತಿದ್ದರು.

ಹೀಗೆ ಇವರ ಬಗ್ಗೆ ಬೆರಗನ್ನು ತಳೆದಿದ್ದ ನನ್ನ ಮನಸ್ಸು, ಈ ನಾಯಕಿಯರನ್ನೇ ಅಧ್ಯಯನಕ್ಕೆ ಆರಿಸಿಕೊಳ್ಳುವಂತೆ ಪ್ರೇರೇಪಿಸಿತು. ಒಂದು ಅಧ್ಯಯನವು ಆದಷ್ಟು ವ್ಯವಸ್ಥಿತವಾಗಿ ನಡೆಯಬೇಕಾದರೆ, ಆಕರ ಗ್ರಂಥಗಳ ಮೂಲಕ ಪಡೆಯುವ ಅರಿವಿನೊಂದಿಗೆ, ಈ ನಾಯಕಿಯರಿಗೆ ಸಂಬಂಧಿಸಿದ ವಿವರಗಳನ್ನು ಕಲೆ ಹಾಕುವುದೂ ಅಷ್ಟೇ ಅನಿವಾರ್ಯ. ಆ ಕಾರಣ ಅವರಿಗೆ ಸಂಬಂಧಿಸಿದ ಅಲಿಖಿತ/ಮೌಖಿಕ ಸಾಹಿತ್ಯವನ್ನು ಸಂಗ್ರಹ ಮಾಡಿಕೊಂಡೆ. ಭಾಷಿಕ ಮಾಧ್ಯಮದ ಮೂಲಕ ಸಮುದಾಯವೊಂದರ ಇತಿಹಾಸ, ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳೆಲ್ಲವೂ ದಾಖಲಿಸಲ್ಪಡುತ್ತವೆ. ಅವು ಆಚರಣೆಗಳು ಮತ್ತು ಕಲಾಪ್ರದರ್ಶನಗಳ ಸಂದರ್ಭದಲ್ಲಿ ವ್ಯಕ್ತರೂಪವನ್ನು ಪಡೆಯುತ್ತವೆ. ಇವೆಲ್ಲ ಮಾಹಿತಿಗಳೂ ಸಾಮಾನ್ಯವಾಗಿ ಜಾನಪದದಲ್ಲಿ ಪದ್ಯರೂಪದ ಕಥನವಾಗಿರುತ್ತದೆ. ಆದರೆ ಈ ಮ್ಯಾಸಬೇಡರ ಸಮುದಾಯದಲ್ಲಿ ಪದ್ಯರೂಪದ ಕೆಲವು ಕಥನಗಳು ಕಟ್ಟಲ್ಪಟ್ಟಿದ್ದರೂ, ಅದರಲ್ಲಿ ದಾಖಲಾಗದ ಅನೇಕ ಸಂಗತಿಗಳು ಬಿಡಿಬಿಡಿಯಾಗಿ ಗದ್ಯದಲ್ಲಿ ದೊರೆಯುವುದನ್ನು ಗಮನಿಸಿ, ಅವುಗಳನ್ನೂ ದಾಖಲಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಿದ್ದೇನೆ.' ವಾಲ್ಟರ್ ಹೇಲ್ ಎಂಬ ವಿದ್ವಾಂಸ "ಮೌಖಿಕ ರಚನೆಗಳು ಇರುವ ಯಾವುದೇ ಸಮಾಜಗಳಲ್ಲಿ ಉಳಿದು ಬಂದಿರುವ ಮೌಖಿಕಸಾಹಿತ್ಯದಲ್ಲಿ ಒಂದು ಗಸಿ ಉಳಿದಿರುತ್ತದೆ. ಇದನ್ನೇ 'ಓರಲ್ ರೆಸಿಡ್ಯೂಯಲ್' ಎನ್ನುವುದು" ಎಂಬ

ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.[೭೩] ಹೀಗೆ, ಪದ್ಯರೂಪದಲ್ಲಿರಲಿ ಅಥವಾ ಗದ್ಯ ರೂಪದಲ್ಲಿರಲಿ ಅಂತಹ ಪಠ್ಯದಲ್ಲಿ ಮೂಲದ ಒಂದು ಎಳೆ ಇದ್ದೇ ಇರುತ್ತದೆ. ಮಲೆಯಮ್ಮ, ಗೌರಸಮುದ್ರದ ಮಾರಮ್ಮ, ಮುಂಗಲುದೇವಮ್ಮ, ಹಿಡಾಲಗಂಗಿ+ಗಡಾಲಗಂಗಿ, ತಮ್ಮಟಕಲ್ಲಿನ ಓಬವ್ವ ಇವರ ಬಗ್ಗೆ ಇಂತಹ ಎಳೆಗಳನ್ನೇ ಜೋಡಿಸಿ ನಾನು ಕಥನದ ಆಕೃತಿಯನ್ನು ಕಟ್ಟಿಕೊಟ್ಟಿರುತ್ತೇನೆ. ಕೊನೆಗೆ ಆಚರಣೆಯ ಸ್ವರೂಪದಲ್ಲಾದರೂ ಉಳಿದಿರುವ ಅಂತ್ಯದ ಎಳೆಗಳನ್ನೇ ಹಿಡಿದು ಪಠ್ಯದ ಖಾಲಿ ಸ್ಥಳಗಳನ್ನು ತುಂಬಿಕೊಂಡಿರುತ್ತೇನೆ. ಸಮುದಾಯದ ಮಾತೃಭಾಷೆಯು 'ತೆಲುಗು' ಆಗಿದ್ದರೂ, ಪದ್ಯಕಥನಗಳು ಕನ್ನಡದಲ್ಲಿದ್ದು ಪೂರಕ ಮಾಹಿತಿಗಳನ್ನು ತೆಲುಗಿನಲ್ಲಿ ಹೇಳುವುದು ಇಲ್ಲಿಯ ಸಾಮಾನ್ಯವಾದ ಕ್ರಮವಾಗಿದೆ.

ಸಾಂಸ್ಕೃತಿಕ ನಾಯಕಿಯರ ಬಗೆಗೆ ವಿವರಗಳನ್ನು ಕೊಡುವ ಮೊದಲು ಸಮುದಾಯದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ವಿವರಿಸುವುದು ನನಗೆ ಅಗತ್ಯವೆನಿಸಿತು. ಅದರಲ್ಲಿಯೂ ಮುಖ್ಯವಾಗಿ ಮಹಿಳೆಯರ ಮೂಲಕ ಈ ಸಮುದಾಯವನ್ನು ಅರಿಯುವುದು ನನ್ನ ಉದ್ದೇಶವಾದ್ದರಿಂದ, ಇಂತಹ ಸಾಂಸ್ಕೃತಿಕ ಆಚರಣೆಗಳಿಗೇ ಹೆಚ್ಚು ಪ್ರಾಶಸ್ತ್ಯಕೊಟ್ಟಾಗ 'ಮಾತೃ ಮೂಲೀಯ ಪದ್ಧತಿಯ' ಪಳೆಯುಳಿಕೆಗಳು ಅನೇಕ ಸ್ತ್ರೀ ಸಂಬಂಧೀ ಆಚರಣೆಗಳಲ್ಲಿ ಬಳಕೆಗೊಳ್ಳುವುದನ್ನು ಗಮನಿಸಿ, ಸಂಬಂಧಿಸಿದ ವಿವರಗಳನ್ನು ಪರಿಶೀಲಿಸಿ ಇದೊಂದು ಮಾತೃಮೂಲಿಯವಾಗಿದ್ದ ಸಮುದಾಯವೆಂದು ಗುರುತಿಸಿರುತ್ತೇನೆ.

'ಮ್ಯಾಸ' ಪದವೇ ಇದುವರೆಗೆ ನಡೆದಿರುವ ಅಧ್ಯಯನಗಳಲ್ಲಿ ಸಾಕಷ್ಟು ಚರ್ಚೆಗೆ ಗ್ರಾಸವಾಗಿದೆ. ವೃತ್ತಿ, ಸ್ಥಳ, ಜೀವನ ವಿಧಾನ ಹೀಗೆಯೇ ಯಾವುದಾದರೂ ಒಂದು ಸಂಗತಿಯು ಈ ಪದ ರೂಪುಗೊಳ್ಳುವಲ್ಲಿ ಕೆಲಸ ಮಾಡಿರಬೇಕು ಎಂದು ಆಲೋಚಿಸಿ, 'ಅಲ್ಲಲ್ಲಿಯೇ ತಿರುಗಾಡುವವರೇ ಮ್ಯಾಸರು' ಎಂಬುದನ್ನು ತೆಲುಗು ಪದಕೋಶದಿಂದ ಗ್ರಹಿಸಿದೆ. ಪಶುಪಾಲನೆಯ ನಿಮಿತ್ತ ಹುಲ್ಲುಗಾವಲನ್ನು ಅರಸುತ್ತಾ ಇವರು ಅಲೆದಾಡುವುದು ಅನಿವಾರ್ಯವಾದ ಕಾರಣ ಈ ಪದವು ಒಟ್ಟು ಬೇಡನಾಯಕರ ಸಮುದಾಯಕ್ಕೆ ವಿಶೇಷಣವಾಗಿರುವ ಸಾಧ್ಯತೆಯು ಖಚಿತವಾಯಿತು.

ಈ ಸಮುದಾಯವು ಆಂಧ್ರದ ಶ್ರೀಶೈಲಂನಿಂದ ಮಧ್ಯ ಕರ್ನಾಟಕದ ಕಡೆ ಬಂದಿತು ಎಂಬುದು ಇದುವರೆಗೆ ನಡೆದ ಎಲ್ಲಾ ಅಧ್ಯಯನಗಳಲ್ಲೂ ನಮೂದಿಸಲ್ಪಟ್ಟಿದೆ. ಅದರ ಸಂಗಡವೇ ಇವರು ಉತ್ತರ ಭಾರತದಿಂದ ದಕ್ಷಿಣದ ಕಡೆ ಚಲಿಸಿದ ಭಾರತದ ಮೂಲನಿವಾಸಿಗಳೇ ಇರಬಹುದು ಎಂಬ ಸೂಚನೆಗಳನ್ನು ಅಧ್ಯಯನಗಳಲ್ಲಿ ಸೂಚಿಸಲಾಗಿದೆ. ಅನ್ಯರ ಆಕ್ರಮಣವು ಮೂಲಿಗರ ಬದುಕನ್ನೇ ಹೇಗೆ ತಲ್ಲಣಗಳಿಗೆ ಒಳಗು ಮಾಡಿ ಸ್ಥಳಾಂತರಗೊಳಿಸುತ್ತದೆ ಎನ್ನುವುದನ್ನು ಹೇಳಿ, ಇವರು ದ್ರಾವಿಡ ಮೂಲದವರು ಎಂಬುದನ್ನು ಭಾಷೆ, ಬಣ್ಣ ಮತ್ತು ಆಚರಣೆಗಳ ಆಧಾರದ ಹಿನ್ನೆಲೆಯಲ್ಲಿ ವಿವರಿಸಿರುತ್ತೇನೆ. 'ಜಗತ್ತೇ ಒಂದು' ಎಂಬ ಪರಿಕಲ್ಪನೆಯ ಕಡೆಗೆ ನಮ್ಮ ಮನಸ್ಸುಗಳನ್ನು ಕೊಂಡೊಯ್ಯಬೇಕಾದ ಇಂದಿನ ಸಂದರ್ಭದಲ್ಲಿ ಆರ್ಯ, ಆರ್ಯೇತರ ಎಂಬ ಒಳಸುಳಿಗಳನ್ನು ನಿರ್ಮಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಆದರೆ ಇವು ಅನೇಕ ಬಾರಿ ಸಾಂಸ್ಕೃತಿಕ ಆಕ್ರಮಣಗಳಿಗೆ ಅಂತೆಯೇ ಸ್ಥಿತ್ಯಂತರಗಳಿಗೆ ಕಾರಣವಾಗುವುದರಿಂದ

---

[೭೩] ಡಿ.ಆರ್. ನಾಗರಾಜ್, ಸಾಹಿತ್ಯಕಥನ. ಪು. ೫೦೬. ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು.

ಅವುಗಳನ್ನು ಪರಿಶೀಲಿಸುವುದರಲ್ಲಿ ದೋಷವೇನೂ ಇಲ್ಲ. ವಿವಿಧತೆಯಿಂದ ಕೂಡಿದ ಭಾರತದಲ್ಲಿ ಈ ಸಮುದಾಯಗಳ ಅಧ್ಯಯನದ ಮೂಲಕ ವಿಶಿಷ್ಟತೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಅಷ್ಟೇ ಅಲ್ಲ, ವರ್ತಮಾನದಲ್ಲಿ ಆ ಸಮುದಾಯಗಳೊಂದಿಗೆ ನಡೆಸಬೇಕಾದ ಅನುಸಂಧಾನಗಳ ಬಗೆಯನ್ನು ತಿಳಿದುಕೊಳ್ಳಲು ಇಂತಹ ತಿಳಿವಳಿಕೆಯು ನೆರವಾಗಬಹುದು. ಸಮಾಜಕಲ್ಯಾಣವನ್ನು ಸಾಧಿಸುವ ಹಾದಿಯ ಮೊದಲ ಹಂತವೇ ಸಮುದಾಯಗಳ ಇತಿಹಾಸ ಮತ್ತು ಸಂಸ್ಕೃತಿಗಳ ಗಾಢವಾದ ಅರಿವು.

ಸ್ವಾಯತ್ತವಾಗಿದ್ದ ಸಮುದಾಯವೊಂದು, ತನ್ನ ಮೂಲ ನೆಲೆ ಮತ್ತು ಬದುಕನ್ನು ಕಳೆದುಕೊಂಡಾಗ, ಬದುಕಿನ ಅನಿವಾರ್ಯ ಅಗತ್ಯಗಳಿಗಾಗಿ ಪರದಾಡಿದ್ದು, ನಿಶ್ಚಿತ ಉದ್ಯೋಗವಿಲ್ಲದೆ ತೊಳಲಾಡುತ್ತಲೇ ಸಾಮಾಜಿಕ ಅಸಮಾನತೆಗಳಿಗೆ ತುತ್ತಾಗಿದ್ದನ್ನು ಕಾರಣ ಹಾಗೂ ಪರಿಣಾಮಗಳೊಂದಿಗೆ ವಿವರಿಸಿರುತ್ತೇನೆ. ಆದ್ದರಿಂದಲೇ ಈ ಅಧ್ಯಯನಕ್ಕೆ ಮಾಹಿತಿಗಳ ದಾಖಲಾತಿಗಿಂತ ಭಿನ್ನವಾದ ಸಮಕಾಲೀನ ಆಯಾಮವೊಂದನ್ನು ದೊರಕಿಸಿಕೊಳ್ಳಲು ಸಾಧ್ಯವಾಗಿದೆ. ಆ ಆಯಾಮಕ್ಕೆ ಸ್ತ್ರೀವಾದದ ನೆಲೆಯೊಂದು ಒದಗಿಬರಲು ಸಾಧ್ಯವಾಗಿದೆ. ಏಕೆಂದರೆ, ನಾನು ಆರಿಸಿಕೊಂಡಿರುವ ವಿಷಯವೇ ಹೆಣ್ಣಿನ ಸ್ವೋಪಜ್ಞತೆ ಮತ್ತು ಸಾಹಸಪ್ರವೃತ್ತಿಗಳ ಸುದೀರ್ಘ ಕಥನವಾಗಿದೆ. ಸಮುದಾಯದಲ್ಲಿ ಇಂದಿಗೂ ಆಚರಣೆಯ ಸ್ವರೂಪದಲ್ಲಿ ಉಳಿದಿರುವ ವಿವರಗಳ ಮೂಲಕ, ಮೂಲತಃ ಇದ್ದಂತಹ ಸಾಮುದಾಯಿಕ ಜೀವನ ವ್ಯವಸ್ಥೆ, ನ್ಯಾಯಪದ್ಧತಿ, ತನ್ನದೇ ಆದ ಆಡಳಿತ ವ್ಯವಸ್ಥೆ, ವಿಧಿ, ನಿಷೇಧಗಳನ್ನು ಗುರುತಿಸಿ ಅದರ ಅನನ್ಯತೆಯನ್ನು ಅನಾವರಣಗೊಳಿಸಿರುತ್ತೇನೆ. ದೇಸೀ ಪರಂಪರೆಯಲ್ಲಿರುವ ಇಂತಹ ವಿವರಗಳ ಮೂಲಕ ಭಾರತೀಯ ಸಮಾಜದ ಪ್ರಾದೇಶಿಕ ಆಕೃತಿಗಳನ್ನು ಗುರುತಿಸಲು ಸಾಧ್ಯವಾಗಬಹುದಾಗಿದೆ.

ನನ್ನ ಅಧ್ಯಯನದ ಮುಖ್ಯವಾದ ಕೇಂದ್ರವೆಂದರೆ ಈ ಸಮುದಾಯದ ಸ್ತ್ರೀರೂಪೀ ನೆಲೆಗಳನ್ನು ಗುರುತಿಸುವುದು. ಈ ಸ್ತ್ರೀಯರನ್ನೇ ಸಮುದಾಯದ 'ಸಾಂಸ್ಕೃತಿಕ ನಾಯಕಿಯರು' ಎಂದು ಹೆಸರಿಸಿದ್ದೇನೆ. ಈ ಮನ್ನಣೆಗೆ ಅವರ ಸಾಧನೆ ಕಾರಣವೇ ವಿನಾ ಸಂಶೋಧಕಿಯ ಸ್ತ್ರೀಪರವಾದ ನಿಲುವುಗಳಲ್ಲ. ಇವರಿಗೆ ಸಂಬಂಧಿಸಿದ ಬೇರೆ ಬೇರೆ ಪಠ್ಯಗಳನ್ನು ಸಂಕಲಿಸಿ, ವಿವರಿಸಿ ನಂತರ ಒಂದು ಸಮಾವೇಶಕ ಪಠ್ಯವನ್ನು ಕಟ್ಟಿಕೊಂಡಿರುತ್ತೇನೆ. ಸಮುದಾಯದ ಜನಮನದಲ್ಲಿ ಬಗೆ ಬಗೆಯ ಒಲುವೆ, ಉತ್ಪ್ರೇಕ್ಷೆ ಮತ್ತು ಕಲ್ಪನೆಗಳಿಂದ ಹಲವು ಬಗೆಯ ಪಠ್ಯಗಳು ಕಟ್ಟಲ್ಪಟ್ಟಿವೆ. ಹೀಗೆ ಸಮುದಾಯದಾದ್ಯಂತ ಅವರ ನೆನಪುಗಳು ಹರಡಿರಲು ಕಾರಣ ಅವರ ಕಾರ್ಯ ವೈಖರಿ. ಈ ಕಥನಗಳನ್ನು ಸಮುದಾಯದ ಸೃಷ್ಟಿಪುರಾಣದೊಂದಿಗೆ ಲಗತ್ತಿಸಿ ಹೇಳುವುದು ವಾಡಿಕೆಯಾಗಿದೆ. ಪ್ರಪಂಚದ ಸರಿ ಸುಮಾರು ಎಲ್ಲಾ ಬುಡಕಟ್ಟುಗಳಲ್ಲಿ ತಮ್ಮದೇ ಆದ ಸೃಷ್ಠಿಪುರಾಣವಿರುತ್ತದೆ. ಪ್ರಕೃತಿಯ ಬಗೆಗಿನ ಬೆರಗು ಮತ್ತು ತನ್ನ ಜೀವನ ವಿಧಾನದ ಮೂಲ ಇವೆರಡನ್ನೂ ಮೇಳೈಸಿ ತಮ್ಮದೇ ಆದ ನಿಲುವುಗಳನ್ನು ಜನಪದರು ಲೋಕದ ಸೃಷ್ಟಿಯ ಬಗೆಗೆ, ಜೀವ ಜಗತ್ತಿನ ಸೃಷ್ಟಿಯ ಬಗೆಗೆ ತಳೆದಿರುತ್ತಾರೆ. ಮ್ಯಾಸಬೇಡ ಸಮುದಾಯವೂ ಇದರಿಂದ ಹೊರತಾಗಿಲ್ಲ. ಪಶುಪಾಲಕರಾದ ಇವರು ತಮ್ಮ ಪಶುಪಾಲಕಮೂಲದಿಂದಲೇ ತಮ್ಮ ಸೃಷ್ಟಿ ಪುರಾಣವನ್ನು ಕಟ್ಟಿಕೊಂಡಿದ್ದಾರೆ. ಮತ್ತೊಂದು ಪಠ್ಯದ ಪ್ರಕಾರ ಸ್ವತಃ ಬ್ರಹ್ಮ, ವಿಷ್ಣು, ಮಹೇಶ್ವರರೇ ಭೂಲೋಕಕ್ಕೆ ಬಂದು ಪಶುಪಾಲನೆ ಮಾಡಿ, ನಂತರ ವಿಷ್ಣುವೇ ತನ್ನ ಮಕ್ಕಳಿಗೆ ಈ ಪಶುಪಾಲನೆಯನ್ನು ಒಪ್ಪಿಸಿ ಹೋದ

ಎಂದು ಹೇಳಿಕೊಳ್ಳುವುದರ ಮೂಲಕ ಹಿರಿಮೆಯನ್ನು ತಳೆಯುವುದನ್ನು ಗುರುತಿಸಿ ವಿವರಿಸಿರುತ್ತೇನೆ. ಇವರು ತಮ್ಮ ದೇವರ ಸೃಷ್ಟಿಗೂ ಒಂದು ಕತೆಯನ್ನು ಕಟ್ಟಿದ್ದು ಕಾಡುಗೊಲ್ಲರಲ್ಲಿಯೂ ಇಂತಹ ಕತೆ ಇರುವುದರ ಹೋಲಿಕೆಯನ್ನು ಕೊಟ್ಟಿರುತ್ತೇನೆ.

ಸಮುದಾಯದಾದ್ಯಂತ ಇರುವ ಮಾತೃಆರಾಧನ ಪದ್ಧತಿಗಳ ಮೂಲಕ ಇದು ಮಾತೃಪ್ರಧಾನ ಸಮುದಾಯವಾಗಿದ್ದುದನ್ನು ಗುರುತಿಸಿರುತ್ತೇನೆ. ಸಾಮುದಾಯಿಕ ಜೀವನಪದ್ಧತಿ ಇದ್ದ ಎಲ್ಲಾ ಬುಡಕಟ್ಟುಗಳಲ್ಲಿಯೂ ಸಾಮಾನ್ಯವಾಗಿದ್ದುದು ಮಾತೃಮೂಲೀಯವಾಗಿ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದ ವಿಧಾನವೇ. ಈ ಬುಡಕಟ್ಟಿನಲ್ಲಿಯೂ ಕೆಲವು ಸ್ತ್ರೀ ಮೂಲದ ಬೆಡುಗಗಳಿದ್ದು, ಮಾತೃಮೂಲೀಯವಾಗಿದ್ದ ವಾಸ್ತವವನ್ನು ಅವು ಸೂಚಿಸುತ್ತವೆ. ಈ ಪದ್ಧತಿಯಿಂದ ವಿಚಲಿತವಾದ ಕುಟುಂಬವು, ಖಾಸಗೀ ಆಸ್ತಿಯ ಕಡೆಗೆ ಹೊರಳಿದಾಗ ಪಿತೃಪ್ರಧಾನತೆಯು ಈ ಸಮುದಾಯದಲ್ಲಿ ಕಾಲಿರಿಸಿದ್ದು ಸ್ಪಷ್ಟವಾಗಿಯೇ ತಿಳಿದುಬರುತ್ತದೆ. ಸಾಮುದಾಯಿಕ ಜೀವನ ಪದ್ಧತಿಯಲ್ಲಿ ಹಾಸುಹೊಕ್ಕಾಗಿರುವುದು ಅಖಂಡ ಮಾನವತ್ವ. ಕ್ರಮೇಣ ಈ ಜೀವನ ಪದ್ಧತಿ ಬದಲಾದಾಗ ಅಲ್ಲಿ ಅಮಾನವೀಯತೆ ಮತ್ತು ಲಿಂಗಸಂಬಂಧೀ ವಿರೂಪಗಳೂ ಪ್ರವೇಶಿಸಿದ್ದು ಇದರ ವಿವರಗಳನ್ನು ಮೂರನೇ ಅಧ್ಯಾಯದಲ್ಲಿ ಗ್ರಹಿಸಿರುತ್ತೇನೆ.

ಸಮುದಾಯದಲ್ಲಿ ಇತಿಹಾಸವು ಲಭ್ಯವಾಗುವ ಕಾಲಘಟ್ಟವೇ ಸಾಮಾನ್ಯವಾಗಿ ಸಂಘರ್ಷದ ಘಟ್ಟವೂ ಆಗಿರುತ್ತದೆ. ತಂದೆಯ ಪ್ರಾಧಾನ್ಯವನ್ನು, ಆತನ ಬಲವಂತದ ಹೇರಿಕೆಯನ್ನು ಒಪ್ಪಿಕೊಳ್ಳದೆ ದಾನಸಾಲಿಯಮ್ಮ ತನ್ನ ಹಟ್ಟಿಯಿಂದ ಹೊರಬಿದ್ದು ತನ್ನಿಚ್ಛೆಯಂತೆ ವಿವಾಹವಾಗುತ್ತಾಳೆ, ಮಕ್ಕಳನ್ನು ಪಡೆಯುತ್ತಾಳೆ. ಅದುವರೆಗೂ ಇದ್ದ ಸೋದರ ವಿವಾಹದಂತಹ ವ್ಯವಸ್ಥೆಯನ್ನು ಮುರಿಯುವ ಶಕ್ತಿಯು ಇವಳಲ್ಲಿದ್ದು ನಿರ್ಬಂಧ ರಹಿತವಾದ ಬುಡಕಟ್ಟಿನ ಮೂಲ ಜೀವನ ಪದ್ಧತಿಗೆ ಇವಳು ಉದಾಹರಣೆಯಾಗುತ್ತಾಳೆ. ಕಾಲಕ್ರಮೇಣ ಅಲ್ಲಿಗೆ ಕಾಲಿರಿಸಿದ ಪುರುಷ ಪ್ರಾಧಾನ್ಯತೆವನ್ನು ಸಹಿಸಿಕೊಳ್ಳುತ್ತಲೇ ಅನಿವಾರ್ಯವಾಗಿ ಸಂಧಾನದ ಮಾರ್ಗ ಹಿಡಿಯುತ್ತಾಳೆ. ಹೀಗೆ ಒಂದು ಬಗೆಯ ಸಂಕ್ರಮಣ ಕಾಲದ ಸಂಕೀರ್ಣ ಮನಃಸ್ಥಿತಿಯ ಹೆಣ್ಣಾಗಿ ಇವಳು ಕಾಣಿಸಿಕೊಳ್ಳುತ್ತಾಳೆ.

ಈಕೆಯ ಮಗಳಾದ ರಾಯಮ್ಮ ತನ್ನ ಸೋದರರನ್ನು ಸಾಕಿ, ಶಸ್ತ್ರವಿದ್ಯೆ ಕಲಿಸಿ, ತಂತ್ರರೂಪಿಸಿ ತನ್ನ ತಾಯಿಯ ಘನತೆಯನ್ನು ಉಳಿಸಿಕೊಳ್ಳುವ ಮತ್ತು ತಮ್ಮ ಹಕ್ಕುಗಾರಿಕೆಯನ್ನು ಸ್ಥಾಪಿಸುವ ಪ್ರಯತ್ನದಲ್ಲಿ ತೊಡಗುತ್ತಾಳೆ. ತಾತನಿಂದ ತಮಗೆ ಬರಬೇಕಾಗಿದ್ದ, ಆದರೆ ತಂದೆಯ ಬಳಿಯಿದ್ದ ಆಸ್ತಿಯನ್ನು ಪಡೆಯಲು ಸೋದರರ ಮೂಲಕ ಹೋರಾಟ ನಡೆಸಿ ಯಶಸ್ವಿಯಾಗುತ್ತಾಳೆ. ಹೀಗೆ ತಾಯಿಯ ಘನತೆಯನ್ನು ಈ ಮೂಲಕ ಎತ್ತಿ ಹಿಡಿದು, ಮಾನವೀಯತೆಯಿಂದಲೇ ಮಾನವ ಹಕ್ಕುಗಳಿಗಾಗಿ ಹೋರಾಡುವ ಸ್ತ್ರೀವಾದಿಯಾಗುತ್ತಾಳೆ. ಈ ಬುಡಕಟ್ಟಿನ ಮಹಿಳೆಯರ ಮತ್ತೊಂದು ವಿಶೇಷವೆಂದರೆ ಇವರ ಬೌದ್ಧಿಕ ತಿಳುವಳಿಕೆ. ಪ್ರಾಂಗಯ್ ಡಿ ಬೊನೆಯು ಪ್ರಸ್ತಾಪಿಸುವ 'ಜೀವಪರಿಸರ ಸ್ತ್ರೀವಾದದ' ಪ್ರಕಾರ ಪುರುಷನು ಬೌದ್ಧಿಕ ನೆಲೆಯುಳ್ಳವನಾದ ಕಾರಣ ಆತನನ್ನು 'ಮಾನವ'ನೆಂದು ಗುರುತಿಸಲಾಗುತ್ತದೆ. ಮಹಿಳೆಯು ಹೊಂದಿದ ದೈಹಿಕ ನೆಲೆಯ ಕಾರಣ ಆಕೆಯನ್ನು ಪ್ರಕೃತಿಯ ಜೊತೆಗೆ ಗುರುತಿಸಲಾಗುತ್ತದೆ. ಯಾವುದು

ದೈಹಿಕ ಹಾಗೂ ಪ್ರಕೃತಿಯೊಂದಿಗೆ ಗುರುತಿಸಲ್ಪಡುತ್ತದೋ ಅದು ಬೌದ್ಧಿಕ ಹಾಗೂ 'ಮಾನವ'ಕ್ಕಿಂತ ಕೆಳದರ್ಜೆಗೆ ಇಳಿಯುತ್ತದೆ. ಆದ್ದರಿಂದ 'ಕೀಳು' ಸ್ಥಾನದಲ್ಲಿರುವ ಮಹಿಳೆಯರನ್ನು ತಮ್ಮ ಅಧೀನರನ್ನಾಗಿಸಲು ಪುರುಷರಿಗೆ ನೈತಿಕ ಹಕ್ಕುಗಳು ಒದಗುತ್ತವೆ. ಹೀಗೆ ಹೆಣ್ಣನ್ನು ಪ್ರಕೃತಿ ನೆಲೆಯಲ್ಲಿ ಗುರುತಿಸಿ, ಬೌದ್ಧಿಕ ಎತ್ತರ ಇವಳಿಗಿಲ್ಲವಾದ ಕಾರಣ ಎರಡನೆಯ ಪ್ರಜೆಯೆಂದು ಗುರುತಿಸುವುದು ಪುರುಷಪ್ರಣೀತ ಹೇಳಿಕೆಯಾಗಿವೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ರಾಯಮ್ಮನ ಸ್ತ್ರೀಪರ ಕಾಳಜಿ, ಮಾನವ ಹಕ್ಕುಗಳಿಗಾಗಿ ನಡೆಸಿದ ಕಾರ್ಯತಂತ್ರ, ಪರಕೀಯರ ದಾಳಿಯಿಂದ ತನ್ನವರನ್ನು ಕಾಪಾಡಿದ್ದು, ಅವಳ ಬೌದ್ಧಿಕತೆ ಮತ್ತು ಸಾಹಸವೇ ಎಂಬುದು ವಿಶೇಷವೆನಿಸುತ್ತದೆ. ಎಂದರೆ ಇಲ್ಲಿ 'ಪ್ರಕೃತಿಯು ಮೌನಿಯೂ ನಿಷ್ಕ್ರಿಯವೂ ಆಗಿರುವ ಬದಲು ತನ್ನ ಅಸ್ತಿತ್ವವನ್ನು ಸಬಲವಾಗಿ ಮಂಡಿಸುತ್ತದೆ. ಹಾಗೆ ನೋಡಿದರೆ ಇದು ಪ್ರಚಲಿತ ಸಮುದಾಯಗಳ ಸಮಕಾಲೀನ ವಾಸ್ತವವೂ ಹೌದು. ದೇವನೂರು ಮಹಾದೇವರ 'ಒಡಲಾಳ ದ ಸಾಕಮ್ಮನಾಗಲೀ, ಕುಂವೀಯವರ ಅರಮನೆ ಕಾದಂಬರಿಯ ಹತ್ತಾರು ದಲಿತ ಪಾತ್ರಗಳೇ ಆಗಲಿ ಈ ಬಗೆಯ ಧೀಶಕ್ತಿ ಮತ್ತು ಕರ್ತೃತ್ವಶಕ್ತಿಗಳ ಸಂಯೋಜನೆಯೇ ಆಗಿದ್ದಾರೆ.

ಗೌರಸಮುದ್ರದ ಮಾರಮ್ಮ, ಯರಮಂಚಿನಾಯಕನ ಬಗ್ಗೆ ತಳೆದ ಮಾನವೀಯತೆ, ಆಕೆ ತನ್ನವರಲ್ಲಿ ಬೆಳೆಸಿದ ಜಾತ್ಯತೀತತೆ, ಆಕ್ರಮಣಕಾರೀ ಶಕ್ತಿಗಳ ವಿರುದ್ಧ ನಡೆಸಿದ ಹೋರಾಟಗಳು ಈಕೆಯ ಪ್ರಬುದ್ಧತೆಯನ್ನು ಮತ್ತು ಸಹಜ ಶೌರ್ಯವನ್ನು ಸ್ಪಷ್ಟೀಕರಿಸುತ್ತವೆ.

ಹಾಗೆಯೇ ಮುಂಗಲು ದೇವಮ್ಮ, ತಮ್ಮನಿಗೆ ಪ್ರೇರಕಶಕ್ತಿಯಾಗಿ, ಮಾಟದಂತಹ ವಿದ್ಯೆಯನ್ನು ಸಮುದಾಯದ ಅನುಕೂಲಕ್ಕಾಗಿ ಬಳಸಿಕೊಳ್ಳುತ್ತಿದ್ದು, ಆದರೆ ಮುಂದೆ ಅಮಾನುಷವಾಗಿ ಹತ್ಯೆಗೊಳಗಾಗುತ್ತಾಳೆ. ಸಮುದಾಯದಲ್ಲಿ ಒಂದು ಕಹಿನೆನಪಾಗಿ, ತವರವರ ಪಾಲಿಗೆ ಅಭಿಮಾನೀ ದೇವತೆಯಾಗಿ ಪರಿಗಣಿಸಲ್ಪಟ್ಟು ಪೂಜೆಗೊಳ್ಳುತ್ತಿದ್ದಾಳೆ. ಇವಳ ಹತ್ಯೆಯ ನಿಗೂಢತೆಯು ಅಮಾನವೀಯ ವಾದ ಪುರುಷ ಪ್ರಧಾನ್ಯ ನಿಲುವಿಗೊಂದು ಉದಾಹರಣೆಯಾಗುತ್ತದೆ. ಮಧ್ಯಕಾಲೀನ ಯೂರೋಪಿನಲ್ಲಿ ಕ್ರೈಸ್ತಧರ್ಮವು ನಡೆಸಿದ 'ವಿಚ್ ಹಂಟಿಂಗ್' ಅನ್ನು ಇಂಥ ಕಥನಗಳು ನೆನಪಿಗೆ ತರುತ್ತವೆ. ಒಂದು ಅರ್ಥದಲ್ಲಿ ಇವು ದೇಶೀ ಜ್ಞಾನಪರಂಪರೆಗಳ ಮೇಲೆ ಅದರದೇ ಇತರ ನೆಲೆಗಳಿಂದ ನಡೆದ ಆಕ್ರಮಣವೂ ಹೌದು.

ಹಾಗೆಯೆ ಮಲೆಯಮ್ಮನ ಕಾರ್ಯತಂತ್ರ, ಯುಕ್ತಿಯಿಂದ ತನ್ನ ದನಕರುಗಳನ್ನೇ ಶಸ್ತ್ರಾಸ್ತ್ರಗಳಂತೆ ಬಳಸಿ ಅರಸುಶಕ್ತಿಯನ್ನು ಮಣಿಸಿದ ಬುದ್ಧಿವಂತಿಕೆ, ಚಾಣಾಕ್ಷತನ ಗಮನ ಸೆಳೆಯುವಂತಹುದು, ತಮ್ಮಿಂದ ಯಾವುದೇ ಅಪರಾಧ ನಡೆಯದಿದ್ದರೂ ತಮ್ಮ ಮೇಲೆ ಆಕ್ರಮಣ ಮಾಡಲು, ತಮ್ಮ ಸಂಪತ್ತನ್ನು ಅಪಹರಿಸಲು ಬಂದ ಶಕ್ತಿಗಳನ್ನು ಈ ಮಹಿಳೆಯರು ನಾಶಮಾಡುತ್ತಾರೆ. ತನ್ನಣ್ಣ ಕಲ್ಕುಡನ ಕೈಕಾಲು ಕತ್ತರಿಸಿದ ರಾಜನಿಗೆ ಕಲ್ಲುರ್ಟಿ ಬುದ್ಧಿ ಕಲಿಸಿದಂತೆ.[೨೯]

---

೨೯ ಲೇ. ಗಾಯಿತ್ರೀ ನಾವಡ, ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಪಿಎಚ್.ಡಿ. ಪ್ರಬಂಧ, ಗುಲ್ಬರ್ಗ ವಿ.ವಿ. ಗುಲ್ಬರ್ಗ

ಈ ಎಲ್ಲಾ ಸ್ತ್ರೀರೂಪಿಗಳೂ ತಾವು ಸಮುದಾಯಕ್ಕೆ ಸಲ್ಲಿಸಿದ ಕೊಡುಗೆಯೇ ಕಾರಣವಾಗಿ ಆರಾಧಿಸಲ್ಪಡುತ್ತಿದ್ದಾರೆ. ಸ್ಮರಣೆಯಲ್ಲಿ ಉಳಿದಿದ್ದಾರೆ. ಸ್ತ್ರೀಯರಿಂದ ಮಾತ್ರ ಅಲ್ಲ, ಪುರುಷರಿಂದಲೂ ಕೂಡ. ಪುರುಷಜಗತ್ತಿನಲ್ಲಿ ಹೆಣ್ಣು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವುದು ಸಾಮಾನ್ಯವಾಗಿರುವ ವರ್ತಮಾನದಲ್ಲಿ, ತಮ್ಮ ಸ್ವಂತಿಕೆಯನ್ನು ಉಳಿಸಿಕೊಳ್ಳಲೆಂದೇ ಹೋರಾಟಗಳನ್ನು ಮಾಡಬೇಕಾದ ಸಂದರ್ಭವಿದೆ. ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಅನಿವಾರ್ಯವು ಕಾರಣವಾಗಿಯೇ ಅಕ್ಕಮಹಾದೇವಿ ವ್ಯವಸ್ಥೆಯನ್ನು ಪ್ರತಿಭಟಿಸಿ ನಿಲ್ಲುತ್ತಾಳೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಸಾಮುದಾಯಿಕ ಜೀವನ ಪದ್ಧತಿಯಲ್ಲಿ ತೀರಾ ಸಹಜವಾಗಿಯೇ ಸಮಾನ ನೆಲೆಯನ್ನು ಗಳಿಸಿಕೊಂಡಿದ್ದ ಮತ್ತು ಮಾತೃರೂಪೀ ಮೂಲದ ಕಾರಣದಿಂದಾಗಿ ಕೆಲವೊಮ್ಮೆ ಪ್ರಾಧಾನ್ಯತೆಯನ್ನು ಪಡೆದಿದ್ದ, ಶಾಸನಾಧಿಕಾರ ಅಂದರೆ ತಮ್ಮವರನ್ನು ನಿರ್ದೇಶಿಸುತ್ತಿದ್ದ, ಅವಶ್ಯಕ ಸಂದರ್ಭಗಳಲ್ಲೆಲ್ಲಾ ಹೋರಾಟಗಳಲ್ಲೂ ಪಾಲ್ಗೊಳ್ಳುತ್ತಿದ್ದ ಇವರ ಬದುಕಿನ ವೈಖರಿ ಇಂದು ನಮಗೆ ವಿಶೇಷವೆನಿಸಿದರೂ ಅಂದು ಅವರಿಗೆ ತೀರಾ ಸಹಜವಾದುದೇ ಆಗಿದ್ದಿತು. ಈ ಸಹಜತೆಯೇ ಅವರ ಸ್ತ್ರೀಶಕ್ತಿಯಾಗಿದ್ದಿತು. ಇಂತಹ ಸ್ತ್ರೀಶಕ್ತಿಯ ಮಾದರಿಗಳು ಬುಡಕಟ್ಟಿನ ಜೀವನದಲ್ಲಿ ಕಂಡುಬರುವುದು ಸಾಮಾನ್ಯ. ಕರಾವಳೀ ಜಾನಪದದ ಮೌಖಿಕ ಪಠ್ಯಗಳಲ್ಲಿ ಮತ್ತು ಆಚರಣೆಗಳಲ್ಲಿರುವ 'ಸಿರಿ' ತನಗಾದ ಅನ್ಯಾಯವನ್ನು ಪ್ರತಿಭಟಿಸಿ ನಿಲ್ಲುತ್ತಾಳೆ. ಮ್ಯಾಸಬೇಡ ಮಹಿಳೆಯರು ತಮ್ಮತನ ಸ್ಥಾಪಿಸಿಕೊಳ್ಳಲು, ಸಾಂದರ್ಭಿಕವಾಗಿ ಸಮುದಾಯದ ಉಳಿವಿಗಾಗಿ ಹೋರಾಟ ನಡೆಸಲು ಮುಂದಾಗುತ್ತಾರೆ. ಮತ್ತೊಂದು ಗಮನಿಸಬಹುದಾದ ಸಂಗತಿಯೆಂದರೆ ಸಮುದಾಯದ ಅಂದಿನ ವೈಜ್ಞಾನಿಕ ತಂತ್ರಗಾರಿಕೆ ಮಹಿಳೆಯರದೇ ಆಗಿತ್ತೆಂಬುದು. ಮಾಟ–ಮೋಡಿಗೆ ಸಂಬಂಧಿಸಿದಂತೆ ನಾನು ಈ ಮಾತನ್ನು ಹೇಳುತ್ತಾ ಇದು ಇವರ ಬೌದ್ಧಿಕತೆಗೆ ಸಾಕ್ಷಿ ಎಂದು ಹೇಳಬೇಕಾಗುತ್ತದೆ. ಯಾರನ್ನು ಪ್ರಕೃತಿ ನೆಲೆಯಲ್ಲಿ ಗುರುತಿಸಿ ಎರಡನೆಯ ಪ್ರಜೆಯನ್ನಾಗಿ ಪರಿಗಣಿಸಲಾಗಿದೆಯೋ ಅಂತಹ ಸ್ತ್ರೀಯರಲ್ಲಿ ಇರಬಹುದಾದ ಭೌತಿಕ ಮತ್ತು ಬೌದ್ಧಿಕ ಸಾಮರ್ಥ್ಯಕ್ಕೆ ಏಕಕಾಲಕ್ಕೇ ಇವರು ಉದಾಹರಣೆಯಾಗುತ್ತಾರೆ. ಸಮುದಾಯವನ್ನು ಅಂದು ರಕ್ಷಿಸುವಲ್ಲಿ ಈ ಮಹಿಳೆಯರ ಜ್ಞಾನವಾದ 'ಮಾಟ' ಬಹಳಷ್ಟು ಕೆಲಸ ಮಾಡಿದೆ. ಆದರೆ ಇಂದು ಹೇಗಾದರೂ ಉಳಿದು ಬಂದಿರಬಹುದಾದ ಈ ಜ್ಞಾನವನ್ನು ಕಾಪಾಡಿ ಉತ್ತಮ ಉದ್ದೇಶಕ್ಕಾಗಿ ಬಳಸಿಕೊಳ್ಳದೆ ಅವರನ್ನು ಅನುಮಾನದಿಂದ ನೋಡುವ ಸಮುದಾಯದ ರೀತಿ ಅದಕ್ಕೆ ಶೋಭೆ ತರುವಂತಹದಲ್ಲ ಎನಿಸುತ್ತದೆ. ಯೂರೋಪಿನಲ್ಲಿ ಇಂತಹ ಜ್ಞಾನವಿದ್ದ ಕ್ರೈಸ್ತ ಮಹಿಳೆಯರನ್ನು ಮಾರಣವಾಗಿ ಹತ್ಯೆಮಾಡಿದ್ದರಂತೆ, ಈ ಜ್ಞಾನಕ್ಕೆ ಮಾಡಿದ ಅವಮಾನ. ಹಾಗೆಯೇ ಈ ಸಮುದಾಯದಲ್ಲೂ ಬೌದ್ಧಿಕತೆಗೆ ಮಾಡುವ ಅವಮಾನವಿದು. ಅಷ್ಟೇ ಅಲ್ಲ, ಮಾಟಗಾತಿಯರನ್ನು ಬೇಟೆಯಾಡುವ, ಹಿಂಸೆಗೆ ಒಳಪಡಿಸುವ ಈ ಕ್ರೂರ ವಿಧಾನವು ನಮ್ಮ ಕಾಲದ ಭಾರತದಲ್ಲಿಯೂ ಪ್ರಚಲಿತವಾಗಿದೆ. ಇಲ್ಲಿಯೂ ಬಲಿಯಾಗುವವರು ಬುಡಕಟ್ಟುಗಳ ಮಹಿಳೆಯರೇ ಆಗಿರುತ್ತಾರೆ.

ಹೀಗೆ ಬೌದ್ಧಿಕ ಮತ್ತು ಭೌತಿಕವಾದ ಸಾಹಸಗುಣ ಬುಡಕಟ್ಟಿನ ಮಹಿಳೆಯರ ಸಹಜಗುಣಗಳೇ ಆಗಿದ್ದವು. ಈ ಕಾರಣದಿಂದಾಗಿಯೇ ತಮ್ಮಟಕಲ್ಲಿನ ಓಬವ್ವನಂತಹ ವ್ಯಕ್ತಿ ತನ್ನ ಸಮುದಾಯದಲ್ಲಿ ಹೋರಾಟದ ಮನಸ್ಸನ್ನು ಬೆಳೆಸಲು, ತನ್ನವರ ಮೇಲೆ ಆಕ್ರಮಣ ಮಾಡಿದವನ ಗರ್ವ ಮುರಿಯಲು ತನ್ನ

ಸೌಂದರ್ಯವನ್ನೇ ಅಸ್ತ್ರವನ್ನಾಗಿ ಬಳಸಿಕೊಂಡು ಅದನ್ನು ಸಾಧ್ಯ ಮಾಡುತ್ತಾಳೆ. ಹೀಗೆ ಒಂದಲ್ಲ ಒಂದು ಬಗೆಯಲ್ಲಿ ತಮ್ಮ ಸಮುದಾಯದ ಏಳಿಗೆ, ಉಳಿವಿಗಾಗಿ ಶ್ರಮಿಸಿದವರೇ ಈ ಶಕ್ತಿಗಳು.

ದಾನಸಾಲಿ ಎಂಬ ಪದ ನಿರ್ವಚನಗೊಳ್ಳುವುದೇ ಪಶುಪಾಲಕ ಮೂಲದಿಂದ 'ದಾನ' ಎಂದರೆ ದನಕರುಗಳನ್ನು ಸಾಕುವುದು ಎಂಬರ್ಥದಲ್ಲಿ. ಹೀಗೆ ತಂದೆಯಿಂದ ದೂರವಾದರೂ ತನ್ನದೇ ದನ ಗಂಪಳವನ್ನು ಕಟ್ಟಿ ಬದುಕನ್ನು ಕಟ್ಟಿಕೊಳ್ಳುವಷ್ಟು ಜಾಣ್ಮೆ, ಸ್ವಂತಿಕೆ ಹೊಂದಿದ್ದವಳೀಕೆ. ಪಶುಪಾಲನೆಯ ಒಂದು ಭಾಗವಾದ ಹೈನುಗಾರಿಕೆಯನ್ನು ಸಮರ್ಥವಾಗಿ ನಿಭಾಯಿಸಿ ತಮ್ಮ ಸಮುದಾಯದ ಅಗತ್ಯಗಳನ್ನು ಪೂರೈಸುತ್ತಿದ್ದವರೇ ಈ ಮಹಿಳೆಯರು. ಉದಾ: ಕಂಚವ್ವ, ಕಾಮವ್ವ.

ಈ ಎಲ್ಲಾ ಹಿನ್ನೆಲೆಯಿಂದ ನೋಡಿದಾಗ ಸಹಜವಾಗಿಯೇ ಸಮಾನ ನೆಲೆಯಲ್ಲಿ ದುಡಿಯುತ್ತಿದ್ದ, ಸಮುದಾಯದ ಪ್ರತಿಯೊಂದು ಆಗು-ಹೋಗುಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದ- ಹೋರಾಟದ ಮುಂಚೂಣಿಯಲ್ಲಿರುತ್ತಿದ್ದ ಸ್ತ್ರೀಶಕ್ತಿಗಳಾಗಿ ಇವರು ಕಂಡುಬರುತ್ತಾರೆ. ಮತ್ತು ಇದು ಇವರಿಗೆ ತೀರಾ ಸಹಜವಾಗಿತ್ತೆಂಬುದು ಗಮನಿಸಬೇಕಾದ ಸಂಗತಿಯಾಗಿದ್ದು, ಇದೇ ಭಾರತೀಯ ಮಹಿಳೆಯ ಸಹಜಗುಣ ಎಂದು ಹೇಳಲು ಸಾಧ್ಯವಾಗುತ್ತದೆ. ಭಾರತೀಯ ಮಹಿಳೆಯೆಂದರೆ ಅಬಲೆ, ದುರ್ಬಲೆ ಎಂಬ ವಾದವಿದ್ದು, ಸಬಲಳಾಗಲು ಪಾಶ್ಚಿಮಾತ್ಯ ಮಾದರಿಗಳನ್ನು ಗಮನಿಸಬೇಕಾಗಿದೆ ಎಂದು ವಿಚಾರ ಮಾಡುವ ಸನ್ನಿವೇಶದಲ್ಲಿ ತೀರಾ ಸಹಜವಾಗಿಯೇ ಸಬಲತೆಯನ್ನು ಹೊಂದಿದ್ದ ಈ ಸಮುದಾಯದ ಮಹಿಳೆಯರು ಭಾರತೀಯ ಮಹಿಳೆಯ ಸ್ತ್ರೀ ಸಬಲತೆಗೆ ಮಾದರಿಗಳಾಗಿ ನಿಲ್ಲುತ್ತಾರೆ. ಇದು ಇಡೀ ಭಾರತೀಯ ಮಹಿಳೆಯ ನಿಜವಾದ ಸ್ತ್ರೀವಾದ ಎನಿಸುತ್ತದೆ. ಕಾರಣ ಅವರು ಬದುಕಿದ ಕ್ರಮವೇ ಅವರ ವಾದ. ಅರ್ಥಾತ್ ಅವರ ವಿಚಾರ.

ಕರಾವಳಿಯ 'ಸಿರಿ'ಯಂತೆಯೇ ಗಡಾಲಗಂಗಿ – ಪುರುಷನ ಕ್ರೌರ್ಯವನ್ನು, ತಮಗಾದ ಅನ್ಯಾಯವನ್ನು ಪ್ರತಿಭಟಿಸಿ ನಿಲ್ಲುವ ಮಾದರಿಗೆ ಉದಾಹರಣೆಯಾಗುತ್ತಾಳೆ. ಕೊನೆಗೆ ಅಸಹಾಯಕತೆಯಿಂದ ಶಾಪಕೊಡುವಷ್ಟು ಕಠಿಣವಾಗುತ್ತಾಳೆ.

ಈ ಸಂಸ್ಕೃತಿಯಲ್ಲಿ ವೈರುಧ್ಯಗಳೇ ಇಲ್ಲ, ಎಲ್ಲರೂ ಸಬಲರು ಎಂಬುದು ನನ್ನ ವಾದವಲ್ಲ. ದಾನಸಾಲಿ ತನ್ನ ಗಂಡನೊಂದಿಗೆ ಮಾಡಿಕೊಳ್ಳುವ ಅನುಸಂಧಾನ, ಮುಂಗಲು ದೇವಮ್ಮನನ್ನು ಅಮಾನುಷವಾಗಿ ಕೊಂದದ್ದು, ಕಂಚವ್ವ ಕಾಮವ್ವನನ್ನು ಆರಾಧಿಸಬೇಕಾದ ನೆಲೆಯಲ್ಲಿ ಅವರನ್ನೇ ಗೌಣವಾಗಿಸಿರುವುದು, ವರ್ತಮಾನದಲ್ಲಿರುವ ಪುರುಷ ಪ್ರಾಧಾನ್ಯ, ಪುರುಷ ದೇವತೆಗಳ ವೈಭವೀಕರಣ ಇವೆಲ್ಲಾ ವೈರುದ್ಧ್ಯಕ್ಕೆ ಸಾಕ್ಷಿಗಳು. ಇದಕ್ಕೆ ಕಾರಣಗಳು ಸಾಮುದಾಯಿಕ ಜೀವನ ವ್ಯವಸ್ಥೆಯಿಂದ, ಖಾಸಗೀ ಆಸ್ತಿ ಮತ್ತು ಏಕ ಕುಟುಂಬ ವ್ಯವಸ್ಥೆ ರೂಢಿಗೆ ಬಂದಾಗ, ಏಂಗೆಲ್ಸ್ ಅಭಿಪ್ರಾಯದಂತೆ ಹೆಣ್ಣು ಸಹ ಆಳುವ ಪುರುಷ ಶಕ್ತಿಯ ಹಿಡಿತಕ್ಕೆ ಒಳಗಾಗಬೇಕಾಯಿತು. ಪಶುಪಾಲಕತನದ ಹಂತದಿಂದಲೇ ಪುರುಷಪ್ರಾಧಾನ್ಯ ಪ್ರಾರಂಭವಾಯಿತು. ಅಧ್ಯಯನಕ್ಕೆ ನಿಲುಕುವ ಕಾಲಘಟ್ಟವೇ ಇಂತಹ ಸಂಕ್ರಮಣದ ಕಾಲ. ಹಾಗಾಗಿ ಮಾತೃಮೂಲೀಯವಾಗಿದ್ದ ನೆಲೆಯಿಂದ ಸ್ತ್ರೀ ಸಬಲತೆ, ಸಮಾನತೆ ಕಾಣುವಂತೆಯೇ ಬದಲಾದ ಸನ್ನಿವೇಶಕ್ಕೆ

ತಕ್ಕಂತೆ ಪುರುಷಾಕ್ರಮಿತ ಹೆಣ್ಣುಗಳ ಅಧೀನಸ್ಥಿತಿಯೂ ಇಲ್ಲಿ ಕಂಡು ಬರುತ್ತಿದ್ದು, ಕ್ರಮೇಣ ತನ್ನ ಸ್ಥಾನದಿಂದ ಕೆಳಗೆ ತಳ್ಳಲ್ಪಟ್ಟು ಭಾರತೀಯ ಮಹಿಳೆಯ ಸ್ಥಿತಿಗತಿಗಳಿಗೆ ಇದೊಂದು ಐತಿಹಾಸಿಕ ದಾಖಲೆಯಾಗುತ್ತದೆ.

ಸ್ತ್ರೀ ಶಕ್ತಿಗಳೇನಿದ್ದರೂ ಗತಕಾಲದ ಪಳೆಯುಳಿಕೆಗಳು. ಸಂಬಂಧಿಸಿದ ಸ್ತ್ರೀಶಕ್ತಿಗಳನ್ನು ಆರಾದನಾ ನೆಲೆಯಲ್ಲಿರಿಸುವುದೂ ಕೂಡ ಇದರ ಒಂದು ಭಾಗವೇ ಎಂದು ಸುಲಭವಾಗಿ ಅರ್ಥೈಸಿಕೊಳ್ಳಲು ಸಾಧ್ಯವಿದೆ. ಆದರೆ ಆರಾಧನೆ, ಆಚರಣೆಗಳ ಮೂಲಕ ಸಮುದಾಯ ಇಂತಹ ಸ್ತ್ರೀ ಶಕ್ತಿಗಳನ್ನು ಸ್ಮರಿಸುವುದು ಗೌರವಿಸುವ ಒಂದು ವಿಧಾನವೇ ಆಗಿರುವುದನ್ನು ಮತ್ತು ಇವರೊಂದಿಗಿನ ಸಾಂಸ್ಕೃತಿಕ ಬಂಧುತ್ವವನ್ನು ಈ ಮೂಲಕವಾಗಿ ಉಳಿಸಿಕೊಳ್ಳುವ ಪ್ರಯತ್ನವೂ ಆಗಿದೆ ಎಂಬುದನ್ನು ಗುರುತಿಸಿರುತ್ತೇನೆ.

'ಸಂಸ್ಕೃತಿ ಏಕಕಾಲಕ್ಕೆ ಸ್ಥಿರವೂ ಹೌದು ಮತ್ತು ಚಲನಶೀಲವೂ ಹೌದು' ಎಂಬುದು ಹರ್‌ಕೋವಿಟ್ಸ್‌ನ ಅಭಿಪ್ರಾಯ. ಯಾವುದೇ ಸಂಸ್ಕೃತಿಯೂ ಇದರಿಂದ ಹೊರತಾದುದಲ್ಲ. ಮ್ಯಾಸಬೇಡ ಸಮುದಾಯದಲ್ಲಿಯೂ ತನ್ನ ನಡಿಗೆಯಲ್ಲಿ ಅನೇಕ ಬದಲಾವಣೆಗಳಾಗಿರುವುದನ್ನು ಗುರುತಿಸಿರುತ್ತೇನೆ. ದೇವಾಲಯಗಳ ಸ್ವರೂಪ, ಕಥನಗಳ ಸ್ವರೂಪ, ನಾಯಕಿಯರ ಆರಾಧನೆಯ ಸ್ವರೂಪ ಮುಂತಾಗಿ ಅವಸ್ಥಾಂತರಗೊಂಡಿರುವುದನ್ನು ಗುರುತಿಸಿರುತ್ತೇನೆ. ಸಾಂಸ್ಕೃತಿಕ ನಾಯಕಿಯರಿಗೆ ಸಂಬಂಧಿಸಿದಂತೆ ಬುಡಕಟ್ಟಿನ ಆರಾಧನಾ ಪದ್ಧತಿಗಳೂ ಇದ್ದು, ಮಾತೃರೂಪೀ ನೆಲೆಯ ಮೂಲದಿಂದ ಬಂದ ಈ ಸಮುದಾಯ 'ಅಮ್ಮನ' ಆರಾಧನೆಯನ್ನು ಇಲ್ಲಿ ಈ ನಾಯಕಿಯರ ಆರಾಧನೆಯೊಂದಿಗೆ ಸಮೀಕರಿಸಿದೆ. ನಾಯಕಿ ಅಂದರೆ ಬುಡಕಟ್ಟಿನ 'ತಾಯಿ' ಎಂಬ ಆರಾಧನಾಭಾವ ಇಲ್ಲಿ ಪ್ರಾರಂಭಗೊಂಡಿದ್ದೇ ಇದಕ್ಕೆ ಕಾರಣ. ಹೀಗೆ ಹಟ್ಟಿಯ ಅಮ್ಮನಾದವಳು ಹಟ್ಟಿ ಗ್ರಾಮೀಕರಣ ಗೊಂಡಾಗ ಗ್ರಾಮದ ಎಲ್ಲಾ ಜನವರ್ಗ ಜಾತಿಭೇದವಿಲ್ಲದೆ ಪೂಜಿಸುವ ಹಂತದಲ್ಲಿ ನೆಲೆಗೊಂಡಳು. ಕಾಲಾನಂತರದಲ್ಲಿ ಅಮ್ಮನ ಆರಾಧನೆಯೊಂದಿಗೆ ರೋಗ ರುಜಿನ ತರಿಸುವ, ಪರಿಹರಿಸುವ ದೇವತೆಗೆ ಮಾಡುವ ಬಲಿ, ಸಿಡಿ, ಬಾಯಿಬೀಗ, ಬೇವಿನ ಸೀರೆ ಇಂತಹ ಆರಾಧನಾ ಕ್ರಮಗಳು ರೂಢಿಗೆ ಬಂದಿರುವುದನ್ನು ಇಲ್ಲಿ ಗಮನಿಸಿರುತ್ತೇನೆ. ಈ ಆಚರಣೆಗಳೇ ಪ್ರಧಾನವಾದಾಗ ಮೂಲದ ಬುಡಕಟ್ಟಿನ ನಾಯಕಿಯೆಂಬ ವಿಚಾರವೇ ಮರೆಯಾಗುವ ಸಂದರ್ಭವೂ ಇಲ್ಲಿ ಇಲ್ಲದಿಲ್ಲ. ಇದರಿಂದ ಜತನದಿಂದಲೇ ಇವರನ್ನು ಕಾಯ್ದುಕೊಳ್ಳುವ ಮತ್ತು ಮಾದರಿಗಳನ್ನಾಗಿಸಿಕೊಳ್ಳುವ ಅಗತ್ಯವೂ ಇದೆ ಎಂಬ ಸಂಗತಿಯ ಕಡೆ ಗಮನಸೆಳೆಯುವ ಪ್ರಯತ್ನ ಮಾಡಿರುತ್ತೇನೆ. ಮಾತೃದೇವತೆಗಳೆಂದರೆ ಸಾಮಾನ್ಯವಾಗಿ ಅವರು ಪೂಜಿಸಲ್ಪಡುವುದೇ ತಮ್ಮ ಪ್ರಜನನ ಶಕ್ತಿಯ ಮೂಲಕ ಎಂಬ ವಾದವಿದೆ. ಆದರೆ ಈ ಬುಡಕಟ್ಟಿನಲ್ಲಿ ಮೂಲತಃ ಈ ಮಾತೃದೇವತೆಗಳು ಅರ್ಥಾತ್ ಸಾಂಸ್ಕೃತಿಕ ನಾಯಕಿಯರು ಸಮುದಾಯವನ್ನು ಕಟ್ಟಿಬೆಳೆಸಿದ ಶಕ್ತಿಗಳು. ಇವರು ಮಾತೆಯರಾಗಿದ್ದರೇ ಇಲ್ಲವೇ ಎಂಬುದು ಇಲ್ಲಿ ಮುಖ್ಯವಾಗುವುದೇ ಇಲ್ಲ. ಸಮುದಾಯವನ್ನು ಸಂರಕ್ಷಿಸಿದ ಸಾಧನೆಯೇ ಕಾರಣವಾಗಿ ಇವರು ಸ್ಮರಣೆಯಲ್ಲಿ ಉಳಿದುಬಂದು ಆರಾಧಿಸಲ್ಪಡುತ್ತಿದ್ದಾರೆ ಎಂಬುದೇ ವಿಶೇಷ.

ಒಂದೆರಡು ಘಟನೆಗಳ ಉದಾಹರಣೆ ಮೂಲಕ ಬುಡಕಟ್ಟಿನ ಸಹಜ ಗುಣವಾದ ಸ್ತ್ರೀ ಸಬಲತೆ ಸಾಂದರ್ಭಿಕವಾಗಿ ಇದರಲ್ಲಿ ಹೇಗೆ ಬಳಕೆಗೊಳ್ಳುತ್ತದೆ ಎಂಬ ವಿಚಾರವನ್ನು ಸ್ಪಷ್ಟವಾಗಿ ಹೇಳುವುದರ ಮೂಲಕ ಈ ಸಾಧ್ಯತೆಗಳು ಎಲ್ಲಾ ಮಹಿಳೆಯರಿಗೂ ಸಾಧ್ಯವಾಗಬಹುದು ಎಂಬ ವಿಚಾರದ ಕಡೆ ಗಮನಹರಿಸಿರುತ್ತೇನೆ. ಯಾವುದೇ ಸಂಗತಿಯ ವಿಶ್ಲೇಷಣೆಯು ಭೂತಕಾಲದಲ್ಲಿ ರಮಿಸಬೇಕಿಲ್ಲ. ಅದನ್ನು ವರ್ತಮಾನಕ್ಕೆ ತಂದುಕೊಳ್ಳುವುದರಲ್ಲೇ ಅದರ ಸಾರ್ಥಕತೆ ಅಡಗಿರುತ್ತದೆ.

ಈ ಬುಡಕಟ್ಟಿನ ಒಂದು ವೈಲಕ್ಷಣವೆಂದರೆ ಅಂತರಿಕವಾಗಿಯೇ ಇರುವ ಅಸಮಾನತೆ. ಕೆಲವರು ಪಾಳೆಯಗಾರರಾದ್ದದ್ದು, ಪಶುಗಂಪಳದ ಮುಖ್ಯಸ್ಥರಾದದ್ದು – ಇತರರು ಅವರ ಅನುವರ್ತಿಗಳಾಗಿದ್ದದ್ದು ಇದಕ್ಕೆ ಕಾರಣ. ಈ ಮುಖಂಡತ್ವಗುಣವೇ ಕಾರಣವಾಗಿ ಕೆಲವರು ಮೇಲ್ಪದರದಲ್ಲಿ ನಿಂತರೆ ಕೆಲವರು ತಳಹಂತಕ್ಕೆ ಸರಿಯಲ್ಪಟ್ಟರು. ಹೀಗಾಗಿಯೇ ಇಂದು ಕೆಲವರು ಭೂಮಾಲೀಕರಾಗಿದ್ದಾರೆ. ಚಿಕ್ಕ ಹಿಡುವಳಿದಾರರಾಗಿದ್ದಾರೆ. ಕುರಿ ಸಾಕಾಣಿಕೆ ಮಾಡುವವರಿದ್ದಾರೆ ಇವರ ಸಂಖ್ಯೆ ಒಟ್ಟಾರೆ ಕಡಿಮೆಯೇ. ಇವರೊಂದಿಗೆ ಕೃಷಿಕಾರ್ಮಿಕರು, ಇತರೆ ಕೂಲಿಕಾರರು, ೫-೧೦ ಕುರಿ ಮೇಕೆಗಳನ್ನು ಸಾಕಿಕೊಂಡು ಜೀವಿಸುವವರು ಇದ್ದಾರೆ. ಬಂಡವಾಳಶಾಹಿಗಳ ವ್ಯಾಪಾರೀ ಮಂಡಿಗಳಲ್ಲಿ ಕೂಲಿ ಕೆಲಸ ಮಾಡುತ್ತಲೇ ಎಷ್ಟೋ ಮಂದಿ ಹೊಟ್ಟೆಪಾಡನ್ನು ನೀಗಿಸಿಕೊಳ್ಳುತ್ತಿದ್ದಾರೆ.

ನಗರವಾಸಿಗಳಾಗಿರುವವರು, ಮುಂದುವರಿದ ಗ್ರಾಮಗಳಲ್ಲಿ ಸೇರಿಹೋಗಿರುವವರು, ಇದಕ್ಕೆ ಹತ್ತಿರದ ಹಟ್ಟಿಗಳಲ್ಲಿರುವವರ ಸಾಕ್ಷರತೆಯ ಪ್ರಮಾಣ ಉತ್ತಮವಾಗುತ್ತಿದೆ. ಮೂಲೆಗಾಡಿನಲ್ಲಿರುವ ಹಟ್ಟಿ, ಹಳ್ಳಿಗಳಲ್ಲಿ ಅಕ್ಷರದ ಪರಿಧಿಗೆ ಬರದೆ ಇರುವವರೂ ಇದ್ದಾರೆ. ಇದು ಮಹಿಳಾ ಸಾಕ್ಷರರಿಗೂ ಅನ್ವಯವಾಗುತ್ತದೆ. ಪುರುಷರಿಗೆ ಹೋಲಿಸಿದರೆ ಒಟ್ಟಾರೆ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆಯೇ. ಬೆರಳಣಿಕೆಯಷ್ಟು ಮಂದಿ ಮಹಿಳೆಯರು ಪದವೀಧರರಾಗಿದ್ದು ಅವರಲ್ಲಿ ತಾಂತ್ರಿಕ, ವೈದ್ಯಕೀಯ ಶಿಕ್ಷಣ, ಸ್ನಾತಕೋತ್ತರ ಪದವಿ ಪಡೆದು ಉತ್ತಮ ಉದ್ಯೋಗದಲ್ಲಿರುವವರು ಹತ್ತಾರು ಮಂದಿ ಸಿಗುತ್ತಾರೆ. ಪುರುಷರ ಸಂಖ್ಯೆ ಇದಕ್ಕಿಂತ ಸುಮಾರು ಮೂರು ಪಟ್ಟು ಹೆಚ್ಚು. ಮೂಲತಃ ಸ್ತ್ರೀ ಸಮಾನತೆ ಇದ್ದ ಸಮುದಾಯದಲ್ಲಿ ಇಂತಹ ವೈರುಧ್ಯಗಳಿದ್ದು ಇದರಿಂದ ಹೊರಬಂದು ತನ್ನ ಮೂಲದ ಔನ್ನತ್ಯವನ್ನು ಉಳಿಸಿಕೊಂಡು ಘನತೆಯನ್ನು ಪಡೆದು ಇತರ ಸಮುದಾಯಗಳಿಗೆ ಮಾದರಿಯಾಗಬೇಕಾಗಿದೆ. ಜಾಗತೀಕರಣ ಮತ್ತು ಅದರೊಂದಿಗೆ ನಿಂತಿರುವ ಖಾಸಗೀಕರಣದಂತಹ ಸಂದರ್ಭದಲ್ಲಿ, ಆಧುನಿಕ ಕಂಪನಿಗಳು ನೆಲೆನಿಂತಿರುವ ನಾಡಿನಲ್ಲಿ ಜನರಿಗೆ ಮೀಸಲಾತಿಯನ್ನು ಸ್ಪಷ್ಟವಾಗಿ ನಿರಾಕರಿಸುತ್ತಾ ಪ್ರತಿಭೆಗೆ ಮಾತ್ರ ಇಲ್ಲಿ ಆದ್ಯತೆ ಎಂದು ಸಾರಲಾಗುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರ ಮೂಡಿದಾಗ ಇನ್ನೂ ಅಕ್ಷರದ ಅರಿವಿನ ಕಡೆಗೆ ಇದೀಗ ತಾನೆ ಹೆಜ್ಜೆ ಇಡಲಾರಂಭಿಸಿದ ಇಂತಹ ಬುಡಕಟ್ಟು ಸಮುದಾಯದ ಮಹಿಳೆಯರ ಸ್ಥಿತಿಗತಿ ಅಂದರೆ ಅಕ್ಷರ ಸಂಸ್ಕೃತಿಯ ಮೂಲಕ ಅರ್ಥೈಸಲಾಗುವ ಈ ಪ್ರತಿಭೆ ಯಾವ ದೂರದಲ್ಲಿದೆ ಎಂಬುದನ್ನು ಯೋಚಿಸಿದಾಗ ಮತ್ತೆ ಈ ಮಹಿಳೆಯರು ತಮ್ಮದೇ ಆದ ಅಧುನಿಕ ಹಟ್ಟಿಗಳ ಸಂಸ್ಕೃತಿಗೆ ಸೀಮಿತರಾಗಬೇಕಾಗಬಹುದು ಎನಿಸುತ್ತದೆ.

ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ಸರ್ಕಾರದ ಮೀಸಲಾತಿ ನೀತಿ ಕಾರಣವಾಗಿ ಸಮುದಾಯದ ಮಹಿಳೆಯರು ರಾಜಕೀಯದಲ್ಲಿ ಪ್ರವೇಶಾವಕಾಶ ಪಡೆದಿರುವವರಾದರೂ ಎಷ್ಟೋ ಸಂದರ್ಭಗಳಲ್ಲಿ ಅದು ಕಡತಗಳಿಗೆ ಮೀಸಲಾಗಿರುವುದೂ ಇದೆ. ಕೆಲವೆಡೆ ಅವಕಾಶ ಸಿಕ್ಕಿದ್ದರೂ ನಾಮಮಾತ್ರರಾಗಿದ್ದಾರೆ. ಹೆಂಡತಿ ಗ್ರಾಮ ಪಂಚಾಯಿತಿಯ ಅಧ್ಯಕ್ಷೆಯಾಗಿದ್ದರೂ ಗಂಡನೇ ಅಧ್ಯಕ್ಷ ಎಂದು ಕರೆಸಿಕೊಳ್ಳುವ ವಿಪರ್ಯಾಸವೂ ಇದೆ. ಮತ್ತು ಮೇಲ್ಮಟ್ಟದ ರಾಜಕೀಯ ಸ್ಥಾನಗಳಿಗೆಲ್ಲಾ ಪುರುಷರೇ ಬಡಿದಾಡುವಾಗ ಸ್ತ್ರೀಯರ ಬಗೆಗಿನ ಆಲೋಚನೆ ಅಲ್ಲಿ ಪ್ರವೇಶಿಸಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಇದೆ. ಹೀಗೆ ಇಂದಿನ ವರ್ತಮಾನದಲ್ಲಿ ರಾಜಕಾರಣ ಎಂಬುದು ಪುರುಷನ ಸ್ವತ್ತಾಗಿದೆ. ಆದರೆ ಹಿಂದೆ ಸಾಮುದಾಯಿಕ ಜೀವನ ಪದ್ಧತಿಯಲ್ಲಿ ಪುರುಷನ ರಾಜಕೀಯ ಆಸಕ್ತಿಗೆ ಸಮಾನವಾಗಿಯೇ ಮಹಿಳೆಯ ಆಸಕ್ತಿಯೂ ಇದ್ದದ್ದನ್ನು ಈ ಬುಡಕಟ್ಟಿನಲ್ಲಿ ಗುರುತಿಸಬಹುದು. ಸಮುದಾಯದ ಪ್ರತಿ ಕಾರ್ಯಾಚರಣೆಯಲ್ಲಿಯೂ ಇಬ್ಬರಿಗೂ ಸಮಾನ ಆಸಕ್ತಿಗಳಿರುತ್ತಿದ್ದವು. ರಾಯಮ್ಮ, ಮಲೆಯಮ್ಮ, ಮಾರಮ್ಮ ಸಂದರ್ಭಬಂದಾಗ ತಾವೇ ಸಮುದಾಯದ ರಾಜಕಾರಣವನ್ನು ನಿಯಂತ್ರಿಸುತ್ತಿದ್ದರು. ಈ ಮೂಲದಿಂದಲೇ ಬಂದ ಸಹಜವಾಗಿಯೇ ಈ ಶಕ್ತಿಯನ್ನು ಹೊಂದಿರುವ ಮಹಿಳೆಯರನ್ನು ಇಂದು ಈ ಸಮುದಾಯ ಗೌಣವಾಗಿ ಕಾಣುವುದು ಆಕ್ಷೇಪಣೀಯವಾದ ಸಂಗತಿಯಾಗಿದ್ದು ಇದರಿಂದ ಹೊರಬಂದು ಲಿಂಗ ರೂಪಿ ವಿಕಲ್ಪಗಳಿಲ್ಲದ ಆರೋಗ್ಯಪೂರ್ಣ ನೆಲೆಯನ್ನಾಗಿ ಸಮುದಾಯವನ್ನು ರೂಪಿಸಬೇಕಾದ ಅಗತ್ಯದ ದಿಕ್ಕಿನಲ್ಲಿ ನಾನು ವಿಚಾರ ಮಾಡಿರುತ್ತೇನೆ.

ಹಾಗೆಯೆ ಆಕ್ರಮಕಾರಿ ಶಕ್ತಿಗಳು ಉಂಟು ಮಾಡಿದ ಅನರ್ಥವೇ ಕಾರಣವಾಗಿ ಅತ್ಯಂತ ಹೀನಪರಿಸ್ಥಿತಿಯಲ್ಲಿ ದೇವದಾಸಿಯಂತಹ ಪದ್ಧತಿಯಡಿಯಲ್ಲಿ ಸಾಮಾಜಿಕ ಅಪಮಾನ ಅನುಭವಿಸುತ್ತಿರುವ ನಿರ್ದಿಷ್ಟ ಪ್ರದೇಶದಲ್ಲಿರುವ ಈ ಸಮುದಾಯದ ಮಹಿಳೆಯರ ಬಗೆಗೆ ಚರ್ಚಿಸಿ ಅವರನ್ನು ಮಾನವೀಯ ನೆಲೆಯಿಂದ ಕಂಡು ಅವರ ಬದುಕಿಗೊಂದು ತಿರುವನ್ನು ಕೊಡುವುದು ಸಮುದಾಯದ ನೈತಿಕ ಹೊಣೆಗಾರಿಕೆಯಾಗಿರುವುದರ ಬಗ್ಗೆ ಉಲ್ಲೇಖ ಮಾಡಿರುತ್ತೇನೆ.

'ಸ್ತ್ರೀವಾದ' ಎಂದರೆ ಸ್ತ್ರೀಯ ಹಕ್ಕುಗಳಿಗಾಗಿ ಹೋರಾಟ ಮಾಡುವುದು. ಆಕೆಯನ್ನು ಸಮಾನ ಸ್ತರದಲ್ಲಿ ಕಾಣುವಂತೆ ಒತ್ತಾಯಿಸುವುದು. ಇದಕ್ಕಾಗಿ ಹೋರಾಟ ಮಾಡುವವರು ಸಾಮಾನ್ಯವಾಗಿ ಮಹಿಳೆಯರೇ ಆಗಿರುತ್ತಾರೆ. ಪುರುಷರು ಈ ನೆಲೆಯಲ್ಲಿ ಯೋಚಿಸುವುದೇ ಇಲ್ಲ ಎಂದಲ್ಲ. ಸಂಖ್ಯೆ ಕಡಿಮೆಯಷ್ಟೇ. ಇಂತಹ ವಿರಳಗುಂಪಿಗೆ ಸೇರುವ ಈ ಸಮುದಾಯದ ವ್ಯಕ್ತಿಯು ಜಗಳೂರು ಪಾಪನಾಯಕನಾಗಿದ್ದು ತನ್ನ ಸೋದರತ್ತೆಗೆ ತನ್ನ ಮಾವನಿಂದ ಆದ ಅನ್ಯಾಯವನ್ನು ಖಂಡಿಸುತ್ತಾನೆ. ಆತನೊಂದಿಗೆ ತರ್ಕಬದ್ಧವಾಗಿಯೇ ಚರ್ಚೆ ನಡೆಸಿ ಆಕೆ ಆತನೊಂದಿಗೆ ಮತ್ತೆ ಬಾಳುವಂತೆ ಮಾಡುತ್ತಾನೆ. ಈತನ ಈ ಸ್ತ್ರೀಪರ ಕಾಳಜಿ ಮೆಚ್ಚುವಂತಹದಾಗಿದ್ದು ಇದರ ಉಲ್ಲೇಖವನ್ನು ಮಾಡಿರುತ್ತೇನೆ.

ಒಟ್ಟು ನನ್ನ ಅಧ್ಯಯನದಲ್ಲಿ ಗ್ರಹಿಸಿರುವ ಸಂಗತಿಗಳನ್ನು ಮೇಲೆ ವಿವರಿಸಲಾಗಿದ್ದು ಇದು ನನ್ನ ಒಂದು ಪ್ರಯತ್ನವಷ್ಟೇ. ಯಾವುದೇ ಅಧ್ಯಯನವೂ ಸಮಗ್ರವೆಂದು ಭಾವಿಸಿಕೊಳ್ಳುವುದು ತಪ್ಪಾಗುತ್ತದೆ. ಈ ಸಮುದಾಯದಲ್ಲಿರುವ ಐತಿಹಾಸಿಕ ಸ್ತ್ರೀ ನೆಲೆಗಳನ್ನು, ತಮ್ಮ ಸಾಂಸ್ಕೃತಿಕ ಬಂಧುತ್ವವೇ ಕಾರಣವಾಗಿ ಅವು

ವರ್ತಮಾನದಲ್ಲಿ ಆರಾಧನೆ, ಆಚರಣೆಗಳ ಮೂಲಕ ಪ್ರಚಲಿತವಾಗಿವುದನ್ನೂ - ಬುಡಕಟ್ಟನ್ನೂ ಮೀರಿದ ನೆಲೆಯಲ್ಲಿ- ಪೂಜಿಸಲ್ಪಡುತ್ತಿರುವುದನ್ನು ನಿರೂಪಿಸಿದ್ದೇನೆ. ಈ ಅವಸ್ಥಾಂತರಗಳ ಕಾರಣ-ಪರಿಣಾಮಗಳನ್ನು ಬೆಳಕಿಗೆ ತಂದಿದ್ದೇನೆ. ಇಂದಿನ ಸಂದರ್ಭದಲ್ಲಿ ವೈರುಧ್ಯಗಳ ಮಧ್ಯೆ ಬದುಕುತ್ತಿರುವ ಸ್ತ್ರೀಯ ಸ್ಥಿತಿಗತಿಗಳನ್ನು ಹೊರ ಜಗತ್ತಿನ ಮುಂದಿಡುವ ಪ್ರಯತ್ನವನ್ನು ಮಾಡಿರುತ್ತೇನೆ. ಮ್ಯಾಸಬೇಡರ ಹೆಣ್ಣು ಮಕ್ಕಳ ಹಾಡು-ಪಾಡುಗಳ ಈ ಅಧ್ಯಯನವು, ಇಂತಹುದೇ ವ್ಯಥೆಗಳ ನಡುವೆ ನಲುಗುತ್ತಿರುವ ಅರಳುತ್ತಿರುವ ಲಕ್ಷಾಂತರ ಮಹಿಳೆಯರ ಸ್ಥಿತಿಗತಿಗಳ ಗ್ರಹಿಕೆ ಹಾಗೂ ಪರಿಹಾರಗಳಿಗೆ ನೆರವಾದರೆ, ಇಂಥ ಅಧ್ಯಯನವು ಸಾರ್ಥಕವೆಂಬುದು ನನ್ನ ನಂಬಿಕೆ. ಏಕೆಂದರೆ, ಅಲ್ಲಮನು ಹೇಳಿದಂತೆ ಹಿಂದಿನ ಹೆಜ್ಜೆಯನ್ನು ಅರಿಯುವುದು ಇಂದಿನ ಹೆಜ್ಜೆಯನ್ನು ಇಡುವುದಕ್ಕೆ ಅತ್ಯಗತ್ಯವಾದ ಪೂರ್ವಸಿದ್ಧತೆ.

# ಆಧಾರ ಗ್ರಂಥಗಳು


ಅಂಬಳಿಕೆ ಹಿರಿಯಣ್ಣ, ಜಾನಪದ : ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೪.

ಅಗ್ರಹಾರ ಕೃಷ್ಣಮೂರ್ತಿ, ದಾರಾ ಶಿಖೋ ಜೀವನ ಮತ್ತು ಚಿಂತನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩.

ಅನಂತಮೂರ್ತಿ, ಯು.ಆರ್. (ಮೂಲ), ದಾವ್ ದ ಜಿಂಗ್ ಪಥ-ಧರ್ಮ-ಸೂತ್ರ, ಅಕ್ಷರ ಪ್ರಕಾಶನ, ೨೦೦೫.

ಆರ್ವಿಯಸ್ ಸುಂದರಂ (ಅನು), ಕಾಟಮಹಾರಾಜನ ಕಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಈಶ್ವರಪ್ಪ, ಎಂ.ಜಿ., ಮ್ಯಾಸಬೇಡರು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು-೯, ೧೯೮೨.

ಉಷಾ ಎಂ., ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಉಷಾ, ಎಂ., ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಉಷಾ, ಎಂ., ಮಹಿಳೆ ಮತ್ತು ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಕಕ್ಕಿಲ್ಲಾಯ.ಬಿ.ವಿ. ದೇವಿಪ್ರಸಾದ ಚಟ್ಟೋಪಾಧ್ಯಾಯ(ಮೂಲ), ಭಾರತೀಯ ದರ್ಶನಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಎರಡನೇ ಆವೃತ್ತಿ, ೧೯೯೬,

ಕಮಲ, ಎಂ.ಆರ್., ಕಪ್ಪು ಹಕ್ಕಿಯ ಬೆಳಕಿನ ಹಾಡು ಗುಲಾಮ ಪದ್ಧತಿಯ ವಿರುದ್ಧ ಸೆಣೆಸಿದ ಕಪ್ಪು ಮಹಿಳೆಯ ಆತ್ಮಕಥೆಗಳು.

ಕವಿತಾ ರೈ ಬಿ.ಆರ್., ಮಹಿಳೆ: ಅಸ್ತಿತ್ವದ ಸಂಕಥನ ಒಂದು ಪರಿಕಲ್ಪನಾತ್ಮಕ ಅಧ್ಯಯನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

ಕಾಳೇಗೌಡ ನಾಗವಾರ, ಡಾ. ನಟರಾಜ ಹುಳಿಯಾರ್, ಭಾಷೆ ಮತ್ತು ಇತಿಹಾಸ ಸಂಪುಟ-೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮.

ಕುಮಾರಪ್ಪ ಜಿ. ಮೂಲ- ದೇವಿಪ್ರಸಾದ್ ಚಟ್ಟೋಪಾಧ್ಯಾಯ ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪ್ರಕಾಶನ, ೨೦೦೪.

ಕೃಷ್ಣಮೂರ್ತಿ ಹನೂರು, ಕತ್ತಾಲದಾರಿ ದೂರ, ಕನ್ನಡ ಸಾಹಿತ್ಯ ಪರಿಷತ್, ೧೯೮೧.

ಕೃಷ್ಣಮೂರ್ತಿ ಹನೂರು, ಬೇಡನಾಯಕರು ಒಂದು ಜನಪದ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಹೆಚ್.ಡಿ., ಪ್ರಬಂಧ.

ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ -ಉಪಸಂಸ್ಕೃತಿ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨, ೧೯೯೩.

ಕೇಶವ ಶರ್ಮ, ಸ್ತ್ರೀ ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಕೇಶವನ್ ಪ್ರಸಾದ್.ಕೆ (ಸಂ.) ಮಲೆಮಾದೇಶ್ವರ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೧೯೯೭

ಕೋಸಂಬಿ ಡಿ.ಡಿ. ಪುರಾಣ ಮತ್ತು ವಾಸ್ತವ, ಅನು: ಟಿ.ಎಸ್. ವೇಣುಗೋಪಾಲ್, ಶೈಲಜಾ, ಚಿಂತನ ಉತ್ತರ ಕನ್ನಡ ಶಿರಸಿ, ಉತ್ತರ ಕನ್ನಡ, ೨೦೦೩.

ಗಂಗಾಧರ ದೈವಜ್ಞ (ಸಂ). ಮಾಳಿಂಗರಾಯನ ಕಾವ್ಯ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೧೯೯೯

ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ – ಬುಡಕಟ್ಟು ಅಧ್ಯಯನ ಮಾಲೆ–೨ ಹುಟ್ಟು–ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಗಾಯತ್ರಿ ನಾವಡ, ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೧೯೯೯.

ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ : ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಗಾಯತ್ರೀ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು, ೨೦೦೩.

ಗಿರಿಜ, ವಿ., ಚೌಡಮ್ಮನ ಜಾತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

ಗೋಪಾಲಕೃಷ್ಣಯ್ಯ, ಕೆ.ಎಲ್., ಪುರಾಣ (ಸಾಹಿತ್ಯಪಾರಿಭಾಷಿಕ ಮಾಲೆ)., ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨, ೧೯೯೦.

ಗೋಪಾಲಕೃಷ್ಣರಾವ್.ಕೆ.ಎಲ್. ಮೂಲ: ಎಂಗೆಲ್ಸ್. ಕುಟುಂಬ ಖಾಸಗೀ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ. ೧೯೮೦

ಗೋಪಾಲರಾವ್ ಎಚ್.ಎಸ್. ಮೂಲ– ಭಗವತ್ ಶರಣ ಉಪಾಧ್ಯಾಯ ಭಾರತೀಯ ಬಹುಮುಖೀ ಸಂಸ್ಕೃತಿ, ನವಕರ್ನಾಟಕ ಪ್ರಕಾಶನ, ಬೆಂಗಳುರು, ೨೦೦೫.

ಗೌಡ, ಎಚ್.ಎಂ.ಆರ್., ಮಹಾರಾಷ್ಟ್ರದಲ್ಲಿ ವೀರಹಟ್ಟಿಕಾರರು ಮತ್ತು ದನಗಾರರು, ಉದಯರವಿ ಪ್ರಕಾಶನ, ಬೆಂಗಳೂರು–೪೦, ೧೯೯೬.

ಗೌರೀಶ ಕಾಯ್ಕಿಣಿ, ಲೋಕಾಯತ (ಚಾರ್ವಾಕ ದರ್ಶನ), ನವಕರ್ನಾಟಕ ಪ್ರಕಾಶನ, ಬೆಂಗಳೂರು–೧, ೨೦೦೫.

ಚಂದ್ರಪ್ಪ.ಎನ್. ಮೊಂಡರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು

ಚಂದ್ರಶೇಖರ್, ಟಿ.ಆರ್., ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

ಚಂದ್ರು ಕಾಳೇನಹಳ್ಳಿ. ಸೋಲಿಗರ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು

ಚಲುವರಾಜು. (ಸಂ) . ಜುಂಜಪ್ಪ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೧೯೯೭

ಚಿತ್ತಯ್ಯ ಪೂಜಾರ್, ನಿಡಗಲ್ಲು : ಒಂದು ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಪ್ರಬಂಧ.

ಜ್ಯೋತ್ಸ್ನಾ ಕಾಮತ್, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯.

ಡಿ.ವಿ.ಜಿ., ಸಂಸ್ಕೃತಿ, ಕಾವ್ಯಾಲಯ ಪ್ರಕಾಶಕರು, ಮೈಸೂರು, ೧೯೯೬.

ತಿಪ್ಪೇರುದ್ರಪ್ಪ ಬಿ.ಹೆಚ್, ಮಾರಿಯಕತೆ, ಸಂಕಲನ

ಧರಣೀದೇವಿ ಮಾಲಗತ್ತಿ, ಸ್ತ್ರೀವಾದ ಮತ್ತು ಭಾರತೀಯತೆ, ಚೇತನ ಬುಕ್‌ಹೌಸ್, ಮೈಸೂರು-೫೭೦ ೦೨೪, ೧೯೯೮.

ನಾಗರಾಜ್ ಡಿ.ಆರ್. ಸಂಸ್ಕೃತಿ ಕಥನ. ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು. ೨೦೦೨

ನಾಗರಾಜ್ ಡಿ.ಆರ್. ಸಾಹಿತ್ಯ ಕಥನ. ಅಕ್ಷರ ಪ್ರಕಾಶನ. ಹೆಗ್ಗೋಡು. ೧೯೯೬

ನಾಗೇಗೌಡ, ಎಚ್.ಎಲ್., ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ, ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು-೨೦, ೧೯೭೯.

ನಾಗೇಗೌಡರು.ಎಚ್.ಎಲ್. ಪ್ರವಾಸಿ ಕಂಡ ಇಂಡಿಯಾ ಭಾಗ -೧,೨. ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ. ೧೯೭೯

ನಾವಡ, ಎ.ವಿ., ಮೌಖಿಕ ಕಾವ್ಯಸಂಯೋಜನ ಪ್ರಕ್ರಿಯೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ನಾವಡ.ಎ.ವಿ (ಸಂ). ಸಿರಿಪಾಡ್ದನ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೧೯೯೮

ನಿಂಗಪ್ಪ ಮುದೇನೂರು. ಕನ್ನಡ ಜಾನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು. ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್. ೨೦೦೪

ನಿರುಪಮಾ, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ.

ನಿರುಪಮಾ. ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ಆರತಿ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೬.

ಪಾರ್ವತಿ, ಎಚ್.ಎಸ್.ಮಹಿಳಾ ಅಧ್ಯಯನ, ಸಂ-೨, ಸಂಚಿಕೆ-೧ ದಕ್ಷಿಣಾಯಣ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಜಿಲ್ಲೆಯ ಪಾಳೆಯಗಾರರು, ೧೯೨೪.

ಪುಟ್ಟಣ್ಣ, ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಮದಕರಿ ಪ್ರಕಾಶನ, ಚಿತ್ರದುರ್ಗ.

ಪುರುಷೋತ್ತಮ ಬಿಳಿಮಲೆ, ಹುಲಿಗೆಮ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಪ್ರಧಾನ್ ಗುರುದತ್ತ, ಮೂಲ : ಭಗವತ್ ಶರಣ ಉಪಾಧ್ಯಾಯ ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪ್ರಕಾಶನ, ೨೦೦೪.

ಪ್ರಭಾಕರ ಎ.ಎಸ್. (ಸಂ.), ನಾಯಕನ ಹಟ್ಟಿ ಬಖೈರು.

ಪ್ರಭಾಕರ, ಎ.ಎಸ್. (ಸಂ). ಬುಡಕಟ್ಟು ಅಭಿವೃದ್ಧಿ ಮೀಮಾಂಸೆ ವಿಚಾರ ಸಂಕಿರಣ ಮಾಲೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಪ್ರಭಾಕರ, ಎ.ಎಸ್., ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಪ್ರಭಾಕರ. ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಪ್ರಹ್ಲಾದ ಬೆಟಗೇರಿ, ಅಡವಿ ಚೆಂಚರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩.

ಪ್ರೀತಿ ಶುಭ ಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಬರಗೂರು ರಾಮಚಂದ್ರಪ್ಪ: ಆಫ್ರಿಕಾದ ಕಪ್ಪು ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೨.

ಬೋರಲಿಂಗಯ್ಯ ಹಿ.ಚಿ. ಬುಡಕಟ್ಟು ಅಧ್ಯಯನ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು-೩, ೨೦೦೧.

ಬೋರಲಿಂಗಯ್ಯ ಹಿ.ಚಿ. (ಸಂ). ಮಂಟೇಸ್ವಾಮಿ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೧೯೯೭

ಬೋರಲಿಂಗಯ್ಯ ಹಿ.ಚಿ. (ಸಂ). ಗೊಂಡರ ರಾಮಾಯಣ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ

ಬೋರಲಿಂಗಯ್ಯ.ಹಿ.ಚಿ. ವಿಸ್ಮೃತಿ ಮತ್ತು ಸಂಸ್ಕೃತಿ. ಸಿ.ವಿ.ಜಿ.ಪಬ್ಲಿಕೇಷನ್ಸ್. ಬೆಂಗಳೂರು. ೨೦೦೦೧

ಬೋರಲಿಂಗಯ್ಯಹಿ.ಚಿ. ಎ,.ಎಸ್. ಪ್ರಭಾಕರ(ಸಂ). ಬುಡಕಟ್ಟು ಅಧ್ಯಯನ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ಬೋರಲಿಂಗಯ್ಯಹಿ.ಚಿ. ಎ,.ಎಸ್. ಪ್ರಭಾಕರ,(ಸಂ). ಬುಡಕಟ್ಟು ಅಧ್ಯಯನ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಬೋರಲಿಂಗಯ್ಯಹಿ.ಚಿ. ಎ.ಎಸ್. ಪ್ರಭಾಕರ(ಸಂ). ಬುಡಕಟ್ಟು ಅಧ್ಯಯನ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ಬೋರಲಿಂಗಯ್ಯಹಿ.ಚಿ. ಕರ್ನಾಟಕ ಜಾನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

ಬೋರಲಿಂಗಯ್ಯಹಿ.ಚಿ. ನಮ್ಮೊಳಗೊಂದು ಪುಟ್ಟ ಆಫ್ರಿಕಾ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

ಬೋರಲಿಂಗಯ್ಯಹಿ.ಚಿ., ಬುಡಕಟ್ಟು ದೈವಾರಾಧನೆ ಬುಡಕಟ್ಟು ಅಧ್ಯಯನ ಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

ಬೋರಲಿಂಗಯ್ಯಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧.

ಮಂಗಳ, ಚಿ.ನಾ., ಮಾತೃಪೂಜೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

ಮಲ್ಲೇಪುರಂ ಜಿ. ವೆಂಕಟೇಶ್, ಶಂಬಾ ಕೃತಿ ಸಂಪುಟ, ಕರ್ನಾಟಕ ಸಂಸ್ಕೃತಿ-೩, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು, ೧೯೯೮.

ಮೀರಾ ಎಲ್.ಜಿ., ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೪.

ಮೀರಾ ಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲ ಬುಡಕಟ್ಟು ವೀರರು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

ಮೀರಾ ಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೦೩

ಮೀರಾ, ಎಲ್.ಜಿ. (ಅನು), ಮಾನುಷಿಯ ಮಾತು ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್ ಅವರ ಬರಹಗಳು, ಅಕ್ಷರ ಪ್ರಕಾಶನ, ೧೯೯೭.

ಮೈತ್ರಿ. ಕೆ.ಎಂ., ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

ಮೈಸೂರ್ ಸ್ಟೇಟ್ ಗ್ಯಾಜೆಟಿಯರ್.

ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ರಕ್ಷಿತ್ ಎಂ.ಆರ್. ಮೂಲ- ರೊಮಿಲಾ ಥಾಪರ್ ಚಾರಿತ್ರಿಕ ವ್ಯಾಖ್ಯಾನಗಳು ಮತ್ತು ಭಾರತೀಯ ಸಮಾಜದ ಧರ್ಮ ನಿರಪೇಕ್ಷೀಕರಣ, ವಿಸ್ತಾರ್ ದೊಡ್ಡ ಗುಬ್ಬಿಪೋಸ್ಟ್, ಬೆಂಗಳೂರು, ೧೯೯೯.

ರಘುನಾಥ ಸ. ಮೂಲ-ವಿದ್ಯಾಸಾಗರ್, ಕೂಗಿರದ ಪ್ರತಿಧ್ವನಿ ಬುಡಕಟ್ಟು ಜೀವನ ಸಂಸ್ಕೃತಿ, ಮಾತಂಗ ಪ್ರಕಾಶನ, ಮೈಸೂರು, ೨೦೦೫.

ರಘುಸುತ, ದೇವಮಾತೆಯರು (ವೇದ, ಪುರಾಣಗಳ ಕಾಲದ ಪುಣ್ಯಸ್ತ್ರೀಯರ ಜೀವನ ಚರಿತ್ರೆ), ಪುಲಿಕೇಶಿ ಪ್ರಕಾಶನ, ಬೆಂಗಳೂರು, ೧೯೮೮.

ರಂಗಪ್ಪ ಎಂ. ನುಂಕೆಮಲೆ ಪರಮಾರ್ಥ. ಮೊಳಕಾಲ್ಮೂರು. ೧೯೭೧

ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೩.

ರಾಜಣ್ಣ, ನಾಯಕ ಜನಾಂಗದ ಇತಿಹಾಸ, ೧೯೮೨.

ರಾಜಶೇಖರ .ಜಿ. ಮೂಲ- ಫಣಿಂದಾ ಇಶಿತ ಬ್ಯಾನರ್ಜಿ ಸೌರಭ್ ದುಜಿ ದಾರು ಪ್ರತಿಮಾ ನ ಪೂಜಿವೇ, ಅಕ್ಷರ ಪ್ರಕಾಶನ, ಸಾಗರ, ೧೯೯೩.

ರಾಹುಲ ಸಾಂಕೃತ್ಯಾಯನ, ವೋಲ್ಗಾ-ಗಂಗಾ

ಲಕ್ಕಪ್ಪಗೌಡ, ಎಚ್.ಜಿ., ಕರ್ನಾಟಕ ಬುಡಕಟ್ಟುಗಳು, ಸಂಪುಟ-೧ ಮತ್ತು ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

ಲಕ್ಕಪ್ಪಗೌಡ, ಎಚ್.ಜೆ., ಕರ್ನಾಟಕ ಬುಡಕಟ್ಟುಗಳು, ಸಂ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮.

ಲಕ್ಷ್ಮಣ್ ತೆಲಗಾವಿ, ಎಪ್ಪತ್ತೇಳು ಪಾಳೆಯಗಾರರು, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೯, ಸಂಚಿಕೆ-೧, ಸಂಪುಟ-೩.

ಲಕ್ಷ್ಮಣ್ ತೆಲಗಾವಿ, ಕಾಮಗೇತಿ ಅರಸರು ಕೆಲವು ವಿಚಾರಗಳು : ಪ್ರತಿಕ್ರಿಯೆ, ಮಾನವಿಕ ಕರ್ನಾಟಕ, ಸಂ-೧೭, ಸಂಚಿಕೆ-೪, ೧೯೮೭.

ಲಿಂಗಯ್ಯ, ಡಿ. ಜಾನಪದ ನೋಟಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬.

ವಾಲೀಕಾರ ಚೆನ್ನಣ್ಣನ, ಹೈದರಾಬಾದ ಕರ್ನಾಟಕದ ಗ್ರಾಮದೇವತೆಗಳು, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ೧೯೯೮.

ವಿಜಯಲಕ್ಷ್ಮಿ, ಕೆ.ಎನ್., ಚೀನಾದ ಜನಪದ ಹಾಡುಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬.

ವಿಠಲರಾವ್ ಗಾಯಕ್ವಾಡ್, ಅಶ್ವಿನಿ ಧೋಂಗಡೆ (ಮೂಲ), ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೧೯೯೩.

ವಿರೂಪಾಕ್ಷ ಪೂಜಾರಹಳ್ಳಿ, ಗಾದರಿಪಾಲನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ವಿಶ್ವನಾಥ.ಕೋ.ಶ ಮತ್ತು ಲಿಂಗಣ್ಣ ಕೆ.ಎಸ್. ಗೌರಸಮುದ್ರದ ಮಾರಿ

ವೀರನಾಯ್ಕರು ಹೆಚ್.ವಿ., ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ, ಅಖಿಲ ಮೈಸೂರು ನಾಯ್ಕರ ಮಹಾಸಮ್ಮೇಳನ, ೧೯೭೧, ಬೆಂಗಳೂರು, ಜೂನ್, ೧೩.

ವೀರಭದ್ರಪ್ಪ, ಬಿ.ವಿ. ಧರ್ಮ ಮತ್ತು ವೈಚಾರಿಕತೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯.

ವೆಂಕಟೇಶ ಇಂದ್ವಾಡಿ, ಮಂಟೆಸ್ವಾಮಿ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಶಂಕರನಾರಾಯಣ ತೀ.ನಂ. ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೨.

ಶಂಕರನಾರಾಯಣ ತೀ.ನಂ. ಜಾನಪದ ಸಮೀಕ್ಷೆ-ವಿಶ್ಲೇಷಣೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು-೪೦, ೧೯೯೯.

ಶಂಕರನಾರಾಯಣ ತೀ.ನಂ. ಫಿನ್ಲೆಂಡಿನ ಜಾನಪದ ವಿದ್ವಾಂಸರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ೨, ೨೦೦೧.

ಶಿವಸ್ವಾಮಿ, ಡಿ., ಮಳವಳ್ಳಿ ತಾಲ್ಲೂಕಿನ ಗ್ರಾಮದೇವತೆಗಳು, ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ, ೨೦೦೨-೨೦೦೩.

ಶ್ರೀಮತಿ ಎಚ್.ಎಸ್., ಸ್ತ್ರೀವಾದಿ ಚಿಂತನೆ, ಕೆಲವು ಪ್ರಶ್ನೆಗಳು, ಸಂದೇಹಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಶ್ರೀಮತಿ ಎಚ್.ಎಸ್. ಮೂಲ : ಜೆರಾಲ್ಡಿನ್ ಫೋರ್ಬ್ಸ್: ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಶ್ರೀಮತಿ, ಎಚ್.ಎಸ್. ಮೂಲ -ಮಹಾಶ್ವೇತಾದೇವಿ, ದೋಪ್ದಿ ಹಾಗೂ ಇತರ ಕಥೆಗಳು.

ಶ್ರೀಮತಿ, ಎಚ್.ಎಸ್., ಮಹಿಳಾ ಅಧ್ಯಯನ, ಸಂ-೧, ಸಂಚಿಕೆ-೨ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಶ್ರೀಮತಿ, ಎಚ್.ಎಸ್., ಮಹಿಳಾ ಅಧ್ಯಯನ, ಸಂ-೨, ಸಂಚಿಕೆ-೧ ಉತ್ತರಾಯಣ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಶ್ರೀಮತಿ, ಎಚ್.ಎಸ್., ಮಹಿಳಾ ಅಧ್ಯಯನ, ಸಂ-೩, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಶ್ರೀಮತಿ, ಎಚ್.ಎಸ್., ಮಹಿಳಾ ಅಧ್ಯಯನ, ಸಂ-೪, ಸಂಚಿಕೆ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

ಸಿದ್ದಲಿಂಗಯ್ಯ. ಗ್ರಾಮದೇವತೆಗಳು. ಮೂಲಭಾರತಿ ಪ್ರಕಾಶನ. ೧೯೯೭

ಸಿದ್ಧಗಂಗಯ್ಯ ಕಂಬಾಳು, ಬಿ. (ನಿಸರ್ಗ ಪ್ರಿಯ), ಜುಂಜಪ್ಪನ ಕಾವ್ಯ ಮುತ್ತಿನಹಾರ ಮಾಲಿಕೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨, ೧೯೯೬.

ಸುಬ್ಬಣ್ಣರೈ, ವಿ. ದ್ರಾವಿಡ ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

ಸುಮಿತ್ರಾಬಾಯಿ, ಬಿ.ಎನ್., ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಹಿರೇಮಠ ಎಸ್.ಎಸ್., ಸಮಾಜ, ಸಂಸ್ಕೃತಿ, ಸಂಘರ್ಷ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

ಹಿರೇಮಠ, ಎಸ್.ಎಸ್., ಜಾತ್ರೆಗಳು, ಸಮತಾ ಪ್ರಕಾಶನ, ಹೊಸಪೇಟೆ.

**ಪತ್ರಿಕೆಗಳು**

ಅಖಿಲ ಮೈಸೂರು ನಾಯಕರ ಮಹಾಸಮ್ಮೇಳನ. ೧೩.೦೬.೧೯೭೧. ಬೆಂಗಳೂರು

ಇತಿಹಾಸ ದರ್ಶನ: ಸಂಚಿಕೆ ೧. ೧೯೮೮. ಎಪ್ಪತ್ತೇಳು ಪಾಳೇಗಾರರು(ಲೇ) : ಲಕ್ಷ್ಮಣ ತೆಲಗಾವಿ.

ಕಾಮಗೇತಿ ಅರಸರು -ಕೆಲವು ವಿಚಾರಗಳು: ಪ್ರತಿಕ್ರಿಯೆ. ಲಕ್ಷ್ಮಣ ತೆಲಗಾವಿ.

ಮಾನವಿಕ ಕರ್ನಾಟಕ : ಸಂಚಿಕೆ ೪. ಅಕ್ಟೋಬರ್ ೧೯೮೭

ಮೀರಾಸಾಬಿಹಳ್ಳಿ ಶಿವಣ್ಣ. ಗಣೆಯುವರು. ಜಾನಪದ ಗಂಗೋತ್ರಿ ಪತ್ರಿಕೆ. ಜೂನ್ ೧೯೯೨. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.ಬೆಂಗಳೂರು

ವಾಲ್ಮೀಕಿ ಕಿರಣ ಸ್ಮರಣ ಸಂಚಿಕೆ ; ೯.೦೨.೧೯೯೮ ಸಂಪಾದಕರು: ಹರ್ತಿಕೋಟೆ ವೀರೇಂದ್ರಸಿಂಹ

ವಾಲ್ಮೀಕಿ ಪತ್ರಿಕೆ . ಸಂಪಾದಕರು. ಎಲ್. ನರಸಿಂಹಯ್ಯ, ಬೆಂಗಳೂರು

ವಾಲ್ಮೀಕಿವಾಣಿ ಮಾಸಪತ್ರಿಕೆ: ಸಂಪುಟ–೧, ಸಂಚಿಕೆ–೯, ಜನವರಿ ೧೯೯೮

**ನಿಘಂಟು :**

ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿಪ್ರಾಧಿಕಾರ, ೧೯೭೭.

ಕನ್ನಡ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ತೆಲುಗು ಪದಕೋಶ, ಅಂತರ್ಜಾಲದಲ್ಲಿ.

**ಇಂಗ್ಲೀಷ್ ಪುಸ್ತಕಗಳು :**

Anantha Krishna Iyer and H.V.Nanjundaiah. Mysore Castes and Tribes, Vol.2, Mysor University. 1928,

Ananthya Krishna Iyer, The Mysore Castes and Tribes, Vol.-2, Mysore University Press.

Edgar Thurston and K.Rangachari, Castes and Tribes of Southern India, Vol.-1, Cosmo Publications, Delhi.

Gunther- Dietz –Sontheimer. Pastoral Deities in Western India. Oxford University. New Delhi. 1993

Havanur, L.G., Karnataka Backward Class Commission Report, Government Press, 1975, Bangalore.

Parashley, H.M., Simone De Behaviour, The Second Sex, Vintage Classica. 1953.

Quotes on Woman (by internet).

Ramanujan, A.K., A Flowering Tree and Other Oral Tales from India, University of Colombia Press, 1997.

Shankar, M.N., K. Venkannachar, H.S. Panduranga Jois, Chitradurga A Hand Book, Hand Book Publication Committee, Chitradurga, 1984.

The Golden Bough, J.G. Frazer,

Thurston, E., The Castes and Tribes of Southern India, Vol.-1.

# ವಕ್ತೃಗಳ ವಿವರ

| ಕ್ರ. ಸಂ. | ಮಾಹಿತಿದಾರರ ಹೆಸರು | ತಂದೆಯ ಹೆಸರು | ವಯಸ್ಸು | ಸ್ಥಳ | ವೃತ್ತಿ |
|---|---|---|---|---|---|
| ೧ | ಬೋರಯ್ಯ | ಓಬಯ್ಯ | ೫೦ | ಕಂಪಳದೇವರಹಟ್ಟಿ ಮೊಳಕಾಲ್ಮೂರು(ತಾ) | ಕೃಷಿ |
| ೨ | ಬೋರಯ್ಯ.ಟಿ.ಆರ್ | ಓಬಯ್ಯ | ೮೦ | ತೋರಣಗಟ್ಟಿ (ಜಗಲೂರು(ತಾ) | ಕೃಷಿ |
| ೩ | ಬೈಯ್ಯಣ್ಣಜ್ಜ | ಸೂರಯ್ಯ | ೯೮ | ಕರಿನಾರಹಟ್ಟಿ (ಕೂಡ್ಲಿಗೆ(ತಾ) | ಕೃಷಿ |
| ೪ | ಸೂರನಾಯಕ | ಪಾಲಯ್ಯ | ೬೪ | ಪರಶುರಾಂಪುರ (ಚಳ್ಳಕೆರೆ(ತಾ) | ನಿವೃತ್ತ ಶಿಕ್ಷಕರು |
| ೫ | ಸೂರಯ್ಯ | ಸೂರಯ್ಯ | ೭೦ | ಭತ್ತಯ್ಯನಹಟ್ಟಿ(ಚಳ್ಳಕೆರೆ(ತಾ) | ಕೃಷಿ |
| ೬ | ಸುರೇಂದ್ರ | ಪಾಲಯ್ಯ ಮಾಸ್ತರು | ೫೫ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೭ | ಸಂಚಲಯ್ಯ | ಪಾಲಯ್ಯ | ೬೪ | ಹುಣಸೆಕಟ್ಟೆ (ಚಿತ್ರದುರ್ಗ(ತಾ) | ಕೃಷಿ |
| ೮ | ಸಣ್ಣ ಮಾರಯ್ಯ | ಬುಟ್ಟಿನಿಂಗಯ್ಯ | ೫೫ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೯ | ವೀರಯ್ಯ.ಜಿ.ಪಿ | ಪಾಲಯ್ಯ | ೭೫ | ಗೌರಸಮುದ್ರ (ಚಳ್ಳಕೆರೆ(ತಾ) | ನಿವೃತ್ತ ಶಿಕ್ಷಕರು |
| ೧೦ | ದಿ॥ ಶಂಕರಮ್ಮ | ಬುರ್ರೆತಿಪ್ಪಯ್ಯ | ೬೪ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೧೧ | ದಿ॥ಪೂಜಾರಿ ಓಬಯ್ಯ | ಪಾಲಯ್ಯ | ೬೨ | ಕೆರೆಯಾಗಳಹಳ್ಳಿ (ಚಳ್ಳಕೆರೆ ೯ತಾ) | ಪೂಜಾರಿ |
| ೧೨ | ನಾಗೇಂದ್ರಪ್ಪ | - | ೪೫ | ಹವಳೇನಹಳ್ಳಿ (ಜಗಲೂರು(ತಾ) | ಅಕ್ಕ್ಯಾಯಮ್ಮನಪೂಜಾರಿ |
| ೧೩ | ಪಾಪನಾಯಕ | ಗೌಡ್ರಪಾಪಯ್ಯ | ೫೫ | ಖುದಾಪುರ (ಚಳ್ಳಕೆರೆ(ತಾ) | ಕೃಷಿ |
| ೧೪ | ಪಾಪಯ್ಯ | ಪಾಪಯ್ಯ | ೮೦ | ಪಯ್ಯಲಾರಹಟ್ಟಿ(ಚಿತ್ರದುರ್ಗ(ತಾ) | ಕೃಷಿ |
| ೧೫ | ಪಾಲಯ್ಯ .ಎಸ್ | ಸೂರಯ್ಯ | | ಕೋಡಿಹಳ್ಳಿ (ಚಳ್ಳಕೆರೆ(ತಾ) | ಮಾಜಿ, ಉಪಾಧ್ಯಕ್ಷರು |
| ೧೬ | ಪಾಲಯ್ಯ.ಟಿ | ತಿಪ್ಪಯ್ಯ | ೭೨ | ಮುತ್ತಿಗಾರಹಳ್ಳಿ(ಚಳ್ಳಕೆರೆ(ತಾ) | ನಿವೃತ್ತ ಅರಣ್ಯಪಾಲಕ ಜಿಲ್ಲಾ ಸಹಕಾರ ಸಂಘಗಳು |
| ೧೭ | ಪುಂಡಯ್ಯಗಳ ಸೂರಯ್ಯ | ಪುಂಡಯ್ಯ | ೬೦ | ಸೂರಮ್ಮನಹಳ್ಳಿ(ಮೊಳಕಾಲ್ಮೂರು(ತಾ) | ಕೃಷಿ |
| ೧೮ | ಪುಟ್ಟಮ್ಮ | ರಾಜಣ್ಣ | ೪೦ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |

| | | | | | |
|---|---|---|---|---|---|
| ೧೯ | ಪೂ॥ ಪಾಲಯ್ಯ | ಪಾಲಯ್ಯ | ೫೫ | ಚನ್ನಮಜ್ಜನಪಲ್ಲಿ (ಅನಂತಪುರ (ಜ)ಆಂಧ್ರ | ಪೂಜಾರಿ |
| ೨೦ | ಪೂಜಾರಿ ರುದ್ರಣ್ಣ | ಓಬಯ್ಯ | ೭೪ | ದೇವರಹಳ್ಳಿ (ಚಳ್ಳಕೆರೆ(ತಾ) | ಪೂಜಾರಿ |
| ೨೧ | ಬಸವರಾಜು | ಸೂರಯ್ಯ | ೬೨ | ಕಲ್ಲದೇವರಪುರ(ಜಗಲೂರು(ತಾ) | ನಿವೃತ್ತ ಶಿಕ್ಷಕರು |
| ೨೨ | ಬುಟ್ಟಿ ನಿಂಗಯ್ಯ | ಬುಟ್ಟಿಸೂರಯ್ಯ | ೭೮ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೨೩ | ಲಕ್ಷ್ಮಿದೇವಿ | ಕೆಂಗಯ್ಯ | ೩೫ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೨೪ | ಚಿನ್ನೋಬನಹಳ್ಳಿಪಾಪಣ್ಣ | ಬೈಯಣ್ಣ | ೫೦ | ಹಿರೇಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೨೫ | ಮಲ್ಲೇಶಪ್ಪ | ಬಸಪ್ಪ ಮಾಸ್ತರು | ೪೮ | ಚಿಕ್ಕಹಳ್ಳಿ (ಚಳ್ಳಕೆರೆ(ತಾ) | ಬಸ್ ಚಾಲಕ |
| ೨೬ | ಮಲ್ಲಯ್ಯ | ಮಲ್ಲಯ್ಯ | ೬೫ | ಕ್ಯಾತಪಲಹಟ್ಟಿ(ಮೊಳಕಾಲ್ಮೂರು(ತಾ) | ಕೃಷಿ |
| ೨೭ | ಮಲ್ಲಿಕಾರ್ಜುನಪ್ಪ | | ೪೦ | ಸಿರಿಗೆರೆ | ಶಿಕ್ಷಕರು |
| ೨೮ | ಮಂಜುನಾಥ.ಬಿ | ಸೂರಯ್ಯ | ೩೮ | ಹಿರೇಹಳ್ಳಿ (ಚಳ್ಳಕೆರೆ(ತಾ) | |
| ೨೯ | ಮಾರಯ್ಯ | ಈರಯ್ಯ | ೬೪ | ಗೌರಸಮುದ್ರ (ಚಳ್ಳಕೆರೆ(ತಾ) | ಗೌರಸಮುದ್ರ ಮಾರಮ್ಮ ದೇವಸ್ಥಾನದ ಧರ್ಮದರ್ಶಿ |
| ೩೦ | ಚಿತ್ತಯ್ಯಗಳ ಬೋರಯ್ಯ | ಚಿತ್ತಯ್ಯ | ೭೫ | ನಲಗೇತನ ಹಟ್ಟಿ(ಚಳ್ಳಕೆರೆ (ತಾ) | ಕೃಷಿ |
| ೩೧ | ಜಯಪ್ಪ | ಪಾಲಪ್ಪ | ೫೦ | ಗಂಜಿಗಟ್ಟ(ಹೊಳಲ್ಕೆರೆ(ತಾ) | ಅಹೋಬಳನರಸಿಂಹಸ್ವಾಮಿ ಪೂಜಾರಿ |
| ೩೨ | ಜಡ್ಲಯ್ಯ | ಓಬಯ್ಯ | ೪೦ | ರುದ್ರಮ್ಮನಹಳ್ಳಿ(ಚಳ್ಳಕೆರೆ(ತಾ) | ನೀರಗಂಟಿ |
| ೩೩ | ಈರಣ್ಣ | ಬುಟ್ಟಿನಾಗಯ್ಯ | ೪೫ | ಹಿರೇಹಳ್ಳಿ (ಆಂಧ್ರ) | ಕೃಷಿ |
| ೩೪ | ರಂಗಣ್ಣ | - | ೬೫ | ಗೌಡಗೆರೆ (ಚಳ್ಳಕೆರೆ(ತಾ) | ನಿವೃತ್ತ ಬ್ಯಾಂಕ್ ಮ್ಯಾನೇಜರ್ |
| ೩೫ | ರೇವಣ್ಣ | ಓಬಯ್ಯ | ೪೦ | ಕಂಪಳದೇವರ್‌ಹಟ್ಟಿ(ಮೊಳಕಾಲ್ಮೂರು(ತಾ) | ಪೂಜಾರಿ,ಕಂಪಳದೇವರು |
| ೩೬ | ಎರ್ರಪ್ಪ | ಪಾಲಯ್ಯ | ೭೦ | ತೋಡಲಾರಹಟ್ಟಿ(ಚಳ್ಳಕೆರೆ(ತಾ) | ಪೂಜಾರಿ |
| ೩೭ | ಓಬಯ್ಯ | ಓಬಯ್ಯ | ೫೬ | ಕ್ಯಾತಪಲಹಟ್ಟಿ(ಮೊಳಕಾಲ್ಮೂರು(ತಾ) | ಕೃಷಿ |
| ೩೮ | ಓಬಯ್ಯ | ಪಾಲಯ್ಯ | ೭೨ | ಬೋಸೇದೇವರಹಟ್ಟಿ (ಚಳ್ಳಕೆರೆ(ತಾ) | ಕೃಷಿ |
| ೩೯ | ಹನುಮಂತಪ್ಪ ಚಲವಾದಿ | ಹನುಮಪ್ಪ | ೫೦ | ಕೂನಬೇವು (ಚಿತ್ರದುರ್ಗ (ತಾ) | ಕೃಷಿ |

| | | | | | |
|---|---|---|---|---|---|
| ೪೦ | ಹೆಳವರ ನಾಗಜ್ಜ | ತಿಪ್ಪಯ್ಯ | ೭೦ | ಗೋಪನಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೪೧ | ಹೊನ್ನಮ್ಮ ಸೋಮಣ್ಣ.ಸಿ.ಬಿ | ಆರ್.ಟಿ. ಬೋರಯ್ಯ | ೩೫ | ಗುಡ್ಡದರಂಗದಹಳ್ಳಿ (ಚಿತ್ರದುರ್ಗ (ಜಿ) | ಶಿಕ್ಷಕರು |
| ೪೨ | ಕಾರ್ಖಾನೆ ತಿಪ್ಪೇರುದ್ರಪ್ಪ | ಕಾರ್ಖಾನೆ ತಿಪ್ಪೇರುದ್ರಯ್ಯ | ೭೦ | ಕಾಟಪ್ಪನಹಟ್ಟಿ(ಚಳ್ಳಕೆರೆ (ತಾ) | ಕೃಷಿ |
| ೪೩ | ಗುಡ್ಡಯ್ಯ | ಮಲ್ಲಯ್ಯ | ೭೬ | ಮುತ್ತಿಗಾರಹಳ್ಳಿ(ಚಳ್ಳಕೆರೆ(ತಾ) | ಕೃಷಿ |
| ೪೫ | ಗೊಡ್ಲಯ್ಯ | ಸೂರಯ್ಯ | ೬೪ | ಕರಿಸೂರಯ್ಯನ ಹಟ್ಟಿ | ಕೃಷಿ |
| ೪೬ | ತಮ್ಮಯ್ಯ | ಸೂರಯ್ಯ | ೫೦ | ಮುತ್ತಿಗಾರಹಳ್ಳಿ(ಚಳ್ಳಕೆರೆ(ತಾ) | ಕೃಷಿ |
| ೪೬ | ಗಿಡ್ಡಪ್ಪ ಚಲುವಾದಿ | ಭೀಮಯ್ಯ | ೫೦ | ಹಿರೇಹಳ್ಳಿ (ಚಳ್ಳಕೆರೆ(ತಾ) | ಉರುಮೆ ಬಾರಿಸುವುದು |
| ೪೭ | ತಿಪ್ಪೇಸ್ವಾಮಿ | - | ೬೦ | ಚಳ್ಳಕೆರೆ (ಕಾಟಪ್ಪನಹಟ್ಟಿ) | ನಿವೃತ್ತ ಮುಖ್ಯಶಿಕ್ಷಕರು |
| ೪೮ | ತಿಪ್ಪೇಸ್ವಾಮಿ | ಮುತ್ತಯ್ಯ | ೪೫ | ಕೆರೆಯಾಗಳಹಳ್ಳಿ (ಚಳ್ಳಕೆರೆ ೯ತಾ) | ಕೃಷಿ |
| ೪೯ | ತಿಮ್ಮಯ್ಯ ಹೆಳವರ | ತಿಮ್ಮಪ್ಪ | ೭೦ | ಗೋಪನಹಳ್ಳಿ (ಚಳ್ಳಕೆರೆ(ತಾ) | ಕೃಷಿ |
| ೫೦ | ಬಸಣ್ಣ ಟಿ.ಜಿ. | ಗೌಡರ ಸಣ್ಣಪಾಲಯ್ಯ | ೫೦ | ತುಮಕೂರ್ಲಹಳ್ಳಿ (ಮೊಳಕಾಲ್ಮೂರು(ತಾ) | ಕೃಷಿ |
| ೫೧ | ಪಾಪಯ್ಯ. ಟಿ.ಜಿ. | ಗೌಡರ ಸಣ್ಣಪಾಲಯ್ಯ | ೪೫ | ಬೆಂಗಳೂರು | ವ್ಯವಸ್ಥಾಪಕರು. ಹೆಚ್.ಎ.ಎಲ್, |
| ೫೨ | ತಿಪ್ಪೇಸ್ವಾಮಿ | ಟಿ.ಪಾಲಯ್ಯ | ೪೫ | ಚಳ್ಳಕೆರೆ | ಅರಣ್ಯಾಧಿಕಾರಿ |
| ೫೩ | ಗಂಗಾಧರ್ | ಪಾಲಯ್ಯ | ೩೫ | ಹಿರಿಯೂರು | ಬ್ಯಾಂಕ್ ನೌಕರರು |
| ೫೪ | ಚಂದ್ರಪ್ಪ | ಪಾಲಪ್ಪ | ೪೦ | ಗಂಜಿಗಟ್ಟೆ | ಕೃಷಿ |
| ೫೫ | ಕರಿಬಸಪ್ಪ | ಕರ್ನಿಪಾಪಯ್ಯ | ೨೬ | ತುಮಕೂರ್ಲಹಳ್ಳಿ | ಕೃಷಿ |
| ೫೬ | ರಾಮಚಂದ್ರಪ್ಪ | ಲಕ್ಷ್ಮಯ್ಯ | ೪೦ | ಬೆಂಗಳೂರು | ಎಚ್.ಎ.ಎಲ್ ನೌಕರ |

**ಅಕ್ಷರ ಜೋಡಣೆ : ಬಿ. ನಾಗರಾಜು,** ಸುಮ ಎಂಟರ್‌ಪ್ರೈಸಸ್, ಬೆಂಗಳೂರು.

**ಛಾಯಾಚಿತ್ರಗಾರರು:**

| | | | | |
|---|---|---|---|---|
| ೧. | ಧನಂಜಯ | ದಾಸಪ್ಪ | ೩೫ | ಬಿ.ಜಿ.ಕೆರೆ (ಮೊಳಕಾಲ್ಮೂರು(ತಾ) |
| ೨. | ಸುದರ್ಶನ್ ನಾಯಕ್ | ದಿನಾಕರ ನಾಯಕ್ | ೨೩ | ಗನ್ನಾಯಕನಹಾಳ್ಳಿ(ಹಿರಿಯೂರು(ತಾ) |
| ೩. | ಮಂಜುನಾಥ | ಸೂರಯ್ಯ | ೩೫ | ಹಿರೇಹಳ್ಳಿ(ಚಳ್ಳಕೆರೆ (ತಾ) |

# ಗೌರಸಮುದ್ರದ ಮಾರಮ್ಮನನ್ನು ಕುರಿತ ಪದ

ಹಾಡಿದ ಸ್ಥಳ : ಗೌರಸಮುದ್ರ
ಹಾಡಿದವರು : ದುರ್ಗದ ಓಬಮ್ಮ -೯೦ ವರ್ಷ
ಬಿದರಕೆರೆ ಓಬಮ್ಮ, ಸಣ್ಣಮಾರಕ್ಕ, ಪಾಲಕ್ಕ
ಲಸಮಕ್ಕ ಮಧ್ಯವಯಸ್ಕರು
ವೃತ್ತಿ : ಕೃಷಿಯ ಕೆಲಸ, ಕೂಲಿಯ ಕೆಲಸ
ಲಸಮಕ್ಕ ಮಾತ್ರ ದೇವದಾಸಿ



ಹಾರುವರಾ ಮನಿಯಾಗೆ ಹಲಗೇ ಮ್ಯಾಲಿರುವೋಳೆ
ವಾಲೀಯ ಕಿವಿಯಾ ಸರಸ್ವತಿ ॥ ಸೋ ॥
ವಾಲಿಯಾ ಕಿವಿಯ ಸರಸ್ವತಿ ತಾಯಿ ನೀನು
ಬಾರಾದ ಪದನ ಬರ ಕೊಡೇ ॥ ಸೋ ॥

ಒಕ್ಕಲರ ಮನಿಯಾಗೆ ಹೊತ್ತಿಗೆ ಮ್ಯಾಲಿರುವೋಳೆ
ಕೊಪ್ಪೀನಾ ಕಿವಿಯಾ ಸರಸ್ವತಿ
ಕೊಪ್ಪೀನಾ ಕಿವಿಯಾ ಸರಸ್ವತಿ ತಾಯಿ ನೀನು
ತೊಪ್ಪಿದ ನುಡಿಯಾ ಬರಕೊಡೇ ॥ ಸೋ ॥

ಹತ್ತೇನೆ ಮಾರುದ್ದ ಹೊತ್ತಿಗೇ ತಕ್ಕೊಂಡು
ಎತ್ತೇಳೆ ಎದುರು ಮೊದಲಿಂದ ತಕ್ಕೊಂಡು ॥
ಎತ್ತೇಳೆ ಎದುರು ಮೊದಲಿಂದ ಮಾರಕ್ಕ
ತೊಪ್ಪೀದ ನುಡಿಯಾ ಬರಕೊಡೇ ॥ ಸೋ ॥

ಹಾವೇನೆ ಮಾರುದ್ದ ವಾಲೀಯ ತಕ್ಕೊಂಡು
ಒದ್ಯಾರೆ ಎದುರು ಮೊದಲಿಂದ ॥
ಒದ್ಯಾರೆ ಮೊದಲು ಮೊದಲಿಂದ ಮಾರಕ್ಕ
ಬಾರದ ಪದವ ಬರಕೊಡೇ ॥ ಸೋ ॥

ಬಾರದನ್ನಾ ಪದನ ವ್ಯಾಲೀ ಮ್ಯಾಲೈದಾವೆ
ವಾಲೀ ತತ್ತಾರ ಮಗರಾಮ ॥
ಬಾರದನ್ನಾ ಪದವ ತತ್ತಾರ ರಘುರಾಮ
ಗ್ಯಾನುಳ್ಳ ನಾರೀಗೆ ಪದನ ಬರಕೊಡೋ ॥ ಸೋ ॥

ಹೊತ್ತು ಹೋಗದ ಮ್ಯಾಲೆ ಸತ್ಯವನ ನೆನೆದೇವೆ
ಹತ್ತೇಗಾವುದಲೆ ಇರುವೋಳೆ ॥
ಹತ್ತೇನೆ ಗಾವುದಲೆ ಇರುವಾ ಮಾರಕ್ಕನ
ಹತ್ತೋಗದ ನಾವು ನೆನೆದೇವೆ ॥ ಸೋ ॥

ವ್ಯಾಳ್ಯೆ ಹೋಗದ ನಾವು ತಾಯವ್ವನ ನೆನೆದೇವೆ
ಆರೇ ಗಾವುದಲೆ ಇರುವೋಳೆ ॥
ಆರೇನೆ ಗಾವುದಲೆ ಇರುವಾ ಮಾರಕ್ಕನ
ಮ್ಯಾಳ್ಯೋಗದಲೆ ನಾವು ನೆನೆದೇವು ॥ ಸೋ ॥

ಹುತ್ತದ ಗದ್ದೇ ಮೇಲೆ ಹುಟ್ಟಿತು ಬೇವಿನಮರ
ಹುಟ್ಟುತಲೆ ಕಾಯಿ ಜಡುದಾವೆ ॥
ಹುಟ್ಟುತಲೆ ಕಾಯಿ ಜಡುದಾವೆ ಮಾರಕ್ಕ
ಹುಟ್ಟಳು ಬೇವಿನ ಮರದಾಗೆ ॥

ಮೂಡಲ ಕಟ್ಟೇಮ್ಯಾಲೆ ಮೂಡಿತು ಬೇವಿನಮರ
ಮೂಡುತಲೆ ಕಾಯಿ ಜಡುದಾವೆ ಸೋಬಾನವೇ ॥

ಕಾಸಿನ ಧೂಪಾ ಒಯ್ದು ಆಕೀನ ಬಲಗೊಂಬೆ
ಕಾಸು ಬೀದ್ಯಾಗ ಇರುವೋಳೆ
ಕಾಸೀನ ಬೀದ್ಯಾಗ ಇರುವಾ ಮಾರಕ್ಕನಾ
ಆಕೀಯ ಮೊದಲು ಬಲಗೊಂಬೆ ॥ ಸೋ ॥

ಮೊದಲಿಂದ ನೆನೆದೇವೆ ಮದನಾ ಸುರಾರಿಯಾ
ಕಡೆಯಾ ತುಗ್ಗುಲಿಯಾ ವನದೋಳೆ ॥
ಕಡೆಯಾ ತುಗ್ಗುಲಿ ವನದಾ ಮಾರಕ್ಕನಾ
ಮೊದಲಿಂದೆ ನಾವು ನೆನೆದೇವೆ ॥ ಸೋ ॥

ಮೊದಲಿಂದ ನೆನೆದೇವೆ ಪಂಚ ಮುಖದಮ್ಮನಾ
ಸಾಲಬೇವಿನ ವನದೋಳೆ ॥
ಸಾಲೇನೆ ಬೇವಿನ ವನದಾ ಮಾರಕ್ಕನಾ
ಮೊದಲಿಂದೆ ನಾವು ನೆನೆದೇವೆ ॥ ಸೋ ॥

ಅಕ್ಕ ಹುಟ್ಟುಲುವಾಗ ಮತ್ತೇನು ಗುರುತಾವೆ
ಚಿಕ್ಕಗೌಡರ ಮನಿಯಾಗೆ ॥
ಚಿಕ್ಕೇನೇಗೌಡರ ಮನಿಯಾಗೆ ಮಾಯಣ್ಣನ
ಮುತ್ತೀನ ಕರಬಾನ ನಡಿಗ್ಯಾವೆ ॥ ಸೋ ॥

ತಾಯಿ ಹುಟ್ಟಲುವಾಗ ಮ್ಯಾಲೇನು ಬರುತಾವೆ
ಜಾಣ ಗೌಡರ ಮನಿಯಾಗೆ ॥
ಜಾಣೇನ ಗೌಡರ ಮನಿಯಾಗೆ ಮಾಯಣ್ಣನ
ಹೂವಿನ ಶರಬಾನ ನಡಿಗ್ಯಾವೆ ॥ ಸೋ ॥

ಹಳ್ಳಿಯ ಗೌಡರೆ ಕೊಳ್ಳಿರೊಂದೀಳ್ಯವ ತಾಂದನ್ನೋ
ತೆಳ್ಳನ್ನಾ ಕಲ್ಲು ಬರಬೇಕು ತಂದ ನಾನೋ ॥
ತೆಳ್ಳನ್ನಾ ಕಲ್ಲು ಬರಬೇಕು ಮಲ್ಲಾಸಂದ್ರ ತಂದಾನ್ನ
ಒಲಿದವಳ ಮಠವಾ ನಿಲಬೇಕು ತಂದನಾನ್ನೋ

ಹಳ್ಳೀಯ ಗೌಡಕಿ ಮುಟ್ಟೀರೊಂದೀಳುವ ತಂದನ್ನಾ
ಬೆಟ್ಟಾದ ಕಲ್ಲು ಬರಬೇಕೂ ತಂದನ್ನಾನ
ಬೆಟ್ಟದಾ ಕಲ್ಲು ಬರಬೇಕು ದೇವಾರಳ್ಳಿ ತಾಂದಾನ್ನೊ
ದೃಷ್ಟಿಯವಳ ಮಠವಾ ನಿಲಬೇಕು ತಂದನಾನ

ಹೊಸ್ತಿಲು ಕಡುವಣ್ಣಗೆ ಉತ್ತುತ್ತೆಣ್ಣಿನ ಪೂಜೆ ತಂದನಾನ
ಮ್ಯಾಲೆ ಜೋಳಿಗೆ ಹಣಾ ಪೂಜೆ ತಂದನಾನ ॥
ಮತ್ತೇನ ಜೋಳಿಗೆ ಹಣಪೂಜೆ ಮಾರಕ್ಕಾನ ತಾಂದಾನ
ಹೊಸ್ತುಲಿಕಡದಾ ಬಡವರಿಗೆ ತಂದನಾನ

ಬಾಗಿಲ ಕಡವಣ್ಣಗೆ ಬಾಳೆಹಣ್ಣಿನ ಪೂಜೆ ತಂದಾನ
ಮ್ಯಾಲೆ ಜೋಳಿಗೆ ಹಣ ಪೂಜೆ ತಾಂದಾನ್ನ
ಮ್ಯಾಲೇನ ಜೋಳಿಗೆ ಹಣಪೂಜೆ ಬೊಮ್ಮಯ್ಯನ
ಬಾಗಲಾ ಕಡದಾ ಬಡವರಿಗೆ ತಂದನಾನ.

ಉತ್ರೋಸ ಕಡುದಣ್ಣಗೆ ಉತ್ತುತ್ತಣ್ಣಿನ ಪೂಜೆ ತಂದಾನ
ಮತ್ತೇ ಜೋಳಿಗೆ ಹಣಪೂಜೆ ತಾಂದಾನ್ನ
ಮತ್ತೇನ ಜೋಳಿಗೆ ಹಣಪೂಜೆ ಬೊಮ್ಮಯ್ಯನ ತಂದಾನ್ನ
ಉತ್ರೋಸ ಕಡದ ಬಡವರಿಗೆ ತಾಂದಾನ್ನ

ಮ್ಯಾಲೀನ ಜೋಳಿಗೆ ಹಣಪೂಜೆ ಮಾರಕ್ಕನಾ
ಕಂಬಾವ ಕಡದ ಬಡವರಿಗೆ ತಂದನಾನೋ ॥

ಹರಿಹರಕೋದರೆ ತೊಲಿಗಳ ಕಡುದಾರೆ ತಾಂದಾನ
ಬಡಿಗೇರರೆಲ್ಲ ನೆರುದಾರೆ ತಂದನಾನೋ
ಬಡಿಗೇರಾರೆಲ್ಲ ನೆರುದಾರೆ ಮಾರಕ್ಕನ ತಂದಾನ
ಗುಡಿಯಾ ಕಟ್ಟಾರೆ ಮಲಕೇಲಿ ತಂದನಾನೋ ॥

ಹರಿಹರಕೋದಾರೆ ಜಂತೀಯ ಕಡುದಾರೆ ತಂದನಾನೋ
ಪಾಂಚಾಳರೆಲ್ಲ ನೆರುದಾರೇ ತಂದನಾನೋ
ಪಂಚುವಾಳಾರೆಲ್ಲ ನೆರುದಾರೆ ಬೊಮ್ಮಯ್ಯನ ತಂದನಾನ
ಮಂಟಪ ಕಟ್ಯಾರೆ ಮಲಕೇಲಿ ತಂದನಾನೋ ॥

ಹತ್ತುಮಕ್ಕಳೂ ಹಾಲೂ ಬಾನ ಉಂಡಾರು ತಾಂದಾನೋ
ಮುತ್ತಿ ನೀಳ್ಯಾವ ಕೈಯಲಿಡಿದು ತಂದನಾನೋ
ಮುತ್ತೀನ ವೀಳ್ಯವ ಕೈಲಿಡಿದು ಆವರಿನ್ನು ತಂದಾನೋ
ನಡೆದಾರು ನಿಡುಗಲ್ಲು ಹೊರಮಲೆಗೆ ತಂದನಾನೋ ॥

ನಡೆದಾರು ನಿಡುಗಲ್ಲು ಹೊರಮಲೆಗೆ ಆವರಿನ್ನು ತಂದನಾನೋ
ಒಪ್ಪವುಳ್ಳ ಬಿದಿರು ಕಡುದಾರು ತಾಂದಾನೋ
ಒಪ್ಪಾವುಳ್ಳಾ ಬಿದಿರು ಕಡಿದೂ ಬಂಡಿಗೇರಿ ತಂದನಾನ
ಅಪ್ಪ ಸಿದ್ದಯ್ಯ ಹೊಡತಂದ ತಂದನಾನ

ಅಪ್ಪಾನೆ ಸಿದ್ದಯ್ಯ ಹೊಡಹಂದು ಹೊರಟ್ಯಾನೆ ತಂದನಾನ
ಇಪ್ಪತ್ತು ಗೇಣಿನ ಅರಮನೇ ತಂದನಾನ.

ಅಕ್ಕತಂಗೀರವರು ಹಾಲುಬಾನಾ ಉಂಡು ತಂದನಾನೋ
ಹೂವಿನ ವೀಳ್ಯಾವ ಕೈಯಲಿಡಿದು ತಂದನಾನೋ
ಹೂವಿನ ವೀಳ್ಯಾವ ಕೈಲಿಡಿದು ಆವರಿನ್ನು ನಡೆದಾರು
ನಿಡುಗಲ್ಲು ಹೊರಮಲೆಗೆ ತಂದನಾನೋ

ನಡೆದಾರು ನಿಡುಗಲ್ಲಿನ ಹೊರಮಲೆಗೆ ಆವರಿನ್ನು ತಂದಾನಾನೋ
ಆಯವುಳ್ಳಾ ಬಿದಿರು ಕಡುದರೇ ತಂದನಾನೋ
ಆಯವುಳ್ಳಾ ಬಿದಿರು ಕಡುದೂ ಬಂಡಿಗೇರಿ ತಂದನಾನೇ
ಅಣ್ಣ ನಿಂಗಯ್ಯ ಹೊಡತಂದ ತಂದನಾನೋ

ಅಣ್ಣೇನ ನಿಂಗಯ್ಯ ಹೊಡತಂದು ಹೊಟ್ಯಾನೆ ತಂದನಾನೋ
ಹನ್ನೊಂದು ಗೇಣಿನ ಅರಮನೆ ತಂದನಾನೋ

ಎಲ್ಲೇನ ನೋಡಿದರು ಸೂರಿದನ ಕಡೆಯವರೇ ತಂದನಾನ
ರೂಡಿಸಿದವರ್‍ಯಾರೇ ಹೊಸಗೋಡೆ ತಂದನಾನ
ರೂಡಿಸಿದವರ್‍ಯಾರೆ ಹೊಸಗೋಡೆ ಮಲ್ಲಸಂದ್ರ ತಂದ ನಾನೋ
ಬಿಂದಿಗೊನ್ನೀನ ಗವಡಾರೆ ತಾಂದನಾನ್ನ

ಎತ್ತಾಲ ನೋಡಿದರೆ ಸುಕ್ಕುರುನ ಕಡೆಯವರೆ ತಂದನಾನ
ಹೊಂದಿಸದೋರ್‍ಯಾರೆ ಹೊಸಗೋಡೆ ತಂದನಾನ
ಹೊಂದಿಸಿದೋರ್‍ಯಾರೆ ಹೊಸಗೋಡೆ ದೇವಾರಳ್ಳಿ
ಜೋಳಿಗೊನ್ನೀನ ಗವುಡಾರೇ ತಂದನಾನ ॥

ಎಲ್ಲಿ ನೋಡಿದರೂ ಹುಲ್ಲೀನ ಗುಡಿಸಲೆ ಕಾಣೆ ತಾಂದನಾನ
ಮುತ್ತಿನ ಹಣತ ಹಣದಾರೆ ತಂದನಾನೋ
ಮುತ್ತೀನ ಹಣತ ಹಣುದಾರೆ ಮಾರಕ್ಕನ
ಭಕ್ತರಿನ್ನೆಂಥಾ ಧನಿಸಾಕಿ ತಂದನಾನ

ಎತ್ತಲೂ ನೋಡಿದರೆ ಸೊಪ್ಪು ಗುಡಿಸಲು ಕಾಣೆ ತಂದನಾನೋ
ಮಲ್ಲೀಗೆ ಹಣುತ ಹಣುದಾರೆ ತಂದನಾನೋ
ಮಲ್ಲೀಗೇ ಹಣುತ ಹಣುದಾರೆ ಬೊಮ್ಮಯ್ಯನ
ಒಕ್ಕಲಿನ್ನೆಂಥಾ ಧನಿಕಾರೆ ತಂದನಾನೋ

ಅಕ್ಕೇನ ಮಾರಕ್ಕನ ಹೊಕ್ಕೂ ನೋಡುವ ಬನ್ನಿ ತಂದನಾನೋ
ಉಕ್ಕೀನ ಕಂಭ ನಗುತಾವೇ ತಂದನಾನೋ ॥
ಮೂಲೆ ಮೂಲೇಗೆಲ್ಲ ತ್ರಾಣದೀವಿಗೆ ಬೆಳಕು ತಂದಾನೋ
ತ್ರಾಣದೀವಿಗೆ ಬೆಳಕೊ ತಂದನಾನೋ

ಭಾಂಡದ ಕರಣೀಲಿ ನೆಲುಗಾರೆ ಹಾಕ್ಯಾರೆ ತಂದಾನೋ
ತಾಯಿ ಮಾರಕ್ಕನ ಅರಮನೆಗೆ ತಂದನಾನೋ

ಸಂದೂ ಸುದೀಗೆಲ್ಲ ನಂದಾದೀವಿಗೆ ಬೆಳಕು ತಂದನಾನ
ಗಾಜೀನ ಕರಣೇಲಿ ನೆಲಗಾರೆ ತಂದನಾನೋ
ಗಾಜೀನ ಕರಣೇಲಿ ನೆಲಗಾರೆ ಹಾಕ್ಯಾಕಿ ತಂದನಾನೋ
ಸ್ವಾಮಿ ಬೊಮ್ಮಯ್ಯನ ಅರಮನೇ ತಂದಾನಾನೋ

ಅಕ್ಕೀನ ಮಾರಕ್ಕನ ಹೊಕ್ಕೇ ನೋಡುವ ಬನ್ನಿ ತಂದನಾನ
ಉಕ್ಕೀನ ಕಂಭ ನಗುತಾವೆ ತಂದನಾನ
ಉಕ್ಕೀನಾ ಕಂಭ ನಗುತಾವೆ ಬಡಿಗೇರಣ್ಣ ತಂದಾನ್ನ
ಮಾಡುತಲೇ ಮುತ್ತು ಸುರುದಾವೆ ತಂದನಾನ ॥

ತಾಯೇನೆ ಮಾರಕ್ಕನ ಹೋಗೀ ನೋಡುವ ಬನ್ನಿ ತಾಂದಾನ್ನ
ಗಾಜೇನ ಕಂಭಾ ನಗುತಾವೆ ತಂದನಾನ
ಗಾಜೇನ್ನ ಕಂಭ ನಗುತಾವೆ ಬಡಿಗೇರಣ್ಣ ತಾಂದಾನ್ನ
ಕೆತ್ತುತಲೇ ಮುತ್ತು ಬಿಗುದಾವೆ ತಂದನಾನ ॥

ತಾಯೀನೆ ಮಾರಕ್ಕನ ಹೋಗಿ ನೋಡುವ ಬನ್ನಿ ತಾಂದಾನ
ಕೊಪ್ಪೇ ಇಟ್ಟಾಳೆ ರವೆ ರವಿಕಿ ತಂದನಾನ
ಕೊಪ್ಪೇನೆ ಇಟ್ಟಾಳೆ ರವೆ ರವಿ ಚಂದಿರಗಾವಿ ತಾಂದಾನ್ನ
ಕುಪ್ಪಸ ತೊಟ್ಟಾಳೆ ಭುಜತುಂಬ ತಂದನಾನ ॥

ಅಕ್ಕೇನ ಮಾರಕ್ಕನ ಹೊಕ್ಕೊ ನೋಡೋಣ ಬನ್ನಿ ತಾಂದಾನ್ನ
ವಾಲೇ ಇಟ್ಟಾಳೆ ರವೆ ರವೆ ತಂದನಾನ
ವಾಲೇನ ಇಟ್ಟಾಳೆ ರವೆ ರವೆ ಚಂದಿರಗಾವಿ ತಂದಾನ
ಸೀರೇ ಉಟ್ಟಾಳೆ ನಡುತುಂಬ ತಂದನಾನ ॥

ಅಕ್ಕೇನ ಮಾರಕ್ಕನ ಮುತ್ತಿನ ಮುಡಿ ಮ್ಯಾಲೆ ತಾಂದಾನ
ಜತೆಗೂಡ್ಯಾವೆ ಎಳಿನಾಗ ತಂದನಾನ
ಜತೆಗೂಡ್ಯಾವೆ ಎಳಿನಾಗ ಮಾರಕ್ಕನ ತಂದನಾನ
ಮುತ್ತಿನ ಮುಡಿಗೆ ಬಸುಲಂದೆ ತಂದನಾನ ॥

ತಾಯೇನ ಮಾರಕ್ಕನ ಸಾವುರದ ಮುಡಿಮ್ಯಾಲೆ ತಂದನಾನ
ತಾಂಡಗೂಡ್ಯಾವೆ ಎಳಿನಾಗ ತಂದನಾನ ॥
ತಾಂಡಗೂಡ್ಯಾವೆ ಎಳಿನಾಗ ಮಾರಕ್ಕನ ತಂದಾನ
ಸಾವಿರದ ಮುಡಿಗೆ ಬಿಸುಲಂದೆ ತಂದನಾನ ॥

ರಘುರಾಮೊಬಾಗಿ ದಸಲ ಒಡ್ಡ್ಯೆದಾನೆ
ಕುಶಲದ ಕರಡೀಗೆ ಬಲಗೈಲಿ ॥ ಸೋ ॥
ಕುಶಲದಾ ಕರಡೀಗೆ ಬಲಗೈಲಿ ಸಿದ್ದಣ್ಣ
ಎಸಳೂ ಮಲ್ಲೀಗೆ ಬಿಡಿಸಲೊರಟಾನೆ ॥। ಸೋ ॥

ಹೊತ್ತೇಮೇಲೋಗುತ ಹೊತ್ತುಗಳ ನೋಡುತ
ಒಪ್ಪಕ್ಕೊಂದ್ಹೆಜ್ಜೆ ಇಡುವುತ ॥ ಸೋ ॥
ಒಪ್ಪಕೇ ಒಂದ್ಹೆಜ್ಜೆ ಇಡುವೂತ ನಿಂಗಣ್ಣ
ಅಕ್ಕ ಗೂವೆತ್ತಲೊರಟಾನೆ ॥ ಸೋ ॥

ಏರಿಯಾಲೋಗುತಾ ವ್ಯಾಳ್ಯಾವ ನೋಡುತಾ
ಹೂವ ಕ್ಕೊಂದ್ಹೆಜ್ಜೆ ಇಡುವೂತ ॥ ಸೊ॥
ಹೂವಾಕೆ ಒಂದ್ಹೆಜ್ಜೆ ಇಡುವೂತ ನಿಂಗಣ್ಣಾ
ದೇವಿಗೆ ಹೂವೆತ್ತಲೊರಟಾನೆ ॥ ಸೋ ॥

ಆರಗೀದ ಹೊಲದಾಗೆ ಮರುಗಾವ ಬಿಡಿಸ್ಯಾನೆ
ಮರುಗದ ಭಾರಕ್ಕೆ ಬಳುಕ್ಯಾವೆ ॥ ಸೋ ॥
ಮರುಗದ ಭಾರಕ್ಕೆ ಬಳುಕೋ ಸಿದ್ದಣ್ಣನ
ಹಡದಮ್ಮ ಇನ್ನೆಂಥಾ ಕರಚೆಲುವೆ ॥ ಸೋ ॥

ಬಿತ್ತೀದ ಹೊಲದಾಗೆ ಒಪ್ಪುವ ಬಿಡಿಸ್ಯಾವೆ
ಒಪ್ಪದ ಭಾರಕೆ ಬಳುಕೋನೆ ॥ ಸೋ ॥
ಒಪ್ಪದ ಭಾರಕೆ ಬಳುಕೋ ನಿಂಗಣ್ಣನಾ
ಹೆತ್ತಮ್ಮ ಇನ್ನೆಂಥಾ ಕರಚೆಲುವೆ ॥ ಸೋ ॥

ಹೂವ ಇಲ್ಲವೆಂದು ಹೂವಿಗೋಗದಿರೆ
ಹೂವೆ ಮಾರಕ್ಕನ ಗುಡಿ ಹಿಂದೆ ॥ ಸೋ ॥
ಹೂವೇನೆ ಮಾರಕ್ಕನ ಗುಡಿ ಹಿಂದೆ ಸಣಮಲ್ಲೀಗೆ
ಹೂವರಳಿ ಬಾಯಿ ಬಿಡುತಾವೆ ॥ ಸೋ ॥

ಮೊಗ್ಗು ಇಲ್ಲಾವೆಂದು ಮೊಗ್ಗೀಗೋಗದಿರೆ
ಮಗ್ಗೆ ಬೊಮ್ಮಯ್ಯನ ಗುಡಿ ಹಿಂದೆ ॥
ಮೊಗ್ಗೇನೆ ಬೊಮ್ಮಯ್ಯನ ಗುಡಿ ಹಿಂದೆ ಸೂರ್ಯಾಕಾಂತಿ
ಮೊಗ್ಗರಳಿ ಬಾಯಿ ಬಿಡುತಾವೆ ॥ ಸೋ ॥

ಅಲ್ಲೀ ಅಲ್ಲೀ ಹೂವ ಬಲ್ಲಾಳು ಮಾರಕ್ಕಾ
ಹಳ್ಳಿ ಮಲಸಂದ್ರದೊಳಗಿನ ॥ ಸೋ ॥
ಹಳ್ಳಿಮಲ್ಲಾಸಂದ್ರ ಆಳಗಿನ ಕಾಲ್ಲೋದೊಳಗಿನ
ಮಲ್ಲೀಗೆ ಸರವೊಂದ ಮುಡಿದಾಳೆ ॥ ಸೋ ॥

ಆತ್ತಲಿತ್ತಾ ಹೂವ ಒಪ್ಪಾನು ಬೊಮ್ಮಯ್ಯ
ಮತ್ತೆ ದೇವರಳ್ಳಿ ಆಳಗಿನ ॥
ಮತ್ತೇ ದೇವರಳ್ಳಿ ಆಳಗಿನ ಕಾಲುವೆದೂವ
ಮಲ್ಲೀಗೆ ಸರವೊಂದ ಮುಡುದಾಳೆ ಸೋಬಾನವೇ ॥

ಹೂವಜಾಜೀ ಹೂವ ಹೂವ ಎಂಥ ಹೂವ
ಹೂವ ಜಾಜೀ ಹೂವ ತಳುಕಿನ ॥
ಹೂವ ಜಾಜೀ ಹೂವ ತಳಕಿನ ಕಾಲುವೆದಾಗಿನ
ಹೂವೆ ಮಾರಕ್ಕಗೆ ಬರಬೇಕು ॥

ಕಾಯೋ ಓಜೋಕಾಯೋ ಕಾಯೋ ಚಿಂತಾಕಾಯೋ
ಕಾಯೋಜಕಾಯಿ ತಳುಕಿನಾ ॥
ಕಾಯೀ ಓಜೀಕಾಯಿ ತಳುಕಿನಾ ತೋಟದ ಕಾಯಿ
ಕಾಯಿ ಬೊಮ್ಮಯಗೆ ಬರಬೇಕು ॥ ಸೋ ॥

ಪಟ್ಟೇದಾಗಿನ ಸೀರೆ ಒಪ್ಪಾಕೆ ಉಡಿಸಣ್ಣಾ
ಪಕ್ಕೆಗೆ ಬಿಡಣ್ಣಾ ಕೊನೇ ಸೆರಗಾ ॥
ಪಕ್ಕೇಗೆ ಬಿಡಣ್ಣಾ ಕೊನೆಸೆರಗಾ ಮಾರಕ್ಕಗೆ
ವಾಲೀಯ ಮ್ಯಾಲೆ ಇಳೀ ಬಿಡೇ ॥

ಶಾಲ್ಯಾದನ್ನಾ ಸೀರೆ ಮ್ಯಾಲಾಕೆ ಉಡಿಸಣ್ಣಾ
ಮ್ಯಾಲಾಕೆ ಬಿಡಣ್ಣಾ ಕೊನೆಸೆರಗಾ ॥
ಮ್ಯಾಲಾಕೆ ಬಿಡಣ್ಣಾ ಕೊನೆಸೆರಗಾ ಮಾರಕ್ಕಾಗೆ
ಗೊಂಡಿಯ ಮ್ಯಾಲೆ ಇಳೀಬೀಡೋ ॥

ಗಂಜೀಯನ್ನಾ ಸೀರೆ ಅಂದಾಕೆ ಉಡುಸಣ್ಣಾ
ಮುಂದಕೆ ಬಿಡಣ್ಣಾ ಕೊನೆಸೆರಗಾ ॥
ಮುಂದಕೆ ಬಿಡಣ್ಣಾ ಕೊನೆಸೆರಗಾ ಮಾರಕ್ಕಾಗ
ಪಟ್ಟೇಯ ಮ್ಯಾಲೆ ಇಳೀಬಿಡೋ ॥

ಹತ್ತೂ ಮ್ಯಾಲಿಟ್ಟು ಹತ್ತೂವ ಕೆಳಗಿಟ್ಟು
ಮತ್ತೊಂದೆ ಹೂವ ತುದೀಗಿಟ್ಟು ಸೋಬಾನವೇ
ಮತ್ತೊಂದಾ ಹೂವ ತುದಿಗಿಟ್ಟು ಸಿದ್ದಣ್ಣ
ಒಪ್ಪಕೆ ಮಾಡ್ಯಾನೆ ಶಿವಪೂಜೆ ॥ ಸೋ ॥

ಆರೂವ ಮ್ಯಾಲಿಟ್ಟು ಆರೂವ ಕೆಳಗಿಟ್ಟು
ಮ್ಯಾಲೊಂದೆ ಹೂವ ತುದಿಗಿಟ್ಟು ॥
ಮ್ಯಾಲೊಂದೇ ಹೂವ ತುದಿಗಿಟ್ಟು ನಿಂಗಣ್ಣಾ
ಆತನು ಮಾಡ್ಯಾನೆ ಶಿವಪೂಜೆ ॥

ಅಕ್ಕನ ಪೂಜೆಕಾದು ಬಟ್ಟರಡು ನೊಂದಾವೆ
ಚಿಕ್ಕಪೂಜಾರಿ ಚೆದುರ್ಯಾನೆ ॥
ಚಿಕ್ಕೇನೆ ಪೂಜಾರಿ ಚೆದುರ್ಯಾವೆ ಸಿದ್ದಣ್ಣನ
ಒಕ್ಕೂಳ ಮಾನ್ಯವಾ ಕೊಡೋ ದೊರೆಯೇ ॥

ಅಣ್ಣನ ಪೂಜೆಯ ಮಾಡಿಗಣ್ಣೆರಡು ನೊಂದಾವೆ
ಸಣ್ಣ ಪೂಜಾರಿ ಚೆದುರ್ಯಾನೆ ॥
ಸಣ್ಣೇನ ಪೂಜಾರಿ ಚೆದುರ್ಯಾನೆ ನಿಂಗಣ್ಣಾನ
ಹೊನ್ನಿನ ಮಾನ್ಯವ ಕೊಡೇ ದೊರೆಯೇ ॥

ಪೂಜಾರಿ ತಂದಾ ಹೂವ ಪೂಜೆಗೆ ಸಾಲಾವೆಂದೇ
ತಾಯಿ ಮಾರಕ್ಕ ಮುನಿದಾಳೆ ॥
ತಾಯೀನೆ ಮಾರಕ್ಕ ಮುನಿದಾಳೆ ಸಿದ್ದಣ್ಣ
ಹೋಗಿ ಕೊಯ್ಯುತಾರೋ ಹೊಸ ಹೂವು ॥

ಒಕ್ಕಲು ತಂದಾಹೂವ ಪಕ್ಕೆಗೆ ಸಾಲಾವೆಂದೇ
ಅಪ್ಪಾ ಬೊಮ್ಮಯ್ಯ ಮುನಿದಾನೆ ॥
ಅಪ್ಪೇನೆ ಬೊಮ್ಮಯ್ಯ ಮುನಿದಾನೆ ನಿಂಗಣ್ಣ
ಒಪ್ಪಿಕೋಯ್ತಾರೋ ಹೊಸ ಹೂವ ॥

ರಾಗೀ ರಾಗೀ ಪೂಜೇ ರಾಗೀ ರನ್ನದ ಪೂಜೆ
ರಾಯರು ಕಟ್ಟಿಸಿದ ಹೊಸಗೋಡೆ ॥
ರಾಯರು ಕಟ್ಟಿಸಿದ ಹೊಸಗೋಡೆ ಮಲ್ಲಸಂದ್ರ
ರಾಯರಿನ್ನೆಂಥಾ ಧನಿಕಾರೆ ॥

ಅಕ್ಕಿ ಅಕ್ಕೀಪೂಜೆ ಅಕ್ಕೀ ರನ್ನದ ಪೂಜೆ
ಒಕ್ಕಲು ಕಟ್ಟಿಸಿದ ಹೊಸಾ ಪೂಜೆ ।
ಒಕ್ಕಲು ಕಟ್ಟಿಸಿದ ಹೊಸ ಪೂಜೆ ದ್ಯಾವರಹಳ್ಳಿ
ಒಕ್ಕಲಿನ್ನೆಂಥಾ ದನಿಕಾರೆ ॥ ಸೋ ॥

ಅಡವೀ ಹುಲ್ಲೂ ಮೇಯ್ದು ಮಡಗಿನ ನೀರೂ ಕುಡಿದು
ಗಡಿಗೆ ಗಡಿಗೆ ಹಾಲುಕರೆದಾವೆ ।
ಭಾರೀಗಡಿಗೇ ಹಾಲು ಕರಿಯಾವು ಕೊಡುತೀವಿ
ಬಡಿಯಾಲು ಉರುಮೆ ಕಡಿಮಾಡು ॥

ಅಂಬೀ ಹುಲ್ಲೂ ಮೇಯ್ದು ಬೆಂಕಿಲಿ ನೀರೂ ಕುಡಿದು
ಕಂಚು ಕಂಚೀಲೆಲ್ಲಾ ಹಾಲು ಕರಿದಾವು ।
ಕಂಚಿನ ಕಂಚೀ ಹಾಲು ಕರಿದಾವು ಕೊಡುತೀನಿ
ಕಂಚೀನ ಉರುಮೆ ಕಡಿಮಾಡೋ ॥

ಬಡಿಗೇರ ಮನಿಮುಂದೆ ಬೆಡಗಿನ ಬೇವಿನಮರ
ಕಡುದಾರೆ ನಾಲ್ಕು ಸವಗಾಲೀ ಏರಿದಳೂ ರಥವಾ
ಕಡುದಾರೇ ನಾಲ್ಕು ಸವುಗಾಲೀ ಮಲ್ಲಸಂದ್ರ
ಸತ್ಯವಂತೇರ ರಥಗಳು ಏರಿದಳೂ ರಥವಾ ॥

ಉಪ್ಪಾರರ ಮನಿ ಮುಂದೆ ಉತ್ತುತ್ತಿ ಮರನುಟ್ಟಿ
ಕೆತ್ತಿದರೂ ನಾಕು ಸವಗಾಲೀ ಏರಿದಳೂ ರಥವಾ
ಕೆತ್ತಿದರೇ ನಾಕು ಸವಗಾಲೀ ದೇವರಹಳ್ಳಿ
ಸತ್ಯವಂತೇಯ ರಥಗಳೂ ಏರಿವಳೂ ರಥವಾ ॥

ಒಂದೇನೆ ಬೇಡಮ್ಮ ಮುಂದಲ ಮನಿಯರುನ
ಗಂಜೀಯಚ್ಚಡದ ಗವುಡರಿನ ಏರಿದಳೂ ರಥವಾ
ಗಂಜೀಯಚ್ಚಡದ ಗವುಡರ ರುದ್ರಣ್ಣನ
ಬಂದೀ ಬೇಡಮ್ಮ ಸವ್ವಾಜೋಡು ಏರಿದಳು ರಥವಾ ॥

ವಾಲೇನೆ ಬೇಡಮ್ಮ ಸಾಲುಮಾಳಿಗರುನ
ಶಾಲೇವಚ್ಚಡದಾ ಮಠದಯ್ಯಾನ
ಶಾಲೇದಚ್ಚಡದ ಮಠದಯ್ಯಾ ಮರಿಸ್ವಾಮಿನ
ವಾಲೇ ಬೇಡಮ್ಮ ಸವ್ವಾಜೋಡು

ಅಕ್ಕೇನೆ ಮಾರಕ್ಕಾ ಬೊಟ್ಬೊಂದನಿಡುವಾಗ
ಹತ್ತೇ ಮಕ್ಕಳು ಅಳುತಾರೇ ॥
ಹತ್ತೇನೆ ಮಕ್ಕಳು ಅಳುತಾರೆ ಬರಿಮೈಯಿಂದ
ಮೊರೆ ಹೋಯ್ ಹೊಯ್ದು ನಗುತಾನೇ

ತಾಯೇನೆ ಮಾರಕ್ಕ ಕಾಲುಂಗರಿಡುವಾಗ
ಆರೇ ಮಕ್ಕಳು ಅಳುತಾರೇ
ಆರೇನೆ ಮಕ್ಕಳು ಅಳುತಾರೆ ಬರು ಮೈಲಿಂದ
ಹೊಟ್ಟೆ ಹೊಯ್ ಹೋಯ್ದು ನಗುತಾನೇ

ಇದ್ದನೀರು ಹೊಯ್ಕೊಂಡು ಎದ್ದು ಬಾರ ಪೂಜಾರಿ
ಗುದ್ದಾಟ ಬ್ಯಾಡ ಮನಿಯಾಗೆ
ಗುದ್ದಾಟ ಬ್ಯಾಡ ಮನಿಯಾಗೆ ಸಿದ್ದಣ್ಣ
ದೊಡ್ಡೋಳ ಪೂಜೆ ತಡುದಾವೆ

ಇದ್ದನೀರು ಎರಕೊಂಡು ಬೇಗನೆ ಬಾ ಪೂಜಾರಿ
ಕಾದಾಟ ಬೇಡ ಮನಿಯಾಗೆ
ಕಾದಾಟಾ ಬ್ಯಾಡ ಮನಿಯಾಗೆ ನಿಂಗಣ್ಣ
ಸಣ್ಣನ ಪೂಜೆ ತಡುದಾವೆ

ಪಟ್ಟೆನಕ್ಷತ್ರ ತರುವೆ ಮುತ್ತಿನ ಖಡುಗ ತರುವೆ
ರಟ್ಟೇಗೆ ತಾಯುತದ ಮಣಿತರುವೆ
ರಟ್ಟೇಗೆ ತಾಯುತದ ಮಣಿ ತರುವೆ ಕೆಂಚಮ್ಮ
ಪುತ್ರಾನೊರಾಗೆ ಕಳುವಮ್ಮಾ

ಶಾಲೀವಚ್ಚಡ ಇಲ್ಲ ನೀಲಿದ ಖಡುಗಾ ಇಲ್ಲ
ತೋಳೀಗೆ ತಾಯುತದ ಮಣಿ ಇಲ್ಲ
ತೋಳೀಗೆ ತಾಯುತದ ಮಣಿ ಇಲ್ಲ ಸೂರಮ್ಮ
ಪುತ್ರಾನೊರಾಕೆ ಕಳುವಮ್ಮಾ

ದೇವರೊರುವಣ್ಣಾಗೆ ಮನಮೆಚ್ಚಿದಾ ಓಲೆ
ಕಾಶೀದಟ್ಟವರ ನಡವೀಗೆ ಏರಿದಳೂ ರಥವಾ
ಕಾಶೀನೆದಟ್ಟವರ ನಡುವೀಗೆ ಸಿದ್ದಣ್ಣ
ದೇವರ ಹೊರುವ ಮಗನೀಗೆ

ಪೆಟ್ಟಗೆ ಹೊರುವಣ್ಣಾಗೆ ಮನಮುಟ್ಟಿದಾ ಓಲೆ
ಕಾಶೀದಟ್ಟವರಾ ನಡುವೀಗೆ
ಕಾಶೀನೆ ದಟ್ಟವರ ನಡುವೀಗೆ ನಿಂಗಣ್ಣ
ಪೆಟ್ಟೇಗಿ ಹೊರುವ ಮಗನೀಗೆ

ದೇವರ ಹೊರಿಸ್ಯಾರೆ ವೀರಕುಮಾರಗೆ
ನೀಲಮ್ಮ ರಡದಾ ಮಗನೀಗೆ
ನೀಲಮ್ಮಾರಡದಾ ಮಗನೇ ಸಿದ್ದಣ್ಣಗೆ
ದೇವರೊರಿಸ್ಯಾರೆ ಹಿರಿಯೂರು ॥ಏ॥

ಪೆಟ್ಟೇಗೆ ಹೊರಿಸ್ಯಾರೆ ಅಪ್ಪ ಕುಮಾರಗೆ
ಮುತ್ತೈದೆ ಹೆಡೆದಾ ಮಗನೀಗೆ
ಮುತ್ತೈದೇ ಹಡೆವ ಮಗನೇ ನಿಂಗಣ್ಣಗೆ
ಪೆಟ್ಟಗೆ ಹೊರಿಸ್ಯಾರೆ ಹಿರಿಯೂರು ॥ಏ॥

ಬಂಡೀಹೊಡೀರಣ್ಣಾ ಮುಂದಕೆ ಹೊಡಿರಣ್ಣಾ
ಬಂಡಿಗೆ ಭಂಡಾರ ಹಿಡೀರಣ್ಣಾ
ಬಂಡೀಗೆ ಭಂಡಾರ ಹಿಡಿರಣ್ಣಾ ಮಲ್ಲಸಂದ್ರ
ಭಂಡದೊಬ್ಬಳೇ ವನಗಳಿಗೇ

ಗಾಡೀ ಹೊಡೀರಣ್ಣಾ ಮೇಲಕೆ ಹೊಡಿರಣ್ಣ
ಗಾಲೀಗೆ ಭಂಡಾರ ಹಿಡೀರಣ್ಣಾ
ಗಾಲೀಗೆ ಭಂಡಾರ ಹಿಡೀರಣ್ಣ ದೇವರಳ್ಳಿ
ಗಾಲ್ಯಾದ ನಿಂಬಿಯಾ ವನಗಳಿಗೆ ॥ಏ॥

ಅತ್ತರಿಗೆ ಛತ್ತರಿಕೆ ಹದಿನಾರು ಜಗರ್ಝಂಪ
ಚಿಕ್ಕದುರುಗದಲಿ ಹಣುದಾರೆ
ಚಿಕ್ಕೇನೆದುರುಗದಲಿ ಹಣುದಾರೆ ಛತ್ತಿರಿಕೆ
ಅತ್ತಿತ್ತ ಅವರು ಹಿಡುದಾರೆ ॥ಏ॥

ಆರೇನೆ ಛತ್ತರಿಕೆ ಹದಿನಾರು ಜಗರ್ಝಂಪ
ಮೇಲೇ ದುರುಗದಲಿ ಹಣುದಾರೆ ಏರಿದಳೂ ರಥವಾ
ಮೇಲೇನೆ ದುರುಗದಲಿ ಹಣುದಂಥ ಛತ್ತರಿಕೆ
ತಾಯವ್ವ ಗೋಲಾಡಿ ಹಿಡುದಾರೆ ॥ಏ॥

ಬಂಡಿ ಹೊಡಿವಣ್ಣಾನ ಅಂದಾವ ನೋಡಿರೆ
ಮಂಡೆ ಧೂಳವರ ಮೈಯ್ಯೆಲ್ಲಾ ಧೂಳೂ
ಬಂಡೀನೆ ಧೂಳವರ ಮೈಧೂಳು ಮಾರಕ್ಕಗೆ
ಭಂಡಾರದ ಬಂಡಿ ಹೊಡೀವರೆ ॥ಏ।

ಗಾಡೀ ಹೊಡಿವಣ್ಣಾನ ಆಯಾವ ನೋಡೀರಿ
ಮಾರೇಧೂಳವರ ಮೈಧೂಳು
ಮಾರೇನೆ ಧೂಳವರ ಮೈಧೂಳು ಮಾರಕ್ಕನ
ಭಂಡಾರದ ಗಾಡಿ ಹೊಡೀವವರೆ ॥ಏ॥

ಅತ್ತಿತ್ತ ಬಂದಾವೆ ಹತ್ತು ಸಾವಿರಬುಡಿ
ಗೊತ್ತೇ ಕೊಡಯ್ಯ ಕರಿ ಹನುಮಾ
ಇಲ್ಲೆಲ್ಲಿ ಗೊತ್ತಮ್ಮ ಇಲ್ಲೆಲ್ಲಿ ಇಳಿವಮ್ಮಾ
ಹೊಡಿಯಮ್ಮಾ ರಥವ ಹೊರಿಯಾಕೆ ॥ಏ॥

ಹೊಡಿಯಮ್ಮಾ ರಥವ ಹೊರಿಯಾಕೆ ಮಲ್ಲಸಂದ್ರ
ಮೆರೆಸಮ್ಮ ಪರಿಸೆ ಬಯಲೀಗೆ
ಎಲ್ಲಿದ್ದ ಬಂದಾರೆ ಮೂರುಸಾವಿರ ಬಂಡಿ
ತಾವು ಕೊಡಯ್ಯ ಕರಿ ಹನುಮಾ ॥ಏ॥

ಇಲ್ಲೆಲ್ಲಿ ತಾವಮ್ಮ ಇಲ್ಲೆಲ್ಲಿ ಇಳಿವಮ್ಮಾ
ಹೊಡಿಯಮ್ಮಾ ರಥವಾ ಹೊರಿಯಾಕೆ
ಹೊಡಿಯಮ್ಮ ರಥವಾ ಹೊರಿಯಾಕೆ ದೇವರಹಳ್ಳಿ
ನೆರೆಸಮ್ಮಾ ಪರಿಸೆ ಬಯಲೀಗೆ ॥ಏರಿ॥

ನಿಂತಿದ್ದ ಹನುಮಯ್ಯ ನಿಂತಾಗೆ ಇರಬೇಕು
ಅಂತರಲಿ ಊರು ಹೋಗಬೇಕು
ಅಂತರಲೆ ಊರು ಹೋಗದಿದ್ದರೆ ನಾನು
ರೂಢಿಗೇಶ್ವರನ ಮಗಳಲ್ಲ ॥ಏ॥

ಕುಂತಿದ್ದ ಹನುಮಯ್ಯ ಕುಂತಂಗೆ ಇರಬೇಕು
ಹಾಗಾಗೆ ಊರು ಹೋಗಬೇಕು ॥

ಬಿತ್ತಿದ್ದ ಹೊಲದಾಗೆ ಬಿತ್ತಿರದ ಹೊಲದಾಗೆ
ಆವಳಾ ರಾಜ್ಯಣದ ಬಯಲಾಗೆ ಏರಿದಳೂ ರಥವಾ
ಮತ್ತೇನು ರಾಜ್ಯಣದ ಬಯಲಾಗೆ ಮಾರಕ್ಕ
ಛತ್ರಿಕೆ ಸಾಲಿಟ್ಟು ನಡೆದಾಳು ಏರಿದಳೂ ರಥವಾ ॥ಏ॥

ಅರಗೀದ ಹೊಲದಾಗೆ ಅರಗದಿದ್ದೊಲದಾಗೆ
ಅವಳ ರಾಜ್ಯಣದ ಬಯಲಾಗೆ
ಅವಳೇನ ರಾಜ್ಯಣದ ಬೊಮ್ಮಯ್ಯ ಉರಿ ನೊಸಲಿಟ್ಟು
ನಡೆದಾನು ॥ಏ॥

ಹತ್ತಲಾರದ ಬೆಟ್ಟ ಹತ್ತ್ಯಾಳೆ ಮಾರಕ್ಕ
ಕೂಗ್ಯಾಳೆ ಕುರಿ ಹಟ್ಟಿ ಗೌಡರನ ॥ಏ॥
ಕೂಗ್ಯಾಳೆ ಕುರಿಹಟ್ಟಿ ಗೌಡ ಕರಿಯಣ್ಣನಾ
ಧೂಳಮರಿಮುಂದಾಗಿ ಬರಬೇಕು ॥ಏ॥

ಧೂಳು ಮರಿಮುಂದಾಗಿ ಬಾರದಿದ್ದರೆ ನಾನು
ಬಾಲಾಗೆ ಸಳಿ ಜರ ತರಿಸೇನು ॥ಏ॥
ಧೂಳುಮರಿ ಮುಂದಾಗಿ ಬಾರದಿದ್ದರೆ ನಾನು
ಮಡದೀಗೆ ಸಳಿ ಜರ ತರಿಸೇನು ॥ಏ॥

ಆಕ್ಕೇನ ಮಾರಕ್ಕ ಹುತ್ತಕ್ಕೋಗಲುವಾಗ
ಮುತ್ತೀನಕಣ ಮುಡಿದಾಳ ॥ಏ॥

ಅತ್ತೀಯನ್ನಾ ಮರಕೆ ಹತ್ತೀದ ಸರುಪಾನ
ನೆತ್ತೀಯ ಹಿಡಿದು ನೆಲಕೊಡೆದು
ನೆತ್ತೀಯನ್ನಾ ಹಿಡಿದು ನೆಲಕೊಡೆದು ಪ್ರಾಣನ ಪಡೆದು
ಹುತ್ತಕ್ಕೋಗಂತಾ ಕಳಿವ್ಯಾಳು ॥ಏ॥

ಅತ್ತೀಯನ್ನಾ ಮರಕೆ ಏರಿದ ಸರುಪವ
ನಾಲಿಗೆ ಹಿಡಿದು ನೆಲಕೊಡೆದು
ನಾಲಿಗೆಯನ್ನಾ ಹಿಡಿದು ನೆಲಕೊಡೆದು ಪ್ರಾಣವ ಪಡೆದು
ಕೋವಿಗೋಗಂತಾ ಕಳುವ್ಯಾಳು ॥ಏ॥

ಅರಿಷಿಣದ ಉಂಡೆಗೆ ಪರಿಷೆಯ ಗದ್ದಲಿಗೆ
ಆರಸೀ ಮಾರಕ್ಕ ಬೆವತಾಳು
ಆರಸೀನ ಮಾರಕ್ಕ ಬೆವೆತಾಳು ಬಸವೀರು
ಛಂದಮಿದಾಕೆ ಸವ್ವಾಲೀಯ ಏರಿದಳೂ ರಥವಾ

ಗಂಧಾದ ಉಂಡೀಗೆ ಮಂದೀಯ ಗದ್ದಲಕೆ
ತಂದೆಬೊಮ್ಮಯ್ಯ ಬೆನತಾನು ॥ಏ॥
ತಂದೇನೆ ಬೊಮ್ಮಯ್ಯ ಬೆವತಾನೆ ಬಸವೀರು
ಛಂದವಿಂದಾಕೆ ಸವಾಲೀಯ ಏರಿದಳೂ ರಥವಾ

ಹತ್ತಲಾರದ ಬೆಟ್ಟ ಹತ್ತ್ಯಾಳೆ ಮಾರಕ್ಕ
ಸುತ್ತ ನೋಡ್ಯಾಳೆ ತನಪರಿಷೆ
ಸುತ್ತೇನೆ ನೋಡ್ಯಾಳೆ ತನ ಪರಿಷೆ ನಿಡುಗಲ್ಲು
ತುಪ್ಪದ ಕೊಂಬೇಗೆ ತಡುದಾವ ॥ಏ॥

ಏರಲಾರದ ಬೆಟ್ಟ ಏರ್‍ಯಾಳೆ ಮಾರಕ್ಕ
ದೂರ ನೋಡ್ಯಾಳೆ ತನ ಪರಿಷೆ
ದೂರಾನೆ ನೋಡ್ಯಾಳೆ ತನ ಪರಿಷೆ ನಿಡುಗಲ್ಲು
ಆಲದ ಕೊಂಬೀಗೆ ತಡದಾವು ॥ಏ॥

ಅಕ್ಕೇನೆ ಮಾರಕ್ಕ ಹುತ್ತಕ್ಕೋಗಲುವಾಗ
ಮುತ್ತೀನ ಖಣ ಮುಡಿದಾಳ
ಮುತ್ತೀನ ಖಣ ಮುಡಿದಾಳ ಮಾರಕ್ಕ
ಪಟ್ಟೇದ ಸೀರೆ ನಡೆ ಮಡಿ ಏರಿದಳೂ ರಥವಾ ॥

ತಮ್ಮೇನೆ ಬೊಮ್ಮಯ್ಯ ಗಂಗೇ ಗೋಗಲುವಾಗ
ಗಂಜಿಯ ಖಣ ಮುಡಿದಾಳ
ಗಂಜೀಯುಳ್ಳ ಕಣ ಮುಡಿವಾಳ ಬೊಮ್ಮಯ್ಯಾಗೆ
ಗಂಜೀಯ ಸೀರೆ ನಡೆಮುಡಿ ॥ಏ॥

ಪಡುವಾಲ ಸೀಮೆಗೆ ಹೋಗಿ ಬಾರೋ ರಂಗಯ್ಯ
ಪಡುವಾಲ ಪರಿಷೆ ಬರಲಿಲ್ಲಾ
ಪಡುವಲಾ ಪರಿಷೆ ಬರದಿದ್ದರೆ ನಾನು
ಬಾಲಗೆ ಸಳಿ ಜ್ವರ ಬರಿಸೇನು ॥ಏ॥

ಮೂಡಲ ಸೀಮೆಗೆ ಹೋಗಿ ಬಾರೋ ರಂಗಯ್ಯ
ಮೂಡಲ ಪರಿಷೆ ಬರಲಿಲ್ಲ
ಮೂಡಲ ಪರಿಷೆ ಬಾರದಿದ್ದರೆ ನಾನು
ಮಡದೀಗೆ ಸಳಿಜ್ವರ ತರಿಸೇನು ॥ಏ॥

ಕಲುಕಂಭನತ್ಯಾರೆ ದೀಪವನಚ್ಯಾರೆ
ಕಲುಕಂಭನೆತ್ತಿ ಇಳುದಾರೆ
ಕಲುಕಂಭಾನೆತ್ತಿ ಇಳುದಾರೆ ಸಿಲುಕಿನಾರು
ಕಾಯೊಡೆದು ಕೈಯ ಮೂಗುದಾರೆ ॥ಏ॥

ಅತ್ಲಿಂದ ಬಂದಾವೆ ಹತ್ತು ಸಾವಿರಕೋಣ
ಸುತ್ತ ಗಟ್ಯಾವೆ ಪವಳೀಯ ॥ಏ॥
ಸುತ್ತೇನೆ ಗಟ್ಯಾವೆ ಪವಳೀ ಬಾಗಿಲ ಮುಂದೆ
ಒಪ್ಪಿಸಿಕೊಟ್ಟಾಳೆ ದೂತರೀಗೆ ॥ಏ॥

ಮೂಡ್ಲಿಂದ ಬಂದಾವೆ ಮೂರು ಸಾವಿರ ಕುರಿ
ಸಾಲುಗಟ್ಯಾವೆ ಪವಳೀಯ
ಸಾಲೇನಗಟ್ಯಾವೆ ಪವಳೀ ಬಾಗಿಲ ಮುಂದೆ
ಹಾರಕೊಟ್ಟಾಳೆ ದೂತಾರೀಗೆ ॥ಏ॥

ಬಾಯಬೀಗದೋರು ಬೇವಿನ ಸೀರ್ಯಾರು
ಮೇಲೆ ಅಂತರಲೇ ಸಿಡಿಯೋರು ಏರಿದಳೂ ರಥವಾ
ಮೇಲೇನೆ ಅಂತರದ ಸಿಡಿಯೋರು ಬರುತಾರೆ
ಬಾಗಿಲಾ ತಗಿಯೇ ಕಿಡಿಗಣ್ಣೆ ||ಏ||

ಬಾಗಿಲ ತಗಿಯಾಕೆ ಬಡಿಗೇರ ಮಗಳಲ್ಲಾ
ಸುತ್ತೀಬಾ ನನ್ನ ಪವಳೀಯಾ
ಸುತ್ತೇನೆ ಬಾ ನನ್ನ ಪವುಳೀ ಬಾಗಿಲ ಮುಂದೆ
ಹೆತ್ತಿರುವ ಮಗನ ಹೆಸರಿಂದೇ ||ಏ||

ಒಪ್ಪೊತ್ತಿನಾ ಊಟ ಚುಚ್ಚಿದ ಬಾಯಬೀಗ
ಸುಚ್ಚೀನ ಮೆಲ್ಲಾಕೆ ಬರುಲಾರೆ
ಸುಚ್ಚೀನೆ ಮೆಲ್ಲೋಕೆ ಬರುಲಾರೆ ಮಾರಕ್ಕ
ಒಪ್ಪಿಸಿಕೊಳ್ಳೇ ಮನಾದರಕೆ ||ಏ||

ಒಪ್ಪಿಕೊಂಬಾಕೆ ಎತ್ತೇನೆ ಎಮ್ಮೇನೆ
ಸುತ್ತೀ ಬಾ ನನ್ನ ಪವುಳೀಯ ||ಏ||
ಸುತ್ತೇನೆ ಬಾ ನನ್ನ ಪವುಳೀ ಬಾಗಿಲ ಮುಂದೆ
ಚೊಚ್ಚಿಲ ಮಗನಿಗೇ ನನ್ನ ಹೆಸರಿಡೇ ||ಏ||

ಹರಪನಹಳ್ಳಿಯೋರು ಹರಿಯಬ್ಬೆ ನೆಂಟಾರು
ಹರಕೇಲಿ ಅವರು ಬರುತಾರೆ ||ಏ||
ಹರಕೇಲಿ ಅವರು ಬರುತಾರೆ ಮಾರಕ್ಕ
ಬರುವಾರ ಮೇಲೆ ದಯಾವಿರಲಿ ||ಏ||

ಲಿಂಗದಳ್ಳಿಯವರು ಜಂಗಮರ ಹೆಂಡಿರು
ಬಂದ್ಹತ್ತೀಲವರು ಬರುತಾರೇ ||ಏ||
ಬಂದ್ಹತ್ತೀಲವರು ಬರುತಾರೇ ಮಾರಕ್ಕ
ರಂಭೇರ ಮ್ಯಾಲೆ ದಯಾವಿರಲಿ ||ಏ||

ಕೋಟೆ ಕೋಟಗೆ ಸುತ್ತೆ ಆತುಕೊಂಡ್ಯೆದಾವೆ
ಮಾತಾಡಿ ಬ್ಯಾಟೆ ಕಡೀರಣ್ಣಾ ||ಏ||
ಮಾತಾಡೀ ಬ್ಯಾಟ ಕಡಿರಣ್ಣ ಮಲ್ಲಸಂದ್ರ
ಕ್ವಾಟೀಗೆ ಮಹಾಸತ್ಯೆ ಒಲಿದಾಳು ||ಏ||

ಕೊಂಬೆ ಕೊಂಬೆಗೆ ದೊರೆತಿ ನಂಬಿಕೊಂಡ್ಯೆದಾಳೆ
ಇಂಬಾಗಿ ಬ್ಯಾಟಿ ಕಡೀರಣ್ಣಾ ||ಏ||
ಇಂಬಾಗೀ ಬ್ಯಾಟಿ ಕಡಿರಣ್ಣಾ ದೇವರಳ್ಳಿ
ಕೊಂಬೀಗೆ ಮಹಾಸತ್ಯ ಒಲಿದಾಳೆ ||ಏ||

ಅರಿಷಿಣದನ್ನಾ ಉಂಡೆ ಪರಿಷೆಗೆ ಈಡಾಡುತ
ವರುಷದ ಮಗನಾ ನಡೆಸುತಾ ಮಾರಕ್ಕ
ಪುರುಷನ ತಲಿಯ ಹೊಯಿಲ ಸ್ಯಾಳೆ ||ಏ||

ಗಂಧದನ್ನಾ ಉಂಡೆ ಮಂದ್ಯಾಗೀಡಾಡುತಾ
ತಿಂಗಳಾ ಮಗನಾ ನಡೆಸುತ ||ಏ||

ತಿಂಗಳಾ ಮಗನ ನಡೆಸುತ ಮಾರಕ್ಕ ಗಂಡಾನಾ ತಲೀಯ
ಹೊಯೆಸ್ಯಾಳು ||ಏ||

ಆಟ್ಯಾದಾಗೇ ಒಬ್ಬ ಶೆಟ್ಟಿ ಕುಂತ್ಯೆದಾನೆ
ಕೆಂಪಣ್ಣಾ ಎಣ್ಣೆ ಬರದೀರೆ ಏರಿದಳೂ ರಥವಾ
ಕೆಂಪಣ್ಣಾ ಎಣ್ಣೆ ಬರದೀರೆ ಮಾರಕ್ಕಾ
ಸೂಲಕ್ಕೆ ತಕ್ಕ ಬಸವೇರು ||ಏ||

ಕತ್ತಾಲಾಗೇ ಒಬ್ಬ ಶೆಟ್ಟಿ ಕುಂತ್ಯೆದಾನೆ
ಕರ್ರನ್ನ ಎಣ್ಣೆ ಬರದೀರೆ ||ಏ||
ಕರ್ರನ್ನಾ ಎಣ್ಣೆ ಬರದೀರೆ ಬೊಮ್ಮಯ್ಯ
ಸೂಲಕ್ಕೆ ತಕ್ಕ ಬಸವೇರು ||ಏ||

ಮಲ್ಲೀಗೆ ವನದಾಗೆ ಚೆಲ್ಲುತಾ ನಡೆದಾಳೆ
ಮಲ್ಲೀಗೆ ಹೂವ ಹೊಲಮ್ಯಾಲೆ
ಮಲ್ಲೀಗೆನ್ನಾ ಹೂವ ಹೊಲಮ್ಯಾಲೆ ಕಿತ್ಕೊಂಡು
ನಲ್ಲೆ ಪಟ್ಟಣಕೆ ಹೊರಟವಳೆ ||ಏ||

ಸಂಪಿಗೆ ಹೊಲದಾಗೆ ಮಿಂಚುತಳ್ಳೆದಾಳೆ
ಸಂಪಿಗೆ ಹೂವ ಹೊಲಮೇಲೆ
ಸಂಪಿಗೆನ್ನಾ ಹೂವ ಹೊಲದಲ್ಲಿ ಕಿತ್ಕೊಂಡು
ಕೆಂಚೀ ಪಟ್ಟಣಕೆ ಹೊರಟವಳೆ ||ಏ||

ಅಡ್ಡಗಲ್ಲಿನ ಮೇಲೆ ಹೆಡ್ಡಾಗಿ ಕುತ್ಕೊಂಡು
ಗುಡ್ಡಕ್ಕೆ ಮೊರೆ ತಿರುವ್ಯಾಳೆ
ಗುಡ್ಡಕ್ಕೇ ಮಾರೆ ತಿರುವ್ಯಾಳೆ ಮಾರಕ್ಕ
ಎಡ್ಡಾಟವೇನೆ ನಮಕೂಡ ||ಏ||

ಸಾಸಣ ಗಲ್ಲಿನಮ್ಯಾಲೆ ಲೇಸಾಗಿ ಕುಂತಾಳೆ
ದೇಶಕೆ ಮಾರೆ ತಿರುವ್ಯಾಳೆ ||ಏ||
ದೇಶಕ್ಕೇ ಮಾರೆ ತಿರುವ್ಯಾಳೆ ಮಾರಕ್ಕ
ಪೇಚಾಟವೇನೆ ನಮ್ಮ ಕೂಟ ||ಏ||

ಎಲ್ಲೀಗೋಗಿದ್ದೆವ್ವಾ ಮಲ್ಲೀಗೆ ಸೂರಾಡುತಾ
ಕಾಸೇನೆ ರೇಶಿಮೆ ಉಟ್ಟಿದಾಳೆ
ಏಸೊಂದು ನೆರಿಗೆ ಹೊಯ್ದಾಳೆ ||ಎಲ್ಲೀ||

ಏಸೊಂದು ನೆರಿಗೆ ಹೊಯ್ದಾಳೆ ಮಲ್ಲಸಂದ್ರ
ಕೋಟೆಗೆ ಬೀಸ್ಯಾಳೆ ಕೊನೇಸೆರಗ ||ಎಲ್ಲೀ||

ಎಳ್ಳೇನೆ ಕಾಳುಟ್ಟು ಸೆಲ್ಯೇ ಉಟ್ಟ್ಯೆದಾಳೆ
ಸೆಲ್ಲಾಡುತ ನೆರಿಗೆ ಹೊಯ್ದಾಳೆ
ಏಸೊಂದಾ ನೆರಿಗೆ ಹೊಯ್ದಾಳೆ ದೇವರಳ್ಳಿ
ಹಳ್ಳಕೆ ಬೀಸ್ಯಾಳೆ ಕೊನೇ ಸೆರಗ ||ಏ||

ಮುತ್ತೇನೆ ಮಾರಕ್ಕಾ ಮುತ್ತು ಒಡಲಿಗೆ ಕಟ್ಟಿ
ಬಿತ್ತುತಾ ಬಾರೆ ತೊರೆ ಸಾಲು
ಬಿತ್ತುತಾ ಬಾರೆ ತೊರೆಸಾಲು ಮಲ್ಲಸಂದ್ರ
ಮುತ್ತಿನಂಥಾ ಭೂಮಿ ನಮ್ಮದಮ್ಮ ॥ಎ॥

ತಾಯೀನಿ ಮಾರಕ್ಕಾ ಜ್ವಾಳ ಒಡಲೂ ಕಟ್ಟಿ
ಹಾಕುತಾ ಬಾರೆ ತೊರೆ ಸಾಲು
ಹಾಕುತಾ ಬಾರೆ ತೊರೆ ಸಾಲು ದೇವರಳ್ಳಿ
ಹಾಲಿನಂಥಾ ಭೂಮಿ ನಮದಲ್ಲೇ ॥ಎ॥

ಬಾಲೇನೆ ಮಾರಕ್ಕ ಹಾಲಿಗಿನ್ನಾ ಮಿದುವು
ಈಗೆಲ್ಲಿ ತುಳಿದೇ ಎಳೀ ಮುಳ್ಳು ಮಾರಕ್ಕಾ
ಈಗಾ ಎಲ್ಲೀ ತುಳಿದೆ ಎಳಿ ಮುಳ್ಳು ಮಾರಕ್ಕಾ
ಹೂವಿನ ಚಪ್ಪರದ ಹೊಳೆಯಲ್ಲಿ ॥ಎ॥

ಅಕ್ಕಾ ನಿನ್ನಾ ಪಾದ ತುಪ್ಪಾಕಿನ್ನಾ ಮಿದುವು
ಈಗೆಲ್ಲ ತುಳಿದೇ ಎಳೇ ಮುಳ್ಳು
ಈಗೆಲ್ಲೀ ತುಳಿದೇ ಎಳಿ ಮುಳ್ಳು ದೇವರಳ್ಳಿ
ಮುತ್ತಿನ ಸಾಗುರದ ಹೊಳೆಯಲ್ಲಿ ॥ಎ॥

ಬೆಟ್ಟವಾ ಇಳಿವಾಗ ಬಿಚ್ಚೇವು ಪಾದದ ಗೆಜ್ಜೆ
ಬೆಟ್ಟಂಗುರು ಉಡಿಗೇ ಸಡಿಲ್ಯಾವೆ
ಬೆಟ್ಟಂಗುರು ಉಡಿಗೇ ಸಡಿಲ್ಯಾವೆ ಮಾರಕ್ಕಾನ
ಬೆಟ್ಟಾವ ಇಳಿವಾ ರವಸೀಗೆ ॥ಎ॥

ನೀಕೇಳೇ ಕರಣೆಗೆ
ಊರು ಗೊಲ್ಲರ ರಾಯರ ಕೂಟ ಆನಂದವಾಡಿದಳು.

ಕಟ್ಟೇಮ್ಯಾಲೆ ಮಾರಕ್ಕ ರೊಚ್ಚೆದ್ದು ಬರುವಾಗ
ನಿಟ್ಟೆಲ್ಲಾ ಊರಗವುಡರಿಗೆ ॥ನೀ॥
ಹತ್ತೇಳು ಬಾಣಗಳು ನೆಲಬಿರುಸಿ ನಾರತಿ ಸುತ್ತೇಳಾರುತಿ ಮರಕೆ
ನೇತಾಡುವಾಗ ॥ಊರುಗೊಲ್ಲರ ರಾಯರ॥

ನಿಟ್ಟೆಲ್ಲಾ ಊರ ಗೌಡಗೊಂಚಿಗಾರರಿಗೆ
ಛತ್ರೀಕೆ ಒಯ್ದು ಕರೆತನ್ನೀ ॥ನೀಕೇ॥

ಏರಿಮ್ಯಾಲೆ ಮಾರಕ್ಕ ರಾಳೆದ್ದು ಬರುವಾಗ
ಗ್ಯಾನಿಲ್ಲಾ ಊರ ಗವುಡರಿಗೆ ॥ನೀ॥
ಗ್ಯಾನಿಲ್ಲಾ ಊರ ಗವುಡಗೊಂಚಿಗಾರರಿಗೆ
ಉರುಮೇಯ ಒಯ್ದು ಕರೆತಾರೋ ॥ನೀ॥

ಏರಿಮ್ಯಾಲೇ ಗೌಡ ವಾರೀಲಿ ಶ್ಯಾನುಭೋಗ ಶ್ಯಾಲೆದಚ್ಚಡದ
ಮಠದಯ್ಯಾ ॥ನೀ॥
ಶ್ಯಾಲೇದಚ್ಚಡದ ಮಠದಯ್ಯನು ಬನ್ನಿ ॥ನೀ॥

ಏರೀಮ್ಯಾಲೆ ಗೌಡ ವಾರೀಮ್ಯಾಲೆ ಶ್ಯಾನುಭೋಗ ಏರೀಯಾ ಕೆಳಗೆ
ತಳವಾರ
ಏರೀಯಾ ಕೆಳಗೆ ತಳವಾರ ಓಬಯ್ಯ ತಾಯವ್ವಗೆ ಬಾಧೆ ಬಿಡಿಸ್ಯಾನೆ
॥ನೀ॥

ಕಟ್ಟೇಮೇಲೇ ಗೌಡ ಬತ್ತೀಲಿ ಶ್ಯಾನುಭೋಗ ಕಟ್ಟೇಯಾ ಕೆಳಗೆ
ತಳವಾರ ॥ನೀ॥
ಏರಿಯಾ ಕೆಳಗೆ ತಳವಾರ ಓಬಯ್ಯ ಸತ್ಯವ್ವಗೆ ಬಾಧೆ ಬಿಡಿಸ್ಯಾವೆ
॥ನೀ॥

ಏರೀ ಮ್ಯಾಲೆ ಮಾರಕ್ಕ ಗ್ಯಾನ ಮಾಡಲುವಾಗ ಆರೇ ಬಾಣಗಳು
ನೆಲಬಿರುಸು ॥ನೀ॥
ಆರೇನೆ ಬಾಣಗಳು ನೆಲಬಿರುಸುನಾರತಿ ಸುತ್ತೇ ಮಾರಕ್ಕಗೆ
ಲೇತಾಡುವಾಗ ॥ನೀ॥

ಸೆಪ್ಪೆದಂಟಿನಾಗೆ ಎಪ್ಪತ್ತೊಂದಾರುತಿ ಕೆರೆಯಾಗೆ ಮಾರಕ್ಕ ತಡುದಾಳೆ
॥ನೀ॥
ಕೆರೆಯಾಗೆ ಮಾರಕ್ಕ ತಡುದಾಳೆ ಗೌರಸಂದ್ರ ಮಿತ್ರೇರಾರುತಿ
ಬರುಲಂದೆ ॥ನೀ॥

ಅರಿವೀದಂಟಿನಂಗೆ ಅರವತ್ತೊಂದಾರುತಿ ಕಟ್ಟೇಗೆ ಮಾರಕ್ಕ
ತಡುದಾಳೆ ॥ನೀ॥
ಕಟ್ಟೇಗೆ ಮಾರಕ್ಕ ತಡುದಾಳೆ ಗೌರಸಂದ್ರ ಐದೇರಾರುತಿ ಬರುಲಂದೆ
॥ನೀ॥

ಪಟ್ಟೇದ ಸೀರೇರು ಮುತ್ತಿನಬಟ್ಟೆನೋರು ಎಪ್ಪತ್ತೇ
ನೂರುಕೊಡನೊತ್ತು ॥ನೀ॥
ಎಪ್ಪತ್ತೇನೂರು ಕೊಡನೊತ್ತು ಗೌರಸಂದ್ರ ಸತ್ಯವ್ವಗೊಯ್ದಾರೆ ॥ನೀ॥

ಸ್ಯಾಲೇದಸೀರೇರು ನೀಲಿನಬಟ್ಟೆನವರು ನಲವತ್ತುನೂರಕೊಡನೊತ್ತು
॥ನೀ॥
ನಲವತ್ತೂನೂರು ಕೊಡನೊತ್ತು ಗೌರಸಂದ್ರ ಸತ್ಯವ್ವಗೊಯ್ದಾರೇ
ನೀರು ॥ನೀ॥

ಪಾಲಿಕೆ ಪಾಲಿಕೆ ಸಾಲಿಟ್ಟು ಬರುವಾಗ ಕಾಳೀಯ ಹುಡುಗ
ಕಡಿಗೋಗ ॥ನೀ॥
ಕಾಳೀಯಾಹುಡುಗ ಕಡಿಗೋಗಲುವಾಗ ಪಾಲಿಕೆಗಾರುತಿಯ
ಬೆಳಗೀರೆ ॥ನೀ॥

ಸತ್ರಿಕೆ ಸತ್ರಿಕೆ ಸಾಲಿಟ್ಟು ಬರುವಾಗ ಕತ್ತೀಯ ಹುಡುಗಾ ಕಡಿಗೋಗ
॥ನೀ॥
ಕತ್ತೀಯಾ ಹುಡುಗ ಕಡಿಗೋಗ ಮಾರಕ್ಕನಸತ್ರಿಕೆ ಗಾರುತಿಯಾ
ಬೆಳಗೇನು ॥ನೀ॥

ಅಂದಣವು ಅಂದಣವು ಸಂದಣಿಸಿ ಬರುವಾಗ ಅಂಗೀಯಾ ಹುಡುಗ
ಕಡಿಗೋನ ॥ನೀ॥

ಅಂಗಿಯನ್ನಾತುದುಗ ಕಡಿಗೋಗಲುವಾಗ ಮಾರಕ್ಕನ
ಅಂದಣಕಾರುತಿಯಾ ಬೆಳಗೀನು ||ನೀ||

ಮಲ್ಲಸಂದ್ರದೋಳೇ ಮಲ್ಲಿಗೆಯ ವನದೋಳೆ ನಿಲ್ಲೇ ಮಾರಕ್ಕ
ಬರುತ್ತೇನೆ
ನಿಲ್ಲೇನೆ ಮಾರಕ್ಕ ಬರುತೇನೆ ನಾನಿನಗೆ ಬೆಲ್ಲದಾರುತಿ ಬೆಳಗೇನು
||ನೀ||

ಆರುತಿ ಹಿಡಕೊಂಡು ಮುಂಗೈನೊಂದಾವೆ ಆಂಗೈಲಿ ಮುತ್ತೆ
ಜಡುದಾವೆ ||ನೀ||
ಆಂಗೈಲಿ ಮುತ್ತೆ ಜಡುದುದೇವರಳ್ಳಿ ನಿಂಗಯ್ಯಾನ ತಾಯಿ
ಬರುವೇಳೆ ||ಏ||

ಎಲ್ಲಿಗೋಗಿದ್ದೆವ್ವಾ ಮಲ್ಲೀಗೆ ಸೂರಾಡುತಾ
ಆಂಗೈ ಒರಳಾ ಮಾಡಿ ಮುಂಗೈ ಒನಕೇ ಮಾಡಿ
ರಂಗಸಮುದ್ರದ ತಲೆ ಕಡಿದು ಮಾಡಿದ್ದುಣ್ಣಾಕೆ
ಕಾಸೆ ಮಾರಕ್ಕನ ಬಸವೇರು ||ಏ||

ಆಕೈ ಒರಳಾ ಮಾಡಿ ಈಕೈ ಒನಕೇ ಮಾಡಿ
ಲೋಕಾಸಮುದ್ರದ ಒಲೆ ಕೊರೆದು
ಲೋಕಾಸಮುದ್ರದ ಒಲೆ ಕೊರೆದು ಮಾಡುಂಡುದಾರೆ
ಕ್ಯಾತೇಬೊಮ್ಮಯ್ಯನ ಬಸವೀರು ||ಏ||

ಅಕ್ಕೇನೆ ಮಾರಕ್ಕ ಇಕ್ಕಿದ್ದುಂಬೋಳಲ್ಲ
ಅಕ್ಕಗುಂಬಾಕೆ ಕೆನೆಮೊಸರು ||ಏ||
ಆಕ್ಕೇನೆ ಗುಂಬಾಕೆ ಕೆನೆಮೊಸರುಂಡೇನಂತ
ಹಟ್ಟಿ ಮ್ಯಾಸರಿಗೆ ಒಲಿದಾಳೆ ||ಏ||

ತಾಯೀನೆ ಮಾರಕ್ಕ ನೀಡಿದ್ದುಂಬೋಳಲ್ಲ
ಸಾಲೀಗೊಂಬತ್ತು ಕೆನೆಮೊಸರು
ಸಾಲೀನೆಗೊಂಬತ್ತು ಕೆನೆಮೊಸರು ಉಂಡೇನಂತ
ಕಾಡುಗೊಲ್ಲರಿಗೆ ಒಲಿದಾಳೆ ||ಏ||

ಸತ್ಯವ್ವ ನಿನ ಮಾತು ಲೆತ್ತವಾಡೀದಂಗೆ
ಹುತ್ತಕ್ಕೆ ಸರ್ಪ ನಡೆವಂಗೆ
ಹುತ್ತಕ್ಕೆ ಸರ್ಪ ನಡುವಂಗೆ ಗೌರಸಂದ್ರ
ಸತ್ಯವ್ವ ನಿನಮಾತು ಹುಸಿಯಲ್ಲ ||ಏ||

ತಾಯವ್ವ ನಿನಮಾತು ದಾಯವಾಡಿದಂಗೆ
ದಾರ್‍ಯಾಗೆ ಸರುಪ ನಡೆದಂಗೆ – ಗೌರಸಂದ್ರ
ತಾಯವ್ವ ನಿನ ಮಾತು ಹುಸಿಯಲ್ಲ ||ಏ||

ಮಾರಮ್ಮ ಬರುತಾಳೆ ವಾರಾಗ ತಳುವಾರ
ಸಾವಿರದ ಬಂಡೆ ಸಮರಂತೆ
ಸಾವಿರದನ್ನಾ ಬಂಡೆ ಸಮರಂತೆ ಬರುತಾಳೆ
ಸಾವುಡಿ ಇಳಿದು ಸರಣೆನ್ನ ||ಏ||

ಸತ್ತೆವ್ವ ಬರುತಾಳೆ ಬತ್ತೀಲಿ ತಳವಾರ
ಲಕ್ಕುಸದ ಬಂಡೆ ಸಮರಂತೆ
ಲಕ್ಕುಸದಾ ಬಂಡೆ ಸಮರಂತೆ ಬರುತಾಳೆ
ಕಟ್ಟೇಯ ಇಳಿದು ಶರಣೆನ್ನೋ ||ಏ||

ಉದುರಾ ಊರಿಗೆ ಹೋಗಿ ಮಲ್ಲೀಗೆ ಹೂತಂದು
ಚದುರೆ ನೀನಿರುವ ನೆಲೆ ಹೇಳೆ ||ಏ||
ಚದುರೆ ನೀನಿರುವ ನೆಲೆ ಹೇಳೆ ಗೌರಸಂದ್ರ
ಚದುರಂಗದೋಣಿ ಮಟದವಳೆ ||ಏ||

ಆಕ್ಕೇನೆ ಮಾರಕ್ಕ ತೆಕ್ಕೇ ತುಂಬೋವು ತುಂಬಿ
ಒಕ್ಕಲ ನಡುವೆ ಬರುವೋಳೆ ||ಏ||
ಒಕ್ಕಲ ನಡುವೆ ಬರುವ ಮಾರಕ್ಕನಾ
ಮಜ್ಜನ ನೆರಿಗೆ ತಿಳಿಯಾಗಿ ||ಏ||

ಅವನೇನೆ ತಮ್ಮಯ್ಯ ತೋಳು ತುಂಬಾ ಗೆಜ್ಜೆ
ವಾಲಗದ ನಡುವೆ ಬರುವೋನೆ
ವಾಲಗದಾ ನಡುವೆ ಬರುವ ಬೊಮ್ಮಯ್ಯನ
ಮೋಸ ಮಾನ್ಯರಿಗೆ ತಿಳಿಯಾದೆ ||ಏ||

ಮದ್ದಲೆ ಬಡಿವಣ್ಣಗೆ ಮುತ್ತಿನ ಉಂಗುರ
ಇದ್ದೂರ ದೊರೆಯೆ ಕಳುವ್ಯಾನೆ
ಇದ್ದೂರ ದೊರೆಯೆ ಕಳುವ್ಯಾನೆ ಗೌರಸಂದ್ರ
ಮದ್ದಲೆ ಬಡಿವಾ ಮಗನೀನೆ ||ಏ||

ಉರುಮೆ ಬಡಿವಣ್ಣಾಗೆ ಬೆರಳ ತುಂಬುಂಗುರ
ಹಿರಿಯೂರ ದೊರೆಯೇ ಕಳುವ್ಯಾನೆ
ಹಿರಿಯೂರ ದೊರೆಯೇ ಕಳುವ್ಯಾನೆ ಗೌರಸಂದ್ರ
ಉರಿಮೆ ಬಡಿವಣ್ಣಗೆ ಕಳುವ್ಯಾನೆ ||ಏ||

ಪಾಲೀಕೆ ಸುತ್ತ ಪಾರಿಜಾತಾದೂವೆ ತಾಯಿ ಗುಡಿ ತುಂಬುತಾಳೆ
ಅಂಬಾರದುದ್ದಾಕೆ ಬಂದು ನಿಂತ್ಯೆದಾಳೆ
ಬಾಪೂರೆ ತೋಳ ತಿರುವೂತ ||ಪಾಲೀಕೆ||
ಬಾಪೂರೆ ತೋಳ ತಿರುವೂತ ಮಾರಕ್ಕ
ಕಾದವರಿಗೆ ವರವಾ ಕೊಡುತಾಳೆ ||ಪಾಲೀಕೆ||

ಆಕಾಶದುದ್ದಾಕೆ ಆಕೆ ನಿಂತ್ಯೆದಾಳೆ
ಬಂದೀಯಾ ತೋಳ ತಿರುವೂತ
ಬಂದಿಯನ್ನಾ ತೋಳ ತಿರುವೂತ ಮಾರಕ್ಕ
ಬಂದವರಿಗೊರವಾ ಕೊಡುತಾಳೆ ||ಪಾ||

ಹರಪನಾಳ್ಳಿಯವರು ಹರಿಯಬ್ಬೆ ನೆಂಟಾರು
ಹರಕೇಲಿ ಅವರೂ ಬರುತಾರೆ
ಲಿಂಗದಳ್ಳೀಯವರು ಜಂಗಮರ ಹೆಂಡೀರು
ಒಂದ್ಹೊತ್ತಿಲವರು ಬರುತಾರೆ ||

ಮಾಸಿದ ಸೀರೆಮ್ಯಾಲೆ ಕೂಸನ್ನೆತ್ತಿಕೊಂಡು
ದೇಶದ ಮ್ಯಾಲೆ ಬರುವೋಳೆ ॥ಪಾ॥

ಹಾಲಗಿರಿ ಲೋಲುಗಿರಿಯಾ ಹನುಮಯ್ಯಾ
ಮೇಲುಗಿರಿ ವಾಸದವನೆ
ಹತ್ತು ಆಲದಮರನೆ ಸಾಲು ಬೇವಿನಮರನೆ
ಯಾಲಾರಿ ಮರನೆ ಕಿರುನೆಲ್ಲ ॥ಹಾಲುಗಿರಿ॥

ಕಿತ್ತೋಲೆ ಮರವೆ ಕಿರುನೆಲ್ಲಿ ಮರದಡೀಲಿ
ಅಕ್ಕ ಅಂಜನದೇವಿ ತ್ರಪಸ್ಸವಳೆ ॥ಹಾ॥
ಅಕ್ಕ ಅಂಜನದೇವಿ ತಪಸ್ಸಿನ ಕಾರಣದಿಂದೆ
ಸಿಕ್ಕೀವೆವೊಂದು ತರಳೆಲೆ ॥ಹಾ॥
ಸಿಕ್ಕೀವೆವೊಂದು ತರಳೆಲೆ ಅಂಜನದೇವಿ
ಮಾರಿಬಾವಕೆ ಸಲ್ಲಿಸವಳೆ ॥ಹಾ॥।

ಮಂಗಳಾ ಜಯ ಮಂಗಳಾ
ಮಂಗಳಾ ಶುಭ ಮಂಗಳಾ
ದೇಶದಾ ಮ್ಯಾಲೆ ಬರುವಾ ಮಾರಕ್ಕನಾ
ಮೋಸ ಮಾನವರಿಗೆ ತಿಳಿಯಾದೆ ॥ಮಂಗಳಾ॥

ಗಂಜೀ ಸೀರೇ ಮ್ಯಾಲೆ ಕಂದನ್ನೆತ್ತಿಕೊಂಡು
ಮಂದೀಯ ನಡುವೆ ಬರುವೋಳೆ ॥ಮಂ॥

ಹೆಣಗಳಾ ತಿಂಬೋಳು ರಣದುಂಡಿ ಬರುತಾಳೆ
ಬೆಳಗಿ ತೋರಣದ ಗುಡಿಕಟ್ಟಿ ॥ ಮಂಗಳಾ ॥
ಬೆಳಗಿ ತೋರಣದ ಗುಡಿಕಟ್ಟಿ ರಾಜ್ಯದ ಮೇಲೆ
ಹೆಣಗಳ ಸೂರಾಡುತಾ ಬರುತಾಳೆ ॥

ಮಕ್ಕಳಾ ತಿಂಬೋಳು ರಕ್ಕಸಿ ಬರುತಾಳೆ
ತಿಕ್ಕಿ ತೋರಣದ ಗುಡಿಕಟ್ಟಿ ॥ಮಂ॥
ತಿಕ್ಕೇನೆ ತೋರಣದ ಗುಡಿಕಟ್ಟಿ ರಾಜ್ಯದ ಮ್ಯಾಲೆ
ಮಕ್ಕಳ ಸೂರಾರಿ ಬರುತಾಳೆ ॥ಮಂಗಳಾ॥

ಅಕ್ಕ ನಿನ ಗುಡಿ ಮ್ಯಾಲೆ ಇಪ್ಪತ್ತು ಪಾರಿವಾಳ
ಕೊಪ್ಪೆತುಂಬಾಳೆ ಗಿರಿಗೆಲ್ಲಾ ॥
ಕೊಪ್ಪೇನೆ ತುಂಬಾಳೆ ಗಿರಿಗೆಲ್ಲ ಕೆಂಚಮ್ಮ
ಹೊನ್ನ ತುಂಬಾಳೆ ಕಣಸ್ಯಾಕೆ ॥ಮಂ॥

ಅಣ್ಣ ನಿನ ಗುಡಿ ಮೇಲೆ ಹನ್ನೊಂದು ಪಾರಿವಾಳ
ಬಣ್ಣ ತುಂಬ್ಯಾಳೆ ಗಿರಿಗೆಲ್ಲಾ
ಬಣ್ಣೇನ ತುಂಬ್ಯಾಳೆ ಗಿರಿಗೆಲ್ಲ ಸೂರಮ್ಮ
ಹೊನ್ನತುಂಬ್ಯಾಳೆ ಕಣಸ್ಯಾಕೆ ॥ಮಂ॥

ಅಕ್ಕ ನಿನ ಗುಡಿ ಮುಂದೆ ಜರಗಲ್ಲು ತುಳುಕಾಡಿ
ಏರೇರಿ ಕಲ್ಲು ಇಳಿವ್ಯಾರೆ ॥ಮಂ॥
ಏರೇರೀ ಕಲ್ಲು ಇಳುವ್ಯಾರೆ ಕೈಯಾಗಿರುವ
ಹೂವಿನ ಕೈಜೆಡಿಯಾ ಮಗು ಜತನಾ ॥

ಅಕ್ಕ ನಿನ ಗುಡಿ ಮುಂದೆ ಜತ್ತಂಬೊ ಇವು ಏವೆ
ಬತ್ತೀಲಿ ನುಡಿದಾ ಚವುಡೀಕೆ
ಬತ್ತೀಲೀ ನುಡಿವ ಸವುಡಿಕೆ ಕೈಯಾ ಕೋಲು
ದಾಯವಾಡಾನೆ ಮಗರಾಮ ॥

ಅಣ್ಣ ನಿನ ಗುಡಿ ಮುಂದೆ ಬೋರೆಂಬ ಇವು ಏನೆ
ವಾರೀಲಿ ನುಡಿವಾ ಸವುಡೀಕೆ ॥
ವಾರೀಲೀ ನುಡಿವ ಸವುಡಿಕೆ ಕೈಯಾ ಕೋಲು
ಲೆತ್ತವಾಡವನೆ ಮಗರಾಮ ॥

ಅಕ್ಕ ನಿನ ಹಾಡೇವು ಅಕ್ಕ ನಿನ್ನ ಪಾಡೇವು
ಅಕ್ಕ ನಿನ ನಿದ್ರೆ ಕೆಡಿಸೇವು
ಅಕ್ಕೇನ ನಿಮ ನಿದ್ರೆ ಕೆಡಿಸೇವೆ ಸಿದ್ದಣ್ಣ
ಪಟ್ಟೆ ಮಂಚದಲಿ ಪವಡೀಸೋ ॥

ಅಣ್ಣ ನಿನ ಪಾಡೇವು ಅಣ್ಣ ನಿನ ಹಾಡೇವು
ಅಣ್ಣ ನಿನ ನಿದ್ರೆ ಕೆಡಿಸೇವು
ಅಣ್ಣೇನ ನಿನ ನಿದ್ರೆ ಕೆಡಿಸೇವು ನಿನ ನಿದ್ರೆ
ಸಣ್ಣ ಮಂಚದಲಿ ಪವಡೀಸೋ ॥

ದೊಡ್ಡ ದೊಡ್ಡ ಹಾಡ ದೊಡ್ಡ ಭರಣಿಗೆ ತುಂಬಿ
ದೊಡ್ಡೋಳಿಗೊಪ್ಪಿಸುವೆ ಪದನೂರು ॥ಮಂ॥
ದೊಡ್ಡೋಳಿಗೊಪ್ಪಿಸುವೆ ಪದನೂರು ಸಿದ್ದಣ್ಣ
ದೊಡ್ಡ ಮುದ್ರೀಕೆ ಬಿಗದೀರೋ ॥

ಸಣ್ಣ ಸಣ್ಣಾ ಹಾಡು ಸಣ್ಣ ಭರಣಿಗೆ ತುಂಬಿ
ಸಣ್ಣೋನಿಗೊಪ್ಪಿಸುವೆ ಪದನೂರು
ಸಣ್ಣೊನಿಗೊಪ್ಪಿಸುವೆ ಪದ ನೂರು ಸಿದ್ದಣ್ಣ
ಸಣ್ಣ ಮುಚ್ಚಿಕೆ ಬಿಗದೀರೋ ॥

ಮಂಗಳವಾರದ ದಿವಸ ಅಂಗಳ ಸಾರುಸಿ
ಭಂಡಾರದ ಭರುಣಿ ಹೊರಗಿಟ್ಟು
ಭಂಡಾರುದಾ ಭರುಣಿ ಹೊರಗಿಟ್ಟು ಮಲ್ಲಸಂದ್ರ
ಅಕ್ಕ ಜೋಗಂತ ಹೊರಟಾಳೆ ॥ಮಂ॥

ಶುಕ್ರವಾರದ ದಿವಸ ಹೊಸ್ತಿಲ ಸಾರುಸಿ
ಬಟ್ಟಿನ ಭರಣಿ ಹೊರಗಿಟ್ಟು
ಬಟ್ಟಿನಾ ಭರುಣಿ ಹೊರಗಿಟ್ಟು ದೇವರಳ್ಳಿ
ತಾಯೊ ಜೋಗಂತ ಹೊರಟಾಳೆ ॥ಮಂ॥

## ಅಕ್ಕರಾಯಮ್ಮನ ಪದ

ಹಾಡಿದ ಸ್ಥಳ : ಚಿನಮಜ್ಜನಹಳ್ಳಿ
ವೃತ್ತಿ : ಕೃಷಿ ಕಾರ್ಮಿಕರು
ಹಾಡಿದವರು : ಬೋರಮ್ಮ, ಬೋರಮ್ಮ ತಿಪ್ಪಮ್ಮ, ಮಾರಕ್ಕ ಹನುಮಕ್ಕ ತಿಪ್ಪಮ್ಮ



ಸುಕ್ಕೇ ಸೂರಿದುನೇ ಪಾರ್ವತಿ ಪರಮೇಶನ ಪಾಡುತಾಳೆ
ಬಂಗಾರ ಬಾನಗೋಟಿ ಲಿಂಗಾವ ನೆನೆದೇನೆ
ಕುಂಬಳ ಹೂವಿನಾಗೆ ಉದಿಯೋರೆ ॥ಸುಕ್ಕೇ॥

ಕುಂಬಾಳ ಹೂವಿನಾಗಿ ಉದಯಾದಿ ಭಾನುಗೋಟಿ
ಲಿಂಗವೆ ಸೂರಣ್ಣನ ನೆನೆದೇವೆ ॥ಸುಕ್ಕೇ॥
ಪಾರ್ವತಿ ಪರಮೇಶನ ಪಾಡುತಾಳೆ

ಭೂಮಿ ಹುಟ್ಟದಕಿನ್ನ ಭೂಲೋಕ ಹುಟ್ಟವಕಿನ್ನ
ಪಂಪಾದ್ರಿ ಬಸವ ಮೊದಲುಟ್ಟಿ ॥ಸುಕ್ಕೇ॥

ಕಲ್ಲು ಹುಟ್ಟದಕ್ಕಿನ ಕಲ್ಯಾಣಹುಟ್ಟದಕಿನ್ನ
ಬನ್ನಿ ಆಕಳೆ ಮೊದಲುಟ್ಟಿ ॥ಸುಕ್ಕೇ॥

ಪಂಪಾದ್ರಿ ಬಸವ ಬಲ್ಲಾವನ್ನೋ ಆಕಳ
ಒಬ್ಬರು ಜೊತೆಯಾಗಿ ಹೊರಟಾರೆ ॥ಸುಕ್ಕೇ॥

ಇಬ್ಬರನು ಜೊತೆಯಾಗಿ ಹೊರಟಾರು ಜಾನಂಗಳ
ನರಲೋಕದ ಮೇಲೆ ಹೊರಟಾರೆ ॥ಸುಕ್ಕೇ॥

ಇಬ್ಬರನು ಜೊತೆಯಾಗಿ ಹೊರಟರು ಜಾನಂಗಳ
ಪರಪಂಚದ ಮೇಲೆ ಹೊರಟಾರೆ ॥ಸುಕ್ಕೇ॥

ದೇವಲೋಕಾದಿಂದ ಬರಬೇಕು ಮುನಿಗಳು
ಎಲ್ಲಿದ್ದರವರು ಬರಬೇಕು ॥ಸುಕ್ಕೇ॥

ಎಲ್ಲಿ ಇದ್ದರವರು ಬರಬೇಕು ಜಾನಂಗಳ
ಇದ್ದ ಗಾನಾಂಗಳಕೇ ಬರಬೇಕು ॥ಸುಕ್ಕೇ॥

ಇದ್ದ ಜಾನಂಗಳಕೆ ಸರ್ವ ಗಾನಂಗಳಕೆ
ಶರಣಗಾಳಂಗಣಕೆ ಬರಬೇಕು ॥ಸುಕ್ಕೇ॥

ದೇವಲೋಕದಿಂದ ಹೊರುಟಾರೆ ಮುನಿಗಳು
ಇದ್ದ ಗಾನಂಗಳಕೆ ಹೊರುಟಾರೆ ॥ಸುಕ್ಕೇ॥

ಇದ್ದಗಾನಂಗಳಕೆ ಹೊರಟ ಗಾಣಂಗಳು
ಸರ್ವರು ಗಾನಂಗಳಕೆ ಇಳುದಾರೆ ॥ಸುಕ್ಕೇ॥

ಇದ್ದಗಾನಂಗಳಕೆ ಇಳಿದರು ಗಾನಂಗಳಕೆ
ಸರ್ವರು ಬಾವೀಗೆ ನಡುದಾರೆ ॥ಸುಕ್ಕೇ॥

ಸರ್ವರು ಬಾವಿಗೆ ಹೊರಟರು ಗಾನಂಗಳ
ಸರ್ವರು ಬಾವೀಗೆ ಇಳುದಾರೆ ॥ಸುಕ್ಕೇ॥

ಸರ್ವರು ಬಾವಿಗೆ ಇಳಿದರು ಗಾಣಂಗಳು
ತಾನಗಳ ಅವರು ಮಾಡುತಾರೆ ॥ಸುಕ್ಕೇ॥

ತಾನಾಗಳ ಅವರು ಮಾಡ್ಯಾರೆ ಮುನಿಗಳು
ಸರ್ವರು ದಡಕೇ ಕುಳುತಾರೇ ॥ಸುಕ್ಕೇ॥

ಸರುವರದ ದಡಕೆ ಕುಳಿತಾರು ಮುನಿಗಳು
ಸರುವರದ ಅವರು ಮಾಡುತಾರೇ ॥ಸುಕ್ಕೇ॥

ಶಿವಪೂಜೆಗೇ ಅವರು ನಿಂತಾರು ಮುನಿಗಳು
ಲಿಂಗದ ಪೂಜೆಗಳ ಮಾಡುತಾರೇ ॥ಸುಕ್ಕೇ॥

ಪರಪಂಚದಾ ಮೇಲೆ ತಿರುಗೀತು ಪಂಪಾದ್ರಿ
ಬಾಯಾರಿ ಬಂತು ಸರವರಕೇ ॥ಸುಕ್ಕೇ॥

ಬಾಯಾರೀ ಬಂತು ಸರವರಕೆ ಪಂಪಾದ್ರಿ
ಸರವರ ಬಾವಿಗೆ ಇಳಿಯಿತೂ ॥ಸುಕ್ಕೇ॥

ಸರವರದ ಬಾವೀಗಿ ಇಳಿಯಿತು ಪಂಪಾದ್ರಿ
ನೀರುಗಳ ಕುಡಿದು ನಿಂತೀತು ॥ಸುಕ್ಕೇ॥

ನೀರುಗಳಾ ಕುಡಿದು ನಿಂತೀತು ಪಂಪಾದ್ರಿ
ಈ ಭೂತಿ ಅವರು ಇಡುತಾರೆ ॥ಸುಕ್ಕೇ॥

ಈಭೂತೀ ಅವರು ಇಟ್ಟಾರೆ ಮುನಿಗಳು
ಈಭೂತಿ ಅವರು ಧರಿಸ್ಯಾರೆ ॥ಸುಕ್ಕೇ॥

ಈಭೂತಿ ಅವರು ಧರಿಸ್ಯಾರೆ ಮುನಿಗಳು
ಈಭೂತಿನಲ್ಲೇ ಬಿಡುತಾರೇ ॥ಸುಕ್ಕೇ॥

ಈಭೂತೀನಲ್ಲೆ ಬಿಟ್ಯಾರೆ ಮುನಿಗಳು
ಈಭೂತಿ ಪಂಪಾದ್ರಿ ಪಾದದಲ್ಲಿ ಸಿಕ್ಕು ॥ಸುಕ್ಕೇ॥

ಈಭೂತಿ ಪಂಪಾದ್ರಿ ಪಾದದೊಳಳವಡಿಸಿ
ನರಲೋಕದ ಮೇಲೇ ಹೊರಟೀತು ॥ಸುಕ್ಕೇ॥

ನರಲೋಕದಾ ಮೇಲೆ ಹೊರಟೀತು ಪಂಪಾದ್ರಿ
ಒಂಬತ್ತುಮಾಸ್ಯೆ ತುಂಬೀತು ॥ಸುಕ್ಕೇ॥

ಒಂಬತ್ತುಮಾಸ್ಯೆ ತುಂಬೀತು ಪಂಪಾದ್ರಿ
ಬಾಯಾರಿ ಬಂತು ಸರವರಕೆ ॥ಸುಕ್ಕೇ॥

ಬಾಯಾರಿ ಬಂತು ಸರವರಕೆ ಪಂಪಾದ್ರಿ
ನೀರುಗಳ ಕುಡಿದು ನಿಂತೀತು ॥ ಸುಕ್ಕೇ ॥

ಪಾರ್ವತಿ ಪರಮೇಶನ ಪಾಡುತ್ತಾರೆ
ನೀರುಗಳ ಕುಡಿದು ನಿಂತೀತು ಪಂಪಾದ್ರಿ

ಕಾಲ್ಗೆದರಿ ಥಿರಕಿ ಹೊಡಿಯಿತು ॥ಸುಕ್ಕೇ॥
ಪಾರ್ವತಿ ಪರಮೇಶನ ಪಾಡುತಾರೆ

ಕಾಲ್ಗೆದರಿ ಥಿರಕಿ ಹೊಡೆದೀತು ಪಂಪಾದ್ರಿ
ಪಾದದಲಿ ಬಾಲಕನ ಕೊಡವೀತು ॥ಸುಕ್ಕೇ॥

ಪಾದದಲಿ ಬಾಲಕನ ಕೊಡವೀತು ಪಂಪಾದ್ರಿ
ಚೆಟ್ಟುಪಟ್ಲಪ್ಪ ರಾಜನ ಪಡೆದೀತು ॥ಸುಕ್ಕೇ॥

ಸೆಟ್ಟುಪಟ್ಲಪ್ಪ ರಾಜನ ಪಡೆದೀತು ಪಂಪಾದ್ರಿ
ಬಾಳೆ ಎಲೆ ಹಾಸಿ ಮಲಗಿಸಿತು ॥ಸುಕ್ಕೇ॥

ಬಾಳೆಯ ಎಲೆ ಹಾಸಿ ಮಲಗಿಸಿದ ಪಂಪಾದ್ರಿ
ನರಲೋಕ ನೀನು ಆಳಿ ಬಾ ಎಂತು ॥ಸುಕ್ಕೇ॥

ನರಲೋಕ ನೀನು ಆಳಿ ಬಾ ಅಂದೆನ್ನ
ಬಾಲಕ್ಕಾಶೀರ್ವಾದ ಮಾಡಿದರು ॥ಸುಕ್ಕೇ॥

ಪಾರ್ವತಿ ಪರಮೇಶ್ವರ ಪರಪಂಚದ ಮೇಲೆ ಹೊರಟಾರೆ
ನರಲೋಕಕವರು ಬಂದಾರೆ ॥ಸುಕ್ಕೇ॥

ನಂದಿವಾಹನದಾಗೆ ಕುಳಿತಂಥ ಅವರುಗಳು
ನರಲೋಕಕವರು ಇಳುದಾರೆ ॥ಸುಕ್ಕೇ॥

ಆರೆಂಬ ಆಡವ್ಯಾಗೆ ಭೋರೆಂಬ ಮಲೆಯಾಗೆ
ಬಾಲಕನ ದನಿಯು ಆಗುತಾನೆ ॥ಸುಕ್ಕೇ॥

ಬಾಲಕನಾ ದನಿಯು ಆಗುತಾವೆ ನಮ ಸ್ವಾಮಿ
ನಂದಿವಾಹನನ ನೀನು ನಿಲಿಸಬೇಕು ॥ಸುಕ್ಕೇ॥

ಇನ್ನೂರೇಳುಕೋಟಿ ಜೀವರಾಶಿಗಳೆಲ್ಲ
ಅನ್ನ ನೀರಿಲ್ಲದೆ ಸೊರಗ್ಯಾವೆ ॥ಸುಕ್ಕೇ॥

ಅನ್ನ ನೀರಿಲ್ಲದೆಯೆ ಸೊರಗ್ಯಾವೆ ಪಾರ್ವತಿ
ನಂದಿವಾಹನನ ನಾನು ನಿಲಿಸಲಾರೆ ॥ಸುಕ್ಕೇ॥

ನಂದಿವಾಹನನ ನೀನು ನಿಲಿಸದಿದ್ದರೆ ಸ್ವಾಮಿ
ನಿಮ್ಮ ಪಾದದ ಮೇಲೆ ಪ್ರಾಣಬಿಡುತೀನಿ ॥ಸುಕ್ಕೇ॥

ನಮಗಿನ್ನ ಹಿರಿಯೋರು ನಮಗಿನ್ನ ಕಿರಿಯೋರು
ನಮಗಿನ್ನ ಹಿರಿಯೋರು ನಮಗೇನು ಅಂದಾರು ॥ಸುಕ್ಕೇ॥

ನಮ್ಮಗಿನ್ನ ಹಿರಿಯರು ಯಾರಿಲ್ಲ ನಮಸ್ವಾಮಿ
ನಂದಿವಾಹನನ ನೀನು ನಿಲಿಸಬೇಕು ॥ಸುಕ್ಕೇ॥

ಪಾರ್ವತಿಯ ಮಾತನು ಕೇಳಿದ ಪರಮೇಶ್ವರ
ನಂದಿವಾಹನನ ಅಲ್ಲೆ ನಿಲಿಸ್ಯಾನೆ ॥ಸುಕ್ಕೇ॥

ನಂದಿವಾಹನನ ಅಲ್ಲೆ ನಿಲಿಸ್ಯಾರೆ ತಾವುಗಳು
ಬಾಲಕನ ತಾಕೆ ನಡೆದಾರು ॥ಸುಕ್ಕೇ॥

ಬಾಲಕನ ತಾಕೆ ನಡೆದಾರು ಅವರುಗಳು
ಬಾಲನಾ ನೋಡಿ ನಿಂತಾರೆ ॥ಸುಕ್ಕೇ॥

ಬಾಲಕನ ಮೊಕವು ಕಂದಿ ಕುಂದ್ಯಾವೆಂದು
ಬಾಲಕಗಮೃತದ ತುಂಬಬೇಕು ॥ಸುಕ್ಕೇ॥

ಬಾಲಕಗೆ ಅಮೃತವು ತುಂಬಬೇಕು ನಮಸ್ವಾಮಿ
ಬಾಲಕನ ನೀನು ಸಲುವಬೇಕು ॥ಸುಕ್ಕೇ॥

ಬಾಲಕಗೆ ಅಮೃತವು ನಾನೆಂಗೆ ತುಂಬಲಿ
ಬಾವೀಗೆ ಹೋಯ್ತು ಮೈತೊಳಿರಿ ॥ಸುಕ್ಕೇ॥

ಬಾಲಕ್ಕೆ ಮೈಯ ತೊಳಿಬೇಕು ಪಾರ್ವತಿ
ಆಗ ತುಂಬೇನು ಅಮೃತವಾ ॥ಸುಕ್ಕೇ॥

ಬಾಲಕನ ನೋಡ್ಯಾಳೆ ಬಾಸೇನೆ ಎತ್ತ್ಯಾಳೆ
ಸರವರದ ಬಾವಿಗೆ ನಡೆದಾಳೆ ॥ಸುಕ್ಕೇ॥

ಸರವರದ ಬಾವಿಗೆ ಹೋದಾಳೆ ಪಾರ್ವತಿ
ಬಾಲಕನ ಮೈಯ ತೊಳೆದಾಳೆ ॥ಸುಕ್ಕೇ॥

ಎತ್ತೀನೆಗದ್ದೇಗೆ ತಂದಾಳೆ ಪಾರ್ವತಿ
ನಂದಿವಾಹನದ ಬಳಿಗೆ ಬಂದಾಳೆ ॥ಸುಕ್ಕೇ॥

ಬಾಲಕಗಮೃತವ ತುಂಬೆಂದು ಕೇಳಲು
ಪರಮೇಶ್ವರ ಅಮೃತವ ತುಂಬ್ಯಾನು ॥ಸುಕ್ಕೇ॥

ಐದನೇ ಬೆಳ್ಳೀಗೆ ಅಮೃತವ ತುಂಬ್ಯಾನೆ
ಬೆಳ್ಳು ಬಾಯಿಗೆ ಇಡುತಾನೆ ॥ಸುಕ್ಕೇ॥

ಬೆಳ್ಳೇನೆ ಬಾಯಾಗೆ ಇಟ್ಟನೆ ಪರಮೇಶ್ವರ
ಬಾಳೆ ಎಲೆ ಹಾಸಿ ಮುಗಿಸೆಂದ ॥ಸುಕ್ಕೇ॥

ಬಾಳೇನೆ ಎಲೆಹಾಸಿ ಮಲಗೀಸಿ ಪಾರ್ವತಿ
ಬಾಲಕ್ಕಾಶೀರ್ವಾದ ಮಾಡುತಾರೆ ॥ಸುಕ್ಕೇ॥

ಬಾಲಕ್ಕಾಶೀರ್ವಾದ ಮಾಡಿದ ಆ ಶಿವನು
ನಂದಿವಾಹನದಾಗೆ ಏರೆಂದ ॥ಸುಕ್ಕೇ॥

ಆರೆಂಬ ಅಡಿವ್ಯಾಗೆ ಭೋರೆಂಬ ಮಲೆಯಾಗೆ
ಬಾಲಕನ ಜೊತೆಗೆ ಯಾರಿಲ್ಲ । ನಮಸ್ವಾಮಿ
ಬಾಲಕನ ಬಿಟ್ಟು ಬರಲಾರೆ ॥ಸುಕ್ಕೇ॥

ಬಾಲಕನಾ ಜೊತೆಗೆ ಯಾರಿಲ್ಲ ನಮಸ್ವಾಮಿ
ಬಾವ್ಯಾಗೆ ಇರುವೋಳು ದಾನುಸಾಲೇ ॥ಸುಕ್ಕೇ॥
ಪಾರ್ವತಿ ಪರಮೇಶನ ಪಾಡುತಾರೆ

ಬಾಲಕನ ಜೊತೆಗೆ ಯಾರಿಲ್ಲ ದಾನುಸಾಲೀ
ನೀನು ಅಲ್ಲೀಗೆ ಬರಬೇಕು ॥ಸು॥
ಪಾರ್ವತಿ

ನೀನೂನು ಅಲ್ಲಿಗೆ ಬರಬೇಕು ದಾನುಸಾಲಿ
ಬಾಲಕನ ಜೊತೆಯು ಆಗಬೇಕು ॥ಸು॥
ಪಾರ್ವತಿ

ದೇವಲೋಕದಿಂದ ಬರಬೇಕು ಮುನಿಗಳು
ಎಲ್ಲಿದ್ದರವರು ಬರಬೇಕು ॥ಸು॥
ಪಾರ್ವತಿ

ಎಲ್ಲಿದ್ದರವರು ಬರಬೇಕು ಮುನಿಗಳು
ಇದ್ದಗಾನಂಗಳಕೆ ಬರಬೇಕು ॥
ಪಾರ್ವತಿ

ನಾಗಲೋಕದಲಿಂದ ನಾಗಕನ್ನೀಕೇರು
ದೇವಗನ್ನೀಕೆರು ಬರುಬೇಕು ॥ಸುಕ್ಕೇ॥
ಪಾರ್ವತಿ

ದೇವಗನ್ನಿಕೇರು ಬರಬೇಕು ಗಾನಂಗಳಕೆ
ಇದ್ದ ಗಾನಂಗಳಕೆ ಬರಬೇಕು ॥ಸು॥
ಪಾರ್ವತಿ

ಇದ್ದ ಗಾನಂಗಳಕೆ ಬರಬೇಕು ದೇವಗನ್ನಿಕೇರು
ಸರ್ವಗಾನಂಗಳಕೆ ಬರಬೇಕು ॥ಸು॥
ಪಾರ್ವತಿ

ದೇವಲೋಕದಿಂದ ಹೊರುಟಾರೆ ಮುನಿಗಳು
ನರಲೋಕಕವರು ಬಂದಾರೆ ॥ಸು॥
ಪಾರ್ವತಿ

ನರಲೋಕಕವರು ಬಂದಾರೆ ಮುನಿಗಳು
ಇಬ್ಬರನು ಜೊತೆಯು ಮಾಡುತಾರೆ ॥ಸು॥
ಪಾರ್ವತಿ

ಇಬ್ಬರನು ಜೊತೆಯ ಮಾಡಿದರು ಗಾನಂಗಳು (ಗಣಂಗಳು)
ಇಬ್ಬರಿಗು ಹೆಸರು ಇಡುತಾರೆ ॥ಸುಕ್ಕೇ॥
ಪಾರ್ವತಿ

ಸೆಟಪಟ್ಲಪ್ಪರಾಜೆಂದು ದಾನಸಾಲಮ್ಮೆಂದು
ಇಬ್ಬರಿಗು ಹೆಸರ ಕರೆದಾರೆ ॥ಸು॥
ಪಾರ್ವತಿ

ಇಬ್ಬರನು ಜೊತೆಯಾಗಿ ಮಾಡಿದರು ಮುನಿಗಳು
ಬಂಗಾರ ಭಾನುಕೋಟೆಗೆ ಕಳುವ್ಯಾರೆ ॥ಸು॥
ಪಾರ್ವತಿ

ಬಂಗಾರ ಭಾನುಕೋಟೆಗೆ ಕಳುವಿದ ಮುನಿಗಳು
ದೇವಲೋಕಕೆ ತಾವು ಹೊರಟಾರು ॥ಸುಕ್ಕೇ॥
ಪಾರ್ವತಿ

ಕಾಗೆಸುಳಿಯದಬೆಟ್ಟ
ಗೂಗೆ ಸುಳಿಯದಬೆಟ್ಟ
ಅಲ್ಲಿದಾನ ಸಾಲಿಯ ಅರಮನೆ

ರಾಯಮ್ಮ ಮಲ್ಲೀಗೆ ಸೂರಾಡುತಾ
ಅಪ್ಪಸೂರಗೊಂಡರಾಜ ಮತ್ತೆಲ್ಲ ಹುಟ್ಯಾನೆ
ಅಚ್ಚಗುಂಬಳದ ತನಿಹಣ್ಣು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಚ್ಚಗುಂಬಳದ ತನಿಹಣ್ಣಾಗ ಹುಟ್ಯಾನೆ
ಎಪ್ಪತ್ತು ರಾಜ್ಯವುಕೆ ಹೆಸರಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಣ್ಣ ತಿಪಗೊಂಡರಾಜ ಮತ್ತೆಲ್ಲ ಹುಟ್ಯಾನೆ
ಅಚ್ಚಗುಂಬಳದ ತನಿಹಣ್ಣು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಚ್ಚಗುಂಬಳದ ತನಿಹಣ್ಣಾಗೆ ಹುಟ್ಯಾನೆ
ಎಪ್ಪತ್ತು ರಾಜ್ಯವುಕೆ ಹೆಸರಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಣ್ಣ ಭಾನುಗೊಂಡರಾಜ ಇನ್ನೆಲ್ಲ ಹುಟ್ಯಾನೆ
ಹಣ್ಣೆಗುಂಬಳದ ತನಿಹಣ್ಣೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹಣ್ಣೇನೆ ಗುಂಬಳದ ತನಿಹಣ್ಣೆ ನ್ಯಾಗುಟ್ಟಿ
ಐವತ್ತು ರಾಜ್ಯವುಕೆ ಹೆಸರಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಣ್ಣ ಕಲುಪಗೊಂಡರಾಜ ಇನ್ನೆಲ್ಲ ಹುಟ್ಯಾನೆ
ಅಚ್ಚಗುಂಬಳದ ತನಿಹಣ್ಣೇ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹಣ್ಣೇನೆಗುಂಬಳದ ತನಿಹಣ್ಣೆನಾಗುಟ್ಟೆ
ನಲವತ್ತು ರಾಜ್ಯವುಕೆ ಹೆಸರಾದ ॥ನಿಲ್ಲು॥
ರಾಯಮ್ಮ ಮಲ್ಲೀಗಿ ಸೂರಾಡುತಾ

ಅಪ್ಪ ಬೈಗೊಂಡರಾಜ ಮತ್ತೆಲ್ಲ ಹುಟ್ಯಾನೆ
ಹಣ್ಣೆಗುಂಬಳದ ತನಿಹಣ್ಣೇ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೆಣ್ಣೇನೆ ಗುಂಬಳದ ತನಿಹಣ್ಣೆ ನಾಗುಟ್ಟಿ
ಇಪ್ಪತ್ತು ರಾಜ್ಯವುಕೆ ಹೆಸರಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಅಪ್ಪಗಳ ಜೊತೆಯಲ್ಲಿ ಮತ್ಯಾರು ಹುಟ್ಯಾರು
ಅಕ್ಕರಾಯಮ್ಮ ಕಡುಜಾಣೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಅಕ್ಕೇನೆ ರಾಯಮ್ಮ ಕಡುಜಾಣೆ ಹುಟ್ಟನ್ನಿ
ಮುಕ್ಕಣ್ಣ ಶಿವನೆ ಬೆರಗಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಅಣ್ಣಗಳ ಜೊತೆಯಲ್ಲಿ ಇನ್ನ್ಯಾರು ಹುಟ್ಯಾರೆ
ಕನ್ನೆರಾಯಮ್ಮ ಕಡುಜಾಣೆ ಹುಟ್ಟನ್ನು ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕನ್ನೆರಾಯಮ್ಮ ಕಡುಜಾಣೆ ಹುಟ್ಟನ್ನು
ಪನ್ನಂಗಧರನೆ ಬೆರಗಾದ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೊಕ್ಕುಳದ ಹೊನ್ನಿನಗಂಟಿ ಹೊಕ್ಕಿ ತಂದವರ್ಯಾರೆ
ಸೂರಿದನ ಮಗಳೆ ಶಿವಶರಣೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೂರಿದನ ಮಗಳು ಶಿವಶರಣೆ ರಾಯಮ್ಮ
ಹೊಕ್ಕೆ ತಂದಾಳೆ ಶಿವಗಂಟೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮ್ಯಾಗಳೊನ್ನಾಗಂಟೆ ಹೋಗಿ ತಂದವರ್ಯಾರೆ
ಸುಕ್ಕುರನ ಮಗಳು ಶಿವಶರಣೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸುಕ್ಕುರನಾ ಮಗಳು ಶಿವಶರಣೆ ರಾಯಮ್ಮ
ಹೋಗಿ ತಂದಾಳೆ ಶಿವಗಂಟೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೊಕ್ಕುಳದೊನ್ನಾಗಂಟೆ ಹೊಕ್ಕೆ ತಂದವರ್ಯಾರೆ
ಪಟ್ಟಣಕೆ ದೊರೆಯೆ ಸೂರಣ್ಣ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಪಟ್ಟಣಕೇ ದೊರೆಯೆ ಸೂರಣ್ಣ ತೂಗಿದ ಘಂಟೆ
ಪಟ್ಟಣ ತಲ್ಲಣಿಸಿ ನಡಿಗ್ಯಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮ್ಯಾಗುಳೊನ್ನಾಗಂಟೆ ಹೋಗಿ ತೂಗುವರ್ಯಾರೆ
ನರಲೋಕಕೆ ದೊರೆಯೆ ಬೈಯಣ್ಣಾ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನರಲೋಕಕೆ ದೊರೆಯೆ ಬೈಯಣ್ಣ ತೂಗಿದ ಘಾಂಟೆ
ಲೋಕ ತಲ್ಲಣಿಸಿ ನಡಿಗ್ಯಾವೆ ॥ ನಿಲ್ಲು ನಿಲ್ಲೆನುತಾ ॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹುಟ್ಟುಬಂಡೆಮ್ಯಾಲೆ ಬಿತ್ಯಾಳೆ ರಾಯಮ್ಮ
ಬಿತ್ತಿ ಬೆಳುದಾಳೆ ಕಡಲೇಯ ॥ ನಿಲ್ಲು ನಿಲ್ಲೆನುತಾ ॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹಾಸಿದ ಬಂಡೆ ಮ್ಯಾಲೆ ಸೆಲ್ಯಾಳೆ ರಾಯಮ್ಮ
ಸೆಲ್ಲಿ ಬೆಳುದಾಳೆ ಕಡಲೇಯ ॥ ನಿಲ್ಲು ನಿಲ್ಲೆನುತಾ ॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೆಲ್ಲೀನೆ ಬೆಳುದಾಳೆ ಕಡಲೀಯ ರಾಯಮ್ಮ
ಕಾವಲಿಕ್ಯಾಳೆ ಕಡುಜಾಣೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಾವಲ ಇಕ್ಯಾಳೆ ಕಡುಜಾಣೆ ರಾಯಮ್ಮ
ಮಾವ ಕರಿಬೊಮ್ಮನ್ನ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ದೇವಲೋಕದಲಿಂದ ಇಳುದಾವೆ ಸೇಜಿಗಳು
ಕಡಲೀಯ ಹೊಲವ ಮೇದಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡಲೀಯ ಹೊಲವ ಮೇದಂತಾ ಸೇಜಗಳು
ದೇವಲೋಕಕೆ ಮರಳಿ ಹೋಗ್ಯಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡುಜಾಣೆ ರಾಯಮ್ಮ ಹೊಲಕೆ ಬುತ್ತಿ ಹೊಯ್ದಾಳೆ
ಕಡುಜಾಣೆ ಬುತ್ತಿ ಇಳುವ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡುಜಾಣೆ ರಾಯಮ್ಮ ಬುತ್ತೀನ ಇಳುವ್ಯಾಳೆ
ಕಡಲೀಯ ಹೊಲವ ನೋಡ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡಲೀಯ ಹೊಲವ ನೋಡ್ಯಾಳೆ ರಾಯಮ್ಮ
ಹೊಲವೆಲ್ಲಾ ಹಾಳಾಗಿ ಹೋಯಿತ್ತು ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೊಲವೆಲ್ಲ ಹಾಳಾಗಿ ಹಾಳಾಗೋಯಿತೆಂದು
ಸಿಟ್ಟೇಲಿ ಕರಿಬೊಮ್ಮನ್ನ ಬೈದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಏನೆಲೆ ರಾಯಮ್ಮ ಅಂಗ್ಯಾಕೆ ಬೈತೀಯೆ
ಮೇಟಿ ಅನ್ನಗಳ ಮಾಡಿಡೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮೇಟೀನೆ ಅನ್ನಗಳ ಮಾಡಿಡೆ ರಾಯಮ್ಮ
ಕರುವರತಿ ನೀರು ತಂದುಕೊಡೇ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕರುವರತೀ ನೀರ ತಂದು ಕೊಡೇ ರಾಯಮ್ಮ
ಉಕ್ಕಿನ ಚಾಟಿ ಹೊಸಕೊಡೇ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಉಕ್ಕೀನಾ ಚಾಟಿ ಹೊಸಕೊಡೇ ರಾಯಮ್ಮ
ಒಪ್ಪಿದ ಕಾವಲೆ ಇರುತೀನಿ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮೇಟೀನೆ ಅನ್ನವ ತಾಟೀನೇ ಹೊತ್ತು
ಕರುವರತಿ ನೀರ ತಂದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕರವರತೀ ನೀರು ತಂದಾಳೆ ರಾಯಮ್ಮ
ಉಕ್ಕೀನ ಚಾಟಿ ಹೊಸದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಉಕ್ಕೀನಾ ಚಾಟಿ ಹೊಸೆದಾಳೆ ರಾಯಮ್ಮ
ಮಾವ ಕರಿಬೊಮ್ಮನಿಗೆ ಕೊಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮಾವನೆ ಕರಿಬೊಮ್ಮನಿಗೆ ಕೊಟ್ಯಾಳೆ ರಾಯಮ್ಮ
ಕಾವಲು ಕುಂತಾನೆ ಇರುಳೆಲ್ಲಾ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಲ್ಲು ಕರಗೋ ವ್ಯಾಳೆ ದೇವಲೋಕದಿಂದ
ನರಲೋಕಕೆ ಸೇಜ ಇಳುದಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನರಲೋಕಕೆ ಸೇಜಗಳು ಇಳುದಾವೆ
ಅವುಗಳು ಕಡಲೀಯ ಹೊಲವ ಮೇದಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡಲೀಯ ಹೊಲವ ಮೇದಾವೆ ಸೇಜಿಗಳು
ಸೇಜಿಯ ಮರಿಯ ಕಂಡಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೇಜಿಯ ಮರಿಗಳಾ ಕಾಣುತಲೆ ಬೊಮ್ಮಯ್ಯ
ಉಕ್ಕಿನ ಚಾಟಿ ಎಸೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಉಕ್ಕೀನ ಚಾಟಿಯ ಎಸೆದಾನೆ ಕರಿಬೊಮ್ಮ
ಸೆಳೆಹೋಗಿ ಸೇಜಿಗೆ ತಗುಲ್ಯಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೆಳೆಹೋಗಿ ಸೇಜಿಗೆ ತಗುಲ್ಯಾವೆ ಆ ಸೇಜ
ಗಬ್ಬವ ಪಿಂಡ ಉದುರ್ಯಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಗಬ್ಬದಲ್ಲೀ ಪಿಂಡ ಉದುರ್ಯಾವೆ ಆಸೇಜು
ಎದ್ದು ಕೈಲಾಸಕೆ ನಡೆದಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಎದ್ದು ಕೈಲಾಸಕೆ ನಡೆದಾವೆ ಸೇಜಿಗಳು
ಪಿಂಡಗಳು ಮರಿಗಳಾದವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಪಿಂಡಗಳು ಮರಿಗಳಾದಾಗ ಕರಿಬೊಮ್ಮ
ತಕ್ಕೇಲಿ ಕವುಚಿ ಹಿಡಿದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ತೆಕ್ಕೀಗೆ ಕವುಚಿ ಮಡಿಲಿಗೆ ಕಟ್ಟಿಕೊಂಡು
ಹಿಡಿದು ಜಲ್ಲೀಗೆ ಹಾಕ್ಯಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಬುತ್ತೀಯ ಇಳಿವಿದ ರಾಯಮ್ಮ
ಕಡಲೇಯ ಹೊಲವ ನೋಡ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡಲೇಯ ಹೊಲವ ನೋಡುವ ರಾಯಮ್ಮಗೆ
ಕಡುಜಾಣೆ ಜಲ್ಲೆ ಎತ್ತೆಂದ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡುಜಾಣೆ ರಾಯಮ್ಮ ಜಲ್ಲೀನೆ ಎತ್ತ್ಯಾಳೆ
ಸೇಜಿ ಮರಿಯಲ್ಲಿ ಕಂಡ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೇಜಿಯ ಮರಿಗಳ ಕಂಡ್ಯಾಳೆ ರಾಯಮ್ಮ
ದೇವಲೋಕದಾ ಸೇಜಿಗಳ ಹಿಡುದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ದೇವಲೋಕದ ಸೇಜಿಗಳ ತೆಕ್ಕೆಗೆ ಅವುಚಿಕೊಂಡು
ಮಡಿಲಿಗೆ ಕಟ್ಟಿ ನಡೆದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ತೆಕ್ಕೆಗೆ ಕವುಚಿಕೊಂಡು ಮಡಿಲೀಗೆ ಕಟ್ಟಿಕೊಂಡು
ನಡೆದಾಳೆ ತನ್ನ ಅರಮನೆಗೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನಡೆದಾಳೆ ತನ್ನ ಅರಮನೆಗೆ ರಾಯಮ್ಮ
ನೆಲಮಾಳಿಗೆ ಬಾಗಿಲು ತಗುದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನೆಲಮಾಳಿಗೆ ಬಾಗಿಲು ತಗುದಾಳೆ ರಾಯಮ್ಮ
ನೆಲಮಾಳಿಗೆ ಒಳಗೆ ಹೋದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನೆಲಮಾಳಿಗೆ ಒಳಗೆ ಹೋದಾಳೆ ರಾಯಮ್ಮ
ನೆಲಮಾಳಿಗೆ ಸೇಜಿ ಬಿಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ನೆಲಮಾಳಿಗೆ ಸೇಜಿಗಳ ಬಿಟ್ಯಾಳೆ ರಾಯಮ್ಮ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಕಡಲೇನೆ ಗುಗ್ಗರಿ ಹಾಕ್ಯಾಳೆ ರಾಯಮ್ಮ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಅವರೇನೆ ಗುಗ್ಗರಿ ಹಾಕ್ಯಾಳೆ ರಾಯಮ್ಮ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ತೊಗರೇನ ಗುಗ್ಗರಿ ಹಾಕ್ಯಾಳೆ ರಾಯಮ್ಮ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೆಸರೇನೆ ಗುಗ್ಗರಿ ಹಾಕ್ಯಾಳೆ ರಾಯಮ್ಮಾ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಅಲಸಂದೆ ಗುಗ್ಗರಿ ಹಾಕ್ಯಾಳೆ ರಾಯಮ್ಮ
ಸೇಜಿಗೆ ಗುಗ್ಗರಿ ಇಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೇಜೀಗೆ ಗುಗ್ಗರಿ ಇಟ್ಯಾಳೆ ರಾಯಮ್ಮ
ಒಪ್ಪದಿಂದ ಸೇಜಿಗಳ ಸಾಕಿದಳು ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೇಜಿಗೆ ಗುಗ್ಗರಿ ಇಡುತಾಳೆ ರಾಯಮ್ಮ
ಮೋಹದಿಂದ ಸೇಜಿ ಸಾಕಿದಳು ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಸೇಜೀಗೆ ಗುಗ್ಗರಿ ಇಕ್ಕ್ಯಾಳೆ ರಾಯಮ್ಮ
ಒಪ್ಪದಿಂದ ಸೇಜಿ ಸಲುವಿದಳು ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಹೂವಿನನ್ನಾ ಬಾಣ ಹಾಲಿನಾಗೆ ತೊಳೆದಿಟ್ಟು
ಎಲ್ಲೀಗೆ ಸೂರೆಗೊಂಡ ರಾಜ ನಿಮ್ಮ ಪಯಣ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ

ಮುತ್ತಿನನ್ನಾ ಬಾಣ ಮೊಸರಿನಾಗ ತೊಳೆದಿಟ್ಟು
ಎಲ್ಲೀಗೆ ತಿಪಗೊಂಡರಾಜ ನಿಮ್ಮ ಪಯಣ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಎಲ್ಲೀಗೆ ತಿಪಗೊಂಡರಾಜ ನಿಮ್ಮ ಪಯಣ
ಕೈಲಾಸದ ಸುಕ್ಕುರಗ ನಮಗೂ ಕೈಜಗಳ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸುಕ್ಕುರಗೂ ನಮಗೂ ಕೈಜಗಳೆಂಬುದ ಕೇಳಿ
ಮುಕ್ಕಣ್ಣ ಶಿವನೇ ನಸುನಕ್ಕ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸುಕ್ಕುರಗೂ ನಮಗೂ ಕೈಜಗಳೆಂಬುದ ಕೇಳಿ
ರೇವಣ್ಣ ಶಿವನೆ ಹುಸಿನಕ್ಕ ॥ನಿಲ್ಲು॥
ರಾಯಮ್ಮಾ ಮಲ್ಲೀಗಿ ಸೂರಾಡುತಾ
ಹೊನ್ನಿನನ್ನಾ ಬಾಣ ಮಜ್ಜಿಗೇಲಿ ತೊಳೆದಿಟ್ಟು

ಎಲ್ಲಿಗೆ ಭಾನುಗೊಂಡರಾಜ ನಿಮ ಪಯಣ ||ನಿಲ್ಲು||
ರಾಯಮ್ಮಾ ಮಲ್ಲಿಗೆ ಸೂರಾಡುತಾ

ಎಲ್ಲಿಗೆ ಭಾನುಗೊಂಡರಾಜ ನಿಮ್ಮ ಪಯಣ
ಕೈಲಾಸದ ಸೂರಿವಗು ನಮಗೂ ಕೈಜಗಳ ||ನಿಲ್ಲು||
ರಾಯಮ್ಮಾ ಮಲ್ಲಿಗೆ ಸೂರಾಡುತಾ

ಆಕಾಶದ ಬೆಣ್ಣೀಸಾಗ ತೊಳೆದಿಟ್ಟು
ಎಲ್ಲಿಗೆ ಕಲುಪಗೊಂಡರಾಜ ನಿಮ್ಮ ಪಯಣ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಎಲ್ಲೀಗೆ ಕಲುಪಗೊಂಡ ರಾಜ ನಿಮ್ಮ ಪಯಣ
ಕೈಲಾಸದ ಸುಕ್ಕರಗು ನಮಗೂ ಕೈಜಗಳಾ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸುಕ್ಕರಗೂ ನಮಗೂ ಕೈಜಗಳೆಂಬುದ ಕೇಳಿ
ಮುಕ್ಕಣ್ಣ ಶಿವನೆ ಬೆರಗಾದ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ವಜ್ರದನ್ನಾ ಬಾಣ ತುಪ್ಪದಾಗೆ ತೊಳೆದಿಟ್ಟು
ಎಲ್ಲೀಗೆ ಬೈಗೊಂಡರಾಜ ನಿಮ ಪಯಣ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಎಲ್ಲಿಗೆ ಬೈಗೊಂಡರಾಜ ನಿಮ್ಮ ಪಯಣ ಕೈಲಾಸದ
ಸೂರಿದಗು ನಮಗೂ ಕೈಜಗಳ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸೂರಿದಗೂ ನಮಗೂ ಕೈಜಗಳೆಂಬುದ ಕೇಳಿ
ರೇವಣ್ಣ ಶಿವನು ಹುಸಿನಕ್ಕ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರನು ನಿಲಿಸ್ಯಾಳೆ ರಾಯಮ್ಮ
ಮಜ್ಜಿಗೆ ಮಾಡ್ಯಾಳೆ ಕಡುಜಾಣೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಡುಜಾಣೆ ರಾಯಮ್ಮ ಮಜ್ಜಿಗೆ ಮಾಡ್ಯಾಳೆ
ಬಾಗುತ ಕಡುದಾಳೆ ಕೆನೆಮೊಸರು ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಬಾಗುತ ಕಡುದಾಳೆ ಕೆನೆಮೊಸರ ರಾಯಮ್ಮ
ಕಡುಜಾಣೆ ಬೆಣ್ಣೆ ತಗುದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಡುಜಾಣೆ ರಾಯಮ್ಮ ಬೆಣ್ಣೀನೆ ತಗುದಾಳೆ
ಬೆಣ್ಣೀಯ ಮುದ್ದೆಗಳ ಕಟ್ಯಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಬೆಣ್ಣೀಯ ಮುದ್ದೆಗಳ ಕಟ್ಯಾಳೆ ರಾಯಮ್ಮ

ತಮ್ಮರಿಗೈವರಿಗೆ ಎಸೆದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರಿಗೆ ಎಸೆದಾಳೆ ರಾಯಮ್ಮ
ತಮ್ಮಗಳೈವರು ಕತ್ತೀಲೆ ಅವರು ಕಲೆಸ್ಯಾರೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕತ್ತೀಲೆ ಅವರು ಕಲೆಸ್ಯಾರು ಬೆಣ್ಣೀಯ
ಅಕ್ಕರಾಯಮ್ಮಗೆ ಎಸೆದಾರೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅರಿಷಿಣ ಅರೆದಾಳೆ ಅರಿಷಿಣದುಂಡೆ ಕಟ್ಯಾಳೆ
ತಮ್ಮಗಳೈವರಿಗೆ ಎಸೆದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರಿಗೆ ಎಸೆದಾಳೆ ರಾಯಮ್ಮ
ಕತ್ತೀಲೆ ಅವರು ಕಲೆಸ್ಯಾರೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರವರು ಕತ್ತೀಲೆ ಸೂರುಸೂರು ಮಾಡಿ
ಅಕ್ಕ ರಾಯಮ್ಮಗೆ ಎಸೆದಾರೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕತ್ತೀಲೆ ಸೂರುಮಾಡಿ ಮತ್ತೆ ಉಂಡೆ ಮಾಡಿ
ಅಕ್ಕ ರಾಯಮ್ಮಗೆ ಎಸೆದಾರೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಒಪ್ಪಿದ ರಾಯಮ್ಮ ಹೋದಾಳೆ ಅರಮನೆಗೆ
ನೆಲಮಾಳಿಗೆ ಬಾಗಿಲು ತಗುದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಲಮಾಳಿಗೆ ಬಾಗಿಲ ತಗುದಾಳೆ ರಾಯಮ್ಮ
ದೇವಲೋಕದ ಸೇಜಗಳ ಹಿಡುದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ದೇವಲೋಕದ ಸೇಜಗಳ ಹಿಡುದಾಳೆ ರಾಯಮ್ಮ
ಸೇಜಗಳ ಹೊರಕೆ ತಂದಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸೇಜಗಳ ಹೊರಕೆ ಬಿಟ್ಯಾಳೆ ರಾಯಮ್ಮ
ತಮ್ಮಗಳೈವರಿಗೆ ಕೊಡುತಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರಿಗೆ ಕೊಟ್ಯಾಳೆ ರಾಯಮ್ಮ
ತಮ್ಮಗಳೈವರನು ನೋಡ್ಯಾಳೆ ||ನಿಲ್ಲು||
ರಾಯಮ್ಮಾ ಮಲ್ಲೀಗೆ ಸೂರಾಡುತಾ
ತಮ್ಮಗಳೈವರನು ನೋಡ್ಯಾಳೆ ರಾಯಮ್ಮ

ಮಂಗಳಾರತಿಯ ಬೆಳಗ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಂಗಳಾರುತಿಯ ಬೆಳಗ್ಯಾಳೆ ರಾಯಮ್ಮ
ತಮ್ಮಗಳೈವರನು ಹರಿಸ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರನು ಹರಿಸ್ಯಾಳೆ ರಾಯಮ್ಮಗೆ
ತಮ್ಮಗಳೈವರು ಕೈಯ ಮುಗುದಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರು ಅಕ್ಕನಿಗೆ ಕೈಮುಗುದು
ಹೊರಟಾರು ದೇವಲೋಕಕ್ಕೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

**ತಮ್ಮಗಳೈವರು ದೇವಲೋಕಕ್ಕೆ ಹೋದದ್ದು**

ಕರಿಸಿಪ್ಪೆಕಾಯಿ ಗೊನೆಯ ಬಾಳೆಹಣ್ಣು
ಮಡಿಲೀಗೆ ರಾಯಮ್ಮ ಕಟ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಡಿಲೀಗೆ ರಾಯಮ್ಮ ಕಟ್ಯಾಳೆ ಶಿವನೀಗೆ
ತಪಸೀಗೆ ನಿಂತು ಕಾದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ದೇವಲೋಕಕೋದವರು ಹಿಂತಿರುಗಿ ಬರಲಿಲ್ಲ
ಏನು ಅನಾಹುತವಾದಾವು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಏನೋ ಅನಾವುತವಾದವು ಮಾಮಯ್ಯ
ಅಲ್ಲೀಗೆ ನೀನು ಬರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಾಮಯ್ಯ ಎರಿಪೋತು ಅಲ್ಲೀಗೆ ಬಂದಾನು
ಏನು ಅನಾಹುತವಾದಾವು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನರಲೋಕಾದಿಂದ ನರಮನುಸರು ಬಂದಾರೆಂದು
ಬೆಂಕಿಯ ಮಳೆಯ ಸುರಿಸ್ಯಾವೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಬೆಂಕೀಯಾಮಳೆಯ ಸುರಿಸ್ಯಾನೆ ಸೂರಿದನು
ಹಗಲುಗತ್ತಲೆ ಗವಿಸ್ಯಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹಗಲುಗತ್ತಲೆ ಗವಿಸ್ಯಾನೆ ಸೂರಿದನು
ಹಾದಿಮುಂದಕೆ ಕಾಣವಲ್ದು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹಾದೀನೆ ಮುಂದಕೆ ಕಾಣವಲ್ದು ಎರಿಪೋತು
ಹಾದಿಮುಂದಕೆ ತೋರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹಾದೀಯ ಮುಂದಕೆ ತೋರಬೇಕು ಎಂದಾಗ
ಎರಿಪೋತು ದೊಕ್ಕೆ ಬಗೆದಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ದೊಕ್ಕೇಯ ಬಗಿದಾನು ನೆಣವನ್ನೆ ತೆಗೆದಾನು
ಕತ್ತೀಲೆ ನೆಣವ ತೆಗೆದಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕತ್ತೀಲೆ ನೆಣವ ತೆಗೆದ ಎರಿಪೋತು
ದೀಪಾವನ್ನೆ ಉರಿಸ್ಯಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಣವನ್ನು ತೆಗೆದಾನೆ ದೀಪಾವ ಉರಿಸ್ಯಾನೆ
ಹಾದಿಮುಂದಕೆ ತೋರ್ಯಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮುಂದೆ ಮುಂದೆ ಎರಿಪೋತು ಹಿಂದಿಂದೆ ತಮ್ಮಗಳು
ದೇವಲೋಕಕೆ ಅವರು ಹೊರಟಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ದೇವಲೋಕಕೆ ತಲುಪ್ಯಾರೆ ಐವರು
ಹುಟ್ಟಿಬರುವ ಸೂರಿದಗೆದುರು ನಿಂತ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹುಟ್ಟಿಬರುವ ಸೂರಿದಗೆದುರಾಗಿ ನಿಂತಾರು
ಕಾಡುತಾ ಸೂರಿದನ ಕೇಳ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಯಾರ ಮಕ್ಕಳು ನೀವು ಯಾರ ಕಂದರು ನೀವು
ಯಾರು ನಿಮ್ಮನ್ನು ಕಳುವ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಮಗಿನ್ನ ಹಿರಿಯವಳು ನಾವೆಲ್ಲ ಕಿರಿಯೋರು
ನಮ್ಮೈವರಿಗಿಂತ ಹಿರಿಯವಳು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಮ್ಮೈವರಿಗಿಂತ ಹಿರಿಯೋಳು ರಾಯಮ್ಮ
ನಮ್ಮನೈವರನು ಕಳ್ಯುವ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಿಮ್ಮ ತಂದೆಯಾರು ನಿಮ್ಮ ತಾಯಿಯಾರು
ನಿಮ್ಮ ತಂದೆಯ ಹೆಸರು ಹೇಳಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಮ್ಮ ತಂದೆಯು ಯಾರಿಲ್ಲ ತಾಯಿಯೂ ಯಾರಿಲ್ಲ
ಹುಟ್ಟಿಬಂದ ಸೂರಿದನೆ ನಮ ತಂದೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನನ್ನ ಮಕ್ಕಳೆಂದು ನನಗೇನು ನಂಬಿಕೆ
ನನ್ನ ಸಿಂಹಾಸನವ ನೀವು ಏರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನನ್ನ ಸಿಂಹಾಸನವ ಏರಬೇಕು ಮಕ್ಕಳಿರಾ
ನನ್ನ ಉರಿಗದ್ದಿಗೆ ನೀವು ಏರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಂದೆಯ ಮಾತಿಗೆ ಮಕ್ಕಳೈವರು ಕೂಡಿ
ತಂದೆ ಸಿಂಹಾಸನವ ನೇರಲು ಹೊರಟಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಾಲರಿಗಿನ್ನ ಚಿಕ್ಕವನೆ ಬೈಯಣ್ಣ ಕೋಪದಲಿ
ಉರಿಗದ್ದಿಗತ್ಯಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಉರಿಗದ್ದಿಗೆ ಮ್ಯಾಲೆ ಹತ್ತಿದ ಬೈಯಣ್ಣ
ಉರಿಗದ್ದಿಗೆ ಮ್ಯಾಲೆ ಕುಂತವನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಉರಿಗದ್ದಿಗೆ ಮೇಲೆ ಕುಂತಾನೆ ಬೈಯ್ಯಣ್ಣ
ಆಗ ನಂಬೀಕೆ ತಂದೀಗೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಕ್ಕಳೈವರು ಆಗ ತಂದೆ ಸೂರಿದನ
ಸಿಂಹಾಸನವ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಂದೆ ಸಿಂಹಾಸನವ ಕೇಳ್ಯಾರೆ ಮಕ್ಕಳು
ವಜ್ಜರದ ಹರಳು ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ವಜ್ಜರದ ಹರಳು ನಮ್ಮಲ್ಲೆಲ್ಲಿದ್ದಾವು
ಏಳೇಳು ಸಮುದ್ರದ ಆಚೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಏಳೇಳು ಸಮುದ್ರದ ಆಚೆ ಹೂವಿನ
ಪನ್ನಂಗದವನದಾಗೆ ಇರಬೋದು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಪನ್ನಂಗದೊನದಾಗೆ ನೆಲಮಾಳಿಗೆ ಅಲ್ಲುಂಟು
ಅಲ್ಲಿ ಹುತ್ತಗಳು ಇರಬೋದು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಲ್ಲಿರುವ ಹುತ್ತದಲಿ ಇರುವೋದು ಏಳೆಡೆ ಸರ್ಪ
ಸರ್ಪದೆಡೆಯಾಗಿರುವುದು ವಜ್ಜರದ ಹರಳು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ವಜ್ಜರದ ಹರಳನ್ನು ನೀವೈವರು ತರಬೇಕು
ನಾನೇಳಿದೀನಿ ನೆಲೆಗಳಾ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಕ್ಕಳೈವರು ತಂದೆ ಸೂರಿದನ ಕೂಡೆ
ಕೋಟಿಲಿಂಗಗಳ ಕೇಳ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕೋಟಿಲಿಂಗಗಳ ಕೇಳ್ಯಾರು ಮಕ್ಕಳು
ಬಂಗಾರದ ಲಿಂಗ ಕೇಳ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಬಂಗಾರದಲಿಂಗ ಕೇಳ್ಯಾರು ಐವರು
ದೂಪದಾರತಿ ಕೇಳ್ಯಾರು ॥ ನಿಲ್ಲು॥
ರಾಯಮ್ಮ ಮಲ್ಲೀಗೆ ಸೂರಾಡುತಾ

ಧೂಪದಾರತಿ ಕೇಳ್ಯಾರು ಐವರು ಕಾವಿ
ಕಾಮಂಡಲ ಉಲುಪಿ ಕೇಳ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಾವಿಕಾಮಂಡಲು ಉಲುಪಿ ಕೇಳುತ ಕೊಡೆ
ಸೂರ್ಯನಂದನ ಅಲಗು ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸೂರ್ಯನಂದನ ಅಲಗು ಕೇಳುತ ಕೊಡೆ
ಆಕಾಶದ ಬಾಣ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಆಕಾಶದ ಬಾಣ ಕೇಳುತಲೆ ಕೂಡಿ
ಮುತ್ತಿನಬಾಣ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮುತ್ತಿನ ಬಾಣ ಕೇಳುತಲೆ ಕೂಡಿ ವಜ್ಜರದ ಬಾಣ ಕೇಳ್ಯಾರೆ
ನಿಲ್ಲುನಿಲ್ಲೆನುತ ರಾಯಮ್ಮಾ ಮಲ್ಲೀಗೆ ಸೂರಾಡುತಾ

ವಜ್ಜರದ ಬಾಣ ಕೇಳುತಲೆ ಕೂಡಿ
ರನ್ನದ ಬಾಣ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ರನ್ನದ ಬಾಣ ಕೇಳುತಲೆ ಕೂಡಿ
ಶಾಂಬಲದ ಉಲುಪಿ (ಚಾಮರ) ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಶಾಂಬರದ ಉಲುಪಿ ಕೇಳುತಲೆ ಕೂಡಿ
ಜೋಡಿ ಪಕ್ಕೆಗಳ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಜೋಡಿ ಪಕ್ಕೆಗಳ ಕೇಳುತಲೆ ಕೂಡಿ
ಮಕತೋರಣಗಳ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಕತೋರಣಗಳ ಕೇಳುತಲೆ ಕೂಡಿ
ಭೂಚಕ್ರದ ಗೊಡಗು ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಭೂಚಕ್ರದ ಗೊಡಗು ಕೇಳುತಲೆ ಕೂಡಿ
ಹತ್ತಲಗೆ ಉರುಮೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹತ್ತಲಗೆ ಉರುಮೆ ಕೇಳುತಲೆ ಕೂಡಿ
ಆರಲಿಗೆ ಉಲುಪಿ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆರಲಿಗೆ ಉಲುಪಿ ಕೇಳುತಲೆ ಆವರು
ಬಲಮುರಿ ಚಿತ್ತ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಬಲಮುರಿ ಚಿತ್ತ ಕೇಳುತಲೆ ಆವರು
ಎಡಮುರಿ ಶಂಕು ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಎಡಮುರಿ ಶಂಕು ಕೇಳುತಲೆ ಆವರು
ಜಾಗಟೆ ಗಂಟೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಜಾಗಟೆ ಗಂಟೆ ಕೇಳುತಲೆ ಆವರು
ಒಕ್ಕಳದ ಗಂಟೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಒಕ್ಕಳದ ಗಂಟೆ ಕೇಳುತಲೆ ಆವರು
ಆಕಾಶದ ಗಂಟೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಕಾಶದ ಗಂಟೆ ಕೇಳುತಲೆ ಆವರು
ಸುತ್ತೇಳು ಶಿವಗಂಟೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸುತ್ತೇಳು ಶಿವಗಂಟೆ ಕೇಳುತಲೆ ಆವರು
ಸಾಲೇಳು ಶಿವಗಂಟೆ ಕೇಳ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಕ್ಕಳೈವರು ಕೂಡಿ ಸೇಜಗಳ ಹೂಡ್ಯಾರು
ಸೇಜಗಳ ಅವರು ಹತ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತೇಜಗಳ ಮೇಲೆ ಹತ್ತಿದ ಆವರುಗಳು
ಏಳೇಳು ಸಮುದ್ರದ ಆಸೇಲೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಏಳೇಳು ಪರ್ವತದ ಆಸೇಲಿ ಇರುವಂಥ
ಪನ್ನಂಗದ ವನಕೆ ಇಳಿದಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಪನ್ನಂಗದ ವನಕೆ ಇಳಿಯುತಲೆ ಆವರು
ತೇಜಗಳವರು ಬಿಟ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಪನ್ನಂಗದೊನದಾಗೆ ನೆಲಮಾಳಿಗೆಯೊಳಗೆ
ಹುತ್ತಗಳವರ್ಯೆವರು ಹುಡುಕ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹುತ್ತಗಳವರ್ಯೆವರು ಕಾಣುತಲೆ ಕೂಡಿ
ಏಳೆಡೆಯ ಸರ್ಪ ಕಂಡಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಾಲರಿಗಿಂತ ಚಿಕ್ಕವನೆ ಬ್ಯೆಯಣ್ಣ
ಹುತ್ತದಾಗೆ ಕೈಯ ಇಡುತಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಡೆತಡೆಯೊ ಬ್ಯೆಯ್ಯಣ್ಣ ಐವರು
ಕೈಯ ಇಡುವೋಣ ನಾವಿನ್ನ
ಏಳೆಡೆ ಸರ್ಪನ ಹಿಡಿಯೋಣ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಏಳೆಡೆ ಸರ್ಪನ ಹಿಡಿದಾರು ಐವರು
ಏಳೆಡೆ ಸರ್ಪನ ಮಕ್ಕಳ ಹಿಡಿದಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

**ಸರ್ಪ ಕೇಳುತ್ತಾನೆ –**
ಯಾರ ಮಕ್ಕಳು ನೀವು ಯಾರ ಕಂದಗಳು ನೀವು
ಯಾರು ನಿಮ್ಮನ್ನು ಕಳುವಿದರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸಮಗಿನ್ನ ಹರಿಯಾಳು। ನಿಮಗಿನ್ನ ಕಿರಿಯೋಳು
ನಮ್ಮೈವರಿಗಿಂತ ಹಿರಿಯೋಳು ॥ನಿಲ್ಲು॥
ರಾಯಮ್ಮ ಮಲ್ಲೀಗೆ ಸೂರಾಡುತಾ

ನಮ್ಮೈವರಿಗಿಂತ ಹಿರಿಯೋಳು ರಾಯಮ್ಮ
ನಮ್ಮೈವರನ ಸಲವಿದೋಳು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಿಮ್ಮತಂದೆಯಾರು । ನಿಮ್ಮ ತಾಯಿಯಾರು
ನಿಮ್ಮನಿಲ್ಲಿಗೆ ಕಳುವಿದವರ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಮ್ಮ ತಂದೆಗಳು ಯಾರಿಲ್ಲ । ತಾಯಿಗಳು ಯಾರಿಲ್ಲ
ಹುಟ್ಟಿಬರುವ ಸೂರಿದನೇ ನಮ ತಂದೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹುಟಿಬಂದ ಸೂರಿದನೆ ನಮ್ಮಗಳೈವರನು ಕಳುವ್ಯಾನೆ
ನಿಮ್ಮ ಹೆಡೆಯಾಗಿರುವ ವಜ್ರದ ಹರಳ ಕೊಡಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಒಡೆಯಬೇಡಿರಪ್ಪ । ಬಡಿಯಬೇಡಿರಪ್ಪ
ನಿಮ್ಮ ಹಿಂದೆ ನಾನು ಬರುತೀನಿ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸಾಕಬೇಕು ನನ್ನ ಸಲುವಬೇಕು ನನ್ನ
ವಜ್ರದ ಹರಳು ಕೊಡುತೀನಿ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸಾಕುತೀವಿ ನಾವು ಸಲುವುತೀವಿ ನಾವು
ನಮ್ಮಿಂದೆ ನೀವು ಬರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಕ್ಕಳೈವರ ಮಾತಿಗೆ ಒಪ್ಪಿದಾ ಸರ್ಪವು
ವಜ್ರದ ಹರಳು ಕೊಡುತ್ತೈತೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಅಲ್ಲಿಂದ ಹಿಂದಿರುಗುವರು –
ವಜ್ರದ ಹರಳನ್ನು ತೇಜಿಗೆ ಏರ್‍ಯಾರೆ
ಏಳೆಡೆ ಸರ್ಪನ ಏರ್‍ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತೇಜಿಗಳ ಹೂಡ್ಯಾರೆ, ಐವರು ಕುಳಿತಾರೆ
ತಂದೆ ಸೂರಿದನ ಬಳಿಗೆ ಬಂದಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಾಲರಿಗಿಂತ ಹಿರಿಮಗ ಸೂರಣ್ಣಗೆ
ಕಂಚಿನ ಬೀಗ ಕೊಡುತಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಂಚೀನ ಬೀಗ ಪಡೆದ ಸೂರಣ್ಣನು
ನೆಲಮಾಳಿಗೆ ಒಳಗೆ ಹೋದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಲಮಾಳಿಗೆ ಒಳಗೆ ಹೋದ ಸೂರಣ್ಣನು
ಆಯುಧವ ಹೊರಕೆ ಇಡುತಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಲಮಾಳಿಗೆ ಒಳಗೆ ಹೋದ ಸೂರಣ್ಣನು
ಸ್ವತ್ತುಗಳ ಹೊರಗೆ ಇಡುತಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಂದೆ ಸಿಂಹಾಸನವ ತೆಗೆದಾನೆ ಸೂರಣ್ಣ
ಸೂರ್ಯ ನಂದನ ಅಲಗು ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಾವಿ ಕಾಮಂಡಲ ಉಲುಪಿ ತೆಗೆದಾನು ಸೂರಣ್ಣ
ಕೋಟಿ ಲಿಂಗಗಳ ತೆಗೆದಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಬಂಗಾರದಲಿಂಗ ತೆಗೆದಾನು ಸೂರಣ್ಣ
ಧೂಪದಾರತಿಯ ತೆಗೆದಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಕಾಶದ ಬಾಣ ತೆಗೆದಾನೆ ಸೂರಣ್ಣ
ಮುತ್ತಿನ ಬಾಣ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ವಜ್ಜರದ ಬಾಣ ತೆಗೆದಾನೆ ಸೂರಣ್ಣ
ಹೊನ್ನಿನ ಬಾಣ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ರನ್ನದ ಬಾಣ ತೆಗೆದಾನೆ ಸೂರಣ್ಣ
ರುದ್ರಾಕ್ಷಿ ಮಾಲೆ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹತ್ತಲಿಗೆ ಉರುಮೆ ತೆಗೆದಾನೆ ಸೂರಣ್ಣ
ಆರಲಿಗಿ ಉರುಮೆ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಾಳೀನ ಉಲುಪಿ ತೆಗೆದಾನೆ ಸೂರಣ್ಣ
ಶ್ಯಾಮರ ಉಲುಪಿ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮುಖತೋರಣ ಉಲುಪಿ ತೆಗೆದಾನೆ ಸೂರಣ್ಣ
ಜೋಡಿಪಕ್ಕೆಗಳ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಭೂಚಕ್ರದ ಗೊಡಗು ತೆಗೆದಾನೆ ಸೂರಣ್ಣ
ಬಲಮುರಿಯ ಬೆತ್ತ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಎಡಮುರಿಯ ಬೆತ್ತ ತೆಗೆದಾನೆ ಸೂರಣ್ಣ
ಜಾಗಟೆ ಗಂಟೆ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಒಕ್ಕಳದ ಗಂಟೆ ತೆಗೆದಾನೆ ಸೂರಣ್ಣ
ಆಕಾಶದ ಗಂಟೆ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸಾಲೇಳು ಶಿವಗಂಟೆ ತೆಗೆದಾನೆ ಸೂರಣ್ಣ
ಸುತ್ತೇಳು ಶಿವಗಂಟೆ ತೆಗೆದಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಯುಧ ಹೊರಗಿಟ್ಟು ಸ್ವತ್ತುಗಳ ಹೊರಗಿಟ್ಟು
ಕಂಚಿನ ಬೀಗ ಹಾಕ್ಯಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಲಮಾಳಿಗೆ ಬೀಗ ಹಾಕ್ಯಾನೆ ಸೂರಣ್ಣ
ಕಂಚಿನ ಬೀಗ ಹಿಡಿದಾನೆ ತಂದೆಯ ಕೈಗೆ ಕೊಟ್ಟಾನೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಯುಧ ಸೇಜಿಗೇರಿ ಸ್ವತ್ತುಗಳ ಸೇಜಿಗೇರಿ
ತಂದೆ ಸೂರಿದನ ಕರಕೊಂಡು ಹೊರಟಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಎಣಮಜ್ಜನ ಬಾವಿಗೆ ಹೊರಟಾರು ಅವರುಗಳು
ಎಣಮಜ್ಜನ ಬಾವಿ ಇಳಿದಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ
ಮಜ್ಜನ ಮಾಡ್ಯಾರು ಸ್ವತ್ತುಗಳ ತೊಳೆದಾರು
ಲಿಂಗದಾ ಪೂಜೆಗೆ ನಿಂತಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸ್ವತ್ತುಗಳ ಇಟ್ಯಾರು, ಲಿಂಗಗಳ ಇಟ್ಟಾರು
ನೂರೊಂದು ಪೂಜೆ ಮಾಡಿದರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೂರೊಂದು ಪೂಜೆ ಮಾಡಿವಿ ನಮ ತಂದೆ
ಸ್ವತ್ತುಗಳ ನೀನು ಕೊಡಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಂದೆ ಸೂರಿದನು ಸ್ವತ್ತುಗಳ ಹಿಡಿದಾನು
ಮಕ್ಕಳ ಕೈಗೆ ಕೊಟ್ಟಾನು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಯುಧ ಸೇಜಿಗೆ ಏರಿ ಸ್ವತ್ತು ಸೇಜಿಗೆ ಏರಿ
ಸೇಜಿಗಳ ಅವರು ಹೂಡ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನರಲೋಕಕವರು ಹೊರಟಾರು ಹಾದ್ಯಾಗೆ
ಬರುವರ್‍ಯೆವರನು ಕಂಡಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕರಿಯಸಿಪ್ಪೆಕಾಯಿ ಗೊನಿಯ ಬಾಳೆಹಣ್ಣು
ಮಡಿಲಿಗೆ ರಾಯಮ್ಮ ಕಟ್ಟ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಿಂತಿದ್ದ ತಪಸು ಬಿಟ್ಟ್ಯಾಳೆ ಕಡುಜಾಣೆ
ದಣಿದವರ ಪಾದಗಳ ತೊಳೆದಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹುಟ್ಟಿ ಬರುವ ಸೂರಿದನ ಗೆದ್ದು ಬಂದಾರೆಂದು
ಮಂಗಳಾರತಿಯ ಬೆಳಗ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರು ದಣಿದು ಬಂದಾರವರು
ಮಾಮಯ್ಯ ಯರಿಪೋತು ನೀನು ಬರಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತೇಜಿಗಳ ನೆಲಮಾಳಿಗೆ ಬಿಡಬೇಕು ಮಾವಯ್ಯ
ಸ್ವತ್ತುಗಳ ಒಳಗೆ ಇಡಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತೇಜಿಗೆ ಗುಗ್ಗರಿ ಇಡಬೇಕು ಮಾವಯ್ಯ
ತೇಜಿಗೆ ಪಾಲೀಸು ಮಾಡಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೀರನು ಕಾಸ್ಯಾಳೆ ನೀರನ್ನು ಹಿಡಿದಾಳೆ
ತಮ್ಮಗಳೈವರು ಜಳಕ ಮಾಡ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಮಲ್ಲೀಯ ಹೂವಲಿ ಮಾಡ್ಯಾಳೆರಡಾರತಿ
ಮಾನಗಾತಿ ಅವರ ಹಿರಿಯಕ್ಕ ರಾಯಮ್ಮ
ಮಾಡಿದಾರತಿ ಬೆಳಗ್ಯಾಳೆ

ಹಿಪ್ಪಿಯ ಹೂವಿಲಿ ಕಟ್ಯಾಳೆರಡಾರತಿ
ಒಪ್ಪದಾರುತಿಯ ಬೆಳಗ್ಯಾಳೆ ರಾಯಮ್ಮ
ಮಲ್ಲೀಗೆ ಸೂರಾಡುತಾ

ನಿಂಬಿಯ ಹೂವಿಲಿ ಮಾಡ್ಯಾಳೆರಡಾರತಿ
ಮಾನಗಾತಿ ಅವರ ಹಿರಿಯಕ್ಕ । ರಾಯಮ್ಮ
ಮಾಡಿದಾರತಿ ಬೆಳಗ್ಯಾಳೆ

ಬಾಳೆಯ ಹೂವಿಲಿ ಮಾಡ್ಯಾಳೆರಡಾರತಿ
ಮಾನಗಾತಿ ಅವರ ಹಿರಿಯಕ್ಕ ರಾಯಮ್ಮ
ಮಾಡಿದಾರತಿಯ ಬೆಳಗ್ಯಾಳೆ

ಶ್ಯಾವಂತಿ ಹೂವಿಲಿ ಮಾಡ್ಯಾಳೆರಡಾರತಿ
ಕಡುಜಾಣೆ ಅವರ ಹಿರಿಯಕ್ಕ ರಾಯಮ್ಮ
ಮಾಡಿದಾರತಿಯ ಬೆಳಗ್ಯಾಳೆ

ತಮ್ಮಗಳೈವರು ಶಿವಪೂಜೆ ಮಾಡ್ಯಾರೆ
ಸ್ವತ್ತುಗಳ ಪೂಜೆಗೆ ಇಟ್ಟಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಆಯುಧಗಳ ಕೂಡೆ ಸ್ವತ್ತುಗಳ ಇಟ್ಟಾರೆ
ನೂರಾವೊಂದು ಪೂಜೆ ಮಾಡ್ಯಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನೆಲಧೇನು ಭಸ್ಮವ ಬಿಲ್ವದ ಪತ್ರಿರಿಯ
ಪೂಜೆಗೆ ಇರುತಾಳೆ ರಾಯಮ್ಮ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಸಣ್ಣಮಲ್ಲಿಗೆ ಹೂವು, ದುಂಡುಮಲ್ಲಿಗೆ ಹೂವು
ಪೂಜೆಗೆ ಇಡುತಾಳೆ ರಾಯಮ್ಮ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕರಿಯಸಿಪ್ಪೆಕಾಯಿ ಗೊನಿಯ ಬಾಳೆಹಣ್ಣು
ಪೂಜೆಗೆ ಇಡುತಾಳೆ ರಾಯಮ್ಮ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಹಸಿ ಅಡಿಕೆ, ಗಜನಿಂಬೆ, ಎಸಳೇನ ಹೊಂಬಾಳೆ
ಪೂಜೆಗೆ ರಾಯಮ್ಮ ಇಟ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರು ಕೂಡಿ ಶಿವಪೂಜೆ ಮಾಡ್ಯಾರೆ
ನೂರೊಂದು ಪೂಜೆ ಮುಗಿಸ್ಯಾರು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ದೇವಲೋಕಕೆ ಹೋಗಿ ದಣಿದು ಬಂದಾರೆಂದು
ಅಮೃತದ ಅಡಿಗೆ ಮಾಡ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಅಮೃತದ ಅಡಿಗೆ ನೀಡ್ಯಾಳೆ ತಮ್ಮಗಳಿಗೆ
ಹಸಿ ಅಡಿಕೆ ಬಿಳಿ ಎಲೆ ಸೋಸಿದ ಬಣ್ಣ ಕೊಡುತಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ನಮ್ಮೈವರಿಗಿಂತ ಹಿರಿಯಳು ನಿನಗಿಂತ ಕಿರಿಯೋರು ನಾವು
ಸ್ವತ್ತುಗಳ ನೀನು ಕೊಡಬೇಕು ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ಕಡುಜಾಣೆ ರಾಯಮ್ಮ ಸ್ವತ್ತುಗಳ ಹಿಡಿದಾಳೆ
ತಮ್ಮಗಳೈವರಿಗೆ ಕೊಟ್ಯಾಳೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಮ್ಮಗಳೈವರು ಕೂಡಿ ಅವರಕ್ಕ ರಾಯಮ್ಮನಿಗೆ
ಮುತ್ತಿನ ಕಾಲ್ಚೆಂಡೆ ಕೊಡುತಾರೆ ॥ನಿಲ್ಲು॥
ರಾಯಮ್ಮಾ ಮಲ್ಲೀಗೆ ಸೂರಾಡುತಾ

ತಾಯಿ ತಾಯಿ ಅನಲೇನೆ ತಾಯಮ್ಮ ಅನಲೇನೆ
ತಾಯಿ ದಾನ ಸಾನೆ ಅನಲೇನೆ । ಬಾನಾಗೋಟೆ
ನೋಡಾಳಿದ ಗರತಿ ಅನಲೇನೇ

ಅಕ್ಕಕ್ಕ ಅನಲೇನೆ ಅಕ್ಕಯ್ಯ ಅನಲೇನೆ
ಅಕ್ಕ ರಾಯಮ್ಮ ಅನಲೇನೆ ಬಾನಾಗೋಟೆ ॥
ಹೊಕ್ಕಾಳಿದ ಗರತಿ ಅನಲೇನೆ

ಅಕ್ಕ ನಿಮ್ಮ ಪಾಡೇವು ಅಕ್ಕ ನಿಮ್ಮನಾಡೇವು
ಅಕ್ಕ ನಿಮ ಪದವ ನೆನೆದೇವು ರಾಯಮ್ಮ
ಅಕ್ಕ ನಿಮಗೆ ಕೈಯ ಮುಗುದೇವು